ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

## ಕಾಶೀಖಂಡ

(ಪೂರ್ವ ಭಾಗ)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ
ಆಸ್ಥಾನ ವಿದ್ವಾನ್
ನೋಟಿಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ

ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ಸಿಟಿ
೧೯೪೭

# ಶ್ರೀಸ್ಕಾಂದಮಹಾಪುರಾಣಂ

## ಕಾಶೀಖಂಡ

(ಮೂಲ ಮತ್ತು ಅನುವಾದ ಸಹಿತ)

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀಸ್ಕಾಂದಮಹಾಪುರಾಣಂ

೪

## ಕಾಶೀಖಂಡ

(ಪೂರ್ವ ಭಾಗ)

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

**ನೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೭

# ಅರಿಕೆ

ಈ ಹದಿನಾಲ್ಕನೆಯ ಸಂಪುಟದಲ್ಲಿ ಪ್ರಾರಂಭವಾಗಿರುವ ಶ್ರೀ ಕಾಶೀಖಂಡವು ಶ್ರೀ ಸ್ಕಾಂದಮಹಾಪುರಾಣದ ಸಮಗ್ರ ಗ್ರಂಥಕ್ಕೇ ಶಿರೋರತ್ನಪ್ರಾಯವಾದುದು. ಇದು ಸಕಲ ಧರ್ಮರಹಸ್ಯಗಳ ಸಾರಸರ್ವಸ್ವವನ್ನು ಹೃದಯಂಗಮವಾದ ದೃಷ್ಟಾಂತಗಳಿಂದ ಎಲ್ಲರಿಗೂ ಮನದಟ್ಟಾಗುವಂತೆ ವಿವರಿಸಿ ಹೇಳುವ ವಿವಿಧೋಪಾಖ್ಯಾನಗಳಿಂದ ವಿರಾಜಿಸುತ್ತಿದೆ. ಆದುದರಿಂದ ಇದು ಧರ್ಮಶ್ರದ್ಧೆ, ಭಾರತೀಯ ಪ್ರಾಚೀನ ಸಂಸ್ಕೃತಿಗಳಲ್ಲಿ ಆಸಕ್ತಿಯುಳ್ಳ ಸಮಸ್ತರಿಗೂ ಸಂಗ್ರಾಹ್ಯವಾಗಿರುವುದು. ಈ ಸಂಪುಟದಲ್ಲಿ ಧ್ರುವೋಪಾಖ್ಯಾನದವರೆಗಣ ಶ್ರೀ ಕಾಶೀಖಂಡದ ಪೂರ್ವಭಾಗದ ಗ್ರಂಥವು ಮಗಿದಿರುವುದು ಉಳಿದಿರುವ ಗ್ರಂಥವು ಮುಂದಿನ ಸಂಪುಟದಲ್ಲಿ ಮುಂದುವರಿಯುವುದು. ಒಟ್ಟು ಕಾಶೀಖಂಡವು ಗ್ರಂಥಬಾಹುಳ್ಯದ ಸಲುವಾಗಿ ನಾಲ್ಕು ಸಂಪುಟಗಳಾಗಿ ಪ್ರಕಟವಾಗಬೇಕಾಗಿದೆ.

ಶ್ರೀ ಕಾಶೀಖಂಡದ ಉತ್ಕೃಷ್ಟತೆಯನ್ನು ಕುರಿತು ಇಲ್ಲಿ ಹೆಚ್ಚಾಗಿ ಪ್ರಸ್ತಾವಿಸಬೇಕಾಗಿರುವುದಿಲ್ಲ ಈ ಮಹಾ ಕ್ಷೇತ್ರದ ಅಪಾರ ಮಹಿಮೆಯನ್ನು ಎಲ್ಲ ಭಾರತೀಯರೂ ಗುರು ಹಿರಿಯರಿಂದ ಕೇಳಿ ಇತರ ಪುರಾಣಗಳನ್ನೋದಿ ತಿಳಿದು ಧನ್ಯರಾದೆವೆಂದೆಣಿಸುತ್ತಿರುವರು. ಈ ಕ್ಷೇತ್ರದ ಪಾವನ ನಾಮವು ಧರ್ಮಶ್ರದ್ಧೆಯುಳ್ಳವರೆಲ್ಲರ ಮನೆಮಾತಾಗಿದೆಯಲ್ಲದೆ ಅವರಿಗೊಂದು ಧರ್ಮಸ್ಫೂರ್ತಿಯನ್ನೂ ಕೊಡುತ್ತಿದೆ. ಕಾಶೀಕ್ಷೇತ್ರಕ್ಕೆ ಯಾತ್ರೆಹೋಗಿ ಪವಿತ್ರವಾದ ಗಂಗಾನದಿಯಲ್ಲಿ ಸ್ನಾನಮಾಡಿ ದೇವ-ಋಷಿ-ಪಿತೃಗಳನ್ನು ತರ್ಪಣಾದಿಗಳಿಂದ ತೃಪ್ತಿಗೊಳಿಸುವುದೇ ಮಾನವಜೀವನದ ಪರಮಧ್ಯೇಯವೆಂದು ನಮ್ಮ ಗುರುಹಿರಿಯರು ನಂಬಿ ನಡೆಯುತ್ತಿದ್ದರು. ಇದರಿಂದ ಕಾಶೀಕ್ಷೇತ್ರವು ಎಷ್ಟು ಮಟ್ಟಿಗೆ ಉತ್ಕೃಷ್ಟವಾದುದೆಂಬ ವಿಷಯವು ಮನವರಿಕೆಯಾಗದಿರದು. ಇದಕ್ಕೂ ಮೇಲಾಗಿ ಇದು ತ್ರಿಲೋಕಪಾವನಿಯಾದ ಗಂಗಾನದಿಯ ತೀರದಲ್ಲಿ ವಿರಾಜಿಸುತ್ತ, ತನ್ನಲ್ಲಿಯೇ ನೆಲಸಿ ಅಸುದೊರೆಯುವ ಜೀವಕೋಟಿಗಳಿಗೆ (ಸಾಕ್ಷಾತ್ ಪರಶಿವನೇ ಕಿವಿಯಲ್ಲಿ ತಾರಕಮಂತ್ರೋಪದೇಶವನ್ನು ಮಾಡುವುದರಿಂದ) ಮುಕ್ತಿಯನ್ನು ದೊರೆಯಿಸುವುದರಿಂದ ಅವಿಮುಕ್ತಕ ಕ್ಷೇತ್ರವೆಂದೂ ಪ್ರಸಿದ್ಧವಾಗಿರುವುದು. ಇಂತಹ ಮಹಾಕ್ಷೇತ್ರದ ಅಮಿತ ವೈಭವವನ್ನು ಆಮೂಲಾಗ್ರವಾಗಿ ವರ್ಣಿಸುವುದೇ ಈ ಖಂಡದ ವೈಶಿಷ್ಟ್ಯವು ಅನರ್ಘ್ಯವಾದ ಈ ಗ್ರಂಥರತ್ನದ ಪಠನ ಪಾರಾಯಣಗಳಿಂದ ದೊರಕದ ಪಾರಮಾತ್ಮಿಕ ಜ್ಞಾನವು ಮತ್ತೇನುಂಟು? ತಿಳಿಯದ ಧರ್ಮಸೂಕ್ಷ್ಮಗಳಾವುವು ತಾನೇ ಇರುತ್ತವೆ?

ಇಂತಹ ಅನೇಕಾನೇಕ ಕ್ಷೇತ್ರಮಾಹಾತ್ಮ್ಯಗಳ ಸಂಪುಟವೆನಿಸಿರುವ ಈ ಮಹಾಪುರಾಣವನ್ನು ಕನ್ನಡದ ಅನುವಾದದೊಡನೆ ಪ್ರಕಟಿಸಲು ಪ್ರೇರೇಪಿಸಿ ಕನ್ನಡಿಗರೆಲ್ಲರಿಗೂ ಮಹೋಪಕೃತಿಯೆನ್ನಸಗಿ ಅವರೆಲ್ಲರ ಚಿರಕೃತಜ್ಞತೆಗೆ ಪಾತ್ರರಾಗಿರುವ ನಮ್ಮನ್ನಾಳುವ ಶ್ರೀಮದ್ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ ಬಿ., ಜಿ.ಸಿ.ಎಸ್ ಐ. ಮಹಾಪ್ರಭುಗಳವರಿಗೆ ಪರಮೇಶ್ವರನು ಇತೋಪ್ಯತಿಶಯವಾದ ಸಮಸ್ತ ಸನ್ಮಂಗಳಗಳನ್ನೂ ದಯಪಾಲಿಸಿ ಸಂರಕ್ಷಿಸಲೆಂದು ಸಂಪ್ರಾರ್ಥಿಸುತ್ತೇನೆ.

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

॥ ಶ್ರೀರಸ್ತು ॥

**ಅಥ ಮಂಗಳಾಚರಣಶ್ಲೋಕಾಃ**

**ತಂ ಮನ್ಮಹೇ ಮಹೇಶಾನಂ ಮಹೇಶಾನಪ್ರಿಯಾರ್ಭಕಂ ।**
**ಗಣೇಶಾನಂ ಕರಿಗಣೇಶಾನಾನನಮನಾಮಯಂ ॥**

**ಭೂಮಿಷ್ಠಾಪಿ ನ ಯಾತ್ರಭೂಸ್ತ್ರಿದಿವತೋಽಪ್ಯುಚ್ಚೈರಧಃಸ್ಥಾಪಿ ಯಾ**
**ಯಾ ಬದ್ಧಾ ಭುವಿ ಮುಕ್ತಿದಾ ಸ್ಯುರಮೃತಂ ಯಸ್ಯಾಂ ಮೃತಾ ಜಂತವಃ ।**
**ಯಾ ನಿತ್ಯಂ ತ್ರಿಜಗತ್ಪವಿತ್ರತಟಿನೀತೀರೇ ಸುರೈಃ ಸೇವ್ಯತೇ**
**ಸಾ ಕಾಶೀ ತ್ರಿಪುರಾರಿರಾಜನಗರೀ ಪಾಯಾದಪಾಯಾಜ್ಜಗತ್ ॥**

**ನಮಸ್ತಸ್ಮೈ ಮಹೇಶಾಯ ಯಸ್ಯ ಸಂಧ್ಯಾತ್ರಯಚ್ಛಲಾತ್ ।**
**ಯಾತಾಯಾತಂ ಪ್ರಕುರ್ವಂತಿ ತ್ರಿಜಗತ್ಪತಯೋ ನಮಃ ॥**

ತಾತ್ಪರ್ಯ —ಗಜರಾಜವದನನೂ, ನಂದಿ ಭೃಂಗಿ ಮೊದಲಾದ ಶಿವ ಗಣಗಳಿಗೆ ನಾಯಕನೂ, ಶ್ರೀಮನ್ಮಹಾಮಹೇಶ್ವರನ ಮುದ್ದುಮಗನೂ, ಎಲ್ಲ ಬಗೆಯ ರೋಗಗಳನ್ನೂ ಕಳೆದು ಸುಖವನ್ನುಂಟುಮಾಡುವ ವಿರಿಂಚಿನಾರಾಯಣ ಶಂಕರಾತ್ಮಕನಾದ ಸೂರ್ಯಸ್ವರೂಪನೂ, ಸಕಲ ವಿಘ್ನ ವಿನಾಶಕನೆಂದು ಹೆಸರಾದವನೂ, ಪರಮೇಶ್ವರಸ್ವರೂಪನೂ ಆದ ಗಣೇಶ್ವರನನ್ನು ಸರ್ವಾಭೀಷ್ಟ ಸಿದ್ಧಿಗಾಗಿ ಧ್ಯಾನಿಸುತ್ತೇವೆ

(ಪರಮೇಶ್ವರನ ತ್ರಿಶೂಲಾಗ್ರದಲ್ಲಿ ನೆಲಸಿರುವುದರಿಂದ) ಯಾವುದು ಭೂಭಾಗದಂತೆಯೆ ತೋರಿಬರುತ್ತಿದ್ದರೂ (ಅಯೋಧ್ಯಾದಿ ಪುಣ್ಯಕ್ಷೇತ್ರಗಳಂತೆ ಭೂಮಿಗೆ ಸಂಬಂಧಿಸಿಲ್ಲದೆ) ಭೂಮಿಯಿಂದ ಬೇರೆಯಾಗಿಯೆ ಇರುವುದೊ, ಯಾವುದು (ಭುವರಾದಿ ಆರು ಲೋಕಗಳಂತೆಯೆ ಇರುವುದಾದ) ಭೂಲೋಕ ಮಧ್ಯದಲ್ಲಿರುವಂತೆ ವಿರಾಜಿಸುತ್ತಿದ್ದರೂ (ಪ್ರಳಯಸಮಯದಲ್ಲಿ ಸಾಕ್ಷಾತ್ ಪರಶಿವನು ತ್ರಿಶೂಲದಿಂದ ಎತ್ತಿಹಿಡಿಯುವನಾದುದರಿಂದ) ಸ್ವರ್ಗಲೋಕಕ್ಕಿಂತಲೂ ಮೇಲಕ್ಕಿರುವುದೊ, ಭೂಮಿಗೆ ಸಂಬಂಧಿಸಿದಂತಿದ್ದರೂ ತನ್ನಲ್ಲಿ ವಾಸಮಾಡುವವರಿಗೆ (ಕಾಶೀವಾಸಿಗಳಿಗೆ ರುದ್ರನು ಮರಣಕಾಲದಲ್ಲಿ ತಾರಕ ಮಂತ್ರವನ್ನು ಕಿವಿಯಲ್ಲಿ ಉಪದೇಶಮಾಡುವನಾದುದರಿಂದ) ಮುಕ್ತಿಯನ್ನು ದೊರಕಿಸುವುದೊ, ಎಲ್ಲಿ ಮೃತಿಯೊಂದಿದ ಸಕಲ ಜೀವರಾಶಿಗಳೂ ಮೋಕ್ಷವನ್ನೇ ಪಡೆಯುತ್ತವೆಯೋ, ಮೂರು ಲೋಕಗಳನ್ನೂ ಪಾವನಗೊಳಿಸುವ ಗಂಗಾತೀರದಲ್ಲಿರುವ ಯಾವುದನ್ನು ಸ್ವರ್ಗವಾಸಿಗಳಾದ ದೇವತೆಗಳೂ ಆಶ್ರಯಿಸಿ ಸೇವೆಗೈಯುತ್ತಾರೆಯೋ ಅಂತಹ ಸ್ವರ್ಣ, ರಜತ, ಲೋಹಗಳಿಂದ ನಿರ್ಮಿತವಾದ ಅಸುರರ ತ್ರಿಪುರಗಳನ್ನು ಧ್ವಂಸಗೊಳಿಸಿದವನೂ, ಸ್ಥೂಲಸೂಕ್ಷ್ಮಕಾರಣ ಶರೀರಲಕ್ಷಣವುಳ್ಳ ತ್ರಿಪುರಗಳ ಶತ್ರುವೆನಿಸಿದವನೂ ಆದ ಪರಮೇಶ್ವರನೇ

ಸಾಕ್ಷಾತ್ತಾಗಿ ಆಳುತ್ತಿರುವ ಕಾಶೀನಗರವು ಜಗತ್ತನ್ನು ಅಪಾಯದಿಂದ ಸಂರಕ್ಷಿಸಲಿ.

ಯಾವಾತನ ಪ್ರಾತರ್ಮಧ್ಯಾಹ್ನಸಂಧ್ಯಾಕಾಲದ ವ್ಯಾಜದಿಂದ ಮೂರು ಲೋಕಗಳ ಒಡೆಯರಾದ ಬ್ರಹ್ಮವಿಷ್ಣುರುದ್ರ ಇಂದ್ರರೇ ಮೊದಲಾದವರು ಸೃಷ್ಟಿಸ್ಥಿತಿ ತಿರೋಭಾವಗಳಿಗೊಳಗಾಗಿ (ಬಂದು ಹೋಗುತ್ತ) ಸೃಷ್ಟಿಸ್ಥಿತಿಲಯ ಕಾರ್ಯಗಳನ್ನೆಸಗುತ್ತಿರುವರೋ ಅಂತಹ ಬ್ರಹ್ಮವಿಷ್ಣುಮಹೇಶ್ವರ ಸ್ವರೂಪ ನಾಗಿರುವ ಮಹಾಮಹೇಶ್ವರನಿಗೆ (ಅಥವಾ ಸೂರ್ಯಪರಮಾತ್ಮನಿಗೆ) ನಮಸ್ಕಾರವು.

**ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀಸುತಃ ।**
**ಸೂತಾಗ್ರೇ ಕಥಯಾಮಾಸ ಕಥಾಂ ಪಾಪಾಪನೋದಿನೀಂ ॥**

ಬ್ರಹ್ಮ, ಪದ್ಮ, ವಿಷ್ಣು, ಶಿವ, ಭಾಗವತ, ನಾರದ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ಲಿಂಗ, ವರಾಹ, ಸ್ಕಾಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ ಎಂಬ ಹದಿನೆಂಟು ಪುರಾಣಗಳ ಕರ್ತೃವೂ, ಸತ್ಯವತೀ ದೇವಿಯ ಕುಮಾರನೂ, ವಿಷ್ಣುಸ್ವರೂಪನೂ ಆದ ವೇದ ವ್ಯಾಸ ಮಹಾ ಮುನೀಶ್ವರನು ಸೂತಮಹರ್ಷಿಯ ಮುಂಗಡೆ ಸಕಲ ಪಾಪ ಗಳನ್ನೂ ಕಳೆಯುವ ಪವಿತ್ರವಾದ ಕಥೆಯನ್ನು ಹೇಳತೊಡಗಿದನು.

# ವಿಷಯಾನುಕ್ರಮಣಿಕೆ

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

ತಾತ್ಪರ್ಯ

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣಂ

## ಅಥ ಕಾಶೀಖಂಡಂ ಪ್ರಾರಭ್ಯತೇ

(ಪೂರ್ವಾರ್ಧಃ)

ಓಂ ಶ್ರೀ ಗಣೇಶಾಯ ನಮಃ । ಓಂ ನಮೋ ಬೃಹಸ್ಪತಯೇ ।
ನಮಸ್ತಸ್ಮೈ ಬ್ರಹ್ಮಣೇ । ವಿಷ್ಣವೇ ನಮಃ ।

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಅಥ ಪ್ರಥಮೋಽಧ್ಯಾಯಃ

### ವಿಂಧ್ಯಪರ್ವತನರ್ಧನವರ್ಣನಂ

**ಶ್ರೀ ವ್ಯಾಸ ಉವಾಚ :—**

**ಕದಾಚಿನ್ನಾರದಃ ಶ್ರೀಮಾನ್ ಸ್ನಾತ್ವಾ ಶ್ರೀ ನರ್ಮದಾಂಭಸಿ ।**
**ಶ್ರೀಮದೋಂಕಾರಮಭ್ಯರ್ಚ್ಯ ಸರ್ವದಂ ಸರ್ವದೇಹಿನಾಂ ॥ ೧ ॥**
**ವ್ರಜನ್ನಿಲೋಕಯಾಂಚಕ್ರೇ ಪುರೋ ವಿಂಧ್ಯಂ ಧರಾಧರಂ ।**
**ಸಂಸಾರತಾಪಸಂಹಾರಿರೇವಾವಾರಿಪರಿಷ್ಕೃತಂ ॥ ೨ ॥**

---

## ಕನ್ನಡದ ಅನುವಾದ

### ವಿಂಧ್ಯಪರ್ವತನರ್ಧನವರ್ಣನ

೧–೨. ಶ್ರೀ ವ್ಯಾಸಮುನಿಯು ಹೇಳುತ್ತಾನೆ :—ಒಮ್ಮೆ ಮಹಾ ತೇಜಸ್ಸಂಪನ್ನನಾದ ನಾರದ ಮುನೀಂದ್ರನು ನರ್ಮದಾ ನದಿಯಲ್ಲಿ ಮಿಂದು, ಸಮಸ್ತ ದೇಹಿಗಳಿಗೂ ಸಮಸ್ತ ಇಷ್ಟಾರ್ಥಗಳನ್ನು ದಯೆಗೆಯ್ವ ಅನಂತಕಲ್ಯಾಣಗುಣಪರಿಪೂರ್ಣನೂ, ಅಮಿತ ಮಹಿಮನೂ ಆದ ಓಂಕಾರೇಶ್ವರನನ್ನು ಅರ್ಚಿಸಿ, ಮುಂದುವರಿಯುತ್ತ ಅಲ್ಲಿಯೇ ತನ್ನ ಮುಂಗಡೆ ಸಮಸ್ತ ಮಾನವರ ಸಂಸಾರ ತಾಪವನ್ನು ಸಂಹರಿಸುವ ಆ ನರ್ಮದಾ ನದಿಯ ನೀರಿನಿಂದ ಪರಿಷ್ಕೃತವಾದ ವಿಂಧ್ಯಪರ್ವತವನ್ನು ಕಂಡನು.

ದ್ವೈರೂಪ್ಯೇಣಾಽಪಿ ಕುರ್ವಂತಂ ಸ್ಥಾವರೇಣ ಚರೇಣ ಚ ।
ಸಾಽಭಿಖ್ಯೇನ ಯಥಾರ್ಥಾಖ್ಯಾಮುಚ್ಚೈರ್ವಸುಮತೀಮಿಮಾಂ ॥ ೩ ॥
ರಸಾಲಯಂ ರಸಾಲೈಸ್ತೈರಶೋಕೈಃ ಶೋಕಹಾರಿಣಂ ।
ತಾಲೈಸ್ತಮಾಲೈರ್ಹಿಂತಾಲೈಃ ಸಾಲೈಃ ಸರ್ವತ್ರ ಶಾಲಿತಂ ॥ ೪ ॥
ಖಪುರೈಃ ಖಪುರಾಕಾರಂ ಶ್ರೀಫಲೈಃ ಶ್ರೀಫಲಂ ಕಿಲ ।
ಗುರುಶ್ರಿಯಂ ತ್ವಗುರುಭಿಃ ಕಪಿಪಿಂಗಕಪಿತ್ಥಕೈಃ ॥ ೫ ॥
ವನಶ್ರಿಯಃ ಕುಚಾಕಾರೈರ್ಲಿಕುಚೈಶ್ಚ ಮನೋಹರಂ ।
ಸುಧಾಫಲಸಮಾರಂಭಿ ರಂಭಾಭಿಃ ಪರಿಭಾಸಿತಂ ॥ ೬ ॥
ಸುರಂಗೈಶ್ಚಾಽಪಿ ನಾರಂಗೈ ರಂಗಮಂಟಪವಚ್ಛ್ರಿಯಃ ।
ವಾನೀರೈಶ್ಚಾಽಪಿ ಜಂಬೀರೈರ್ಬೀಜಪೂರೈಃ ಪ್ರಪೂರಿತಂ ॥ ೭ ॥
ಅನಿಲಾಲೋಲಕಂಕೋಲವಲ್ಲೀಹಲ್ಲೀಸಕಾಯಿತಂ ।
ಲವಲೀಲವಲೀಲಾಭಿರ್ಲಾಸ್ಯಲೀಲಾಲಯಂ ಕಿಲ ॥ ೮ ॥

---

೩. ಆ ಪರ್ವತೋತ್ತಮವು ಜಂಗಮಸ್ಥಾವರಗಳೆರಡರಿಂದಲೂ ಕಂಗೊಳಿಸುತ್ತ ಈ ಭೂಮಂಡಲಕ್ಕಿರುವ ವಸುಮತಿಯೆಂಬ ಹೆಸರನ್ನು ಅನ್ವರ್ಥವಾಗಿಸುತ್ತಿದ್ದಿತು ;

೪. ರಸಾಲ ತರುಗಳಿಂದ ಕಂಗೊಳಿಸಿ ರಸಾಲಯವೇ ಆಗಿ, ಅಶೋಕ ವೃಕ್ಷಗಳಿಂದ ನಿಬಿಡವಾಗಿ, ಜನರ ಶೋಕವನ್ನು ಕಳೆಯುವುದಾಗಿ ತಾಲ ತಮಾಲ ಹಿಂತಾಲ ಸಾಲ ವೃಕ್ಷಗಳಿಂದ ತುಂಬಿದ್ದಿತು,

೫. ಕೃಷ್ಣಾಗುರು ತರುಗಳಿಂದಲೂ, ಗಗನ ಗೃಹಗಳಂತೆ ಅತ್ಯುನ್ನತವಾಗಿ ಬೆಳೆದ ಅಡಕೆಮರಗಳಿಂದಲೂ, ಫಲಭರಿತವಾದ ಬಿಲ್ವವೃಕ್ಷಗಳಿಂದಲೂ, ಪಿಂಗಳ ವರ್ಣದಿಂದ ಸೊಗಸೊಗೆವ ಹಣ್ಣುಗಳಿಂದ ಜಗಿಯುವ ಬೇಲದ ಮರಗಳಿಂದಲೂ ಆ ಪರ್ವತವು ಬೆಳಗುತ್ತಿದ್ದಿತು.

೬. ವನಲಕ್ಷ್ಮಿಯ ಕುಚಗಳನ್ನು ಹೋಲಿ ಮೆರೆಯುವ ಫಲಪೂರ್ಣವಾದ ಲಿಕುಚ (ಗಜನಿಂಬೆ) ವೃಕ್ಷಗಳಿಂದಲೂ, ಅಮೃತಪೂರ್ಣವಾದ ಫಲಗಳಿಂದ ಜೋಲುತ್ತಿರುವ ರಸಬಾಳೆಯ ಗಿಡಗಳಿಂದಲೂ ಆ ನಗಶ್ರೇಷ್ಠವು ಕಂಗೊಳಿಸುತ್ತಿದ್ದಿತು.

೭ ಸೊಗಸಾದ ಬಣ್ಣದಿಂದ ಕಂಗೊಳಿಸಿ ಶ್ರೀದೇವಿಯ ರಂಗಮಂಟಪದಂತೆ ವಿರಾಜಿಸುತ್ತಿರುವ ನಾರಂಗ (ಕಿತ್ತಳೆ) ವೃಕ್ಷಗಳಿಂದಲೂ, ನೀರುವಂಜಿ ನೇರಿಳೆ ಸೀಬೆ ಮರಗಳಿಂದಲೂ ಆ ಪರ್ವತವು ತುಂಬಿ ತುಳುಕುತ್ತಿದ್ದಿತು.

೮. ಗಾಳಿಗೆ ಬಳುಕಿ ಲಾಸ್ಯವಾಡುತ್ತಿರುವ ಕಂಕೋಲಲತೆಗಳಿಂದಲೂ ಅಂತೆಯೇ ಹೃದಯಂಗಮವಾದ ನರ್ತನವನ್ನು ಮೆರೆಯುತ್ತಿರುವ ಲವಲೀ

ಮಂದಾಂದೋಲಿತಕರ್ಪೂರಕದಲೀದಲಸಂಜ್ಞಯಾ ।
ವಿಶ್ರಮಾಯ ಶ್ರಮಾಪನ್ನಾನಾಹೂಯಂತಮಿವಾಽಧ್ವಗಾನ್ ॥ ೯ ॥
ಪುನ್ನಾಗಮಿವ ಪುನ್ನಾಗಪಲ್ಲವೈಃ ಕರಪಲ್ಲವೈಃ ।
ಕಲಯಂತಮಿವಾಽಲೋಲೈರ್ಮಲ್ಲಿಕಾಸ್ತಬಕಸ್ತನಂ ॥ ೧೦ ॥
ವಿದೀರ್ಣದಾಡಿಮೈಃ ಸ್ವಾಂತಂ ದರ್ಶಯಂತಂ ತು ರಾಗವತ್ ।
ಮಾಧವೀಂ ಧವರೂಪೇಣ ಶ್ಲಿಷ್ಯಂತಮಿವ ಕಾನನೇ ॥ ೧೧ ॥
ಉದುಂಬರೈರಂಬರಗೈರನಂತಫಲಮಾಲಿತೈಃ ।
ಬ್ರಹ್ಮಾಂಡಕೋಟೀರ್ಬಿಭ್ರಂತಮನಂತಮಿವ ಸರ್ವತಃ ॥ ೧೨ ॥
ಪನಸೈರ್ವನನಾಸಾಭೈಃ ಶುಕನಾಸೈಃ ಪಲಾಶಕೈಃ ।
ಪಲಾಶನಾದ್ವಿರಹಿಣಾಂ ಪತ್ರತ್ಯಕ್ತೈರಿವಾಽಽವೃತಂ ॥ ೧೩ ॥

---

ಲತೆಗಳಿಂದಲೂ ನಿಬಿಡವಾಗಿದ್ದ ಆ ಪರ್ವತವು ಲಾಸ್ಯಲೀಲೆಗೆ ಆಲಯವೊ ಎಂಬಂತೆ ವಿರಾಜಿಸುತ್ತಿದ್ದಿತು.

೯. ಮೆಲುಗಾಳಿಗೆ ಅಲುಗುವ ಕರ್ಪೂರ ಕದಲೀವೃಕ್ಷಗಳಿಂದ ಪಥಿಕರನ್ನು "ಬನ್ನಿ, ವಿಶ್ರಮಿಸಿಕೊಳ್ಳಿ" ಎಂದು ಕರೆಯುತ್ತಿರುವುದೋ ಎಂಬಂತೆ ಆ ಪರ್ವತವು ಸೊಗಸುತ್ತಿದ್ದಿತು.

೧೦–೧೧. ಗಂಡಾನೆಯಂತೆ ಮೆರೆಯುವುದಾಗಿ ದೇವತೆಗಳಿಗೆ ಅತ್ಯಂತ ಪ್ರಿಯವಾಗಿಯೂ ಮಾನವರಿಗೆ ಅತ್ಯಂತ ಮನೋಹರವಾಗಿಯೂ ಇರುವ ಕಿಸಲಯ ಪೂರ್ಣವಾದ ಪುನ್ನಾಗ ವೃಕ್ಷಗಳಿಂದಲೂ, ಜೋಲುತ್ತಿರುವ ಹೂಗೊಂಚಲುಗಳಿಂದ ಸ್ತನಭ್ರಾಂತಿಯನ್ನುಂಟುಮಾಡುತ್ತಿರುವ ಮಲ್ಲಿಗೆಯ ಬಳ್ಳಿಗಳಿಂದಲೂ, ಬಿರಿದು ಕೆಂಪಾಗಿರುವ ಹಣ್ಣುಗಳಿಂದ ನಿಬಿಡವಾಗಿ ತನ್ನ ಅಂತರಂಗವನ್ನು ಅನುರಾಗದಿಂದ ಹೊರಗಾಣಿಸುತ್ತಿರುವುದೋ ಎಂಬಂತಿರುವ ದಾಳಿಂಬೆಯ ಮರಗಳಿಂದಲೂ, ನಿರ್ಜನವಾದ ಆ ಕಾನನಪ್ರದೇಶದಲ್ಲಿ ಪ್ರಿಯನನ್ನು ಆಲಿಂಗಿಸಿಕೊಳ್ಳುತ್ತಿರುವುದೊ ಎಂಬಂತೆ ಆ ವೃಕ್ಷಗಳನ್ನು ಹಬ್ಬಿರುವ ಮಾಧವೀಲತೆಗಳಿಂದಲೂ ಆ ವಿಂಧ್ಯಗಿರಿಯು ವಿರಾಜಿಸುತ್ತಿದ್ದಿತು.

೧೨. ಎಲ್ಲೆಡೆಗಳಲ್ಲಿಯೂ ಬ್ರಹ್ಮಾಂಡಕೋಟಿಗಳನ್ನು ಹೊತ್ತುನಿಂತಿರುವ ನಾಗರಾಜನಾದ ಅನಂತನಂತೆ, ಅಸಂಖ್ಯಾತವಾದ ಫಲಗಳಿಂದ ಪೂರ್ಣವಾಗಿ ಗಗನವನ್ನೇ ಒರೆಯುತ್ತಿರುವ ಅತ್ತಿಯ ಮರಗಳಿಂದ ಸಾಲುಗಟ್ಟಿ ಆ ಪರ್ವತವು ಕಂಗೊಳಿಸುತ್ತಿದ್ದಿತು.

೧೩–೧೪. ವನಗಜಗಳಂತೆ ಬಹು ಸ್ಥೂಲವಾಗಿರುವ ಹಲಸಿನ ಮರಗಳಿಂದಲೂ, ಗಿಳಿಮೂಗಿನಂತೆ ಬಹು ಕೆಂಪಾಗಿರುವ ಹೂಗಳಿಂದ ಕಂಗೊಳಿಸಿ ಪ್ರಿಯಾ ವಿರಹವೇದನೆಯನ್ನು ಸೂಚಿಸುತ್ತಿರುವ ಹೆಂಗಳೆಯರನ್ನು ಹೋಲುವ

ಕದಂಬವಾದಿನೋ ನೀಪಾನ್ದೃಷ್ಟ್ವಾ ಕಂಟಕಿತೈರಿವ ।
ಸಮಂತತೋ ಭ್ರಾಜಮಾನಂ ಕದಂಬಕಕದಂಬಕೈಃ ॥ ೧೪ ॥
ನಮೇರುಭಿಶ್ಚ ಮೇರೂಶ್ಚ ಶಿಖರೈರಿವ ರಾಜಿತಂ ।
ರಾಜಾದನೈಶ್ಚ ಮದನೈಃ ಸದನೈರಿವ ಕಾಮಿನಾಂ ॥ ೧೫ ॥
ತಟೇ ತಟೇ ಪಟುವರೈರುಚ್ಚೈಃ ವಟಪರಿವೃತಂ ।
ಕುಟಜಸ್ತಬಕೈರ್ಭ್ರಾಂತಮಧಿಷ್ಠಿತಬಕೈರಿವ ॥ ೧೬ ॥
ಕರಮರ್ದೈಃ ಕರೀರೈಶ್ಚ ಕರಂಜೈಶ್ಚ ಕರಂಬಕೈಃ ।
ಸಹಸ್ರಕರವದ್ಭಾಂತಮರ್ಥಿಪ್ರತ್ಯುದ್ಗತೈಃ ಕರೈಃ ॥ ೧೭ ॥
ನೀರಾಜಿತಮಿವೋದ್ದೀಪ್ತೆ ರಾಜಚಂಪಕಕೋರಕೈಃ ।
ಸಪುಷ್ಪಶಾಲ್ಮಲೀಭಿಶ್ಚ ಜಿತಪದ್ಮಾಕರಶ್ರಿಯಂ ॥ ೧೮ ॥
ಕ್ವಚಿಜ್ಜಲದಲೈರುಚ್ಚೈಃ ಕ್ವಚಿತ್ಕಾಂಚನಕೇತಕೈಃ ।
ಕೃತಮಾಲೈರ್ನಕ್ತಮಾಲೈಃ ಶೋಭಮಾನಂ ಕ್ವಚಿತ್ಕ್ವಚಿತ್ ॥ ೧೯ ॥

---

ಮುತ್ತುಗದ ಮರಗಳಿಂದಲೂ, ಪರಸ್ಪರವಾಗಿ ರೋಮಾಂಚಗೊಂಡು ಎತ್ತೆತ್ತಲೂ ಕಂಗೊಳಿಸುತ್ತಿರುವ ಕದಂಬ ನೀಪವೃಕ್ಷಗಳಿಂದಲೂ ದ್ರಾಕ್ಷಿ, ಮೇರುಶಿಖರದಂತೆ ಅತ್ಯುನ್ನತವಾದ ರೆಂಬೆಗಳನ್ನೊಳಗೊಂಡ ಪ್ರಿಯಾಲವೃಕ್ಷಗಳು, ಧತ್ತೂರ ಗುಲ್ಮಗಳು ಮೊದಲಾದವುಗಳಿಂದಲೂ ಆ ವಿಂಧ್ಯಪರ್ವತವು ಕಾಮಿಗಳ ಸದನವೊ ಎಂಬಂತೆ ಕಂಗೊಳಿಸುತ್ತಿದ್ದಿತು.

೧೬-೧೭. ದಡದಡದಲ್ಲಿಯೂ ಹಾಕಿರುವ ಗುಡಾರಗಳಂತೆ ಕಂಗೊಳಿಸುತ್ತಿರುವ ಎತ್ತರವೂ ಬಲವೂ ಆದ ಆಲದ ಮರಗಳಿಂದಲೂ, ಹೂಗೊಂಚಲುಗಳಿಂದ ಕೂಡಿ, ಬಕಪಕ್ಷಿಗಳಿಂದ ತುಂಬಿದಂತಿರುವ ಕುಟಜ ವೃಕ್ಷಗಳಿಂದಲೂ ಯಾಚಕರಿಗಾಗಿ ಕೈಯೆತ್ತಿ ಭಿಕ್ಷೆನೀಡುತ್ತಿರುವುವೊ ಎಂಬಂತೆ ಒಪ್ಪಿ, ಬಹು ಶಾಖಾ ಸಮನ್ವಿತವಾಗಿರುವ ಕರಮರ್ದ ಕರೀರ ಚಿರಿಬಿಲ್ವ ಕರಂಬಕ ವೃಕ್ಷಗಳಿಂದಲೂ ಆ ಪರ್ವತವು ಒಪ್ಪುತ್ತಿದ್ದಿತು.

೧೮. ರಾಜಸಂಪಗೆಯ ಮೊಗ್ಗುಗಳಿಂದ ಆರತಿಯನ್ನು ಕೈಗೊಂಡು, ಹೂ ಮೊಳೆತ ಬೂರುಗದ ಮರಗಳಿಂದೊಪ್ಪಿ, ಕಮಲಗಳು ತುಂಬಿದ ಸರೋವರವನ್ನು ಮೀರಿಸಿರುವುದೊ ಎಂಬಂತೆ ಆ ಪರ್ವತವು ಒಪ್ಪುತ್ತಿದ್ದಿತು.

೧೯. ಅಲ್ಲದೆ ಆ ಪರ್ವತೋತ್ತಮವು ಕೆಲವೆಡೆಗಳಲ್ಲಿ ಅಲುಗುತ್ತಿರುವ ದಳಗಳುಳ್ಳ ಅಶ್ವತ್ಥದ ಮರಗಳಿಂದಲೂ, ಕೆಲವೆಡೆಗಳಲ್ಲಿ ಹೊಂಬಣ್ಣದ ಹೂಗಳಿಂದ ಕಂಗೊಳಿಸುತ್ತಿರುವ ಹೊಂಗೇದಗೆ ಗಿಡಗಳಿಂದಲೂ, ಕೆಲವೆಡೆಗಳಲ್ಲಿ ಕೃತಮಾಲವೃಕ್ಷಗಳಿಂದಲೂ ಮತ್ತೆ ಕೆಲವೆಡೆಗಳಲ್ಲಿ ನಕ್ತಮಾಲವೃಕ್ಷಗಳಿಂದಲೂ ತುಂಬಿ ವಿರಾಜಿಸುತ್ತಿದ್ದಿತು.

ಕರ್ಕಂಧುಬಂಧುಜೀವೈಶ್ಚ ಪುತ್ರಜೀವೈರ್ವಿರಾಜಿತಂ ।
ಸತಿಂದುಕೇಂಗುದೀಭಿಶ್ಚ ಕರುಣೈಃ ಕರುಣಾಲಯಂ ॥ ೨೦ ॥
ಗಲನ್ಮಧೂಕಕುಸುಮೈರ್ಧರಾರೂಪಧರಂ ಹರಂ ।
ಸ್ವಹಸ್ತಮುಕ್ತಮುಕ್ತಾಭಿರರ್ಚಯಂತಮಿವಾನಿಶಂ ॥ ೨೧ ॥
ಸರ್ಜಾರ್ಜುನಾಂಜನೈರ್ಬೀಜೈರ್ವ್ಯಜನೈರ್ವಿಜ್ಯಮಾನವತ್ ।
ನಾಲಿಕೇರೈಃ ಸ ಖರ್ಜೂರೈರ್ಧೃತಚ್ಛತ್ರಮಿವಾಂಬರೇ ॥ ೨೨ ॥
ಅಮಂದ್ಯೈಃ ಪಿಚುಮಂದ್ಯೈಶ್ಚ ಮಂದಾರೈಃ ಕೋವಿದಾರಕೈಃ ।
ಪಾಟಲಾತಿಂತಿಣೀಘೋಂಟಾ ಶಾಖೋಟ್ಯೈಃ ಕರಹಾಟಕೈಃ ॥ ೨೩ ॥
ಉದ್ದಂಡ್ಯೈಶ್ಚಾಪಿ ಶೇಹುಂಡ್ಯೈರೇರಂಡ್ಯೈರ್ಗುಡಪುಷ್ಪಕೈಃ ।
ವಕುಲೈಸ್ತಿಲಕೈಶ್ಚೈವ ತಿಲಕಾಂಕಿತಮಸ್ತಕಂ ॥ ೨೪ ॥
ಅಕ್ಷೈಃ ಪ್ಲಕ್ಷೈಃ ಶಲ್ಲಕೀಭಿರ್ದೇವದಾರುಹರಿದ್ರುಮೈಃ ।
ಸದಾಫಲಸದಾಪುಷ್ಪವೃಕ್ಷವಲ್ಲೀವಿರಾಜಿತಂ ॥ ೨೫ ॥
ಏಲಾಲವಂಗಮರಿಚಕುಲುಂಜನವನಾವೃತಂ ।
ಜಂಬ್ವಾಮ್ರಾತಕಭಲ್ಲಾತಶೇಲುಶ್ರೀಪರ್ಣಿವರ್ಣಿತಂ ॥ ೨೬ ॥

---

೨೦. ಎಳಚಿ ಬಂಧುಜೀವ ಪುತ್ರಜೀವ ವೃಕ್ಷಗಳಿಂದ ವಿರಾಜಿತವಾಗಿ, ತಿಂದುಕ ಇಂಗುದಿ ಕರುಣ ಮೊದಲಾದ ವೃಕ್ಷಭೇದಗಳಿಂದ ನಿಬಿಡವಾಗಿ ಕರುಣಾರಸಕ್ಕೆ ಆಲಯವೆಂಬಂತೆ ಆ ಗಿರಿವರವು ಶೋಭಿಸುತ್ತಿದ್ದಿತು.

೨೧. ಸಂತತವೂ ಧರಾರೂಪನೂ, ಸರ್ವಾತ್ಮಕನೂ ಆದ ಮಹೇಶ್ವರನನ್ನು ಮುತ್ತುಗಳು ತುಂಬಿದ ಬೊಗಸೆಗಳಿಂದ ಪೂಜಿಸುತ್ತಿರುವುದೊ ಎಂಬಂತೆ, ಉದುರುತ್ತಿರುವ ಮಧೂಕಕುಸುಮಗಳಿಂದ ಆ ಪರ್ವತರಾಜವು ಕಂಗೊಳಿಸುತ್ತಿದ್ದಿತು

೨೨. ಸರ್ಜ ಅರ್ಜುನ ಅಂಜನ ವೃಕ್ಷಗಳಿಂದ ತುಂಬಿ ಚಾಮರ ಸೇವೆಯನ್ನು ಕೈಕೊಂಡು ನಾರಿಕೇಳ ಖರ್ಜೂರ ವೃಕ್ಷಗಳಿಂದ ನಿಬಿಡವಾಗಿ ಮೇಲ್ಭಾಗದಲ್ಲಿ ಛತ್ರವಿರಾಜಿತವಾಗಿರುವಂತೆ ಆ ನಗೇಂದ್ರವು ಸೊಗಸುಗೊಂಡಿದ್ದಿತು.

೨೩–೨೫. ಅಸಂಖ್ಯಾತವಾದ ಬೇವು ಮಂದಾರ ಕೋವಿದಾರ ಪಾಟಲ ಹುಣಿಸೆ ಬೋರೆ ಚಕ್ಕೋತ ಕರಹಾಟ ಶೀಹುಂಡ ಏರಂಡ ಹಿಪ್ಪೆ ಬಕುಳ ತಿಲಕ ಮೊದಲಾದ ವೃಕ್ಷಗಳಿಂದ ತಿಲಕವಿಟ್ಟ ಹಣೆಯುಳ್ಳವನಂತೆ ಶೋಭಿಸಿ, ಅಕ್ಷ ಪ್ಲಕ್ಷ ಸಲ್ಲಕೀ ದೇವದಾರು ಹರಿದ್ರುಮ ಮೊದಲಾದ ಸಂತತ ಫಲಪುಷ್ಪ ಸಹಿತವಾದ ವೃಕ್ಷಲತೆಗಳಿಂದ ಆ ನಗಶ್ರೇಷ್ಠವು ಕಂಗೊಳಿಸುತ್ತಿದ್ದಿತು.

೨೬–೨೯. ಏಲಕ್ಕಿ ಲವಂಗ ಮೆಣಸು ಕುಲಂಜನ ವೃಕ್ಷಗಳಿಂದ ಸುತ್ತುವರಿದು, ನೇರಿಳೆ ಮಾವು ಭಲ್ಲಾತ ಶ್ಲೇಷ್ಮಾತಕ ಶ್ರೀಪರ್ಣಿ ಮೊದಲಾದ ವೃಕ್ಷ

ಶಾಕಶಂಖವನೈ ರಮ್ಯಂ ಚಂದನೈ ರಕ್ತಚಂದನೈಃ ।
ಹರೀತಕೀಕರ್ಣಿಕಾರಧಾತ್ರೀವನವಿಭೂಷಣಂ ॥ ೨೭ ॥
ದ್ರಾಕ್ಷಾವಲ್ಲೀ ನಾಗವಲ್ಲೀ ಕಣಾವಲ್ಲೀ ಶತಾವೃತಂ ।
ಮಲ್ಲಿಕಾ ಯೂಥಿಕಾ ಕುಂದ ಮದಯಂತೀ ಸುಗಂಧಿನಂ ॥ ೨೮ ॥
ಭ್ರಮದ್ಭ್ರಮರಮಾಲಾಭಿರ್ಮಾಲತೀಭಿರಲಂಕೃತಂ ।
ಅಲಿಚ್ಛಲಾಗತಂ ಕೃಷ್ಣಂ ಗೋಪೀರಂತುಮನೇಕಶಃ ॥ ೨೯ ॥
ನಾನಾಮೃಗಗಣಾಕೀರ್ಣಂ ನಾನಾಪಕ್ಷಿವಿನಾದಿತಂ ।
ನಾನಾಸರಿತ್ಸರಃಸ್ರೋತಃಪಲ್ವಲೈಃ ಪರಿತೋಽವೃತಂ ॥ ೩೦ ॥
ತುಚ್ಛಶ್ರಿಯಃ ಸ್ವರ್ಗಭೂಮೀಃ ಪರಿಹಾಯಾಗತೈರಿವ ।
ನಾನಾಸುರನಿಕಾಯೈಶ್ಚ ವಿಷ್ವಗ್ಭೋಗೇಚ್ಛಯೋಷಿತಂ ॥ ೩೧ ॥
ಉತ್ಸೃಜಂತಮಿವಾಽರ್ಘ್ಯಂ ವೈ ಪತ್ರಪುಷ್ಪೈರಿತಸ್ತತಃ ।
ಕೇಕಿಕೇಕಾರವೈರ್ದೂರಾತ್ಕುರ್ವಂತಂ ಸ್ವಾಗತಂ ಕಿಲ ॥ ೩೨ ॥
ಅಥ ಸೂರ್ಯಶತಾಽಽಭಾಸಂ ನಭಸಿ ದ್ಯೋತಿತಾಽಂಬರಂ ।
ನಾರದಂ ದೃಷ್ಟ್ವಾಂಧ್ಯೈಲೋ ದೂರಾತ್ಪ್ರತ್ಯುಜ್ಜಗಾಮ ತಂ ॥ ೩೩ ॥

---

ಗಳಿಂದಲೂ ಫಲಪುಷ್ಪ ವೃಕ್ಷಗಳ ವನಗಳಿಂದಲೂ, ಶಂಖವನಗಳಿಂದಲೂ ಚಂದನ ರಕ್ತಚಂದನ ಹರೀತಕಿ ಕರ್ಣಿಕಾರ ಧಾತ್ರೀ ವನಗಳಿಂದಲೂ ಭೂಷಿತವಾಗಿ, ದ್ರಾಕ್ಷಿ ನಾಗವಲ್ಲಿ ಕಣಾವಲ್ಲಿ ಮಲ್ಲಿಗೆ ಯೂಥಿಕೆ ಕುಂದ ಮದಯಂತಿ ಮೊದಲಾದ ಬಳ್ಳಿಗಳಿಂದ ಸುಗಂಧಪೂರ್ಣವಾಗಿ, ಅತ್ತಿತ್ತ ಸುತ್ತುತ್ತ ಮೊರೆ ದಾಡುವ ಅಳಿವಿಂಡುಗಳಿಂದ ತುಂಬಿದ ಮಾಲತೀ ವೃಕ್ಷಗಳಿಂದಲಂಕೃತವಾಗಿ ಅನೇಕ ರೂಪಗಳನ್ನು ತಳೆದು ಗೋಪಿಯರೊಡನೆ ಕ್ರೀಡಿಸಲು ಬಂದ ಕೃಷ್ಣನೊ ಎಂಬಂತೆ ಆ ವಿಂಧ್ಯಾದ್ರಿಯು ಶೋಭಿಸುತ್ತಿದ್ದಿತು.

೩೦–೩೧. ಅನೇಕ ಮೃಗಗಣಗಳಿಂದ ತುಂಬಿ, ವಿವಿಧಪಕ್ಷಿಸಮೂಹ ಗಳಿಂದ ದನಿಗೊಂಡು, ಬಗೆಬಗೆಯ ನದಿ ಸರೋವರ ಹೊಳೆ ಹಳ್ಳಗಳಿಂದ ಸುತ್ತುವರಿದುದಾಗಿ, ಅಲ್ಪವಾದ ಸಂಪತ್ಸಮೃದ್ಧಿಯುಳ್ಳ ಸ್ವರ್ಗಭೂಮಿಯನ್ನು ತೊರೆದು ಅಂಖಡ ಭೋಗವನ್ನನುಭವಿಸಬಯಸಿ ಬಂದಿರುವರೊ ಎಂಬಂತಿರುವ ದೇವತೆಗಳ ಭವನಗಳಿಂದಲೂ ಆ ಪರ್ವತವು ಒಪ್ಪುತ್ತಿದ್ದಿತು.

೩೨–೩೩. ಪತ್ರಪುಷ್ಪಗಳಿಂದ ಅರ್ಘ್ಯವನ್ನಿತ್ತು, ನವಿಲುಗಳ ಕೇಕಾರವ ಗಳಿಂದ ದೂರದಿಂದಲೇ ಸ್ವಾಗತವನ್ನು ಹೇಳುತ್ತ ಆ ಪರ್ವತರಾಜನು, ಸಹಸ್ರ ಸೂರ್ಯರ ತೇಜಸ್ಸನ್ನೊಳಗೊಂಡು ಗಗನಾಂಗಣವನ್ನೇ ಬೆಳಗುತ್ತಿರುವ ದೇವ ಮುನಿ ನಾರದನನ್ನು ಕಂಡು, ಆತನನ್ನು ಎದುರುಗೊಳ್ಳಲು ದೂರದಿಂದಲೆ ಸಡಗರಗೊಂಡು ಹೊರಟನು.

ಬ್ರಹ್ಮಸೂನುವಪುಸ್ತೇಜೋದೂರೀಕೃತದರೀತಮಾಃ ।
ತಮಾಗಚ್ಛಂತಮಾಲೋಕ್ಯ ಮಾನಸಂ ತಮ ಉಜ್ಜಹೌ ॥ ೩೪ ॥
ಬ್ರಹ್ಮತೇಜಃಸಮುದ್ಭೂತಸಾಧ್ವಸಃ ಸಾಧುಸತ್ಕ್ರಿಯಃ ।
ಕಠಿನೋಽಪಿ ಪರಿತ್ಯಜ್ಯ ಧತ್ತೇ ಮೃದುಲತಾಂ ಕಿಲ ॥ ೩೫ ॥
ದೃಷ್ಟ್ವಾ ಮೃದುಲತಾಂ ತಸ್ಯ ದ್ವೈರೂಪ್ಯೇಽಪಿ ಸ ನಾರದಃ ।
ಮುಮುದೇ ಸುತರಾಂ ಸಂತಃ ಪ್ರಶ್ರಯಗ್ರಾಹ್ಯಮಾನಸಾಃ ॥ ೩೬ ॥
ಗೃಹಾನಾಯಾಂತಮಾಲೋಕ್ಯ ಗುರುಂ ವಾಽಗುರುಮೇವ ವಾ ।
ಯೋಽಗುರುರ್ನಮ್ರತಾಂ ಧತ್ತೇ ಸ ಗುರುರ್ನಗುರುರ್ಗುರುಃ ॥ ೩೭ ॥
ತಂ ಪ್ರತ್ಯುಚ್ಚೈಃಶಿರಾಃ ಸೋಽಪಿ ವಿನಮ್ರತರಕಂಧರಃ ।
ಶೈಲಸ್ತ್ವಿಲಾಮಿಲನ್ಮೌಲಿಃ ಪ್ರಣನಾಮ ಮಹಾಮುನಿಂ ॥ ೩೮ ॥
ತಮುತ್ಥಾಪ್ಯ ಕರಾಽಗ್ರಾಭ್ಯಾಮಾಶೀರ್ಭಿರಭಿನಂದ್ಯ ಚ ।
ತದುದ್ದಿಷ್ಟಾಸನಂ ಭೇಜೇ ಮನಸೋಽಪಿ ಸಮುಚ್ಛ್ರಿತಂ ॥ ೩೯ ॥

---

೩೪. ಆ ಬ್ರಹ್ಮಸೂನುವಿನ ದೇಹದ ದಿವ್ಯತೇಜಸ್ಸಿನಿಂದ ಗುಹೆಗಳ ಕತ್ತಲೆಯೆಲ್ಲವೂ ದೂರವಾಗಲು, ಆ ಪರ್ವತರಾಜನು ಅಲ್ಲಿಗೆ ಬರುತ್ತಿರುವ ಆತನನ್ನು ಕಂಡೊಡನೆಯೆ ತನ್ನ ಮನಸ್ಸಿನಲ್ಲಡಗಿದ್ದ ತಮಸ್ಸನ್ನೆಲ್ಲವನ್ನೂ ತೊರೆದವನಾದನು.

೩೫. ಬ್ರಹ್ಮಮಾನಸಪುತ್ರನಾದ ನಾರದ ಮುನಿಯ ತೇಜಸ್ಸಿನ ಪ್ರಭಾವದಿಂದ ವಿಂಧ್ಯಗಿರಿಗೆ ಸಂಭ್ರಮವುಂಟಾಗಿ ಅವನು ಆತನನ್ನು ಸತ್ಕರಿಸುವುದರಲ್ಲಿ ತೊಡಗಿದನು. ಬಹು ಕಠಿನನಾದರೂ ಅವನು ಆ ಸಾಧುವಿನ ಸಂದರ್ಶನದ ಪ್ರಭಾವದಿಂದ ಮಾರ್ದವವನ್ನು ಹೊಂದಿದನಷ್ಟೆ.

೩೬. ಆಗ ನಾರದ ಮುನಿಯು ಆ ಪರ್ವತರಾಜನ ಜಂಗಮಸ್ಥಾವರ ರೂಪಗಳೆರಡರಲ್ಲಿಯೂ ಮೃದುಲಭಾವವನ್ನು ಕಂಡು, ಮನಸ್ಸಿನಲ್ಲಿಯೆ ಬಹುವಾಗಿ ಸಂತೋಷಿಸಿದನು. ಸತ್ಪುರುಷರು ನಮ್ರತೆಗೆ ಮನಸ್ಸನ್ನು ಸೂರೆ ಕೊಡತಕ್ಕವರಷ್ಟೆ

೩೭. ಮನೆಗೆ ಬಿಜಮಾಡಿದವನು ಮಹಾತ್ಮನೆ ಆಗಲಿ ಮಹಾತ್ಮನಲ್ಲದವನೆ ಆಗಲಿ ಅವನನ್ನು ಗೃಹಪತಿಯಾದವನು ನಮ್ರತೆಯಿಂದ ಕಂಡೊಡನೆಯೆ ಮಹಾತ್ಮನಲ್ಲದವನೂ ಮಹಾತ್ಮನೂ ಇಬ್ಬರೂ ನಮ್ರತೆಯನ್ನೇ ಹೊಂದುತ್ತಾರೆ.

೩೮. ತರುವಾಯ ಆ ವಿಂಧ್ಯಾಚಲನು, ತಾನು ಮಹೋನ್ನತನಾದರೂ, ತನ್ನ ಮನೆಗೈದಿದ ಆ ಮಹಾ ಮುನಿಗೆ ಶಿರಸ್ಸನ್ನು ನೆಲಕ್ಕೆ ಸೋಕಿಸಿ ದೀರ್ಘದಂಡಪ್ರಣಾಮವನ್ನು ಮಾಡಿದನು.

೩೯. ಆಗ ಮುನಿಯು ಅವನನ್ನು ಎರಡೂ ಕೈಗಳಿಂದ ಹಿಡಿದು ಮೇಲಕ್ಕೆ

ಸ ದಧ್ನಾ ಮಧುನಾಜ್ಯೇನ ನೀರಾದ್ರಾರ್ಕ್ಷತದೂರ್ವಯಾ ।
ತಿಲೈಃ ಕುಶೈಃ ಪ್ರಸೂನೈಸ್ತಮಷ್ಟಾಂಗಾಽರ್ಘ್ಯೈರಪೂಜಯತ್ ॥ ೪೦ ॥
ಗೃಹೀತಾಽರ್ಘ್ಯಂ ಕಿಲ ಶ್ರಾಂತಂ ಪಾದಸಂವಾಹನಾದಿಭಿಃ ।
ಗತಶ್ರಮಮಥಾಲೋಕ್ಯ ಬಭಾಷೇಽವನತೋ ಗಿರಿಃ ॥ ೪೧ ॥
ಅದ್ಯ ಸದ್ಯಃ ಪರಿಹೃತಂ ತ್ವದಂಘ್ರಿರಜಸಾ ರಜಃ ।
ತ್ವದಂಗಸಂಗಿಮಹಸಾ ಸಹಸಾಽಸ್ಯಾಂತರಂ ತಮಃ ॥ ೪೨ ॥
ಸಫಲರ್ಧಿರಹಂ ಚಾಽದ್ಯ ಸುದಿವಾಽದ್ಯ ಚ ಮೇ ಮುನೇ ।
ಪ್ರಾಕೃತೈಃ ಸುಕೃತೈರದ್ಯ ಫಲಿತಂ ಮೇ ಚಿರಾರ್ಜಿತೈಃ ॥ ೪೩ ॥
ಧರಾಧರತ್ವಂ ಕುಲಿಷು ಮಾಽನ್ಯಂ ಮೇಽದ್ಯ ಭವಿಷ್ಯತಿ ।
ಇತಿ ಶ್ರುತ್ವಾ ತದಾ ಕಿಂಚಿದುಚ್ಛ್ವಸ್ಯ ಸ್ಥಿತವಾನ್ಮುನಿಃ ॥ ೪೪ ॥
ಪುನರೂಚೇ ಕುಲಿವರಃ ಸಂಭ್ರಮಾಪನ್ನಮಾನಸಃ ।
ಉಚ್ಛ್ವಾಸಕಾರಣಂ ಬ್ರಹ್ಮನ್ಬ್ರೂಹಿ ಸರ್ವಾರ್ಥಕೋವಿದ ॥ ೪೫ ॥

---

ಬ್ಬಿಸಿ ಆಶೀರ್ವಾದವನ್ನೆಸಗಿ ಅಭಿನಂದಿಸಿ, ಅವನಿತ್ತ ಮನಸ್ಸಿಗೂ ಮಿಾರಿದ ಉನ್ನತವಾದ ಆಸನವನ್ನು ಆಶ್ರಯಿಸಿ ಕುಳಿತನು.

೪೦. ಆಗ ಆ ಪರ್ವತರಾಜನು ದಧಿ ಮಧು ಆಜ್ಯ ಆದ್ರಾರ್ಕ್ಷತ ದೂರ್ವೆ ತಿಲ ಕುಶ ಪ್ರಸೂನ ಎಂಬ ಈ ಎಂಟು ವಸ್ತುಗಳಿಂದ ಕೂಡಿದ ಅರ್ಘ್ಯವನ್ನಾತನಿಗಿತ್ತು ಸತ್ಕರಿಸಿದನು.

೪೧. ಅರ್ಘ್ಯವನ್ನು ಕೈಕೊಂಡ ಬಳಿಕ, ಆತನು ಬಳಲಿ ಬಂದಿದ್ದ ಆ ದೇವಮುನಿಗೆ ಕಾಲೊತ್ತುವಿಕೆಯೇ ಮೊದಲಾದ ಸೇವೆಗಳನ್ನು ಸಲ್ಲಿಸಿ, ಆತನ ಆಯಾಸವು ಕಳೆದಬಳಿಕ ವಿನಯ ಗೌರವಗಳಿಂದ ತಲೆಬಾಗಿ ಇಂತು ನುಡಿದನು.

೪೨. "ಓ ದೇವಮುನಿಯೆ! ಈಗ ನಿನ್ನ ಪಾದ ರಜಸ್ಸಿನ ಸಂಸರ್ಗದಿಂದ ನನ್ನ ರಜೋಗುಣವೆಲ್ಲವೂ ಪರಿಹಾರವಾಯಿತು. ನಿನ್ನ ದೇಹಸಂಗವಾದ ಪ್ರಭಾವದಿಂದ ನನ್ನೊಳಗಿನ ಅಜ್ಞಾನವೆಲ್ಲವೂ ಕಳೆಯಿತು.

೪೩. ಮುನಿಯೆ, ಇಂದಿಗೆ ನನ್ನ ಸಂಪತ್ತೆಲ್ಲವೂ ಸಫಲವೆನಿಸಿತು. ಇಂದಿನ ದಿನವೇ ನನಗೆ ಸುದಿನವಾಯಿತು. ನಾನು ಹಿಂದಣ ಜನ್ಮಗಳಲ್ಲಿ ಮಾಡಿದ ಪುಣ್ಯಕರ್ಮಗಳೆಲ್ಲವೂ ಇಂದು ಸಫಲವಾದುವು.

೪೪—೪೬. ನಾರದ ಮುನೀಂದ್ರ, ನನಗಿರುವ ಪರ್ವತತ್ವವೂ ಸಹ ಇಂದಿಗೆ ಕುಲವಂತರಲ್ಲಿ ಮಾನ್ಯತೆಯನ್ನು ಪಡೆಯುತ್ತದೆ" ಎಂದು ನುಡಿದು ಆ ವಿಂಧ್ಯ ಪರ್ವತರಾಜನು ಸ್ವಲ್ಪ ನಿಟ್ಟುಸಿರಿಟ್ಟ ಆ ದೇವಮುನಿಯನ್ನು ಕಂಡು, ಭಯದಿಂದ ತತ್ತಳಿಸಿದ ಅಂತರಂಗವುಳ್ಳವನಾಗಿ ಮತ್ತೆ ಹೇಳಿದನು "ಸಮಸ್ತ ತತ್ತ್ವಾರ್ಥಗಳನ್ನೂ ತಿಳಿದವರಲ್ಲಿ ಅಗ್ಗಳಿಯನಾದ ಎಲೈ ನಾರದನೆ, ನಿನ್ನ ಈ

ಅದೃಷ್ಟಂ ತವ ನೋ ದೃಷ್ಟಂ ಯದಿಷ್ಟಂ ವಿಷ್ಟಪತ್ರಯೇ ।
ಅನುಕ್ರೋಶೋಽತ್ರ ಮಯಿ ಚೇದುಚ್ಯತಾಂ ಪ್ರಣತೋಽಸ್ಮ್ಯಹಂ ॥ ೪೬ ॥
ತ್ವದಾಗಮನಜಾಽಽನಂದಸಂದೋಹೈರ್ಮೇದುರಾ ರವಃ ।
ಅಲಂ ನವಕ್ತುಮಸಕೃತ್ತಥಾಽಪ್ಯೇಕಂ ವದಾಮ್ಯಹಂ ॥ ೪೭ ॥
ಧರಾಧರಣಸಾಮರ್ಥ್ಯಂ ಮೇಽರ್ವಾಡೌ ಪೂರ್ವಪೂರುಷೈಃ ।
ವರ್ಣ್ಯತೇ ಸಮುದಾಯಾತ್ತದಹಮೇಕೋ ದಧೇ ಧರಾಂ ॥ ೪೮ ॥
ಗೌರೀಗುರುತ್ವಾದ್ಧಿಮವಾನಾಧಿಪತ್ಯಾಚ್ಚ ಭೂಭೃತಾಂ ।
ಸಂಬಂಧಿತ್ವಾತ್ಪಶುಪತೇಃ ಸ ಏಕೋ ಮಾನ್ಯಭೃತ್ಸತಾಂ ॥ ೪೯ ॥
ನ ಮೇರುಃ ಸ್ವರ್ಣಪೂರ್ಣತ್ವಾದ್ರತ್ನಸಾನುತಯಾಽಥವಾ ।
ಸುರಸದ್ಮತಯಾ ವಾಽಪಿ ಕ್ವಾಽಪಿ ಮಾನ್ಯೋ ಮತೋ ಮಮ ॥ ೫೦ ॥
ಪರಂ ಶತಂ ನ ಕಿಂ ಶೈಲಾ ಇಲಾಕಲನಕೇಲಯಃ ।
ಇಹ ಸಂತಿ ಸತಾಂ ಮಾನ್ಯಾ ಮಾನ್ಯಾಸ್ತೇ ತು ಸ್ವಭೂಮಿಷು ॥ ೫೧ ॥

---

ನಿಟ್ಟುಸಿರಿಗೆ ಕಾರಣವೇನು? ನಿನಗೆ ಮೂರು ಲೋಕಗಳಲ್ಲಿಯೂ ಗೋಚರವಾಗದಿರುವುದು ಯಾವುದೂ ಇಲ್ಲವೆಂದು ಕೇಳಿರುತ್ತೇನೆ. ಭೂತಭವಿಷ್ಯದ್ವರ್ತಮಾನಗಳಲ್ಲಿ ನಡೆಯುವ ಸಮಸ್ತವೂ ನಿನಗೆ ತಿಳಿದೇ ಇರುವುದು. ನನ್ನ ವಿಷಯದಲ್ಲಿ ನಿನಗೆ ದಯೆಯಿರುವುದಾದರೆ, ಅದನ್ನು ನನಗೆ ತಿಳಿಸುವವನಾಗು. ಇದೊ ಪ್ರಣತನಾಗಿ ಬೇಡುತ್ತಿದ್ದೇನೆ.

೪೭–೪೮. ಮುನಿಯೆ, ನಿನ್ನ ಆಗಮನದಿಂದುಂಟಾದ ಸಂತೋಷಾಧಿಕ್ಯದಿಂದ ನನಗೆ ಮಾತೇ ಕಟ್ಟಿಹೋಗಿರುವುದಾದರೂ, ಹೆಚ್ಚಾಗಿ ಮಾತನಾಡಲೂ ಆರೆನಾಗಿ, ಇದೊಂದು ಮಾತನ್ನು ಮಾತ್ರ ಹೇಳುತ್ತೇನೆ. ಪೂರ್ವಿಕರೂ ಪುರಾಣಗಳನ್ನು ಬಲ್ಲವರೂ ಈ ಭೂಮಿಯನ್ನು ಭರಿಸುವ ಸಾಮರ್ಥ್ಯವನ್ನು ಮೇರುವೇ ಮೊದಲಾದ ಪರ್ವತ ಸಮುದಾಯಗಳಲ್ಲಿ ಆರೋಪಿಸಿ ವರ್ಣಿಸುತ್ತಾರೆ. ಆದರೆ, ನಾನು ಹೇಳುತ್ತೇನೆ. ನಾನೇ ಈ ಭೂಮಿಯನ್ನೆಲ್ಲ ಹೊತ್ತಿದ್ದೇನೆ.

೪೯. ಸಾಕ್ಷಾತ್ ಪರಮೇಶ್ವರನ ಮಡದಿಯಾದ ಪಾರ್ವತಿಗೆ ತಂದೆಯೆನಿಸಿದುದರಿಂದ ಗೌರೀಗುರುವೆಂದು ಹೆಸರುಗೊಂಡು ಪರ್ವತಗಳೆಲ್ಲಕ್ಕೂ ಒಡೆಯನೆನಿಸಿರುವುದೂ ಅಲ್ಲದೆ ಆ ಪಶುಪತಿಯ ಸಂಬಂಧವಿರುವುದರಿಂದಲೆ ಹಿಮವಂತನು ಸತ್ಪುರುಷರೆಲ್ಲರಿಗೂ ಮಾನ್ಯನು.

೫೦. ಸುವರ್ಣ ತುಂಬಿರುವುದರಿಂದಾಗಲಿ, ರತ್ನಗಳೇ ತುಂಬಿರುವ ತಪ್ಪಲುಗಳಿರುವುದರಿಂದಾಗಲಿ, ದೇವತೆಗಳೆಲ್ಲರೂ ವಾಸಮಾಡುವುದರಿಂದಾಗಲಿ ಮೇರು ಪರ್ವತವು ಮಾನ್ಯವೆಂದು ನಾನು ಅಭಿಪ್ರಾಯಪಡುವುದಿಲ್ಲ.

೫೧. ಧರೆಯನ್ನು ಹೊರುವ ಮಕ್ಕಳಾಟದಲ್ಲಿ ತೊಡಗಿರುವ ನೂರಾರು

ಮಂದೇಹದೇಹಸಂದೋಹಾದುದಯ್ಯೈಕದಯಾಶ್ರಿತಃ ।
ನಿಷಧೋ ನೌಷಧಿಧರೋಽಪ್ಯಸ್ತೋಽಪ್ಯಸ್ತಮಿತಪ್ರಭಃ ॥ ೫೨ ॥
ನೀಲಶ್ಚ ನೀಲೀನಿಲಯೋ ಮಂದರೋ ಮಂದಲೋಚನಃ ।
ಸರ್ಪಾಲಯಃ ಸ ಮಲಯೋ ರಾಯಂ ನಾನ್ಯೈತಿ ರೈವತಃ ॥ ೫೩ ॥
ಹೇಮಕೂಟತ್ರಿಕೂಟಾದ್ಯಾಃ ಕೂಟೋತ್ತರಪದಾಸ್ತು ತೇ ।
ಕಿಷ್ಕಿಂಧ ಕ್ರೌಂಚ ಸಹ್ಯಾದ್ಯಾ ಭಾರಸಹ್ಯಾ ನ ತೇ ಭುವಃ ॥ ೫೪ ॥
ಇತಿ ವಿಂಧ್ಯವಚಃ ಶ್ರುತ್ವಾ ನಾರದೋಽಚಿಂತಯದ್ಧೃದಿ ।
ಅಖರ್ವಗರ್ವ ಸಂಸರ್ಗೋ ನ ಮಹತ್ವಾಯ ಕಲ್ಪತೇ ॥ ೫೫ ॥
ಶ್ರೀಶೈಲಮುಖ್ಯಾಃ ಕಿಂ ಶೈಲಾ ನೇಹ ಸಂತ್ಯಮಲಶ್ರಿಯಃ ।
ಯೇಷಾಂ ಶಿಖರಮಾತ್ರಾದಿ ದರ್ಶನಂ ಮುಕ್ತಯೇ ಸತಾಂ ॥ ೫೬ ॥

---

ಸಣ್ಣಪುಟ್ಟ ಬೆಟ್ಟಗಳಿದ್ದೇ ಇರುವುವು. ಅವುಗಳೆಲ್ಲವೂ ಆ ಪ್ರದೇಶಗಳಲ್ಲಿ ನೆಲಸಿರುವ ಸತ್ಪುರುಷರಿಗೆ ಮಾನ್ಯವಾದುವೆ.

೫೨. ಮಂದೇಹ ರಾಕ್ಷಸರ ದೇಹ ಸಂದೋಹಗಳಿಂದ ಉದಯಗಿರಿಯು ದೇಹನಾಶವನ್ನೇ ಪಡೆದು ಸೂರ್ಯೋದಯ ಕಾಲದಲ್ಲಿ ಮಾತ್ರ ಬದುಕಿರುವುದಕ್ಕೆ ಲಕ್ಷಣವೆನಿಸಿದ ದಯೆಯನ್ನು ಮಾತ್ರ ಒಳಗೊಂಡಿದೆ. ಓಷಧಿಗಳೇನೊಂದೂ ಇಲ್ಲದೆ ನಿಷಧ ಪರ್ವತವು ಕಳೆಯುಡುಗಿಹೋಗಿದೆ.

೫೩. ನೀಲಪರ್ವತವೂ ಅಂಧಕಾರಕ್ಕೆ ನಿಲಯವಾಗಿ ಹೋಗಿದೆ. ಮಂದರ ಪರ್ವತವಾದರೊ ಮಂದವಾದ ಪ್ರಕಾಶವುಳ್ಳದ್ದಾಗಿದೆ. ಮಲಯಪರ್ವತವಾದರೊ ಸರ್ಪಗಳಿಗೆ ಆಲಯವೇ! ರೈವತಪರ್ವತವು ಸಂಪತ್ತೆಂದರೆ ಏನೆಂಬುದನ್ನೇ ಅರಿಯದು!

೫೪. ಇನ್ನು ಹೇಮಕೂಟ ತ್ರಿಕೂಟ ಮುಂತಾದ ಪರ್ವತಗಳೆಲ್ಲ ಕೂಟಗಳೆನ್ನಿಸಿಕೊಳ್ಳುವುವೇ. ಕಿಷ್ಕಿಂಧ ಕ್ರೌಂಚ ಸಹ್ಯ ಮುಂತಾದ ಪರ್ವತಗಳು ಅವುಗಳ ಹೆಸರುಗಳನ್ನು ಕೇಳುವುದರಿಂದಲೇ ಭೂಭಾರವನ್ನು ಸಹಿಸಬಲ್ಲವೆಂದು ಹೇಳಲಾದೀತೆ?''

೫೫–೫೬. ಹೀಗೆ ನುಡಿದ ವಿಂಧ್ಯಗಿರಿಯ ನುಡಿಯನ್ನು ಕೇಳಿ ನಾರದ ಮುನೀಂದ್ರನು ತನ್ನ ಮನಸ್ಸಿನಲ್ಲಿಯೇ ಈ ರೀತಿ ಯೋಚಿಸಿದನು. ''ಮಿತಿಮೀರಿದ ಗರ್ವವು ಮಹತ್ತ್ವಕ್ಕೆ ಲಕ್ಷಣವಲ್ಲ. ಶ್ರೀಶೈಲ ಮೊದಲಾದ ಪರ್ವತಗಳು ಬಹಳ ಚಿಕ್ಕವಾದರೂ, ಅಂಥ ಸಂಪತ್ತೇನೂ ಇಲ್ಲದಿದ್ದರೂ ಅವುಗಳ ಶಿಖರಗಳನ್ನು ಸಂದರ್ಶಿಸುವ ಮಾತ್ರದಿಂದಲೆ ಸತ್ಪುರುಷರಿಗೆ ಮುಕ್ತಿದಾಯಕಗಳಾಗಿರುತ್ತವೆ.

ಅದ್ಯಾಽಸ್ಯಬಲಮಾಲೋಕ್ಯಮಿತಿ ಧ್ಯಾತ್ವಾಽಬ್ರವೀನ್ಮುನೀಃ ।
ಸತ್ಯಮುಕ್ತಂ ಹಿ ಭವತಾ ಗಿರಿಸಾರಂ ವಿವೃಣ್ವತಾ ॥ ೫೭ ॥
ಪರಂ ಶೈಲೇಷು ಶೈಲೇಂದ್ರೋ ಮೇರುಸ್ತ್ವಾಮವಮನ್ಯತೇ ।
ಮಯಾ ನಿಶ್ವಸಿತಂ ಚೈತತ್ತ್ವಯಿ ಚಾಽಪಿ ನಿವೇದಿತಂ ॥ ೫೮ ॥
ಅಥವಾ ಮದ್ವಿಧಾನಾಂ ಹಿ ಕೇಯಂ ಚಿಂತಾ ಮಹಾತ್ಮನಾಂ ।
ಸ್ವಸ್ತ್ಯಸ್ತು ತುಭ್ಯಮಿತ್ಯುಕ್ತ್ವಾ ಯಯೌ ಸ ವ್ಯೋಮವರ್ತ್ಮನಿ ॥ ೫೯ ॥
ಗತೇ ಮುನೌ ನಿನಿಂದ ಸ್ವಮತೀವೋದ್ವಿಗ್ನಮಾನಸಃ ।
ಚಿಂತಾಮವಾಪ ಮಹತೀಂ ವಿಂಧ್ಯೋಽವಂಧ್ಯಮನೋರಥಃ ॥ ೬೦ ॥

ವಿಂಧ್ಯ ಉವಾಚ :—

ಧಿಗ್ಜೀವಿತಂ ಶಾಸ್ತ್ರಕಲೋಜ್ಝಿತಸ್ಯ
ಧಿಗ್ಜೀವಿತಂ ಚೋದ್ಯಮವರ್ಜಿತಸ್ಯ ।
ಧಿಗ್ಜೀವಿತಂ ಜ್ಞಾತಿಪರಾಜಿತಸ್ಯ
ಧಿಗ್ಜೀವಿತಂ ವ್ಯರ್ಥಮನೋರಥಸ್ಯ ॥ ೬೧ ॥
ಕಥಂ ಭುನಕ್ತಿ ಸ ದಿವಾ ಕಥಂ ರಾತ್ರೌ ಸ್ವಪಿತ್ಯಹೋ ।
ರಹಃ ಶರ್ಮ ಕಥಂ ತಸ್ಯ ಯಸ್ಯಾಭಿಭವನಂ ರಿಪೋಃ ॥ ೬೨ ॥

---

೫೭–೫೯. ಇದೀಗ ಈ ವಿಂಧ್ಯಗಿರಿಯ ಬಲವನ್ನು ನೋಡಬೇಕು" ಎಂದು ಚಿಂತಿಸಿ ಆ ಮುನಿಯು ಅವನನ್ನು ಕುರಿತು, "ಅಯ್ಯಾ ವಿಂಧ್ಯಪರ್ವತರಾಜ, ಸಮಸ್ತ ಪರ್ವತಗಳ ಪರಾಕ್ರಮವನ್ನು ವರ್ಣಿಸಿದ ನೀನು ಹೇಳಿದುದು ಬಹಳ ಸರಿ. ಅದು ಸತ್ಯವೂ ಹೌದು. ಆದರೆ, ಪರ್ವತಗಳಲ್ಲೆಲ್ಲ ಪರ್ವತೇಂದ್ರವೆನಿಸಿದ ಆ ಮೇರುಪರ್ವತವು ನಿನ್ನನ್ನು ಅಲ್ಲಗಳೆಯುವುದಲ್ಲ! ಇದಕ್ಕಾಗಿಯೆ ನಾನು ನಿಟ್ಟುಸಿರು ಬಿಟ್ಟುದು. ಈ ವಿಷಯವನ್ನು ಮುಚ್ಚಿಡಲಾರದೆ ನಿನಗೆ ಅರಿಕೆ ಮಾಡಿಯೂ ಇದ್ದೇನೆ. ಅಥವಾ ನನ್ನಂಥ ಮಹಾತ್ಮರಿಗೆ ಈ ಚಿಂತೆಯೇಕೆ? ನಿನಗೆ ಮಂಗಳವಾಗಲಿ. ನಾನು ಹೋಗಿಬರುತ್ತೇನೆ" ಎಂದು ಹೇಳಿ ಆಕಾಶ ಮಾರ್ಗವಾಗಿ ಹೊರಟುಹೋದನು

೬೦. ನಾರದಮುನಿಯು ಅತ್ತ ಹೊರಟುಹೋಗುತ್ತಲೆ ಇತ್ತ ವಿಂಧ್ಯ ಗಿರಿಯು ತನ್ನನ್ನು ತಾನೆ ಹಳಿದುಕೊಂಡು ಮನಕುಗ್ಗಿ ವ್ಯರ್ಥಮನೋರಥನಾಗಿ ಮಹತ್ತರವಾದ ಚಿಂತೆಗೀಡಾದನು.

೬೧. ವಿಂಧ್ಯನು ಹೇಳುತ್ತಾನೆ:—"ಶಾಸ್ತ್ರ, ಚತುಷ್ಷಷ್ಟಿ ಕಲೆಗಳೂ ಇಲ್ಲದವನ ಜೀವಿತಕ್ಕೆ ಧಿಕ್ಕಾರ. ಉದ್ಯೋಗವಿಲ್ಲದವನ ಬಾಳಿಗಷ್ಟು ಧಿಕ್ಕಾರ ಇರಲಿ. ದಾಯಾದಿಗಳಿಗೆ ಸೋತು ಕಂಗೆಟ್ಟವನ ಜೀವಿತಕ್ಕಷ್ಟು ಧಿಕ್ಕಾರವಿರಲಿ. ಮನೋರಥವೀಡೇರದವನ ಬಾಳಿಗಂತೂ ಧಿಕ್ಕಾರವೆ?

೬೨. ಶತ್ರುವಿನ ಅಪಮಾನಕ್ಕೊಳಗಾದವನು ಹಗಲು ಊಟವನ್ನು ಹೇಗೆ

ಅಹೋ ದವಾಽಗ್ನಿದವಥುಸ್ತಥಾ ಮಾಂ ನ ಸ ಬಾಧತೇ ।
ಬಾಧತೇ ತು ಯಥಾ ಚಿತ್ತೇ ಚಿಂತಾಸಂತಾಪಸಂತತಿಃ ॥ ೬೩ ॥
ಯುಕ್ತಮುಕ್ತಂ ಪುರಾವಿದ್ಭಿಶ್ಚಿಂತಾಮೂರ್ತಿಃ ಸುದಾರುಣಾ ।
ನ ಭೇಷಜ್ಯೈರ್ಲಂಘನೈರ್ವಾ ನ ಚಾನ್ಯೈರುಪಶಾಮ್ಯತಿ ॥ ೬೪ ॥
ಚಿಂತಾಜ್ವರೋ ಮನುಷ್ಯಾಣಾಂ ಕ್ಷುಧಾಂ ನಿದ್ರಾಂ ಬಲಂ ಹರೇತ್ ।
ರೂಪಮುತ್ಸಾಹಬುದ್ಧಿಂ ಶ್ರೀಂ ಜೀವಿತಂ ಚ ನ ಸಂಶಯಃ ॥ ೬೫ ॥
ಜ್ವರೋ ವ್ಯತೀತೇ ಷಡಹೇ ಜೀರ್ಣಜ್ವರ ಇಹೋಚ್ಯತೇ ।
ಅಸೌ ಚಿಂತಾಜ್ವರಸ್ತೀವ್ರಃ ಪ್ರತ್ಯಹಂ ನವತಾಂ ವ್ರಜೇತ್ ॥ ೬೬ ॥
ಧನ್ವೋ ಧನ್ವಂತರಿರ್ನಾಽತ್ರ ಚರಕಶ್ಚರತೀಹ ನ ।
ನಾಸತ್ಯಾವಪಿ ನಾಽಸತ್ಯಾವತ್ರ ಚಿಂತಾಜ್ವರೇ ಕಿಲ ॥ ೬೭ ॥
ಕಿಂ ಕರೋಮಿ ಕ್ವಗಚ್ಛಾಮಿ ಕಥಂ ಮೇರುಂ ಜಯಾಮ್ಯಹಂ ।
ಉತ್ಪ್ಲುತ್ಯ ತಸ್ಯ ಶಿರಸಿ ಪತಾಮಿ ನ ಪತಾಮ್ಯತಃ ॥ ೬೮ ॥

---

ಮಾಡುತ್ತಾನೆಯೊ, ರಾತ್ರಿ ಹೇಗೆ ಮಲಗುತ್ತಾನೆಯೊ, ನಿರ್ಜನ ಪ್ರದೇಶದಲ್ಲಿಯೂ ಶಾಂತಿಯನ್ನು ಹೇಗೆ ಪಡೆಯುತ್ತಾನೆಯೊ! ಆಶ್ಚರ್ಯವಾಗಿದೆ.

೬೩. ಅಕ್ಕಟಾ! ಈಗ ಈ ಸಂತಾಪಸಂತತಿಯು ನನ್ನ ಮನಸ್ಸನ್ನು ಸುಡುತ್ತಿರುವಂತೆ ದಳ್ಳುರಿಯ ಕಂಪವೂ ನನ್ನನ್ನು ಅಷ್ಟಾಗಿ ಬಾಧಿಸುವುದಿಲ್ಲ.

೬೪. ಚಿಂತೆಯೆಂಬುದು ಘೋರವಾದ ರೋಗವೆಂದು ಪೂರ್ವಿಕರು ಹೇಳುವುದು ಯುಕ್ತವಾಗಿಯೆ ಇದೆ. ಇದು ಔಷಧಿಗಳಿಂದಾಗಲಿ ಲಂಘನಗಳಿಂದಾಗಲಿ ಇತರ ಉಪಶಮನಗಳಿಂದಾಗಲಿ ಶಮನವಾಗುವುದಿಲ್ಲ.

೬೫. ಈ ಚಿಂತಾಜ್ವರವು ಮನುಷ್ಯರ ಹಸಿವು ನಿದ್ರೆ ಬಲಗಳನ್ನೂ ರೂಪ ಉತ್ಸಾಹ ಬುದ್ಧಿ ಸಂಪತ್ತುಗಳನ್ನೂ ಕಡೆಗೆ ಬಾಳನ್ನೂ ಸಹ ಹಾಳುಮಾಡುತ್ತದೆ. ಇದಕ್ಕೆ ಸಂಶಯವಿಲ್ಲ.

೬೬. ಆರು ದಿನಗಳಲ್ಲಿ ಜ್ವರವು ಇಳಿದರೆ ಆಜ್ವರವು ಜೀರ್ಣಜ್ವರವೆನ್ನಿಸಿಕೊಳ್ಳುತ್ತದೆ. ಈ ಚಿಂತಾಜ್ವರವಾದರೊ ಮಹಾ ತೀವ್ರವಾದದ್ದು. ಪ್ರತಿನಿತ್ಯವೂ ಇದು ಹೊಸಹೊಸದಾಗುತ್ತದೆ.

೬೭. ಧನ್ವಂತರಿಯು ಬಹಳ ಪುಣ್ಯವಂತನು. ಅವನು ಈಗ ಇಲ್ಲಿಲ್ಲ. ಚರಕನಂತೂ ಇಲ್ಲಿ ತಿರುಗುವುದೇ ಇಲ್ಲ. ಅಶ್ವಿನೀ ಕುಮಾರರಂತೂ ಈ ಚಿಂತಾಜ್ವರಕ್ಕೆ ಚಿಕಿತ್ಸಕರಾಗಿ ಬರುವುದೇ ಇಲ್ಲ

೬೮. ಏನುಮಾಡಲಿ, ಎಲ್ಲಿಗೆಹೋಗಲಿ? ಆ ಮೇರು ಪರ್ವತಕನನ್ನು ಹೇಗೆ ಜಯಿಸಲಿ? ಹಾರಿ ಹಾರಿ ಅವನ ತಲೆಯಮೇಲೆ ಬೀಳಲಿ ಬೇಡವೆ?

ಶಕ್ರಂ ಕೋಪಯುತಾ ಪೂರ್ವಮಸ್ಮದ್ಗೋತ್ರೇಣ ಕೇನಚಿತ್ ।
ಪಕ್ಷಹೀನಃ ಕೃತೋ ಯತ್ರ ಧಿಗಪಕ್ಷಸ್ಯ ಚೇಷ್ಟಿತಂ ॥ ೬೯ ॥
ಅಥವಾ ಸ ಕಥಂ ಮೇರುಸ್ತಥೋಚ್ಚೈಃ ಸ್ಪರ್ಧತೇ ಮಯಾ ।
ಭೂಮೇರ್ಭಾರಭೃತಃ ಪ್ರಾಯೋ ಭವಂತಿ ಭ್ರಾಂತಿಭೂಮಯಃ ॥ ೭೦ ॥
ಅಲೀಕವಾಕ್ತ್ವಮಥವಾ ಸಂಭಾವ್ಯಂ ನಾರದೇ ಕಥಂ ।
ಬ್ರಹ್ಮಚಾರಿಣಿ ವೇದಜ್ಞೇ ಸತ್ಯಲೋಕನಿವಾಸಿನಿ ॥ ೭೧ ॥
ಯುಕ್ತಾಽಯುಕ್ತವಿಚಾರೋಽಥ ಮಾದೃಶೇ ನೋಪಯುಜ್ಯತೇ ।
ಪರಾಕ್ರಮೇಷ್ವಶಕ್ತಾನಾಂ ವಿಚಾರಂ ಗಾಹತೇ ಮನಃ ॥ ೭೨ ॥
ಅಥವಾ ಚಿಂತನೈರೇತೈಃ ಕಿಂ ವ್ಯರ್ಥೈರ್ವಿಶ್ವಕಾರಕಂ ।
ವಿಶ್ವೇಶಂ ಶರಣಂ ಯಾಯಾಂ ಸಮೇ ಬುದ್ಧಿಂ ಪ್ರದಾಸ್ಯತಿ ॥ ೭೩ ॥
ಅನಾಥನಾಥಃ ಸರ್ವೇಷಾಂ ವಿಶ್ವನಾಥೋ ಹಿ ಗೀಯತೇ ।
ಕ್ಷಣಂ ಮನಸಿ ಸಂಚಿಂತ್ಯ ಭವೇದಿತ್ಥಮಸಂಶಯಂ ॥ ೭೪ ॥

---

೬೯. ಅಯ್ಯೋ, ಹಿಂದೆ ನಮ್ಮ ಕಾಲದವರಲ್ಲಿ ಯಾರೊ ಒಬ್ಬನು ಆ ದೇವೇಂದ್ರನನ್ನು ರೇಗಿಸಿದುದರ ಫಲವಾಗಿ ನಮಗಿದ್ದ ರೆಕ್ಕೆಗಳೆಲ್ಲ ಕತ್ತರಿಸಿ ಹೋದವು. ರೆಕ್ಕೆ ಹೋದವರ ಬಾಳು ಬಾಳೇ! ಆ ಬಾಳಿಗೊಂದಷ್ಟು ಧಿಕ್ಕಾರ ವಿರಲಿ.

೭೦. ಅಥವಾ ಆ ಮೇರುಪರ್ವತವು ಅಷ್ಟು ಬಿರುಸಾಗಿ ನನ್ನೊಡನೆ ಸ್ಪರ್ಧಿಸುವುದೇಕೆ? ಓಹೊ, ಪ್ರಾಯಿಕವಾಗಿ ಭೂಮಿಯ ಭಾರವನ್ನು ಹೊರುವ ಪರ್ವತಗಳೆಲ್ಲ ಸುಮ್ಮನೆ ಭ್ರಾಂತಿ ಪಡುವಂಥವುಗಳೇ ಇರಬೇಕು.

೭೧. ಅಥವಾ ಬ್ರಹ್ಮಚಾರಿಯೂ, ವೇದವನ್ನು ಅರಿತವನೂ, ಬ್ರಹ್ಮಲೋಕದಲ್ಲಿಯೇ ವಾಸಮಾಡುತ್ತಿರುವವನೂ ಆದ ನಾರದಮುನಿಯ ಮಾತುಗಳು ಸುಳ್ಳಿರಬಹುದೆ? ಛಿ, ಛಿ! ಹಾಗೆ ಹೇಳುವುದು ತಾನೆ ಹೇಗೆ?

೭೨. ನನ್ನಂಥವನಲ್ಲಿ ಅಂಥವರು ಯುಕ್ತಾಯುಕ್ತವಿಚಾರವನ್ನಂತು ಪ್ರಯೋಗಿಸುವುದಿಲ್ಲ. ಪರಾಕ್ರಮವಿಲ್ಲದೆ ಅಶಕ್ತರಾಗಿರುವಂಥವರ ಮನಸ್ಸು ಅಂಥ ವಿಚಾರಗಳಲ್ಲಿ ತೊಡಗುತ್ತವೆ.

೭೩. ಅಥವಾ ವ್ಯರ್ಥವಾದ ಈ ಯೋಚನೆಗಳಿಂದೇನು? ವಿಶ್ವವನ್ನೇ ನಿರ್ಮಾಣಮಾಡಿದ ಆ ವಿಶ್ವೇಶ್ವರನಲ್ಲಿಗೆ ಶರಣು ಹೋಗಲೆ? ಅವನೇ ನನಗೆ ಬುದ್ಧಿಯನ್ನು ಅನುಗ್ರಹಿಸುತ್ತಾನೆ.

೭೪. ಅನಾಥರಿಗೆಲ್ಲ ನಾಥನೂ ವಿಶ್ವನಾಥನೂ ಎಂದು ಅವನು ಹೊಗಳಿಸಿಕೊಂಡಿರುವನಲ್ಲವೆ? ಒಂದು ಕ್ಷಣಕಾಲ ಯೋಚಿಸಿದರೆ ಹೀಗೆಯೇ ಆಗುತ್ತದೆ. ಇದು ಸತ್ಯ.

ಏತದೇವ ಕರಿಷ್ಯಾಮಿ ನೇಷ್ಟಂ ಕಾಲವಿಲಂಬನಂ ।
ವಿಚಕ್ಷಣೈರುಪೇಕ್ಷ್ಯೌ ನ ವರ್ಧಮಾನೌ ಪರಾಮಯೌ ॥ ೨೫ ॥
ಮೇರುಂ ಪ್ರದಕ್ಷಿಣೀಕುರ್ಯಾನ್ನಿತ್ಯಮೇವ ದಿವಾಕರಃ ।
ಸಗ್ರಹರ್ಕ್ಷಗಣೋ ನೂನಂ ಮನ್ಯಮಾನೋ ಬಲಾಧಿಕಂ ॥ ೨೬ ॥
ಇತಿ ನಿಶ್ಚಿತ್ಯ ವಿಂಧ್ಯಾದ್ರಿರ್ವವೃಧೇ ಸಮೃಧೇಕ್ಷಣಃ ।
ಅನಂತಗಗನಸ್ಯಾಂತಂ ಕುರ್ವದ್ಭಿಃ ಶಿಖರೈರಿವ ॥ ೨೭ ॥
ಕೈಃಶ್ಚಿತ್ಸಾರ್ಧಂ ವಿರೋಧೋ ನ ಕರ್ತವ್ಯಃ ಕೇನಚಿತ್ಕ್ವಚಿತ್ ।
ಕರ್ತವ್ಯಶ್ಚೇತ್ಪ್ರಯತ್ನೇನ ಯಥಾ ನೋಪಹಸೇಜ್ಜನಃ ॥ ೨೮ ॥
ನಿರುಧ್ಯ ಬ್ರಾಧ್ನಮಧ್ವಾನಂ ಕೃತಕೃತ್ಯ ಇವಾಽದ್ರಿರಾಟ್ ।
ಸ್ವಸ್ಥೋಽಭವದ್ಭವಾಽಧೀನಾ ಪ್ರಾಣಿನಾಂ ಹಿ ಭವಿಷ್ಯತಾ ॥ ೨೯ ॥
ಯಮುದ್ಯ ಯಮಕರ್ತಾಽಸೌ ದಕ್ಷಿಣಂ ಪ್ರಕ್ರಮಿಷ್ಯತಿ ।
ಸಕುಲೀನಃ ಸ ಚ ಶ್ರೀಮಾನ್ಸಮಹಾನ್ಮಹಿತಃ ಸ ಚ ॥ ೩೦ ॥
ಯಾವತ್ಸ್ವಶಕ್ತಿಂ ಶಕ್ತೋಽಪಿ ನ ದರ್ಶಯತಿ ಕರ್ಹಿಚಿತ್ ।
ತಾವತ್ಸ ಲಂಘ್ಯಃ ಸರ್ವೇಷಾಂ ಜ್ವಲನೋ ದಾರುಗೋ ಯಥಾ ॥ ೩೧ ॥

---

೨೫. ನಾನು ಹೀಗೆಯೇ ಮಾಡುತ್ತೇನೆ ಕಾಲವಿಳಂಬ ಮಾಡುವುದು ಒಳ್ಳೆತಲ್ಲ. ವಿಚಕ್ಷಣರಾದವರು ರೋಗವನ್ನು ಬೆಳೆಯಗೊಡಿಸುವುದಿಲ್ಲ

೨೬. ದಿವಾಕರನು ಗ್ರಹ ನಕ್ಷತ್ರ ಸಮೂಹಗಳಿಂದ ಸಹಿತನಾಗಿ ಬಲಾಧಿಕನೆಂದರಿತು ಆ ಮೇರು ಪರ್ವತಕ್ಕೆ ಪ್ರತಿನಿತ್ಯವೂ ಪ್ರದಕ್ಷಿಣೆ ಹೋಗುತ್ತಾನೆ.''

೨೭. ವಿಂಧ್ಯಾದ್ರಿಯು ಈ ರೀತಿ ನಿಶ್ಚಯಿಸಿ, ಸ್ಪರ್ಧೆಯಿಂದ ಅನಂತವಾದ ಗಗನವನ್ನು ತನ್ನ ಕೋಡುಗಳಿಂದ ಕೊನೆಗಾಣಿಸುವನೊ ಎಂಬಂತೆ ಬೆಳೆಯ ತೊಡಗಿದನು.

೨೮. ಲೋಕದಲ್ಲಿ ಪ್ರಬಲರಾದ ಕೆಲವರೊಡನೆ ಯಾರೂ ಎಲ್ಲಿಯೂ ವಿರೋಧವನ್ನು ಕಟ್ಟಿಕೊಳ್ಳಬಾರದು. ಹಾಗೆ ಕಟ್ಟಿಕೊಂಡರೂ ಜನರು ಆಡಿಕೊಂಡು ನಗದಿರುವಂತೆ ಪ್ರಯತ್ನಿಸಬೇಕು.

೨೯–೩೧. ಆ ವಿಂಧ್ಯಾಚಲವಾದರೊ ದಕ್ಷಿಣೋತ್ತರ ಮಾರ್ಗಗಳೆರಡನ್ನೂ ಬಂಧಿಸಿ, ತಾನು ಕೃತಕೃತ್ಯನಾದೆನೆಂದು ಸುಮ್ಮನಾದನು. ಲೋಕದಲ್ಲಿ ಪ್ರಾಣಿಗಳ ಭವಿತವ್ಯತೆಯೆಲ್ಲ ಪರಮೇಶ್ವರನ ಅಧೀನವಾದುದು. ಸಾಕ್ಷಾತ್ ಯಮನಿಗೆ ತಂದೆಯಾದ ಸೂರ್ಯನು ದಕ್ಷಿಣಮಾರ್ಗವಾಗಿ ಬರುತ್ತಾನೆ. ಅಂಥವನನ್ನೇ ಯಾವನು ತಡೆಯುವನೊ ಆವನೇ ಸತ್ಕುಲಪ್ರಸೂತನು. ತೇಜಸ್ವಿಯೂ ಮಹಾತ್ಮನೂ ಅವನೇ. ಲೋಕಪೂಜ್ಯನೂ ಅವನೇ. ಸಾಮರ್ಥ್ಯ

ಇತಿ ಚಿಂತಾಮಹಾಭಾರಂ ತ್ಯಕ್ತ್ವಾ ತಸ್ಥೌ ಸ್ಥಿರೋದ್ಯಮಃ ।
ಆಕಾಂಕ್ಷಮಾಣಸ್ತರಣೇರುದಯಂ ಬ್ರಾಹ್ಮಣೋ ಯಥಾ ॥ ೮೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ವಿಂಧ್ಯಪರ್ವತವರ್ಧನವರ್ಣನಂ" ನಾಮ ಪ್ರಥಮೋಽಧ್ಯಾಯಃ

---

ವಂತನಾದರೂ ಯಾವನು ತನ್ನ ಶಕ್ತಿಯನ್ನು ಎಲ್ಲಿಯಾದರೂ ಒಂದೆಡೆಯಲ್ಲಿ ಪ್ರದರ್ಶಿಸದೆ ಹೋಗುವನೊ ಅವನು ಸಮಸ್ತರಿಗೂ ಕಟ್ಟಿಗೆಯಲ್ಲಿ ಅಡಗಿರುವ ಅಗ್ನಿಯಂತೆ ಬಹು ಸುಲಭವಾಗಿ ದಾಟಲು ಶಕ್ಯನಾಗುವನು.

೮೨. ಹೀಗೆ ಯೋಚಿಸಿ ಆ ಪರ್ವತರಾಜನು ತನ್ನ ಚಿಂತೆಯೆಂಬ ಮಹಾ ಭಾರವನ್ನು ಕಳೆದುಕೊಂಡು, ಸೂರ್ಯನ ಉದಯವನ್ನು ನಿಷ್ಠಾವಂತನಾದ ಬ್ರಾಹ್ಮಣನು ಎಂತೊ ಅಂತು ನಿರೀಕ್ಷಿಸುತ್ತ ಸ್ಥಿರವಾದ ಪ್ರಯತ್ನವುಳ್ಳವನಾಗಿ ನಿಂತನು

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ವಿಂಧ್ಯಪರ್ವತವರ್ಧನವರ್ಣನ"ವೆಂಬ ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಿತೀಯೋಽಧ್ಯಾಯಃ

## ಸತ್ಯಲೋಕವರ್ಣನಂ

ವ್ಯಾಸ ಉವಾಚ :—

**ಸೂರ್ಯ ಆತ್ಮಾಸ್ಯ ಜಗತಸ್ತಸ್ಥುಷಸ್ತಮಸೋ ರಿಪುಃ ।**
**ಉದಿಯಾಯೋದಯಗಿರೌ ಶುಚಿಪ್ರಸೃಮರೈಃ ಕರೈಃ ॥ ೧ ॥**
**ಸಂವರ್ಧಯನ್ಸತಾಂ ಧರ್ಮಾನ್ಸ್ವಕ್ರುರ್ವಂಸ್ತಾಮಸೀಂ ಸ್ಥಿತಿಂ ।**
**ಪದ್ಮಿನೀಂ ಬೋಧಯಂಸ್ತ್ವಿಷ್ಟಾಂ ರಾತ್ರೌ ಮುಕುಲಿತಾನನಾಂ ॥ ೨ ॥**
**ಹವ್ಯಂ ಕವ್ಯಂ ಭೂತಬಲಿಂ ದೇವಾದೀನಾಂ ಪ್ರವರ್ತಯನ್ ।**
**ಪ್ರಾಹ್ಣಾಽಪರಾಹ್ಣಮಧ್ಯಾಹ್ನ ಕ್ರಿಯಾಕಾಲಂ ವಿಜೃಂಭಯನ್ ॥ ೩ ॥**
**ಅಸತಾಂ ಹೃದಿ ವಕ್ತ್ರೇಷು ನಿರ್ದಿಶಂಸ್ತಮಸಃ ಸ್ಥಿತಿಂ ।**
**ಯಾಮಿನೀಕಾಲಕಲಿತಂ ಜಗದುಜ್ಜೀವಯನ್ಪುನಃ ॥ ೪ ॥**

---

## ಕನ್ನಡದ ಅನುವಾದ

### ಸತ್ಯಲೋಕವರ್ಣನ

೧. ವ್ಯಾಸಮುನಿಯು ಹೇಳುತ್ತಾನೆ —ಜಗತ್ತಿನ ಆತ್ಮಸ್ವರೂಪನೂ, ಸ್ಥಿರನೂ, ತಮಸ್ಸಿಗೆ ರಿಪುವೂ ಆದ ಸೂರ್ಯನು ನಿರ್ಮಲವಾದ ತನ್ನ ಕಿರಣಗಳನ್ನು ಪ್ರಸರಿಸಿ ಉದಯಾಚಲದಲ್ಲಿ ಉದಿಸಿದನು.

೨–೪. ಸತ್ಕರ್ಮಾನುಷ್ಠಾನ ತತ್ಪರರಾದ ಸತ್ಪುರುಷರ ಯಮನಿಯಮಾದಿಗಳನ್ನೂ, ಧರ್ಮಗಳನ್ನೂ ವೈದಿಕ ಕ್ರಿಯೆಗಳನ್ನೂ ವೃದ್ಧಿಗೊಳಿಸುತ್ತ, ಅವರ ಒಳಗಿನ ಅಜ್ಞಾನವೆಂಬ ಅಂಧಕಾರವನ್ನು ಹಿಮ್ಮೆಟ್ಟಿಸುತ್ತ, ಇರುಳಲ್ಲಿ ಮುಗಿದ ಮೊಗವುಳ್ಳ ತನ್ನ ನಚ್ಚಿನ ತಾವರೆಗಳನ್ನು ಅರಳಿಸುತ್ತ, ದೇವತೆಗಳಿಗೂ ಪಿತೃಗಳಿಗೂ ಭೂತಗಳಿಗೂ ಸಲ್ಲಬೇಕಾದ ಹವ್ಯಕವ್ಯಗಳನ್ನೂ, ಭೂತಬಲಿಯನ್ನೂ ಪ್ರವರ್ತನೆಗೊಳಿಸುತ್ತ, ಪೂರ್ವಾಹ್ನ ಪರಾಹ್ನ ಮಧ್ಯಾಹ್ನ ಕಾಲಗಳಲ್ಲಿ ಅನುಷ್ಠಿಸಬೇಕಾದ ಕಾರ್ಯಜಾಲಗಳನ್ನು ವಿಜೃಂಭಣಗೊಳಿಸುತ್ತ, ದುಷ್ಟರ ಹೃದಯಗಳಲ್ಲಿಯೂ ಮುಖಗಳಲ್ಲಿಯೂ ತಮಸ್ಸಿನ ಸ್ಥಿತಿಯನ್ನು ಪ್ರಕಟಗೊಳಿಸುತ್ತ, ರಾತ್ರಿಯ ಕಾಲದಲ್ಲಿ ಪ್ರಸುಪ್ತವಾಗಿದ್ದ ಜಗತ್ತನ್ನು ಮತ್ತೆ ಉಜ್ಜೀವನಗೊಳಿಸುತ್ತ ಆ ಸೂರ್ಯಭಗವಂತನು ಉದಯಾಚಲದಲ್ಲಿ ಉದಿಸಿದನು.

ಯಸ್ಮಿನ್ನಭ್ಯುದಿತೇ ಜಾತಃ ಸಮ್ಯಕ್ಪುಣ್ಯಜನೋದಯಃ ।
ಅಹೋ ಪರೋಪಕರಣಂ ಸದ್ಯಃ ಫಲತಿ ನೇತಿ ಚೇತ್ ॥ ೫ ॥
ಸಾಯಮಸ್ತಮಿತಃ ಪ್ರಾತಃ ಕಥಂ ಜೀವೇದ್ರವಿಃ ಪುಮಾನ್ ।
ಸಾಽನುರಾಗಕರಸ್ಪರ್ಶೈಃ ಪ್ರಾಚೀಮಾಶ್ವಾಸ್ಯ ಖಂಡಿತಾಂ ॥ ೬ ॥
ಯಾಮಂ ಭುಕ್ತ್ವಾ ತಥಾಗ್ನೇಯೀಂ ಜ್ವಲಂತಂ ವಿರಹಾದಿವ ।
ಲವಂಗೈಲಾಮೃಗಮದಚಂದ್ರಚಂದನಚರ್ಚಿತಾಂ ॥ ೭ ॥
ತಾಂಬೂಲೀರಾಗರಕ್ತೌಷ್ಠೀಂ ದ್ರಾಕ್ಷಾಸ್ತಬಕಸುಸ್ತನೀಂ ।
ಲವಲೀವಲ್ಲಿದೋರ್ವಲ್ಲೀಂ ಕಂಕೋಲೀಪಲ್ಲವಾಂಗುಲಿಂ ॥ ೮ ॥
ಮಲಯಾಽನಿಲನಿಃಶ್ವಾಸಾಂ ಕ್ಷೀರೋದಕವರಾಂಬರಾಂ ।
ತ್ರಿಕೂಟಸ್ವರ್ಣರತ್ನಾಂಗೀಂ ಸುವೇಲಾಽದ್ರಿನಿತಂಬಿನೀಂ ॥ ೯ ॥
ಕಾವೇರೀಗೌತಮೀಜಂಘಾಂ ಚೋಲಚೇಲಾಂಶುಕಾವೃತಾಂ ।
ಸಹ್ಯದರ್ದುರವಕ್ಷೋಜಾಂ ಕಾಂತೀಕಾಂಚೀವಿಭೂಷಣಾಂ ॥ ೧೦ ॥

---

೫. ಯಾವನು ಉದಿಸದೆಹೋಗಿ ಪುಣ್ಯಕರ್ಮಗಳನ್ನು ಮಾಡುವ ಸತ್ಪುರುಷರ ಉತ್ಕರ್ಷವಾಗಲಿ ಲೋಕೋಪಕಾರವಾಗಲಿ ಫಲಿಸದೆ ಹೋದರೆ ಗತಿಯೇನು? ಆ ಸೂರ್ಯಭಗವಂತನ ಉದಯವಾಗದಿರಲು ಮಂದೇಹಾದಿರಾಕ್ಷಸರ ಕೋಟಲೆಯೇ ವೃದ್ಧಿಯಾಗಿ ಸತ್ಪುರುಷರ, ಸತ್ಕರ್ಮಗಳ ಮತ್ತು ಪರೋಪಕಾರದ ಅಭಿವೃದ್ಧಿಯೇ ನಿಂತು ಹೋಗುವುದಲ್ಲವೆ?

೬. ಸಂಜೆಯ ಸಮಯದಲ್ಲಿ ಮುಳುಗಿಹೋದ ಆ ರವಿಯು ಅನುರಾಗ ಪೂರ್ಣವಾದ ಕರಸ್ಪರ್ಶದಿಂದ ಖಂಡಿತೆಯಾದ ಪೂರ್ವದಿಶೆಯನ್ನು ಆಶ್ವಾಸನಗೊಳಿಸುತ್ತ ಮತ್ತೆ ಪ್ರಾತಃಕಾಲದಲ್ಲಿ ಹೇಗೆ ಮೂಡಿಬರುವನೊ!

೭–೧೩. ವಿರಹದಿಂದಲೋ ಎಂಬಂತೆ ಪ್ರಜ್ವಲಿಸುತ್ತಿರುವ ಆಗ್ನೇಯ ದಿಶೆಯನ್ನು ಒಂದು ಪ್ರಹರಕಾಲಮಾತ್ರ ಉಪಭೋಗಿಸಿ ಆ ತರುವಾಯ, ಲವಂಗ ಏಲಕ್ಕಿ ಕಸ್ತೂರಿ ಶ್ರೀಗಂಧಗಳಿಂದ ಲೇಪಿತೆಯಾಗಿ, ತಾಂಬೂಲರಾಗದಿಂದ ಕೆಂಪೊಗೆವ ತುಟಿಗಳುಳ್ಳವಳಾಗಿ, ದ್ರಾಕ್ಷಿಯಗೊಂಚಲುಗಳೆಂಬ ಸ್ತನಗಳುಳ್ಳವಳಾಗಿ, ಲವಲೀಲತೆಯೆಂಬ ಬಾಹುಲತೆಯುಳ್ಳವಳಾಗಿ, ಕಂಕೋಲ ವೃಕ್ಷದ ಚಿಗುರುಗಳೆಂಬ ಬೆರಳುಗಳುಳ್ಳವಳಾಗಿ, ಮಲಯಮಾರುತವೆಂಬ ನಿಃಶ್ವಾಸದಿಂದೊಪ್ಪಿ, ಕ್ಷೀರೋದಕವೆಂಬ ಉತ್ತಮ ವಸ್ತ್ರದಿಂದ ಅಲಂಕೃತಳಾಗಿ, ತ್ರಿಕೂಟ ಪರ್ವತವೆಂಬ ಸ್ವರ್ಣ ಭೂಷಣ ಭೂಷಿತವಾದ ಅವಯವಗಳುಳ್ಳವಳಾಗಿ, ಸುವೇಲ ಪರ್ವತವೆಂಬ ನಿತಂಬ ಪ್ರದೇಶದಿಂದೊಪ್ಪಿ, ಕಾವೇರಿ ಗೌತಮಿ ನದಿಗಳೆಂಬ ಜಂಘೆಗಳುಳ್ಳವಳಾಗಿ, ಚೋಳದೇಶವೆಂಬ ಮೇಲುಹೊದಿಕೆಯಿಂದ ಕಂಗೊಳಿಸಿ, ಸಹ್ಯಾದ್ರಿ ದರ್ದುರ ಪರ್ವತಗಳೆಂಬ ಕುಚದ್ವಯ

**ಸುಕೋಮಲಮಹಾರಾಷ್ಟ್ರೀವಾಗ್ವಿಲಾಸಮನೋಹರಾಂ ।**
**ಅದ್ಯಾಽಪಿ ನ ಮಹಾಲಕ್ಷ್ಮೀರ್ಯಾ ವಿಮುಂಚತಿ ಸದ್ಗುಣಾಂ ॥ ೧೧ ॥**
**ಸುದಕ್ಷದಕ್ಷಿಣಾಮಾಶಾಮಾಶಾನಾಥಃ ಪ್ರತಸ್ಥಿವಾನ್ ।**
**ಕ್ರಮಂತಃ ಸರ್ವಮರ್ವಂತೋ ಹೇಲಯಾ ಹೇಲಿಖಸ್ಯ ಖಂ ॥ ೧೨ ॥**
**ನ ಶೇಕುರಗ್ರತೋ ಗಂತುಂ ತತೋಽನೂರುರ್ವ್ಯಜಿಜ್ಞಪತ್ ॥ ೧೩ ॥**

**ಅನೂರುರುವಾಚ :—**

**ಭಾನೋ ಮಾನೋನ್ನತೋ ವಿಂಧ್ಯೋ ನಿಧ್ಯಾಯ ಗಗನಂ ಸ್ಥಿತಃ ।**
**ಸ್ಪರ್ಧತೇ ಮೇರುಣಾ ಪ್ರೇಪ್ಸುಸ್ತ್ವದ್ವತ್ತಾಂ ತು ಪ್ರದಕ್ಷಿಣಾಂ ॥ ೧೪ ॥**
**ಅನೂರುವಾಕ್ಯಮಾಕರ್ಣ್ಯ ಸವಿತಾ ಹೃದ್ಯಚಿಂತಯತ್ ।**
**ಅಹೋ ಗಗನಮಾರ್ಗೋಽಪಿ ರುಧ್ಯತೇ ಚಾಽತಿವಿಸ್ಮಯಃ ॥ ೧೫ ॥**

**ವ್ಯಾಸ ಉವಾಚ :—**

**ಸೂರಃ ಶೂರೋಽಪಿ ಕಿಂಕುರ್ಯಾತ್ತ್ವಾಂತರೇ ವರ್ತ್ಮನಿ ಸ್ಥಿತಃ ।**
**ತ್ವರಾವಾನಪಿ ಕೋ ರುದ್ಧಂ ಮಾರ್ಗಮೇಕೋ ವಿಲಂಘಯೇತ್ ॥ ೧೬ ॥**

---

ದಿಂದೊಪ್ಪಿ, ಕಾಂಚೀಪಟ್ಟಣವೆಂಬ ಒಡ್ಯಾಣದಿಂದಲಂಕೃತಳಾಗಿ ಇಂದಿಗೂ ಮಹಾಲಕ್ಷ್ಮಿಯು ಎಡೆಬಿಡದೆ ನೆಲಸಿರುವ ಸದ್ಗುಣಭರಿತವೂ ಬಹು ಕೋಮಲವೂ ಆದ ಮಹಾರಾಷ್ಟ್ರವೆಂಬ ವಾಗ್ವಿಲಾಸದಿಂದ ಮನೋಹರಳಾಗಿ ವಿರಾಜಿಸುತ್ತಿರುವ ದಾಕ್ಷಿಣ್ಯ ಪೂರ್ಣೆಯಾದ ದಕ್ಷಿಣದಿಶಾವನಿತೆಯನ್ನು ಕುರಿತು ದಿಗಧೀಶನಾದ ಆ ಸೂರ್ಯನು ಹೊರಟನು. ಅವನ ಕುದುರೆಗಳು ಆಕಾಶವೆಲ್ಲವನ್ನೂ ದಾಟುತ್ತ ಮುಂದುವರಿಯಲಾಗದ ಸ್ಥಿತಿಗೆ ಬರಲು ಸಾರಥಿಯಾದ ಅರುಣನು ತನ್ನ ಒಡೆಯನಿಗೆ ಈ ರೀತಿ ಅರಿಕೆಮಾಡಿದನು.

೧೪. ಅನೂರುವು ಹೇಳುತ್ತಾನೆ:—"ಎಲೈ ಭಾನುವೆ, ಈ ವಿಂಧ್ಯಾದ್ರಿಯು ಅಳತೆಗೂ ಮೀರಿ ಬೆಳೆದು ಗಗನಮಾರ್ಗವನ್ನು ತಡೆಗಟ್ಟಿರುವನು. ನೀನು ಮೇರುವನ್ನು ಪ್ರದಕ್ಷಿಣೆಗೆಯ್ಯುವುದನ್ನು ಸಹಿಸಲಾರದೆ ಈ ಪರ್ವತರಾಜನು ಅವನೊಡನೆ ಸಮಸಮವಾಗಿ ಸ್ಪರ್ಧಿಸುತ್ತಿರುವನು."

೧೫. ಅರುಣನು ಹೇಳಿದ ಮಾತುಗಳನ್ನು ಕೇಳಿ ಆ ದಿನಮಣಿಯು ತನ್ನಲ್ಲಿಯೇ ಹೀಗೆ ಆಲೋಚಿಸಿದನು. "ಆಹ! ಗಗನ ಮಾರ್ಗವನ್ನೂ ಈ ರೀತಿ ತಡೆಗಟ್ಟುವುದೆಂದರೆ ಆಶ್ಚರ್ಯವೇ ಸರಿ."

೧೬. ವ್ಯಾಸಮುನಿಯು ಹೇಳುತ್ತಾನೆ —ಸೂರ್ಯನು ಶೂರನೇ ಆದರೂ ನಡುದಾರಿಯಲ್ಲಿ ನಿಂತು ಏನುತಾನೆ ಮಾಡಿಯಾನು? ತ್ವರೆಯುಳ್ಳವನಾದರೂ ದಾರಿಯಲ್ಲಿ ತಡೆಯಾದರೆ ಒಂಟಿಯಾಗಿ ಯಾರುತಾನೆ ಮುಂದುವರಿದಾರು?

ರಾಹುಬಾಹುಗ್ರಹವ್ಯಗ್ರೋ ಯಃ ಕ್ಷಣಂ ನಾಽವತಿಷ್ಠತಿ ।
ಶೂನ್ಯೇ ಮಾರ್ಗೇ ನಿರುದ್ಧಃ ಸ ಕಿಂ ಕರೋತು ವಿಧಿರ್ಬಲೀ ॥ ೧೭ ॥
ಯೋಜನಾನಾಂ ಸಹಸ್ರೇ ದ್ವೇ ದ್ವೇ ಶತೇ ದ್ವೇ ಚ ಯೋಜನೇ ।
ಯೋಜನಸ್ಯ ನಿಮೇಷಾರ್ಧಾದ್ಯಾತಿ ಸೋಽಪಿ ಚಿರಂ ಸ್ಥಿತಃ ॥ ೧೮ ॥
ಗತೇ ಬಹುತಿಥೇ ಕಾಲೇ ಪ್ರಾಚ್ಯೌದೀಚ್ಯಾ ಭೃಶಾರ್ದಿತಾಃ ।
ಚಂಡರಶ್ಮೇಃ ಕರವ್ರಾತಪಾತ ಸಂತಾಪತಾಪಿತಾಃ ॥ ೧೯ ॥
ಪಾಶ್ಚಾತ್ಯಾ ದಾಕ್ಷಿಣಾತ್ಯಾಶ್ಚ ನಿದ್ರಾಮುದ್ರಿತಲೋಚನಾಃ ।
ಶಯಿತಾ ಏವ ವೀಕ್ಷಂತೇ ಸತಾರಗ್ರಹಮಂಬರಂ ॥ ೨೦ ॥
ಅಹೋ ನಾಽಹಸ್ಕರಾಽಭಾವಾನ್ನಿಶಾ ನೈವಾಽನಿಶಾಕರಾತ್ ।
ಅಸ್ತಂಗತಾರ್ಕಾನ್ನಭಸಃ ಕಃಕಾಲಸ್ತ್ವೇಷ ನೇಕ್ಷ್ಯತೇ ॥ ೨೧ ॥
ಬ್ರಹ್ಮಾಂಡಂ ಕಿಮುಕಾಂಡೇ ವೈ ಲಯಮೇಷ್ಯತಿ ತತ್ಕಥಂ ।
ಪರಾಪತಂತಿ ನಾಽದ್ಯಾಽಪಿ ಪಾರಾವಾರ ಇತಸ್ತತಃ ॥ ೨೨ ॥

---

೧೭. ರಾಕ್ಷಸನಾದ ರಾಹುವಿನ ಬಾಹುಗಳಿಂದ ಪೀಡಿತನಾದರೂ ಯಾವನು ಒಂದು ಕ್ಷಣಕಾಲವಾದರೂ ನಿಂತೆಡೆಯಲ್ಲಿ ನಿಲ್ಲುವುದಿಲ್ಲವೊ ಅಂಥ ಸೂರ್ಯ ಭಗವಂತನು ಶೂನ್ಯವಾದ ಆ ಮಾರ್ಗದಲ್ಲಿ ತಡೆಯಲ್ಪಟ್ಟವನಾಗಿ ಏನು ತಾನೆ ಮಾಡಿಯಾನು? ವಿಧಿಯು ಬಲವತ್ತರವಾದುದು.

೧೮. ರೆಪ್ಪೆಹೊಡೆಯುವಷ್ಟು ಕಾಲದ ಅರ್ಧಕಾಲದಲ್ಲಿಯೇ ನಾಲ್ಕು ಸಾವಿರದ ಇನ್ನೂರು ಯೋಜನಗಳ ದೂರ ನಡೆಯುವ ಆ ಸೂರ್ಯನು ಹೀಗೆ ವಿಂಧ್ಯಾದ್ರಿಯಿಂದ ರುದ್ಧನಾಗಿ ಅಲ್ಲಿಯೇ ಬಹಳ ಹೊತ್ತು ನಿಂತನು.

೧೯–೨೦. ಬಹಳ ದಿನಗಳ ಈ ಕಾಲವು ಹೀಗೆ ಕಳೆಯಲು ಆ ಚಂಡ ರಶ್ಮಿಯ ಕಿರಣಗಳ ನೇರವಾದ ಬೀಳುವಿಕೆಯಿಂದ ಪೂರ್ವದೇಶಗಳವರೂ ಉತ್ತರ ದೇಶಗಳವರೂ ಬಹಳವಾದ ಸಂತಾಪಕ್ಕೊಳಗಾದರು. ಪಾಶ್ಚಾತ್ಯ ದಾಕ್ಷಿಣಾತ್ಯ ದೇಶಗಳ ಜನಗಳೆಲ್ಲ ನಿದ್ರೆಯಿಂದ ಮುಗಿದ ಕಣ್ಣುಗಳುಳ್ಳವರಾಗಿ ಮಲಗಿಯೇ ನಕ್ಷತ್ರಗಳಿಂದಲೂ ಗ್ರಹಗಳಿಂದಲೂ ತುಂಬಿದ ಆಕಾಶವನ್ನೇ ನೋಡತೊಡಗಿದರು.

೨೧. ಆಕಾಶದಲ್ಲಿ ಎಷ್ಟು ಹೊತ್ತಾಯಿತೆಂಬುದೇ ಯಾರಿಗೂ ಕಾಣುತ್ತಿರಲಿಲ್ಲ. ಇದನ್ನು ಕಂಡು ಪೂರ್ವೋತ್ತರ ದೇಶಗಳವರೆಲ್ಲ ವ್ಯಾಕುಲಚಿತ್ತರಾದರು.

೨೨. ಬ್ರಹ್ಮಾಂಡವೆಲ್ಲವೂ ಇದ್ದಕ್ಕಿದ್ದಂತೆಯೆ ಲಯಿಸಿ ಹೋಗುವುದೊ, ಸಮುದ್ರಗಳೆಲ್ಲವೂ ಅತ್ತಿತ್ತ ನುಗ್ಗಿ ಜಗತ್ತನ್ನೇ ಆವರಿಸುವುವೊ ಎಂದು ಅವರು ಯೋಚಿಸತೊಡಗಿದರು.

ಸ್ವಾಹಾಸ್ವಧಾವಷಟ್ಕಾರವರ್ಜಿತೇ ಜಗತೀತಲೇ ।
ಪಂಚಯಜ್ಞಕ್ರಿಯಾಲೋಪಾಚ್ಚ ಕಂಪೇ ಭುವನತ್ರಯಮ್ ॥ ೨೩ ॥
ಸೂರ್ಯೋದಯಾತ್ಪ್ರವರ್ತಂತೇ ಯಜ್ಞಾದ್ಯಾಃ ಸಕಲಾಃ ಕ್ರಿಯಾಃ ।
ತಾಭಿರ್ಯಜ್ಞಭೃತಾಂ ತೃಪ್ತಿಃ ಸವಿತಾ ತತ್ರ ಕಾರಣಂ ॥ ೨೪ ॥
ಚಿತ್ರಗುಪ್ತಾದಯಃ ಸರ್ವೇ ಕಾಲಂ ಜಾನಂತಿ ಸೂರ್ಯತಃ ।
ಸ್ಥಿತಿಸರ್ಗವಿಸರ್ಗಾಣಾಂ ಕಾರಣಂ ಕೇವಲಂ ರವಿಃ ॥ ೨೫ ॥
ತತಸ್ಸೂರ್ಯಸ್ಯ ಗತಿಸ್ತಂಭಾತ್ಸ್ತಂಭಿತಂ ಭುವನತ್ರಯಂ ।
ಯದ್ಯತ್ರ ತತ್ಸ್ಥಿತಂ ತತ್ರ ಚಿತ್ರನ್ಯಸ್ತಮಿವಾಖಿಲಂ ॥ ೨೬ ॥
ಏಕತಸ್ತಿಮಿರಾನ್ನೈಶಾದೇಕತಸ್ತು ದಿವಾತಪಾತ್ ।
ಬಹೂನಾಂ ಪ್ರಲಯೋ ಜಾತಃ ಕಾಂದಿಶೀಕಮಭೂಜ್ಜಗತ್ ॥ ೨೭ ॥
ಇತಿ ವ್ಯಾಕುಲಿತೇ ಲೋಕೇ ಸುರಾಸುರನರೋರಗೇ ।
ಆಃಕಿಮೇತದಕಾಂಡೇಽಭೂದ್ರುರುದುರ್ದ್ರುವುಃ ಪ್ರಜಾಃ ॥ ೨೮ ॥

---

೨೩–೨೪. ಸ್ವಾಹಾ ಸ್ವಧಾ ವಷಟ್ಕಾರಗಳಿಂದ ಜಗತ್ತೆಲ್ಲವೂ ವರ್ಜಿತವಾಗಲು ಪಂಚಯಜ್ಞಕ್ರಿಯಾಲೋಪದಿಂದ ಭುವನತ್ರಯವೂ ನಡುಗಿಹೋಯಿತು. ಸೂರ್ಯೋದಯದಿಂದಲೇ ಯಜ್ಞಾದಿ ಸಮಸ್ತ ಸತ್ಕರ್ಮಗಳೂ ಪ್ರವರ್ತಿಸುತ್ತವೆ. ಅವುಗಳಿಂದಲೇ ದೇವತೆಗಳೆಲ್ಲರಿಗೂ ತೃಪ್ತಿಯುಂಟಾಗುತ್ತದೆ. ಇದಕ್ಕೆ ಸವಿತೃವೇ ಮೂಲಕಾರಣ.

೨೫. ಚಿತ್ರಗುಪ್ತನೇ ಮೊದಲಾದವರೆಲ್ಲರೂ ಸೂರ್ಯನಿಂದಲೇ ಕಾಲಮಾನವನ್ನು ತಿಳಿದುಕೊಳ್ಳುತ್ತಾರೆ. ಸೃಷ್ಟಿ ಸ್ಥಿತಿಲಯಗಳಿಗೆಲ್ಲಕ್ಕೂ ರವಿಯೇ ಕಾರಣಸ್ವರೂಪನು.

೨೬. ಆ ಸೂರ್ಯಭಗವಂತನ ಸ್ತಂಭನದಿಂದ ಮೂರು ಲೋಕಗಳೂ ಸ್ತಂಭಿತವಾಗಿಹೋದುವು. ಎಲ್ಲೆಲ್ಲಿ ಯಾವ ಯಾವ ವಸ್ತುಗಳೂ, ಜೀವಿಗಳೂ ಇದ್ದುವೊ ಅವೆಲ್ಲವೂ ಅಲ್ಲಲ್ಲಿಯೇ ಚಿತ್ರದಲ್ಲಿ ಬರೆದವುಗಳಂತೆ ಕಟ್ಟಕದಲದೆ ನಿಂತುಹೋದವು

೨೭. ಒಂದು ಕಡೆ ರಾತ್ರಿಯ ಕತ್ತಲಿಂದಲೂ ಇನ್ನೊಂದು ಕಡೆ ಸೂರ್ಯನ ಬಿಸಿಲಿನ ಬೇಗೆಯಿಂದಲೂ ಅನೇಕರಿಗೆ ಪ್ರಲಯವುಂಟಾಯಿತು. ಜಗತ್ತೇ ದಿಕ್ಕೆಟ್ಟು ಹೋಯಿತು.

೨೮. ಹೀಗೆ ಸುರಾಸುರ ನರ ಪನ್ನಗರಿಂದ ಕೂಡಿದ ಈ ಲೋಕವೆಲ್ಲವೂ ವ್ಯಾಕುಲಗೊಳ್ಳಲು ಪ್ರಜೆಗಳೆಲ್ಲರೂ "ಅಯ್ಯೋ! ಇದ್ದಕ್ಕಿದ್ದಂತೆಯೇ ಇದಾವ ವಿಪತ್ತು ಬಂದಿತೊ" ಎಂದು ಅಳತೊಡಗಿದರು.

ತತಃ ಸರ್ವೇ ಸಮಾಲೋಕ್ಯ ಬ್ರಹ್ಮಾಣಂ ಶರಣಂ ಯಯುಃ ।
ಸ್ತುವಂತೋ ವಿವಿಧೈಃ ಸ್ತೋತ್ರೈ ರಕ್ಷರಕ್ಷೇತಿ ಚಾಽಬ್ರುವನ್ ॥ ೨೯ ॥

ದೇವಾ ಊಚುಃ:—

ನಮೋ ಹಿರಣ್ಯರೂಪಾಯ ಬ್ರಹ್ಮಣೇ ಬ್ರಹ್ಮರೂಪಿಣೇ ।
ಅವಿಜ್ಞಾತಸ್ವರೂಪಾಯ ಕೈವಲ್ಯಾಯಾಽಮೃತಾಯ ಚ ॥ ೩೦ ॥
ಯಂ ನ ದೇವಾ ವಿಜಾನಂತಿ ಮನೋ ಯತ್ರಾಪಿ ಕುಂಠಿತಂ ।
ನ ಯತ್ರ ವಾಕ್ಪ್ರಸರತಿ ನಮಸ್ತಸ್ಮೈ ಚಿದಾತ್ಮನೇ ॥ ೩೧ ॥
ಯೋಗಿನೋ ಯಂ ಹೃದಾಕಾಶೇ ಪ್ರಣಿಧಾನೇನ ನಿಶ್ಚಲಾಃ ।
ಜ್ಯೋತೀರೂಪಂ ಪ್ರಪಶ್ಯಂತಿ ತಸ್ಮೈ ಶ್ರೀಬ್ರಹ್ಮಣೇ ನಮಃ ॥ ೩೨ ॥
ಕಾಲಾತ್ಪರಾಯ ಕಾಲಾಯ ಸ್ವೇಚ್ಛಯಾ ಪುರುಷಾಯ ಚ ।
ಗುಣತ್ರಯಸ್ವರೂಪಾಯ ನಮಃ ಪ್ರಕೃತಿರೂಪಿಣೇ ॥ ೩೩ ॥
ವಿಷ್ಣವೇ ಸತ್ವರೂಪಾಯ ರಜೋರೂಪಾಯ ವೇಧಸೇ ।
ತಮಸೇ ರುದ್ರರೂಪಾಯ ಸ್ಥಿತಿಸರ್ಗಾಽಂತಕಾರಿಣೇ ॥ ೩೪ ॥

---

೨೯. ತರುವಾಯ ಸಮಸ್ತದೇವತೆಗಳೂ ಈ ಸ್ಥಿತಿಯನ್ನು ಕಂಡು "ಕಾಪಾಡು ಕಾಪಾಡು" ಎಂದು ಬಗೆಬಗೆಯ ಸ್ತೋತ್ರಗಳಿಂದ ಸ್ತುತಿಸುತ್ತ ಬ್ರಹ್ಮದೇವನಲ್ಲಿಗೆ ಶರಣು ಹೋಗಿ ಹೀಗೆಂದರು.

೩೦. ದೇವತೆಗಳು ಸ್ತುತಿಸುತ್ತಾರೆ.—ಹಿರಣ್ಯರೂಪನೂ, ಸರ್ವವ್ಯಾಪಕನೂ, ಪರಬ್ರಹ್ಮಸ್ವರೂಪನೂ, ಪ್ರತ್ಯಕ್ಷಾದಿ ಪ್ರಮಾಣಗಳಿಂದ ಯಾರೊಬ್ಬರಿಗೂ ತಿಳಿಯದಿರುವವನೂ, ಮೋಕ್ಷಸ್ವರೂಪನೂ, ಆನಂದಸ್ವರೂಪನೂ ಆದ ಓ ಬ್ರಹ್ಮದೇವನೆ, ನಿನಗೆ ನಮೋನಮಃ.

೩೧. ಯಾವ ನಿನ್ನನ್ನು ದೇವತೆಗಳೂ ಅರಿತಿಲ್ಲವೊ, ಮನಸ್ಸು ಯಾವ ನಿನ್ನನ್ನು ಅರಿಯುವುದರಲ್ಲಿ ಕುಂಠಿತವಾಗಿ ಹೋಗುತ್ತದೆಯೊ, ಮಾತು ಪ್ರಸರಿಸಲಾರದೊ ಅಂಥ ಚೈತನ್ಯಘನವಾದ ಜ್ಞಾನಸ್ವರೂಪನೂ, ಆನಂದಲಕ್ಷಣನೂ ಆದ ನಿನಗೆ ನಮಸ್ಕಾರವು.

೩೨. ಯೋಗಿಗಳು ಪ್ರಣಿಧಾನದಿಂದ ನಿಶ್ಚಲನಾಗಿ ಜ್ಯೋತಿಃಸ್ವರೂಪನಾದ ಯಾವ ನಿನ್ನನ್ನು ತಮ್ಮ ಹೃದಯಾಕಾಶಗಳಲ್ಲಿ ಸಾಕ್ಷಾತ್ಕರಿಸಿಕೊಳ್ಳುವರೋ ಅಂಥ ಷಡ್ಗುಣೈಶ್ವರ್ಯಪರಿಪೂರ್ಣನಾದ ಓ ಬ್ರಹ್ಮದೇವನೆ, ನಿನಗೆ ನಮಸ್ಕಾರವು.

೩೩. ಕಾಲಸ್ವರೂಪನೂ, ಕಾಲಕ್ಕೂ ಮೀರಿದವನೂ ಸ್ವತಂತ್ರ ಪುರುಷನೂ ಸತ್ತ್ವರಜಸ್ತಮೋಗುಣಸ್ವರೂಪನೂ, ಪ್ರಕೃತಿರೂಪನೂ ಆಗಿರುವ ನಿನಗೆ ನಮೋನಮಃ.

೩೪. ಸತ್ತ್ವಗುಣಸ್ವರೂಪನಾಗಿ ವಿಷ್ಣುವೂ, ರಜೋಗುಣದಿಂದ ವಿರಾಜಿಸಿ

ನಮೋ ಬುದ್ಧಿಸ್ವರೂಪಾಯ ತ್ರಿಧಾಹಂಕೃತಯೇ ನಮಃ ।
ಪಂಚತನ್ಮಾತ್ರರೂಪಾಯ ಪಂಚಕರ್ಮೇಂದ್ರಿಯಾತ್ಮನೇ ॥ ೩೫ ॥
ನಮೋ ಮನಃಸ್ವರೂಪಾಯ ಪಂಚಬುದ್ಧೀಂದ್ರಿಯಾತ್ಮನೇ ।
ಕ್ಷಿತ್ಯಾದಿ ಪಂಚರೂಪಾಯ ನಮಸ್ತೇ ವಿಷಯಾತ್ಮನೇ ॥ ೩೬ ॥
ನಮೋ ಬ್ರಹ್ಮಾಂಡರೂಪಾಯ ತದಂತರ್ವರ್ತಿನೇ ನಮಃ ।
ಅರ್ವಾಚೀನಪರಾಚೀನ ವಿಶ್ವರೂಪಾಯ ತೇ ನಮಃ ॥ ೩೭ ॥
ಅನಿತ್ಯನಿತ್ಯರೂಪಾಯ ಸದಸತ್ಪತಯೇ ನಮಃ ।
ಸಮಸ್ತಭಕ್ತಕೃಪಯಾ ಸ್ವೇಚ್ಛಾವಿಷ್ಕೃತವಿಗ್ರಹ ॥ ೩೮ ॥
ತವ ನಿಃಶ್ವಸಿತಂ ವೇದಾಸ್ತವ ಸ್ವೇದೋಽಖಿಲಂ ಜಗತ್ ।
ವಿಶ್ವಾಭೂತಾನಿ ತೇ ಪಾದಃ ಶೀರ್ಷ್ಣೋ ದ್ಯೌಃ ಸಮವರ್ತತ ॥ ೩೯ ॥
ನಾಭ್ಯಾ ಆಸೀದಂತರಿಕ್ಷಂ ಲೋಮಾನಿ ಚ ವನಸ್ಪತಿಃ ।
ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯಸ್ತವ ಪ್ರಭೋ ॥ ೪೦ ॥

---

ಬ್ರಹ್ಮರೂಪನೂ, ತಮೋಗುಣ ಪ್ರಧಾನನಾಗಿ ರುದ್ರರೂಪನೂ, ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳನ್ನು ಆಗಗೊಳಿಸುತ್ತಿರುವ ಓ ಪರಬ್ರಹ್ಮಮೂರ್ತಿಯೆ, ನಿನಗೆ ನಮಸ್ಕಾರವು.

೩೫. ಮಹತ್ತತ್ತ್ವನಾದ ಬುದ್ಧಿಸ್ವರೂಪನೂ, ವೈಕಾರಿಕ ತೈಜಸ ತಾಮಸಗಳೆಂಬ ಮೂರು ಬಗೆಯ ಅಹಂಕಾರಗಳ ರೂಪವಾಗಿರುವವನೂ, ಶಬ್ದಸ್ಪರ್ಶರೂಪರಸಗಂಧಗಳೆಂಬ ತನ್ಮಾತ್ರಗಳ ರೂಪದಿಂದಿರುವವನೂ ಆದ ಎಲೈ ಬ್ರಹ್ಮನೆ, ನಿನಗೆ ನಮೋನಮಃ.

೩೬. ಮನಃಸ್ವರೂಪನೂ (ಅಂತಃಕರಣ ರೂಪನೂ), ಶ್ರೋತ್ರ, ತ್ವಕ್ಕು ಚಕ್ಷು ಜಿಹ್ವೆ ನಾಸಗಳೆಂಬ ಬುದ್ಧೀಂದ್ರಿಯಗಳ ಸ್ವರೂಪನೂ, ಪೃಥ್ವಿ ಅಪ್ಪು ತೇಜಸ್ಸು ವಾಯು ಆಕಾಶಗಳೆಂಬ ಪಂಚಭೂತಾತ್ಮಕನೂ, ಸ್ಥೂಲ ವಿಷಯ ಸ್ವರೂಪನೂ ಆದ ಓ ಪರಬ್ರಹ್ಮಮೂರ್ತಿಯೆ, ನಿನಗೆ ನಮಸ್ಕಾರವು.

೩೭. ಬ್ರಹ್ಮಾಂಡರೂಪನಾಗಿ ಅದರಲ್ಲಿಯೇ ನೆಲಸಿದವನಾಗಿ, ಹಿಂದಿನ ಇಂದಿನ ಜಗತ್ತಿನ ಸ್ವರೂಪನೂ ಆಗಿರುವ ನಿನಗೆ ನಮೋನಮಃ.

೩೮. ನಿತ್ಯಾನಿತ್ಯಸ್ವರೂಪನೂ, ಸ್ಥೂಲ ಸೂಕ್ಷ್ಮ ಕಾರ್ಯ ಕಾರಣ ರೂಪನೂ, ನಿಯಂತೃವೂ, ಸಮಸ್ತ ಭಕ್ತ ಜನರಲ್ಲಿನ ಕಾರುಣ್ಯದಿಂದ ಅವರವರ ಭಕ್ತಿಗನುಗುಣವಾಗಿ ಸ್ವೇಚ್ಛೆಯಿಂದಲೆ ವಿವಿಧರೂಪಗಳನ್ನು ಪ್ರಕಟಗೊಳಿಸುವವನೂ ಆದ ನಿನಗೆ ನಮಸ್ಕಾರವು.

೩೯–೪೦. ನಿನ್ನ ನಿಃಶ್ವಾಸಗಳೇ ವೇದಗಳು; ನಿನ್ನ ಬೆವರೇ ಈ ಜಗತ್ತು; ನಿನ್ನ ಪಾದಗಳೇ ಈ ಜಗತ್ತಿನ ಸರ್ವ ಭೂತಗಳು; ನಿನ್ನ ಶಿರಸ್ಸೇ ಸ್ವರ್ಗಲೋಕ;

ತ್ವಮೇವ ಸರ್ವಂ ತ್ವಯಿ ದೇವ ಸರ್ವಂ
ಸ್ತೋತಾ ಸ್ತುತಿಃ ಸ್ತವ್ಯ ಇಹ ತ್ವಮೇವ ।
ಈಶ ತ್ವಯಾಽವಾಸ್ಯಮಿದಂ ಹಿ ಸರ್ವಂ
ನಮೋಽಸ್ತು ಭೂಯೋಽಪಿ ನಮೋ ನಮಸ್ತೇ ॥ ೪೧ ॥
ಇತಿ ಸ್ತುತ್ವಾ ವಿಧಿಂ ದೇವಾ ನಿಪೇತುರ್ದಂಡವತ್ಕ್ಷಿತೌ ।
ಪರಿತುಷ್ಟಸ್ತದಾ ಬ್ರಹ್ಮಾ ಪ್ರತ್ಯುವಾಚ ದಿವೌಕಸಃ ॥ ೪೨ ॥

ಬ್ರಹ್ಮೋವಾಚ :—

ಯಥಾರ್ಥಯಾಽನಯಾ ಸ್ತುತ್ಯಾ ತುಷ್ಟೋಽಸ್ಮಿ ಪ್ರಣತಾಃ ಸುರಾಃ ।
ಉತ್ತಿಷ್ಠತ ಪ್ರಸನ್ನೋಽಸ್ಮಿ ವೃಣುಧ್ವಂ ವರಮುತ್ತಮಂ ॥ ೪೩ ॥
ಯಃ ಸ್ತೋಷ್ಯತ್ಯನಯಾ ಸ್ತುತ್ಯಾ ಶ್ರದ್ಧಾವಾನ್ಪ್ರತ್ಯಹಂ ಶುಚಿಃ ।
ಮಾಂ ವಾ ಹರಂ ವಾ ವಿಷ್ಣುಂ ವಾ ತಸ್ಯ ತುಷ್ಟಾಃ ಸದಾ ವಯಂ ॥ ೪೪ ॥
ದಾಸ್ಯಾಮಃ ಸಕಲಾನ್ಕಾಮಾನ್ಪುತ್ರಾನ್ಪೌತ್ರಾನ್ಪಶೂನ್ವಸು ।
ಸೌಭಾಗ್ಯಮಾಯುರಾರೋಗ್ಯಂ ನಿರ್ಭಯತ್ವಂ ರಣೇ ಜಯಂ ॥ ೪೫ ॥

---

ನಿನ್ನ ನಾಭಿಯಿಂದಲೇ ಅಂತರಿಕ್ಷವಾಯಿತು ನಿನ್ನ ರೋಮಗಳೇ ವನಸ್ಪತಿಗಳೆನಿಸಿದುವು. ನಿನ್ನ ಮನಸ್ಸಿನಿಂದ ಚಂದ್ರನುದಿಸಿದನು. ಪ್ರಭುವೆ, ನಿನ್ನ ಕಣ್ಣಿನಿಂದಲೆ ಸೂರ್ಯನುದಿಸಿದನು.

೪೧. ಸಮಸ್ತವೂ ನೀನೆ. ಓ ದೇವಾ! ನಿನ್ನಲ್ಲಿಯೇ ಸಮಸ್ತವೂ ನೆಲೆಗೊಂಡಿರುವುದು. ಸ್ತುತಿಸುವವನೂ, ಸ್ತುತಿಯೂ, ಸ್ತೋತ್ರಗೈಸಿಕೊಳ್ಳುವವನೂ ಎಲ್ಲವೂ ನೀನೆ. ಓ ಈಶ್ವರ, ಪರಮೈಶ್ವರ್ಯ ಭರಿತನಾದ ನಿನ್ನಿಂದಲೆ ಈ ಸಮಸ್ತ ಪ್ರಪಂಚವೂ ಅಧಿಷ್ಠಿತವಾಗಿದೆ. ಇದೊ ನಿನಗೆ ಪುನಃ ಪುನಃ ನಮಸ್ಕಾರವು.''

೪೨. ಹೀಗೆ ಆ ದೇವತೆಗಳೆಲ್ಲರೂ ಆ ಬ್ರಹ್ಮದೇವನನ್ನು ಸ್ತುತಿಸಿ ದೀರ್ಘದಂಡಪ್ರಣಾಮ ಮಾಡಿದರು. ತರುವಾಯ ಬ್ರಹ್ಮದೇವನು ಅವರ ವಿಷಯದಲ್ಲಿ ಸಂತೋಷಗೊಂಡು ಅವರನ್ನು ಕುರಿತು ಹೀಗೆಂದನು.

೪೩. ಬ್ರಹ್ಮನು ಹೇಳುತ್ತಾನೆ —ಅಯ್ಯಾ, ದೇವತೆಗಳಿರಾ! ಪ್ರಣತರಾಗಿ ನೀವು ಸ್ತುತಿಸಿದ ಯಥಾರ್ಥವಾದ ಈ ಸ್ತೋತ್ರದಿಂದ ನಾನು ಸಂತುಷ್ಟನಾಗಿದ್ದೇನೆ. ಕೇಳಿರಿ. ಇದೊ ನಾನು ಪ್ರಸನ್ನನಾಗಿರುವೆನು. ಉತ್ತಮವಾದ ವರವನ್ನು ಕೇಳಿಕೊಳ್ಳಿರಿ.

೪೪. ಶ್ರದ್ಧಾವಂತನಾದ ಯಾವನು ಶುಚಿಯಾಗಿ ಪ್ರತಿದಿನವೂ ಈ ಸ್ತೋತ್ರದಿಂದ ನನ್ನನ್ನಾಗಲಿ, ಪರಮೇಶ್ವರನನ್ನಾಗಲಿ ವಿಷ್ಣುವನ್ನೇ ಆಗಲಿ ಸ್ತುತಿಸಿದುದಾದರೆ ಅವನ ವಿಷಯದಲ್ಲಿ ನಾವೆಲ್ಲರೂ ಸುಪ್ರಸನ್ನರಾಗುತ್ತೇವೆ.

೪೫. ಇಂತು ಪ್ರಸನ್ನರಾದ ನಾವು ಅವನಿಗೆ ಸಕಲಾಭೀಷ್ಟಗಳನ್ನೂ ದಯೆ

ಐಹಿಕಾಮುಷ್ಮಿಕಾನ್ಭೋಗಾನಪವರ್ಗಂ ತಥಾಽಕ್ಷಯಂ ।
ಯದ್ಯದಿಷ್ಟತಮಂ ತಸ್ಯ ತತ್ತತ್ಸರ್ವಂ ಭವಿಷ್ಯತಿ ॥ ೪೬ ॥
ತಸ್ಮಾತ್ಸರ್ವಪ್ರಯತ್ನೇನ ಪಠಿತವ್ಯಃ ಸ್ತವೋತ್ತಮಃ ।
ಅಭೀಷ್ಟದ ಇತಿ ಖ್ಯಾತಃ ಸ್ತವೋಽಯಂ ಸರ್ವಸಿದ್ಧಿದಃ ॥ ೪೭ ॥
ಪುನಃ ಪ್ರೋವಾಚ ತಾನ್ವೇಧಾಃ ಪ್ರಣಿಪತ್ಯೋತ್ಥಿತಾನ್ಸುರಾನ್ ।
ಸ್ವಸ್ಥಾಸ್ತಿಷ್ಠತ ಭೋ ಯೂಯಂ ಕಿಮತ್ರಾಽಪಿ ಸಮಾಕುಲಾಃ ॥ ೪೮ ॥
ಏತೇ ವೇದಾ ಮೂರ್ತಿಧರಾ ಇಮಾ ವಿದ್ಯಾಸ್ತಥಾಽಖಿಲಾಃ ।
ಸದಕ್ಷಿಣಾ ಅಮೀ ಯಜ್ಞಾಃ ಸತ್ಯಂ ಧರ್ಮಸ್ತಪೋ ದಮಃ ॥ ೪೯ ॥
ಬ್ರಹ್ಮಚರ್ಯಮಿದಂ ಚೈಷಾ ಕರುಣಾ ಭಾರತೀ ತ್ವಿಯಂ ।
ಶ್ರುತಿಸ್ಮೃತೀತಿಹಾಸಾರ್ಥಚರಿತಾರ್ಥಾ ಅಮೀ ಜನಾಃ ॥ ೫೦ ॥
ನೇಹ ಕ್ರೋಧೋ ನಮಾತ್ಸರ್ಯಂ ಲೋಭಃ ಕಾಮೋಽಧೃತಿರ್ಭಯಂ ।
ಹಿಂಸಾ ಕುಟಿಲತಾ ಗರ್ವೋ ನಿಂದಾಽಸೂಯಾಽಶುಚಿಃ ಕ್ವಚಿತ್ ॥ ೫೧ ॥

---

ಪಾಲಿಸುವೆವಲ್ಲದೆ ಮಕ್ಕಳುಮೊಮ್ಮಕ್ಕಳುಗಳನ್ನೂ ಪಶುಗಳನ್ನೂ ಧನವನ್ನೂ ಸೌಭಾಗ್ಯ ಆಯುಸ್ಸು ಆರೋಗ್ಯ ಅಭಯ ರಣದಲ್ಲಿ ಜಯಗಳನ್ನೂ ಅನುಗ್ರಹಿಸುತ್ತೇವೆ.

೪೬. ಇಷ್ಟೇ ಅಲ್ಲದೆ ಐಹಿಕ ಆಮುಷ್ಮಿಕ ಭೋಗಗಳಾಗಲಿ ಅಕ್ಷಯವಾದ ಮೋಕ್ಷವಾಗಲಿ ಅವನಿಗ ಏನೇನು ಇಷ್ಟವೊ ಅದೆಲ್ಲವೂ ಸಿದ್ಧಿಸುತ್ತದೆ.

೪೭. ಆದುದರಿಂದ ಸರ್ವಪ್ರಯತ್ನದಿಂದಲೂ ಈ ಉತ್ತಮ ಸ್ತೋತ್ರವನ್ನು ಪಠಿಸತಕ್ಕದ್ದು. ಇದು ಅಭೀಷ್ಟಪ್ರದವಾದುದೆಂದೂ ಸಮಸ್ತ ಸಿದ್ಧಿಗಳನ್ನೂ ದೊರಕಿಸುವಂಥದೆಂದೂ ಪ್ರಸಿದ್ಧವಾಗಲಿ.

೪೮. ಆ ಬ್ರಹ್ಮದೇವನು ಈ ರೀತಿ ನುಡಿದು ಮಣಿದೆದ್ದ ದೇವತೆಗಳೆಲ್ಲರನ್ನೂ ಕುರಿತು ಮತ್ತೆಯೂ ಹೇಳತೊಡಗಿದನು :—ಅಯ್ಯಾ, ನೀವೆಲ್ಲರೂ ಸಮಾಧಾನವಾಗಿರಬೇಕು. ಈ ಸತ್ಯಲೋಕದಲ್ಲಿಯೂ ಹೀಗೇಕೆ ವ್ಯಾಕುಲರಾಗಿರುವಿರಿ?

೪೯. ಇದೊ ನೋಡಿರಿ. ಇವುಗಳೇ ಮೂರ್ತೀಭವಿಸಿ ನಿಂತಿರುವ ಚತುರ್ವೇದಗಳು. ಇವು ಸಮಸ್ತ ವಿದ್ಯೆಗಳು. ಇವೇ ದಕ್ಷಿಣೆಯೊಡಗೂಡಿದ ಸಕಲ ಯಜ್ಞಗಳು. ಸತ್ಯ ಧರ್ಮ ತಪಸ್ಸು ದಮಗಳೆಂಬುವು ಇವೇ.

೫೦. ಇದೇ ಬ್ರಹ್ಮಚರ್ಯವು. ಈಕೆಯೇ ಕರುಣಾಮಯಿಯಾದ ಭಾರತೀದೇವಿಯು. ಶ್ರುತಿ ಸ್ಮೃತಿ ಇತಿಹಾಸ ಪುರಾಣಾದಿಗಳೇ ಈ ಜನಗಳು.

೫೧. ಇಲ್ಲಿ ಕ್ರೋಧ ಮಾತ್ಸರ್ಯ ಲೋಭ ಕಾಮ ಅಧೃತಿ ಭಯ ಹಿಂಸೆ ಕುಟಿಲತೆ ಗರ್ವ ನಿಂದೆ ಅಸೂಯೆ ಅಶುಚಿಯೆಂಬುವು ಯಾವುವೂ ಇರುವುದಿಲ್ಲ.

ಯೇ ಬ್ರಾಹ್ಮಣಾ ಬ್ರಹ್ಮರತಾಸ್ತಪೋನಿಷ್ಠಾಸ್ತಪೋಧನಾಃ ।
ಮಾಸೋಪವಾಸಷಣ್ಮಾಸಚಾತುರ್ಮಾಸ್ಯಾದಿ ಸದ್ವ್ರತಾಃ ॥ ೫೨ ॥
ಪಾತಿವ್ರತ್ಯರತಾ ನಾರ್ಯೋ ಯೇ ಚಾಽನ್ಯೇ ಬ್ರಹ್ಮಚಾರಿಣಃ ।
ತೇ ಚಾಽಮೀ ಪಶ್ಯತ ಸುರಾ ಯೇ ಷಂಢಾಃ ಪರಯೋಷಿತಿ ॥ ೫೩ ॥
ಮಾತಾಪಿತ್ರೋರಮೀ ಭಕ್ತಾ ಅಮೀ ಗೋಗ್ರಹಣೇ ಹತಾಃ ।
ವ್ರತೇ ದಾನೇ ಜಪೇ ಯಜ್ಞೇ ಸ್ವಾಧ್ಯಾಯೇ ದ್ವಿಜತರ್ಪಣೇ ॥ ೫೪ ॥
ತೀರ್ಥೇ ತಪಸ್ಯುಪಕೃತೌ ಸದಾಚಾರಾದಿ ಕರ್ಮಣಿ ।
ಫಲಾಽಭಿಲಾಷಿಣೀ ಬುದ್ಧಿರ್ನ ಯೇಷಾಂ ತೇ ಜನಾ ಅಮೀ ॥ ೫೫ ॥
ಗಾಯತ್ರೀಜಾಪ್ಯನಿರತಾ ಅಗ್ನಿಹೋತ್ರಪರಾಯಣಾಃ ।
ದ್ವಿಮುಖೀ ಗೋಪ್ರದಾತಾರಃ ಕಪಿಲಾ ದಾನತತ್ಪರಾಃ ॥ ೫೬ ॥
ನಿಸ್ಪೃಹಾಃ ಸೋಮಪಾ ಯೇ ವೈ ದ್ವಿಜಪಾದೋದಪಾಶ್ಚ ಯೇ ।
ಮೃತಾಃ ಸಾರಸ್ವತೇ ತೀರ್ಥೇ ದ್ವಿಜಶುಶ್ರೂಷಕಾಶ್ಚ ಯೇ ॥ ೫೭ ॥

---

೫೨–೫೩. ಪರಬ್ರಹ್ಮನಿರತರೂ, ತಪೋನಿಷ್ಠರೂ, ತಪೋಧನರೂ ಮಾಸೋಪವಾಸ ಷಾಣ್ಮಾಸ್ಯ ಚಾತುರ್ಮಾಸ್ಯವೇ ಮೊದಲಾದ ವ್ರತಗಳನ್ನುಕೈಕೊಂಡವರೂ ಪತಿವ್ರತೆಯರೂ ಬ್ರಹ್ಮಚಾರಿಣಿಯರೂ ಆದ ಸ್ತ್ರೀಯರೂ, ಪರಸ್ತ್ರೀಯರ ವಿಷಯದಲ್ಲಿ ಷಂಢರಾಗಿ ವರ್ತಿಸುವವರಾದ ಇತರ ಮಾನವರೂ ಇಲ್ಲಿ ವಿರಾಜಿಸುತ್ತಿರುವರು. ಇಲ್ಲಿ ನೋಡಿರಿ

೫೪–೫೫ ಇಲ್ಲಿ ಕಾಣುವವರೆಲ್ಲರೂ ತಂದೆತಾಯಿಗಳಲ್ಲಿ ಭಕ್ತಿಯಿಂದ ನಡೆದುಕೊಂಡವರು. ಇವರೆಲ್ಲರೂ ಗೋವುಗಳನ್ನು ಸಂರಕ್ಷಿಸಲು ಹೋಗಿ ಮಡಿದವರು. ವ್ರತಾಚರಣಗಳಲ್ಲಿಯೂ, ದಾನ ಕರ್ಮದಲ್ಲಿಯೂ, ಜಪ ಯಜ್ಞ ವೇದಾಧ್ಯಯನ ಬ್ರಾಹ್ಮಣಪೂಜನಗಳಲ್ಲಿಯೂ ತೀರ್ಥ ಕ್ಷೇತ್ರ ಯಾತ್ರೆ ತಪಸ್ಸು ಪರೋಪಕಾರ ಸದಾಚಾರ ಮುಂತಾದ ಸತ್ಕರ್ಮಗಳಲ್ಲಿ ಫಲಾಕಾಂಕ್ಷೆಯಿಲ್ಲದೆಯೆ ತೊಡಗಿದವರೂ ಇದೊ ಈ ಜನರೇ.

೫೬. ಗಾಯತ್ರೀಜಪದಲ್ಲಿ ನಿರತರೂ ಅಗ್ನಿಹೋತ್ರಪರಾಯಣರೂ ಈಯುತ್ತಿರುವ ಆಕಳನ್ನೂ ಕಪಿಲೆ ಗೋವುಗಳನ್ನೂ ದಾನಮಾಡುವುದರಲ್ಲಿ ತತ್ಪರರೂ ಆದವರು ಇವರು.

೫೭. ಸ್ಪೃಹೆಯಿಲ್ಲದವರೂ, ಯಜ್ಞಗಳನ್ನು ಮಾಡಿ ಸೋಮಪಾನವನ್ನು ಮಾಡಿದವರೂ, ಬ್ರಾಹ್ಮಣ ಚರಣಸೇವಾತತ್ಪರರೂ, ಸರಸ್ವತೀತೀರದಲ್ಲಿ ಅವಸಾನವನ್ನು ಪಡೆದವರೂ, ಬ್ರಾಹ್ಮಣರಿಗೆ ಶುಶ್ರೂಷೆಯನ್ನು ಮಾಡಿದವರೂ ಇವರೇ.

ಪ್ರತಿಗ್ರಹಸಮರ್ಥಾ ಹಿ ಯೇ ಪ್ರತಿಗ್ರಹವರ್ಜಿತಾಃ ।
ತ ಏತೇ ಮತ್ಪ್ರಿಯಾ ವಿಪ್ರಾಸ್ತ್ಯಕ್ತತೀರ್ಥಪ್ರತಿಗ್ರಹಾಃ ॥ ೫೮ ॥
ಪ್ರಯಾಗೇ ಮಾಘಮಾಸೇ ಯೈರುಷಃಸ್ನಾನೇಽಮಲಾತ್ಮಭಿಃ ।
ಮಕರಸ್ಥೇ ರವೌ ಶುದ್ಧಾಸ್ತ ಇಮೇ ಸೂರ್ಯವರ್ಚಸಃ ॥ ೫೯ ॥
ವಾರಾಣಸ್ಯಾಂ ಪಾಂಚನದೇ ತ್ರ್ಯಹಂ ಸ್ನಾತಾಸ್ತು ಕಾರ್ತಿಕೇ ।
ಅಮೀ ತೇ ಶುದ್ಧವಪುಷಃ ಪುಣ್ಯಭಾಜೋಽತಿನಿರ್ಮಲಾಃ ॥ ೬೦ ॥
ಸ್ನಾತ್ವಾ ತು ಮಣಿಕರ್ಣಿಕ್ಯಾಂ ಪ್ರೀಣಿತಾ ಬ್ರಾಹ್ಮಣಾ ಧನೈಃ ।
ತ ಏತೇ ಸರ್ವಭೋಗಾಢ್ಯಾಃ ಕಲ್ಪಂ ಸ್ಥಾಸ್ಯಂತಿ ಮತ್ಪುರೇ ॥ ೬೧ ॥
ತತಃ ಕಾಶೀಂ ಸಮಾಸಾದ್ಯ ತೇನ ಪುಣ್ಯೇನ ನೋದಿತಾಃ ।
ವಿಶ್ವೇಶ್ವರಪ್ರಸಾದೇನ ಮೋಕ್ಷ್ಯಮೇಷ್ಯಂತ್ಯಸಂಶಯಂ ॥ ೬೨ ॥
ಅವಿಮುಕ್ತೇ ಕೃತಂ ಕರ್ಮ ಯದಲ್ಪಮಪಿ ಮಾನವೈಃ ।
ಶ್ರೇಯೋರೂಪಂ ತದ್ವಿಪಾಕೋ ಮೋಕ್ಷೋ ಜನ್ಮಾಂತರೇಷ್ವಪಿ ॥ ೬೩ ॥

---

೫೮. ಪ್ರತಿಗ್ರಹಕ್ಕೆ ತಕ್ಕ ಸಾಮರ್ಥ್ಯವುಳ್ಳವರಾದರೂ ಯಾರಿಂದಲೂ ಯಾವ ದಾನವನ್ನೂ ಕೈಕೊಳ್ಳದಿರುವವರೂ ತೀರ್ಥ ಪ್ರತಿಗ್ರಹಗಳನ್ನು ತೊರೆದು ನನಗೆ ಅತ್ಯಂತ ಪ್ರಿಯತಮರೂ ಆದವರು ಇದೊ ಇಲ್ಲಿ ಕಾಣುತ್ತಿರುವ ಜನರೇ.

೫೯. ಪ್ರಯಾಗದಲ್ಲಿ ಮಾಘಮಾಸದಲ್ಲಿ ಸೂರ್ಯನು ಮಕರ ರಾಶಿಯಲ್ಲಿರುವಾಗ, ಪಂಚಪಂಚಉಷಃಕಾಲದಲ್ಲೆದ್ದು ಸ್ನಾನವನ್ನು ಮಾಡಿದ ಶುದ್ಧಾತ್ಮರೂ ಸೂರ್ಯನಿಗೆ ಸಮಾನವಾದ ವರ್ಚಸ್ಸಿನಿಂದ ಕೂಡಿದವರೂ ಆದವರು ಈ ಜನರೇ.

೬೦. ಕಾಶಿಯಲ್ಲಿಯೂ ಪಂಚನದ ಕ್ಷೇತ್ರದಲ್ಲಿಯೂ ಕಾರ್ತಿಕಮಾಸದಲ್ಲಿ ತ್ರಿಷವಣ ಸ್ನಾನಮಾಡಿ, ಶುದ್ಧದೇಹಿಗಳೂ ಪುಣ್ಯಭಾಗಿಗಳೂ ನಿರ್ಮಲರೂ ಆದವರು ಇಲ್ಲಿ ಕಾಣುತ್ತಿರುವವರು

೬೧. ಮಣಿಕರ್ಣಿಕೆಯಲ್ಲಿ ಸ್ನಾನಮಾಡಿ, ಬ್ರಾಹ್ಮಣರನ್ನು ಧನಕನಕಾದಿಗಳಿಂದ ತೃಪ್ತಿಗೊಳಿಸಿರುವ ಇವರೆಲ್ಲರೂ ಸಮಸ್ತ ಭೋಗಭಾಗ್ಯಸಮನ್ವಿತರಾಗಿ ಕಲ್ಪಾಂತದವರೆಗೂ ನನ್ನ ಪಟ್ಟಣದಲ್ಲಿಯೇ ವಾಸಮಾಡತಕ್ಕವರು.

೬೨. ಇವರೆಲ್ಲರೂ ಆ ತರುವಾಯ ಕಾಶೀಪಟ್ಟಣವನ್ನು ಸೇರಿ ಇವರು ಮಾಡಿದ ಆ ಪುಣ್ಯದಿಂದಲೇ ಪ್ರೇರಿತರಾಗಿ ವಿಶ್ವನಾಥನನ್ನು ಪೂಜಿಸಿ ಆತನ ವರವನ್ನು ಪಡೆದು ಮೋಕ್ಷವನ್ನು ಹೊಂದುತ್ತಾರೆ. ಇದರಲ್ಲಿ ಸಂಶಯವಿಲ್ಲ.

೬೩. ಅವಿಮುಕ್ತಕಕ್ಷೇತ್ರದಲ್ಲಿ ಸ್ವಲ್ಪವಾದ ಸತ್ಕರ್ಮವನ್ನಾಚರಿಸಿದ್ದರೂ ಶ್ರೇಯೋರೂಪವಾದ ಆ ಪುಣ್ಯದ ಪರಿಪಾಕವು ಜನ್ಮಾಂತರಗಳಲ್ಲಿಯೂ ಮೋಕ್ಷವನ್ನೇ ಉಂಟುಮಾಡುತ್ತದೆ.

ಅಹೋ ವೈಶ್ವೇಶ್ವರೇ ಕ್ಷೇತ್ರೇ ಮರಣಾದಪಿ ನೋ ಭಯಂ ।
ಯತ್ರ ಸರ್ವೇ ಪ್ರತೀಕ್ಷಂತೇ ಮೃತ್ಯುಂ ಪ್ರಿಯಮಿವಾಽತಿಥಿಂ ॥ ೬೪ ॥
ಬ್ರಾಹ್ಮಣೇಭ್ಯಃ ಕುರುಕ್ಷೇತ್ರೇ ಯೈರ್ದತ್ತಂ ವಸು ನಿರ್ಮಲಂ ।
ನಿರ್ಮಲಾಂಗಾಸ್ತ ಏತೇ ವೈ ತಿಷ್ಠಂತಿ ಮಮ ಸನ್ನಿಧೌ ॥ ೬೫ ॥
ಪಿತಾಮಹಂ ಸಮಾಸಾದ್ಯ ಗಯಾಯಾಂ ಯೈಃ ಪಿತಾಮಹಾಃ ।
ತರ್ಪಿತಾ ಬ್ರಾಹ್ಮಣಮುಖೇ ತೇಷಾಮೇತೇ ಪಿತಾಮಹಾಃ ॥ ೬೬ ॥
ನ ಸ್ನಾನೇನ ನ ದಾನೇನ ನ ಜಪೇನ ನ ಪೂಜಯಾ ।
ಮಲ್ಲೋಕಃ ಪ್ರಾಪ್ಯತೇ ದೇವಾಃ ಪ್ರಾಪ್ಯತೇ ದ್ವಿಜತರ್ಪಣಾತ್ ॥ ೬೭ ॥
ಸೋಪಸ್ಕರಾಣಿ ವೇಶ್ಮಾನಿ ಮುಸಲೋಲೂಖಲಾದಿಭಿಃ ।
ಯೈರ್ದತ್ತಾನಿ ಸಶಯ್ಯಾನಿ ತೇಷಾಂ ಹರ್ಮ್ಯಾಣ್ಯಮೂನಿ ವೈ ॥ ೬೮ ॥
ಬ್ರಹ್ಮಶಾಲಾಂ ಕಾರಯಂತಿ ವೇದಮಧ್ಯಾಪಯಂತಿ ಚ ।
ವಿದ್ಯಾದಾನಂ ಚ ಯೇ ಕುರ್ಯುಃ ಪುರಾಣಂ ಶ್ರಾವಯಂತಿ ಚ ॥ ೬೯ ॥
ಪುರಾಣಾನಿ ಚ ಯೇ ದದ್ಯುಃ ಪುಸ್ತಕಾನಿ ದದತ್ಯಪಿ ।
ಧರ್ಮಶಾಸ್ತ್ರಾಣಿ ಯೇ ದದ್ಯುಸ್ತೇಷಾಂ ವಾಸೋಽತ್ರ ಮೇ ಪುರೇ ॥ ೭೦ ॥

---

೬೪. ಆಹ! ವಿಶ್ವೇಶ್ವರನ ಕ್ಷೇತ್ರವಾಗಿರುವ ಕಾಶಿಯಲ್ಲಿ ಮರಣದಿಂದಲೂ ಕೂಡ ಭಯವೆಂಬುದಿರುವುದಿಲ್ಲ. ಅಲ್ಲಿ ವಾಸಮಾಡುತ್ತಿರುವ ಮತ್ತು ಯಾತ್ರೆಗೆಯ್ಯುವ ಜನವೆಲ್ಲ ಮರಣವನ್ನು ಅತ್ಯಂತ ಪ್ರೀತಿಪಾತ್ರನಾದ ಅತಿಥಿಯನ್ನೆಂತೊ ಅಂತು ನಿರೀಕ್ಷಿಸುತ್ತಾರೆ.

೬೫. ಅಯ್ಯಾ ದೇವತೆಗಳಿರಾ! ಕುರುಕ್ಷೇತ್ರದಲ್ಲಿ ಬ್ರಾಹ್ಮಣರಿಗೆ ನಿರ್ಮಲವಾದ ಧನಕನಕಾದಿಗಳನ್ನು ದಾನಮಾಡಿದ ಶುದ್ಧ ದೇಹಿಗಳು ಇವರೇ. ಇವರು ಯಾವಾಗಲೂ ನನ್ನ ಸನ್ನಿಧಿಯಲ್ಲೇ ಇರುತ್ತಾರೆ.

೬೬. ಗಯೆಯಲ್ಲಿ ಪಿತಾಮಹನಾದ ನನ್ನನ್ನು ಹೊಂದಿ ಯಾರು ತಮ್ಮ ಪಿತಾಮಹರನ್ನು ಬ್ರಾಹ್ಮಣಭೋಜನ ಪಿಂಡಪ್ರದಾನಗಳಿಂದ ತೃಪ್ತಿಗೊಳಿಸಿದ್ದಾರೆಯೊ ಅವರ ಪಿತಾಮಹರೆಲ್ಲರೂ ಇವರೇ.

೬೭. ಎಲೈ ದೇವತೆಗಳಿರಾ! ಸ್ನಾನ ದಾನ ಜಪ ಪೂಜೆ ಇವುಗಳಿಂದ ನನ್ನ ಈ ಸತ್ಯಲೋಕವನ್ನು ಪಡೆಯಲಾಗುವುದಿಲ್ಲ. ಇದು ಬ್ರಾಹ್ಮಣರನ್ನು ತೃಪ್ತಿಪಡಿಸುವುದರಿಂದಲೇ ಪಡೆಯತಕ್ಕದ್ದು.

೬೮–೭೦. ಒರಳು ಒನಕೆ ಮೊದಲಾದ ಗೃಹೋಪಕರಣಗಳಿಂದ ತುಂಬಿದ ಶಯನಸಮೇತವಾದ ಗೃಹಗಳನ್ನು ದಾನಮಾಡಿದ ಪುಣ್ಯಾತ್ಮರ ದಿವ್ಯ ಭವನಗಳು ಇವೇ. ವೇದ ಪಾಠಶಾಲೆಗಳನ್ನು ಕಟ್ಟಿಸುವವರೂ, ವೇದಾಧ್ಯಯನ ಮಾಡಿಸುವವರೂ, ವಿದ್ಯಾದಾನವನ್ನು ಮಾಡುವವರೂ, ಪುರಾಣಶ್ರವಣವನ್ನು

**ಯಜ್ಞಾರ್ಥಂ ಚ ವಿವಾಹಾರ್ಥಂ ವ್ರತಾರ್ಥಂ ಬ್ರಾಹ್ಮಣಾಯ ವೈ ।**
**ಅಖಂಡಂ ವಸು ಯೋ ದದ್ಯಾಸ್ತೇಽತ್ರ ಸ್ಯುರ್ವಸುವರ್ಚಸಃ ॥ ೨೧ ॥**
**ಆರೋಗ್ಯಶಾಲಾಂ ಯಃ ಕುರ್ಯಾದ್ವೈದ್ಯಪೋಷಣತತ್ಪರಃ ।**
**ಆಕಲ್ಪಮತ್ರ ವಸತಿ ಸರ್ವಭೋಗಸಮನ್ವಿತಃ ॥ ೨೨ ॥**
**ಮುಕ್ತೀಕುರ್ವಂತಿ ತೀರ್ಥಾನಿ ಯೇ ಚ ದುಷ್ಟಾವರೋಧತಃ ।**
**ಮಮಾವರೋಧೇ ತೇ ಮಾನ್ಯಾ ಔರಸಾಸ್ತನಯಾ ಇವ ॥ ೨೩ ॥**
**ವಿಷ್ಣೋರ್ವಾ ಮಮ ವಾ ಶಂಭೋರ್ಬ್ರಾಹ್ಮಣಾ ಏವ ಸುಪ್ರಿಯಾಃ ।**
**ತೇಷಾಂ ಮೂರ್ತ್ಯಾ ವಯಂ ಸಾಕ್ಷಾದ್ವಿಚರಾಮೋ ಮಹೀತಲೇ ॥ ೨೪ ॥**
**ಬ್ರಾಹ್ಮಣಾಶ್ಚೈವ ಗಾವಶ್ಚ ಕುಲಮೇಕಂ ದ್ವಿಧಾಕೃತಂ ।**
**ಏಕತ್ರ ಮಂತ್ರಾಸ್ತಿಷ್ಠಂತಿ ಹವಿರೇಕತ್ರ ತಿಷ್ಠತಿ ॥ ೨೫ ॥**
**ಬ್ರಾಹ್ಮಣಾ ಜಂಗಮಂ ತೀರ್ಥಂ ನಿರ್ಮಿತಂ ಸಾರ್ವಭೌಮಿಕಂ ।**
**ಯೇಷಾಂ ವಾಕ್ಯೋದಕೇನೈವ ಶುದ್ಧಂತಿ ಮಲಿನಾ ಜನಾಃ ॥ ೨೬ ॥**

---

ಎಸಗುವವರೂ, ಅಷ್ಟಾದಶ ಪುರಾಣಗಳ ಮತ್ತು ಧರ್ಮಶಾಸ್ತ್ರಗಳ ಪುಸ್ತಕಗಳನ್ನು ದಾನಮಾಡುವವರೂ ನನ್ನ ಲೋಕದಲ್ಲಿರುತ್ತಾರೆ.

೨೧. ಯಜ್ಞಕ್ಕಾಗಿಯೂ, ಮದುವೆಗಾಗಿಯೂ, ವ್ರತಕ್ಕೋಸುಗವೂ ಬ್ರಾಹ್ಮಣನಿಗೆ ಅಖಂಡವಾದ ಧನವನ್ನು ಕೊಡುವವರು ಇಲ್ಲಿ ನನ್ನ ಲೋಕದಲ್ಲಿ ವಸುಗಳಿಗೆ ಸಮಾನವಾದ ತೇಜಸ್ಸಂಪನ್ನರಾಗಿ ವಾಸಮಾಡುತ್ತಾರೆ.

೨೨. ಯಾವನಾದರೆ ಆರೋಗ್ಯಶಾಲೆಗಳನ್ನು ನಿರ್ಮಿಸಿ ವೈದ್ಯನನ್ನು ಪೋಷಿಸುವುದರಲ್ಲಿ ತತ್ಪರನಾಗಿರುವನೊ ಅವನು ಸಕಲ ಭೋಗಸಮನ್ವಿತನಾಗಿ ಕಲ್ಪಾಂತದವರೆಗೂ ಈ ನನ್ನ ಲೋಕದಲ್ಲಿ ವಾಸವಾಗಿರುತ್ತಾನೆ

೨೩. ಪವಿತ್ರವಾದ ತೀರ್ಥಗಳನ್ನು ದುಷ್ಟರ ಕೋಟಲೆಗಳಿಂದ ಬಿಡುಗಡೆ ಮಾಡುವವರು ನನ್ನ ಅಂತಃಪುರದಲ್ಲಿ ನನ್ನ ಸ್ವಂತಮಕ್ಕಳಂತೆಯೆ ಮಾನ್ಯರಾಗಿರುತ್ತಾರೆ.

೨೪–೨೫. ವಿಷ್ಣುವಿಗಾಗಲಿ ನನಗಾಗಲಿ ಶಂಭುವಿಗೇ ಆಗಲಿ ಬ್ರಾಹ್ಮಣರೇ ಅತ್ಯಂತ ಪ್ರಿಯರು. ನಾವು ಮೂವರೂ ಅವರ ರೂಪದಿಂದಲೆ ಮಹೀತಲದಲ್ಲಿ ಸಂಚಾರಮಾಡುತ್ತಿರುತ್ತೇವೆ. ಒಂದೇ ಕುಲವೇ ಬ್ರಾಹ್ಮಣರು ಗೋವುಗಳು ಎಂದು ವಿಭಾಗಮಾಡಲಾಯಿತು. ಬ್ರಾಹ್ಮಣರಲ್ಲಿ ಮಂತ್ರಗಳೂ, ಗೋವುಗಳಲ್ಲಿ ಹವಿಸ್ಸೂ ನೆಲಸಿರುತ್ತವೆ.

೨೬. ಬ್ರಾಹ್ಮಣರು ಸಮಸ್ತಭೂಮಂಡಲದಲ್ಲಿಯೂ ಜಂಗಮತೀರ್ಥಗಳಾಗಿ ನಿರ್ಮಿತರಾಗಿದ್ದಾರೆ. ಮಲಿನರಾದ ಜನರೆಲ್ಲರೂ ಅವರ ವಾಕ್ಯಾಮೃತದಿಂದಲೇ ಶುದ್ಧರಾಗುತ್ತಾರೆ.

ಗಾವಃ ಪವಿತ್ರಮತುಲಂ ಗಾವೋ ಮಂಗಲಮುತ್ತಮಂ ।
ಯಾಸಾಂ ಖುರೋತ್ಥಿತೋ ರೇಣುರ್ಗಂಗಾವಾರಿಸಮೋ ಭವೇತ್ ॥೭೭॥
ಶೃಂಗಾಗ್ರೇ ಸರ್ವತೀರ್ಥಾನಿ ಖುರಾಗ್ರೇ ಸರ್ವಪರ್ವತಾಃ ।
ಶೃಂಗಯೋರಂತರೇ ಯಸ್ಯಾಃ ಸಾಕ್ಷಾದ್ಗೌರೀ ಮಹೇಶ್ವರೀ ॥ ೭೮ ॥
ದೀಯಮಾನಾಂ ಚ ಗಾಂ ದೃಷ್ಟ್ವಾ ನೃತ್ಯಂತಿ ಪ್ರಪಿತಾಮಹಾಃ ।
ಪ್ರೀಯಂತೇ ಋಷಯಃ ಸರ್ವೇ ತುಷ್ಯಾಮೋ ದೈವತೈಃ ಸಹ ॥ ೭೯ ॥
ರೋರೂಯಂತ ಚ ಪಾಪಾನಿ ದಾರಿದ್ರ್ಯಂ ವ್ಯಾಧಿಭಿಃ ಸಹ ।
ಧಾತ್ರ್ಯಃ ಸರ್ವಸ್ಯ ಲೋಕಸ್ಯ ಗಾವೋ ಮಾತೇವ ಸರ್ವಥಾ ॥ ೮೦ ॥
ನಾಂ ಸ್ತುತ್ವಾ ನಮಸ್ಕೃತ್ಯ ಕೃತ್ವಾ ಚೈವ ಪ್ರದಕ್ಷಿಣಾಂ ।
ಪ್ರದಕ್ಷಿಣೀಕೃತಾ ತೇನ ಸಪ್ತದ್ವೀಪಾ ವಸುಂಧರಾ ॥ ೮೧ ॥
ಯಾ ಲಕ್ಷ್ಮೀಃ ಸರ್ವಭೂತಾನಾಂ ಯಾ ದೇವೇಷು ವ್ಯವಸ್ಥಿತಾ ।
ಧೇನುರೂಪೇಣ ಸಾ ದೇವೀ ಮಮ ಪಾಪಂ ವ್ಯಪೋಹತು ॥ ೮೨ ॥

---

೭೭. ಗೋವುಗಳು ಬಹಳ ಪವಿತ್ರಗಳಾದವು. ಅವು ಬಹಳ ಮಂಗಳಕರಗಳಾದವು. ಅವಗಳ ಗೊರಸುಗಳಿಂದೆದ್ದ ದೂಳು ಗಂಗಾಜಲಕ್ಕೆ ಸಮಾನವಾಗಿರುತ್ತವೆ.

೭೮. ಆ ಗೋವುಗಳ ಶೃಂಗಾಗ್ರದಲ್ಲಿ ಸಮಸ್ತ ತೀರ್ಥಗಳೂ, ಗೊರಸಿನ ತುದಿಯಲ್ಲಿ ಸಮಸ್ತ ಪರ್ವತಗಳೂ, ಕೋಡುಗಳ ನಡುವೆ ಗಿರಿರಾಜ ತನೂಭವೆಯಾದ ಸಾಕ್ಷಾತ್ ಮಹೇಶ್ವರಿಯೂ ನೆಲಸಿರುತ್ತಾರೆ.

೭೯. ಗೋದಾನ ಮಾಡುತ್ತಿರುವುದನ್ನು ಕಂಡು ಪ್ರಪಿತಾಮಹರೆಲ್ಲರೂ ಸಂತೋಷದಿಂದ ಕುಣಿದಾಡುತ್ತಾರೆ. ಋಷಿಗಳೆಲ್ಲರೂ ತೃಪ್ತಿಗೊಳ್ಳುತ್ತಾರೆ. ತ್ರಿಮೂರ್ತಿಗಳಾದ ನಾವೂ ಸಮಸ್ತ ದೇವತೆಗಳೊಡಗೂಡಿ ಸಂತೋಷಗೊಳ್ಳುತ್ತೇವೆ

೮೦. ಸಕಲ ಪಾಪಗಳೂ ದಾರಿದ್ರ್ಯವೂ ರೋಗಗಳೊಡಗೂಡಿ, ಗೋದಾನ ಮಾಡುತ್ತಿರುವುದನ್ನು ಕಂಡೊಡನೆಯೆ ಭಯದಿಂದ ಅರಚಿಕೊಳ್ಳುತ್ತವೆ. ಗೋವುಗಳು ಸಮಸ್ತ ಲೋಕಗಳಿಗೂ ಪೋಷಣಮಾಡುವ ತಾಯಿಗಳು.

೮೧. ಗೋವುಗಳನ್ನು ಸ್ತುತಿಸಿ ನಮಸ್ಕರಿಸಿ ಪ್ರದಕ್ಷಿಣೆಯನ್ನು ಮಾಡಿದರೆ ಹಾಗೆ ಮಾಡಿದವನು ಸಪ್ತದ್ವೀಪವತಿಯಾದ ಈ ವಸುಂಧರೆಯನ್ನೇ ಪ್ರದಕ್ಷಿಣೆ ಮಾಡಿದಂತಾಗುತ್ತದೆ.

೮೨. ಸಮಸ್ತ ಭೂತಗಳಿಗೂ ಆದಿಲಕ್ಷ್ಮಿಯಾಗಿ ದೇವತೆಗಳಲ್ಲಿ ವ್ಯವಸ್ಥೆಗೊಂಡು ಗೋರೂಪದಿಂದಿರುವ ಆ ದೇವಿಯು ದಾನಮಾಡುವವನ ಪಾಪವನ್ನು ಕಳೆಯಲಿ.

ವಿಷ್ಣೋರ್ವಕ್ಷಸಿ ಯಾ ಲಕ್ಷ್ಮೀಃ ಸ್ವಾಹಾ ಚೈವ ವಿಭಾವಸೋಃ ।
ಸ್ವಧಾ ಯಾ ಪಿತೃಮುಖ್ಯಾನಾಂ ಸಾಧೇನುರ್ವರದಾ ಸದಾ ॥ ೮೩ ॥
ಗೋಮಯಂ ಯಮುನಾ ಸಾಕ್ಷಾದ್ಗೋಮೂತ್ರಂ ನರ್ಮದಾ ಶುಭಾ ।
ಗಂಗಾಕ್ಷೀರಂ ತು ಯಾಸಾಂ ವೈ ಕಿಂ ಪವಿತ್ರಮತಃ ಪರಂ ॥ ೮೪ ॥
ಗವಾಮಂಗೇಷು ತಿಷ್ಠಂತಿ ಭುವನಾನಿ ಚತುರ್ದಶ ।
ಯಸ್ಮಾತ್ತಸ್ಮಾಚ್ಛಿವಂ ಮೇ ಸ್ಯಾದಿಹ ಲೋಕೇ ಪರತ್ರಚ ॥ ೮೫ ॥
ಇತಿ ಮಂತ್ರಂ ಸಮುಚ್ಚಾರ್ಯ ಧೇನೂರ್ವಾ ಧೇನುಮೇವ ವಾ ।
ಯೋ ದದ್ಯಾದ್ದ್ವಿಜವರ್ಯಾಯ ಸ ಸರ್ವೇಭ್ಯೋ ವಿಶಿಷ್ಯತೇ ॥ ೮೬ ॥
ಮಯಾ ಚ ವಿಷ್ಣುನಾ ಸಾರ್ಧಂ ಶಿವೇನ ಚ ಮಹರ್ಷಿಭಿಃ ।
ವಿಚಾರ್ಯ ಗೋಗುಣಾನ್ನಿತ್ಯಂ ಪ್ರಾರ್ಥನೇತಿ ವಿಧೀಯತೇ ॥ ೮೭ ॥
ಗಾವೋ ಮೇ ಪುರತಃ ಸಂತು ಗಾವೋ ಮೇ ಸಂತು ಪೃಷ್ಠತಃ ।
ಗಾವೋ ಮೇ ಹೃದಯೇ ಸಂತು ಗವಾಂ ಮಧ್ಯೇವಸಾಮ್ಯಹಂ ॥ ೮೮ ॥

---

೮೩. ವಿಷ್ಣುವಕ್ಷಸ್ಥಲದಲ್ಲಿ ನೆಲಸಿರುವ ಲಕ್ಷ್ಮಿಯೂ, ವಿಭಾವಸುವಿನ ವಕ್ಷಸ್ಥಲದಲ್ಲಿ ನೆಲಸಿರುವ ಸ್ವಾಹಾದೇವಿಯೂ, ಮುಖ್ಯರಾದ ಪಿತೃದೇವತೆಗಳಿಗೆ ಅತ್ಯಂತ ಪ್ರಿಯಳಾದ ಸ್ವಧಾದೇವಿಯೂ ಆಗಿರುವ ಗೋಮಾತೆಯು ದಾತೃವಿಗೆ ಎಲ್ಲ ಕಾಲಗಳಲ್ಲಿಯೂ ವರಪ್ರದಳಾಗಿರಲಿ.

೮೪. ಗೋಮಯವು ಸಾಕ್ಷಾತ್ ಯಮುನಾನದಿಯು. ಗೋವಿನ ಗಂಜಲವು ಶುಭಕರವಾದ ನರ್ಮದಾನದಿಯು. ಕ್ಷೀರವೇ ಗಂಗಾನದಿಯು. ಇಂತಹ ಗೋವುಗಳಿಗಿಂತಲೂ ಪವಿತ್ರವಾದುದು ಏನುತಾನೆ ಇರುವುದು ?

೮೫. ಗೋವುಗಳ ಅಂಗಗಳಲ್ಲಿ ಹದಿನಾಲ್ಕು ಲೋಕಗಳೂ ನೆಲಸಿವೆ. ಆದುದರಿಂದ ಆ ಗೋವುಗಳೇ ಈ ಲೋಕದಲ್ಲಿಯೂ ನನಗೆ ಮಂಗಳವನ್ನುಂಟು ಮಾಡಲಿ.

೮೬. ಎಂಬ ಈ ಮಂತ್ರವನ್ನು ಹೇಳಿಕೊಂಡು ಗೋವುಗಳನ್ನಾಗಲಿ ಗೋವನ್ನಾಗಲಿ ಬ್ರಾಹ್ಮಣಶ್ರೇಷ್ಠನಿಗೆ ದಾನಮಾಡುವಾತನು ಎಲ್ಲರಿಗಿಂತಲೂ ಮೇಲೆನಿಸುತ್ತಾನೆ.

೮೭. ನಾನು ಶಿವವಿಷ್ಣುಗಳಿಂದಲೂ, ಮಹರ್ಷಿಗಳಿಂದಲೂ ಕೂಡಿದವನಾಗಿ ಗೋವಿನ ಗುಣಗಳನ್ನು ವಿಚಾರಮಾಡಿ ಪ್ರತಿನಿತ್ಯವೂ ಅವುಗಳನ್ನು ಈರೀತಿ ಪ್ರಾರ್ಥಿಸುತ್ತೇನೆ.

೮೮. "ಗೋವುಗಳು ನನ್ನ ಮುಂಗಡೆಯೂ, ಹಿಂಗಡೆಯೂ ಹೃದಯ ಮಧ್ಯದಲ್ಲಿಯೂ ನೆಲಸಿರಲಿ. ನಾನು ಗೋವುಗಳ ಮಧ್ಯದಲ್ಲಿಯೇ ವಾಸಮಾಡುತ್ತೇನೆ.

ನೀರಾಜಯತಿ ಯೋಽಂಗಾನಿ ಗವಾಂ ಪುಚ್ಛೇನ ಭಾಗ್ಯವಾನ್ ।
ಅಲಕ್ಷ್ಮೀಃ ಕಲಹೋ ರೋಗಾಸ್ತಸ್ಯಾಂಗಾದ್ಯಾಂತಿ ದೂರತಃ ॥ ೮೯ ॥
ಗೋಭಿರ್ವಿಪ್ರೈಶ್ಚ ವೇದೈಶ್ಚ ಸತೀಭಿಃ ಸತ್ಯವಾದಿಭಿಃ ।
ಅಲುಬ್ಧೈರ್ದಾನಶೀಲೈಶ್ಚ ಸಪ್ತಭಿರ್ಧಾರ್ಯತೇ ಮಹೀ ॥ ೯೦ ॥
ಮಮ ಲೋಕಾತ್ಪರೋ ಲೋಕೋ ವೈಕುಂಠ ಇತಿ ಗೀಯತೇ ।
ತಸ್ಯೋಪರಿಷ್ಟಾತ್ಕೌಮಾರ ಉಮಾಲೋಕಸ್ತತಃ ಪರಂ ॥ ೯೧ ॥
ಶಿವಲೋಕಸ್ತದುಪರಿ ಗೋಲೋಕಸ್ತತ್ಸಮೀಪತಃ ।
ಗೋಮಾತರಃ ಸುಶೀಲಾಢ್ಯಾಸ್ತತ್ರ ಸಂತಿ ಶಿವಪ್ರಿಯಾಃ ॥ ೯೨ ॥
ಗವಾಂ ಶುಶ್ರೂಷಕಾ ಯೇ ಚ ಗೋಪ್ರದಾ ಯೇ ಚ ಮಾನವಾಃ ।
ವಿಶಾಮನ್ಯತಮೇ ಲೋಕೇ ತೇ ಸ್ಯುಃ ಸರ್ವಸಮೃದ್ಧಯಃ ॥ ೯೩ ॥
ಯತ್ರ ಕ್ಷೀರವಹಾ ನದ್ಯೋ ಯತ್ರ ಪಾಯಸಕರ್ದಮಾಃ ।
ನ ಜರಾ ಬಾಧತೇ ಯತ್ರ ತತ್ರ ಗಚ್ಛಂತಿ ಗೋಪ್ರದಾಃ ॥ ೯೪ ॥

---

೮೯ ಯಾವನಾದರೆ ಗೋವುಗಳ ಬಾಲದಿಂದ ತನ್ನ ಅಂಗವನ್ನು ನಿವಾಳಿಸಿ ಕೊಳ್ಳುವನೊ ಆ ಭಾಗ್ಯವಂತನ ವಿಷಯದಲ್ಲಿ ದರಿದ್ರಲಕ್ಷ್ಮಿಯೂ ಕಲಹವೂ ರೋಗಗಳೂ ದೂರವಾಗಿ ಹೋಗುತ್ತವೆ.

೯೦. ಗೋವುಗಳು, ಬ್ರಾಹ್ಮಣರು, ವೇದಗಳು, ಪತಿವ್ರತೆಯರು, ಸತ್ಯವಂತರು, ಲೋಭವಿಲ್ಲದವರು, ದಾನಶೀಲರು ಎಂಬ ಈ ಏಳು ಮಂದಿಯಿಂದಲೂ ಈ ಭೂಮಂಡಲವು ಅನುಭವಿಸಲ್ಪಡುತ್ತಿದೆ.

೯೧. ಎಲ್ಲೈ ದೇವತೆಗಳಿರಾ, ನನ್ನ ಲೋಕವಾದ ಈ ಸತ್ಯಲೋಕದ ಮೇಲ್ಭಾಗದಲ್ಲಿ ವೈಕುಂಠಲೋಕವಿರುವುದು. ಅದಕ್ಕೂ ಮೇಲೆ ಕೌಮಾರ ಲೋಕವೂ ಆಮೇಲೆ ಉಮಾಲೋಕವೂ ಅದಾದ ಬಳಿಕ ಶಿವಲೋಕವೂ ಅದರ ಬಳಿಯಲ್ಲಿಯೆ ಗೋಲೋಕವೂ ಸಲಸಿರುವುವು

೯೨. ಸದ್ಗುಣಭರಿತೆಯರಾದ ಗೋಮಾತೆಯರು ಅಲ್ಲಿ ಶಿವನಿಗೆ ಅತ್ಯಂತ ಪ್ರಿಯರೆನಿಸಿ ವಾಸಮಾಡುತ್ತಿರುವರು.

೯೩. ಗೋವುಗಳನ್ನು ಶುಶ್ರೂಷೆಮಾಡಿದವರೂ ಗೋದಾನ ಮಾಡಿದವರೂ ಆದ ಮಾನವರು ಈ ಗೋಲೋಕದಲ್ಲಿ ಸರ್ವ ಸಮೃದ್ಧಿಗಳಿಂದ ಕೂಡಿ ವಾಸ ಮಾಡುತ್ತಾರೆ.

೯೪. ಈ ಗೋಲೋಕದಲ್ಲಿ ನದಿಗಳೆಲ್ಲವೂ ಹಾಲನ್ನು ಹರಿಯಿಸುವವುಗಳೇ. ಅಲ್ಲಿನ ನೆಲವೆಲ್ಲ ಪಾಯಸದ ಕೆಸರಿನಿಂದ ತುಂಬಿದುದೇ. ಅಲ್ಲಿ ಮುಪ್ಪು ಬಾಧಿಸುವುದಿಲ್ಲ. ಗೋದಾನಮಾಡಿದ ಪುಣ್ಯಾತ್ಮರು ಅಲ್ಲಿಗೇ ಹೋಗುತ್ತಾರೆ.

ಶ್ರುತಿಸ್ಮೃತಿಪುರಾಣಜ್ಞಾ ಬ್ರಾಹ್ಮಣಾಃ ಪರಿಕೀರ್ತಿತಾಃ ।
ತದುಕ್ತಾಚಾರಚರಣಾ ಇತರೇ ನಾಮಧಾರಕಾಃ ॥ ೯೫ ॥
ಶ್ರುತಿಸ್ಮೃತೀತು ನೇತ್ರೇದ್ವೇ ಪುರಾಣಂ ಹೃದಯಂ ಸ್ಮೃತಂ ।
ಶ್ರುತಿಸ್ಮೃತಿಭ್ಯಾಂ ಹೀನೋಽಂಧಃ ಕಾಣಃ ಸ್ಯಾದೇಕಯಾ ವಿನಾ ॥ ೯೬ ॥
ಪುರಾಣಹೀನಾದ್ದೃಚ್ಛೂನ್ಯಾತ್ಕಾಣಾಂಧಾವಪಿ ತೌವರೌ ।
ಶ್ರುತಿ ಸ್ಮೃತ್ಯುದಿತೋ ಧರ್ಮಃ ಪುರಾಣೇ ಪರಿಗೀಯತೇ ॥ ೯೭ ॥
ತದ್ಬ್ರಾಹ್ಮಣಾಯ ಗೌರ್ದೇಯಾ ಸರ್ವತ್ರ ಸುಖಮಿಚ್ಛತಾ ।
ನ ದೇಯಾ ದ್ವಿಜಮಾತ್ರಾಯ ದಾತಾರಂ ಸೋಽಪ್ಯಧೋ ನಯೇತ್ ॥೯೮॥
ಯಸ್ಯ ಧರ್ಮೇಽಸ್ತಿ ಜಿಜ್ಞಾಸಾ ಯಸ್ಯ ಪಾಪಾದ್ಭಯಂ ಮಹತ್ ।
ಶ್ರೋತವ್ಯಾನಿ ಪುರಾಣಾನಿ ಧರ್ಮಮೂಲಾನಿ ತೇನ ವೈ ॥ ೯೯ ॥
ಚತುರ್ದಶಸು ವಿದ್ಯಾಸು ಪುರಾಣಂ ದೀಪ ಉತ್ತಮಃ ।
ಅಂಧೋಽಪಿ ನ ತದಾಲೋಕಾತ್ಸಂಸಾರಾಬ್ಧೌ ಕ್ವಚಿತ್ಪತೇತ್ ॥ ೧೦೦ ॥

---

೯೫. ಶ್ರುತಿಸ್ಮೃತಿ ಪುರಾಣಗಳನ್ನು ಬಲ್ಲವರು ಬ್ರಾಹ್ಮಣರೆಂದು ಪರಿಕೀರ್ತಿತರಾಗಿದ್ದಾರೆ. ಆ ಶ್ರುತಿ ಸ್ಮೃತಿ ಪುರಾಣಗಳಲ್ಲಿ ಉಕ್ತವಾಗಿರುವ ಸತ್ಕರ್ಮಾನುಷ್ಠಾನವನ್ನು ಅವರು ಮಾಡುತ್ತಾರೆ. ಇತರರು ಹೆಸರಿಗೆ ಮಾತ್ರ ಬ್ರಾಹ್ಮಣರು.

೯೬. ಶ್ರುತಿಸ್ಮೃತಿಗಳು ಎರಡು ಕಣ್ಣುಗಳಿದ್ದಂತೆ ಪುರಾಣವು ಹೃದಯವೆನಿಸಿದೆ. ಶ್ರುತಿಸ್ಮೃತಿ ವಿಹೀನನಾದವನು ಕುರುಡನೆನಿಸುತ್ತಾನೆ. ಇವುಗಳಲ್ಲಿ ಯಾವುದಾದರೂ ಒಂದಿಲ್ಲದಿದ್ದರೆ ಒಕ್ಕಣ್ಣನೆನಿಸುತ್ತಾನೆ.

೯೭. ಪುರಾಣ ಹೀನರಾದವರು ಹೃದಯವೇ ಇಲ್ಲದವರು, ಇವರಿಗಿಂತ ಕುರುಡರು ಒಕ್ಕಣ್ಣರು ಎಷ್ಟೋ ಮೇಲು. ಶ್ರುತಿ ಸ್ಮೃತಿಗಳಲ್ಲಿ ಹೇಳಿರುವ ಧರ್ಮವು ಪುರಾಣದಲ್ಲಿಯೂ ಹೇಳಲ್ಪಡುತ್ತದೆ.

೯೮. ಆದುದರಿಂದ ಶ್ರುತಿಸ್ಮೃತಿ ಪುರಾಣಗಳನ್ನು ಬಲ್ಲವನಾದ ಬ್ರಾಹ್ಮಣನಿಗೆ ಎಲ್ಲೆಡೆಗಳಲ್ಲಿಯೂ ಸುಖವನ್ನೇ ಬಯಸುವ ದಾತೃವು ಗೋವನ್ನು ದಾನ ಮಾಡಬೇಕು. ಕೇವಲ ನಾಮಧಾರಿಯಾದ ಬ್ರಾಹ್ಮಣನಿಗೆ ದಾನಮಾಡತಕ್ಕದ್ದಲ್ಲ. ಆ ದಾನವು ದಾತೃವನ್ನೇ ಅಧಃಪತನಕ್ಕೆ ತುತ್ತಾಗಿಸುತ್ತದೆ.

೯೯. ಯಾವನಿಗೆ ಧರ್ಮದಲ್ಲಿ ಜಿಜ್ಞಾಸೆಯಿರುತ್ತದೆಯೊ, ಯಾವನಿಗೆ ಮಹತ್ತರವಾದ ಪಾಪಭೀತಿಯಿರುತ್ತದೆಯೊ ಅವನು ಧರ್ಮಕ್ಕೆ ಮೂಲಸ್ಥಾನಭೂತವಾದ ಪುರಾಣಗಳನ್ನು ಕೇಳತಕ್ಕದ್ದು.

೧೦೦. ಹದಿನಾಲ್ಕು ವಿದ್ಯೆಗಳಿಗೂ ಪುರಾಣವು ಉತ್ತಮವಾದ ದೀಪವೆನಿಸಿರುತ್ತದೆ. ಕುರುಡನೂ ಸಹ ಆ ಪುರಾಣ ದೀಪದರ್ಶನದಿಂದ ಸಂಸಾರ ಸಾಗರದಲ್ಲಿ ಎಂದಿಗೂ ಬೀಳುವುದಿಲ್ಲ.

ಶ್ರೋತವ್ಯಾನಿ ಪುರಾಣಾನಿ ವಸ್ತವ್ಯಂ ಜಾಹ್ನವೀತಟೇ ।
ತರ್ಪಣೀಯಾ ದ್ವಿಜಾ ನಿತ್ಯಂ ಮಮ ಲೋಕೇಪ್ಸುಭಿಃ ಸದಾ ॥ ೧೦೧ ॥
ಇತ್ಯುದ್ದೇಶಾನ್ಮಯಾ ಖ್ಯಾತಾ ಸತ್ಯಲೋಕವ್ಯವಸ್ಥಿತಿಃ ।
ಅಭಯಂ ಯದ್ಭಯಾರ್ತಾನಾಂ ನ ಭೇತವ್ಯಂ ಚ ಹೇ ಸುರಾಃ ॥ ೧೦೨ ॥
ಸ್ಪರ್ಧತೇ ಮೇರುಣಾ ವಿಂಧ್ಯೋ ಬ್ರಧ್ನಾಧ್ವಪರಿರೋಧಕೃತ್ ।
ತದರ್ಥಮಾಗತಾ ಯೂಯಂ ತದುಪಾಯಂ ದಿಶಾಮಿ ವಃ ॥ ೧೦೩ ॥
ಅಸ್ತ್ಯಗಸ್ತ್ಯಸ್ತಪಸ್ಯಮಾನಸ್ತಪ ಉಗ್ರಂ ಮಹಾತಪಾಃ ।
ಮೈತ್ರಾವರುಣಿರಾಧಾಯ ಚಿತ್ತಂ ವಿಶ್ವೇಶ್ವರೇ ವಿಭೌ ॥ ೧೦೪ ॥
ಅವಿಮುಕ್ತೇ ಮಹಾಕ್ಷೇತ್ರೇ ಸರ್ವೇಷಾಂ ಮುಕ್ತಿಹೇತುಕೇ ।
ತಾರಕಸ್ಯೋಪದೇಶಾರ್ಥಂ ವಿಶ್ವೇಶಾಽಧಿಷ್ಠಿತೇ ಸ್ವಯಂ ॥ ೧೦೫ ॥
ಯಾಚಧ್ವಂ ತತ್ರ ಗತ್ವಾ ತಂ ಸ ವಃ ಕಾರ್ಯಂ ವಿಧಾಸ್ಯತಿ ।
ತೇನೈಕದಾವಿತಾ ಲೋಕಾ ವಾತಾಪೀಲ್ವಲಭಕ್ಷಣಾತ್ ॥ ೧೦೬ ॥

---

೧೦೧. ನನ್ನ ಲೋಕದಲ್ಲಿ ವಾಸಮಾಡಬಯಸುವವರು ಪುರಾಣಗಳನ್ನು ಕೇಳಬೇಕು, ಗಂಗಾತೀರದಲ್ಲಿ ವಾಸಮಾಡಬೇಕು, ಬ್ರಾಹ್ಮಣರನ್ನು ಭೋಜನಾದಿಗಳಿಂದ ನಿತ್ಯವೂ ತೃಪ್ತಿಗೊಳಿಸಬೇಕು.

೧೦೨. ಈ ಉದ್ದೇಶದಿಂದಲೆ ನಾನು ಈ ವರೆಗೆ ಭಯಗೊಂಡಿರುವವರಿಗೆ ಅಭಯಪ್ರದವಾದ ನನ್ನ ಲೋಕದ ವ್ಯವಸ್ಥೆಯನ್ನು ಅರುಹಿದೆನು. ಎಲೈ ದೇವತೆಗಳಿರಾ, ನೀವು ಹೆದರಬೇಡಿ.

೧೦೩. ವಿಂಧ್ಯಾದ್ರಿಯು ಗಗನದಲ್ಲಿ ಸೂರ್ಯಗತಿಯನ್ನೇ ತಡೆದು ಮೇರು ಪರ್ವತದೊಡನೆ ಸ್ಪರ್ಧಿಸುತ್ತಿದೆ. ಅದಕ್ಕಾಗಿ ನೀವು ಬಂದಿರುವಿರಿ. ಅಲ್ಲವೆ? ಇದಕ್ಕಾಗಿ ಒಂದು ಉಪಾಯವನ್ನು ತೋರುತ್ತೇನೆ

೧೦೪–೧೦೫. ಮಿತ್ರಾವರುಣನ ಮಗನೂ ಮಹಾತಪಸ್ವಿಯೂ ಆದ ಆಗಸ್ತ್ಯಮುನಿಯು ಕಾಶೀಪಟ್ಟಣದಲ್ಲಿ ವಿಶ್ವೇಶ್ವರನಲ್ಲಿಯೇ ಚಿತ್ತವನ್ನು ನೆಲೆಗೊಳಿಸಿ ಉಗ್ರವಾದ ತಪಸ್ಸನ್ನು ಮಾಡುತ್ತಿರುವನು. ಆತನು ವಿಶ್ವೇಶ್ವರನು ನೆಲೆಗೊಂಡಿರುವುದಾಗಿಯೂ ಸಮಸ್ತಮಾನವರಿಗೂ ಮುಕ್ತಿಕೊಡುವ ಕಾರಣ ಸ್ವರೂಪವಾಗಿಯೂ ಇರುವ ಅವಿಮುಕ್ತಕವೆಂದು ಹೆಸರಾದ ಆ ಕಾಶೀ ಮಹಾಕ್ಷೇತ್ರದಲ್ಲಿ ಪರಮೇಶ್ವರನಿಂದ ತಾರಕಮಂತ್ರೋಪದೇಶವನ್ನು ಪಡೆಯಲೋಸುಗ ಉಗ್ರವಾದ ತಪಸ್ಸನ್ನು ಮಾಡುತ್ತಿರುವನು.

೧೦೬. ನೀವು ಆತನಲ್ಲಿಗೆ ಹೋಗಿ ಬೇಡಿಕೊಳ್ಳಿರಿ. ಆತನು ನಿಮ್ಮ ಕಾರ್ಯವನ್ನು ಆಗಮಾಡಿಕೊಡುತ್ತಾನೆ. ಆ ಮಹಾತ್ಮನು ಒಮ್ಮೆ ವಾತಾಪಿ ಇಲ್ವಲರೆಂಬ ರಾಕ್ಷಸರನ್ನು ಭಕ್ಷಿಸಿ ಲೋಕವನ್ನು ಸಲಹಿದ್ದಾನೆ.

ಅತಿಮಿತ್ರಂ ತತ್ರ ತೇಜೋ ಮಿತ್ರಾವರುಣಜೇ ಮುನೌ ।
ತದಾಪ್ರಭೃತಿ ಲೋಕೇಷು ಕೋಽಗಸ್ತ್ಯಾನ್ನೈವ ಬಿಭ್ಯತಿ ॥ ೧೦೭ ॥
ಇತ್ಯುಕ್ತ್ವಾಂತರ್ದಧೇ ವೇಧಾಸ್ತೇಽಪಿ ಪ್ರಮುದಿತಾನನಾಃ ।
ದೇವಾಃ ಪರಸ್ಪರಂ ಪ್ರೋಚುರಹೋ ಧನ್ಯತಮಾ ವಯಂ ॥ ೧೦೮ ॥
ಪ್ರಸಂಗತೋಽಪಿ ದ್ರಷ್ಟವ್ಯೌ ಕಾಶೀ ಕಾಶೀಪತೀ ಶಿವೌ ।
ಅಹೋ ಅಹೋಭಿರ್ಬಹುಭಿಃ ಫಲಿತೋ ನೋ ಮನೋರಥಃ ॥ ೧೦೯ ॥
ಉತ್ಫುಲ್ಲಪದ್ಮನಯನಾ ನಿರ್ಮಿತಾಃ ಸುಕೃತಾರ್ಥಿನಃ ।
ತಾವೇವ ಚರಣೌ ಧನ್ಯೌ ಕಾಶೀಮಭಿಪ್ರಯಾಯಿನೌ ॥ ೧೧೦ ॥
ಯೇಯಂ ಕಥಾ ಶ್ರುತಾಽಸ್ಮಾಭಿರ್ವೇಧಸಾ ಸಮುದೀರಿತಾ ।
ತಸ್ಯಾಃ ಶ್ರವಣಜಾತ್ಪುಣ್ಯಾತ್ಪ್ರಾಪ್ನುಮಸ್ತ್ವದ್ಯ ಕಾಶಿಕಾಂ ॥ ೧೧೧ ॥
ಏಕಾ ಕ್ರಿಯಾ ದ್ವ್ಯರ್ಥಕರೀ ಪ್ರಾಪ್ಯತೇ ಪುಣ್ಯಗೌರವಾತ್ ।
ಏವಂ ವದಂತೋ ಹೃಷ್ಟಾಸ್ಯಾಃ ಸುರಾಃ ಕಾಶೀಂ ಸಮಾಯಯುಃ ॥೧೧೨॥

---

೧೦೭. ಎಲೈ ದೇವತೆಗಳಿರಾ, ಮಿತ್ರಾವರುಣನ ಮಗನಾದ ಆ ಅಗಸ್ತ್ಯ ಮುನಿಯಲ್ಲಿ ಸೂರ್ಯನನ್ನೂ ಮೀರಿಸಿದ ತೇಜಸ್ಸು ಅಂದಿನಿಂದ ನೆಲಸಿರುತ್ತದೆ. ಅಂತಹ ಆ ಅಗಸ್ತ್ಯಮುನಿಗೆ ಈ ಲೋಕದಲ್ಲಿ ಯಾರು ತಾನೆ ಹೆದರುವುದಿಲ್ಲ?

೧೦೮. ಬ್ರಹ್ಮದೇವನು ಈ ರೀತಿ ಅಪ್ಪಣೆಕೊಡಿಸಿ ಅಲ್ಲಿಯೇ ಅಂತರ್ಧಾನ ವಾದನು. ದೇವತೆಗಳೆಲ್ಲರೂ ಹರ್ಷದಿಂದ ಅರಳಿದ ಮುಖಗಳುಳ್ಳವರಾಗಿ, "ಆಹ! ನಾವೆಷ್ಟು ಧನ್ಯರು!" ಎಂದು ಪರಸ್ಪರವಾಗಿ ಹೇಳಿಕೊಂಡರು.

೧೦೯. ಪ್ರಸಂಗವಶದಿಂದಲಾದರೂ ಕಾಶೀಕ್ಷೇತ್ರವನ್ನೂ ಅದನ್ನು ಅಧಿಷ್ಠಿ ಸಿರುವ ಶ್ರೀ ಕಾಶೀಪತಿಯಾದ ಮಹೇಶ್ವರನನ್ನೂ ನೋಡಲೇಬೇಕು ಆಹ! ಅನೇಕದಿನಗಳಾದಮೇಲೆ ಈಗ ನಮ್ಮ ಮನೋರಥವು ಫಲಿಸಿತು.

೧೧೦. ಅರಳಿದ ನೇತ್ರಕಮಲಗಳುಳ್ಳವರಾಗಿ ಪುಣ್ಯಶಾಲಿಗಳಾಗಿ ಇರು ವವರೇ ಕಾಶಿಯನ್ನು ಕುರಿತು ಹೋಗುತ್ತಾರೆ. ಅವರ ಚರಣಗಳೇ ಧನ್ಯ ಗಳಾದುವು.

೧೧೧. ಬ್ರಹ್ಮದೇವನೊರೆದ ಯಾವ ಈ ಕಥೆಯನ್ನು ಕೇಳಿದೆವೊ ಆ ಕಥಾ ಶ್ರವಣದಿಂದುದಿಸಿದ ಪುಣ್ಯದಿಂದಲೇ ನಾವು ಕಾಶೀಕ್ಷೇತ್ರವನ್ನು ಹೊಂದುವೆವು.

೧೧೨. ನಮ್ಮ ಈ ಪುಣ್ಯದ ಪ್ರಭಾವದಿಂದ ನಾವು ಬಂದ ಕಾರ್ಯವು ಒಂದೇ ಆದರೂ ಅದು ಇಬ್ಬಗೆಯಾದ ಪ್ರಯೋಜನವನ್ನು ದೊರಕಿಸುವುದಾ ಯಿತು—ಎಂದು ಹೇಳುತ್ತ, ಆ ದೇವತೆಗಳೆಲ್ಲರೂ ಪ್ರಸನ್ನವದನರಾಗಿ ಕಾಶೀ ಕ್ಷೇತ್ರಕ್ಕೆ ಬಂದರು.

ವ್ಯಾಸ ಉವಾಚ :–
ಇದಂ ಪುಣ್ಯತಮಾಖ್ಯಾನಂ ಯೇ ಶ್ರೋಷ್ಯಂತೀಹ ಮಾನವಾಃ ।
ವಿಧೂಯ ಸರ್ವಪಾಪಾನಿ ಪುತ್ರದಾರಸಮನ್ವಿತಾಃ ॥ ೧೧೩ ॥
ಇಹ ವಂಶಂ ಪರಿಸ್ಥಾಪ್ಯ ಭುಕ್ತ್ವಾ ಸರ್ವಸುಖಾನಿ ಚ ।
ಸತ್ಯಲೋಕೇ ಚಿರಂ ಸ್ಥಿತ್ವಾ ತತೋ ಯಾಸ್ಯಂತಿ ಶಾಶ್ವತಂ ॥ ೧೧೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಸತ್ಯಲೋಕವರ್ಣನಂ"
ನಾಮ ದ್ವಿತೀಯೋಽಧ್ಯಾಯಃ

---

೧೧೩–೧೧೪. ವ್ಯಾಸಮುನಿಯು ಹೇಳುತ್ತಾನೆ:—ಪುಣ್ಯತಮವಾದ ಈ ಆಖ್ಯಾನವನ್ನು ಕೇಳುವ ಮಾನವರು ಸಮಸ್ತ ಪಾಪಗಳನ್ನೂ ಕೊಡವಿಕೊಂಡು, ಹೆಂಡಿರು ಮಕ್ಕಳೊಡಗೂಡಿ ಈ ಲೋಕದಲ್ಲಿ ವಂಶವನ್ನು ನೆಲೆಗೊಳಿಸಿ, ಸಮಸ್ತ ಸುಖಗಳನ್ನೂ ಅನುಭವಿಸಿ, ಸತ್ಯಲೋಕದಲ್ಲಿ ಬಹಳಕಾಲ ವಾಸವಾಗಿದ್ದು ಆಮೇಲೆ ಶಾಶ್ವತವಾದ ಕೈವಲ್ಯಪದವಿಯನ್ನು ಪಡೆಯುತ್ತಾರೆ.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಸತ್ಯಲೋಕವರ್ಣನ"ವೆಂಬ ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತೃತೀಯೋಽಧ್ಯಾಯಃ

### ಅಗಸ್ತ್ಯಾಶ್ರಮವರ್ಣನಂ

ಸೂತ ಉವಾಚ :—

ಭಗವನ್ಭೂತಭವ್ಯೇಶ ಸರ್ವಜ್ಞಾನಮಹಾನಿಧೇ ।
ಅವಾಪ್ಯ ಕಾಶೀಂ ಗೀರ್ವಾಣೈಃ ಕಿಮಕಾರಿ ವದಾಚ್ಯುತ ॥ ೧ ॥
ಅಧೀತ್ಯೇಮಾಂ ಕಥಾಂ ದಿವ್ಯಾಂ ನ ತೃಪ್ತಿಮಧಿಯಾಮಹಂ ।
ಶೇವಧಿಸ್ತಪಸಾಂ ದೇವೈರಗಸ್ತಿಃ ಪ್ರಾರ್ಥಿತಃ ಕಥಂ ॥ ೨ ॥
ಕಥಂ ವಿಂಧ್ಯೋಽಪ್ಯವಾಪ ಸ್ವಾಂ ಪ್ರಕೃತಿಂ ತಾದೃಗುನ್ನತಃ ।
ತವ ವಾಗಮೃತಾಂಭೋಧೌ ಮನೋ ಮೇ ಸ್ನಾತುಮುತ್ಸುಕಂ ॥ ೩ ॥
ಇತಿ ಕೃತ್ಸ್ನಂ ಸಮಾಕರ್ಣ್ಯ ವ್ಯಾಸಃ ಪಾರಾಶರೋ ಮುನಿಃ ।
ಶ್ರದ್ಧಾವತೇ ಸ್ವಶಿಷ್ಯಾಯ ವಕ್ತುಂ ಸಮುಪಚಕ್ರಮೇ ॥ ೪ ॥

ಪರಾಶರ ಉವಾಚ :—

ಶೃಣು ಸೂತ ಮಹಾಬುದ್ಧೇ ಭಕ್ತಿಶ್ರದ್ಧಾಸಮನ್ವಿತಃ ।
ಶುಕವೈಶಂಪಾಯನಾದ್ಯಾಃ ಶೃಣ್ವಂತ್ವೇತೇ ಚ ಬಾಲಕಾಃ ॥ ೫ ॥

---

### ಕನ್ನಡದ ಅನುವಾದ

#### ಅಗಸ್ತ್ಯಾಶ್ರಮವರ್ಣನ

೧. ಸೂತನು ಕೇಳುತ್ತಾನೆ —ಭೋ ಭಗವನ್! ಭೂತಭವ್ಯಪ್ರಭುವೂ ಸಮಸ್ತ ಜ್ಞಾನಕ್ಕೂ ಮಹಾನಿಧಿ ಸ್ವರೂಪನೂ ಅಚ್ಯುತನೂ ಆದ ವ್ಯಾಸಮಹಾಮುನಿಯೆ! ದೇವತೆಗಳು ಕಾಶೀಪಟ್ಟಣಕ್ಕೆ ಬಂದಮೇಲೆ ಏನುಮಾಡಿದರು?

೨. ನೀನು ಅಪ್ಪಣೆಕೊಡಿಸಿದ ಈ ದಿವ್ಯ ಕಥೆಯನ್ನು ಅಧ್ಯಯನಮಾಡಿ ನಾನು ತೃಪ್ತಿಯನ್ನು ಹೊಂದಿರುವುದಿಲ್ಲ. ತಪಸ್ಸಿಗೆ ಪರಮಾವಧಿಯೆನಿಸಿದ ಅಗಸ್ತ್ಯನನ್ನು ಆ ದೇವತೆಗಳು ಹೇಗೆ ಏನೆಂದು ಪ್ರಾರ್ಥಿಸಿದರು?

೩. ಅಷ್ಟು ಎತ್ತರವಾಗಿ ಬೆಳೆದು ನಿಂತ ವಿಂಧ್ಯಗಿರಿಯು ತನ್ನ ಮೊದಲಿನ ಸ್ಥಿತಿಯನ್ನು ಪಡೆದುದೆಂತು? ನಿನ್ನ ವಾಕ್ಕೆಂಬ ಅಮೃತದ ಸಮುದ್ರದಲ್ಲಿ ನನ್ನ ಮನಸ್ಸು ಸ್ನಾನಮಾಡಲು ಉತ್ಸಾಹಗೊಂಡಿದೆ.

೪. ಇಂತು ನುಡಿದ ಸೂತಮಹಾಮುನಿಯ ಮಾತುಗಳೆಲ್ಲವನ್ನೂ ಕೇಳಿ ವ್ಯಾಸನಾದ ಆ ಪರಾಶರಮುನಿಯು ಶ್ರದ್ಧಾಳುವೂ ತನ್ನ ಶಿಷ್ಯನೂ ಆದ ಅವನಿಗೆ ಆ ವಿಷಯವನ್ನು ಹೇಳಲು ಉಪಕ್ರಮಿಸಿದನು.

೫. ಪರಾಶರನು ಹೇಳುತ್ತಾನೆ.—ಎಲೈ ಮಹಾ ಬುದ್ಧಿಶಾಲಿಯಾದ ಸೂತಮುನಿಯೆ, ಶ್ರದ್ಧೆಯೊಡಗೂಡಿ ಭಕ್ತಿಯಿಂದ ನಾನು ಹೇಳುವ ಈ ಮುಂದಿನ

ತತೋ ವಾರಾಣಸೀಂ ಪ್ರಾಪ್ಯ ಗೀರ್ವಾಣಾಃ ಸಮುಹರ್ಷಯಃ ।
ಅವಿಲಂಬಂ ಪ್ರಥಮತೋ ಮಣಿಕರ್ಣ್ಯಾಂ ವಿಧಾನತಃ ॥ ೬ ॥
ಸಚ್ಚೈಲಮಭಿಮಜ್ಯಾಥ ಕೃತಸಂಧ್ಯಾದಿಸತ್ಕ್ರಿಯಾಃ ।
ಸಂತರ್ಪ್ಯ ತಪ್ಯಾದಿಪಿತ್ರೂನ್ ಕುಶಗಂಧತಿಲೋದಕೈಃ ॥ ೭ ॥
ತೀರ್ಥವಾಸಾರ್ಥಿನಃ ಸರ್ವಾನ್ಸಂತರ್ಪ್ಯ ಚ ಪೃಥಕ್ಪೃಥಕ್ ।
ರತ್ನೈರ್ಹಿರಣ್ಯವಾಸೋಭಿರಶ್ವಾಭರಣಧೇನುಭಿಃ ॥ ೮ ॥
ವಿಚಿತ್ರೈಶ್ಚ ತಥಾ ಪಾತ್ರೈಃ ಸ್ವರ್ಣರೌಪ್ಯಾದಿನಿರ್ಮಿತೈಃ ।
ಅಮೃತಸ್ವಾದುಪಕ್ವಾನ್ನೈಃ ಪಾಯಸೈಶ್ಚ ಸಶರ್ಕರೈಃ ॥ ೯ ॥
ಸಗೋರಸೈರನ್ನದಾನೈರ್ಧಾನ್ಯದಾನೈರನೇಕಧಾ ।
ಗಂಧಚಂದನಕರ್ಪೂರೈಸ್ತಾಂಬೂಲೈಶ್ಚಾರುಚಾಮರೈಃ ॥ ೧೦ ॥
ಸತೂಲೈರ್ಮೃದುಪರ್ಯಂಕೈರ್ದೀಪಿಕಾದರ್ಪಣಾಸನೈಃ ।
ಶಿಬಿಕಾದಾಸದಾಸೀಭಿರ್ವಿಮಾನೈಃ ಪಶುಭಿರ್ಗೃಹೈಃ ॥ ೧೧ ॥
ಚಿತ್ರಧ್ವಜಪತಾಕಾಭಿರುಲ್ಲೋಚೈಶ್ಚಂದ್ರಚಾರುಭಿಃ ।
ವರ್ಷಾಽಶನಪ್ರದಾನೈಶ್ಚ ಗೃಹೋಪಸ್ಕರಸಂಯುತೈಃ ॥ ೧೨ ॥

---

ಕಥಾನಕವನ್ನು ಕೇಳು. ಅಯ್ಯಾ, ಶುಕವೈಶಂಪಾಯನಾದಿಗಳಿರಾ, ಬಾಲಕರಾಗಿರುವ ನೀವೂ ಭಕ್ತಿಯಿಂದ ಕೇಳಿರಿ.

೬–೭. ತರುವಾಯ ದೇವತೆಗಳೆಲ್ಲರೂ ಮಹರ್ಷಿಗಳೊಡಗೂಡಿ ವಾರಾಣಸಿಗೆ ಬಂದು, ವಿಳಂಬಮಾಡದೆ ಮೊದಲು ಮಣಿಕರ್ಣಿಕೆಯಲ್ಲಿ ವಿಧ್ಯುಕ್ತವಾಗಿ ಸಚೇಲಸ್ನಾನವನ್ನಾಚರಿಸಿ, ಸಂಧ್ಯಾದಿ ಸತ್ಕರ್ಮಗಳನ್ನೆಲ್ಲ ನಿರ್ವಹಿಸಿಕೊಂಡ ತರುವಾಯ, ಆದಿ ಪಿತೃಗಳಿಗೆ ಕುಶ ಗಂಧ ತಿಲೋದಕ ಸಮನ್ವಿತವಾಗಿ ತರ್ಪಣವನ್ನಿತ್ತರು.

೮–೧೪. ಆಮೇಲೆ ಆ ತೀರ್ಥವಾಸಿಗಳಾದ ಬ್ರಾಹ್ಮಣರಿಗೆ ಒಬ್ಬೊಬ್ಬರಿಗೂ ರತ್ನ ಸುವರ್ಣ ವಸ್ತ್ರ ಕುದುರೆಗಳೂ ವಿವಿಧಾಭರಣಗಳು ಗೋವುಗಳೇ ಮೊದಲಾದುವುಗಳನ್ನೂ ಚಿತ್ರವಿಚಿತ್ರವಾದ ಬೆಳ್ಳಿ ಬಂಗಾರದ ಪಾತ್ರೆಗಳನ್ನೂ ದಾನ ಮಾಡಿದರು. ಅಮೃತದಂತೆ ರುಚಿಯಾದ ಪಕ್ವಾನ್ನಗಳಿಂದಲೂ ಸಕ್ಕರೆ ಬೆರಸಿದ ಬಗೆಬಗೆಯ ಪಾಯಸಗಳಿಂದಲೂ ಕ್ಷೀರದಿಂದಲೂ ಕೂಡಿದ ದಿವ್ಯಾನ್ನಗಳನ್ನು ಉಣಬಡಿಸಿದರು. ದಾನಾದಿಗಳನ್ನಿತ್ತು ಗಂಧ ಚಂದನ ಕರ್ಪೂರಗಳಿಂದಲೂ ತಾಂಬೂಲಗಳಿಂದಲೂ ಸೊಗಸಾದ ಚಾಮರಗಳಿಂದಲೂ ತೂಲಿಕೆಗಳಿಂದ ಕೂಡಿದ ಮೃದುವಾದ ಹಾಸಿಗೆಗಳಿಂದಲೂ ದೀಪ ಕನ್ನಡಿ ಆಸನ ಪಲ್ಲಕ್ಕಿ ದಾಸದಾಸಿಯರಿಂದಲೂ ವಿಮಾನಗಳಿಂದಲೂ ಪಶುಗಳು ಗೃಹಗಳು ಚಿತ್ರವಾದ ಧ್ವಜಪತಾಕಾದಿಗಳು ಬೆಳದಿಂಗಳು ಚೆಲ್ಲುವ ವಿತಾನಗಳಿಂದಲೂ ಅವರನ್ನು ಉಪಚರಿಸಿದರು. ವರ್ಷಾಶನವನ್ನಿತ್ತು, ಉಪಕರಣ ಸಹಿತವಾದ ಗೃಹಗಳು, ಚರ್ಮ

ಉಪಾನತ್ಪಾದುಕಾಭಿಶ್ಚ ಯತಿನಶ್ಚ ತಪಸ್ವಿನಃ ।
ಯೋಗ್ಯೈಃ ಪಟ್ಟದುಕೂಲೈಶ್ಚ ವಿವಿಧೈಶ್ಚಿತ್ರರಲ್ಲಕೈಃ ॥ ೧೩ ॥
ದಂಡೈಃ ಕಮಂಡಲುಯುತೈರಜಿನೈರ್ಮೃಗಸಂಭವೈಃ ।
ಕೌಪೀನೈರುಚ್ಚಮಂಚೈಶ್ಚ ಪರಿಚಾರಕಕಾಂಚನೈಃ ॥ ೧೪ ॥
ಮಠೈರ್ವಿದ್ಯಾರ್ಥಿನಾಮನ್ನೈರತಿಥ್ಯರ್ಥಂ ಮಹಾಧನೈಃ ।
ಮಹಾಪುಸ್ತಕಸಂಭಾರೈರ್ಲೇಖಕಾನಾಂ ಚ ಜೀವನೈಃ ॥ ೧೫ ॥
ಬಹುಧೌಷಧದಾನೈಶ್ಚ ಸತ್ರದಾನೈರನೇಕಶಃ ।
ಗ್ರೀಷ್ಮೇ ಪ್ರಪಾರ್ಥದ್ರವಿಣೈರ್ಹೇಮಂತೇಽಗ್ನಿಷ್ಟಿಕೇಂಧನೈಃ ॥ ೧೬ ॥
ಛತ್ರಾಚ್ಛಾದನಿಕಾದ್ಯರ್ಥೇ ವರ್ಷಾಕಾಲೋಚಿತೈರ್ಬಹು ।
ರಾತ್ರೌ ಪಾಠಪ್ರದೀಪೈಶ್ಚ ಪಾದಾಭ್ಯಂಜನಕಾದಿಭಿಃ ॥ ೧೭ ॥
ಪುರಾಣಪಾಠಕಾಂಶ್ಚಾಽಪಿ ಪ್ರತಿದೇವಾಲಯಂ ಧನೈಃ ।
ದೇವಾಲಯೇ ನೃತ್ಯಗೀತಕರಣಾರ್ಥೈರನೇಕಶಃ ॥ ೧೮ ॥

---

ನಿರ್ಮಿತವಾದ ಮತ್ತು ಮರದಿಂದ ಮಾಡಿದ ಪಾದುಕೆಗಳು ಯೋಗ್ಯವಾದ ರೇಷ್ಮೆಯ ಪೀತಾಂಬರಗಳು ರತ್ನಕಂಬಳಿಗಳು ದಂಡ ಕಮಂಡಲು ಕೃಷ್ಣಾಜಿನ ಕೌಪೀನ ಎತ್ತರವಾದ ಮಂಚಗಳು ಪರಿಚಾರಕರು ಸುವರ್ಣ ಮೊದಲಾದುವುಗಳಿಂದಲೂ ಸತ್ಕರಿಸಿದರು.

೧೫. ವಿದ್ಯಾರ್ಥಿಗಳಿಗೆ ಪಾಠಶಾಲೆಗಳನ್ನೇರ್ಪಡಿಸಿದರು. ಅವರಿಗೂ ಬಂದು ಹೋಗುವ ಅತಿಥಿಗಳಿಗೂ ಭೋಜನವನ್ನೇರ್ಪಡಿಸಿದರು ಬಹಳವಾಗಿ ಧನ ವ್ಯಯಮಾಡಿ, ಅಸಂಖ್ಯಾತವಾದ ಪುಸ್ತಕ ಸಮೂಹಗಳನ್ನು ಸಂಗ್ರಹಿಸಿಟ್ಟು ಗ್ರಂಥರಚನೆಯನ್ನು ಮಾಡುವ ಲೇಖಕರಿಗೆ ಜೀವನವನ್ನು ಕಲ್ಪಿಸಿಕೊಟ್ಟರು.

೧೬. ಅನೇಕ ಬಗೆಯಾದ ಔಷಧಗಳನ್ನು ದಾನಮಾಡಿ, ಸತ್ರದಾನ ವಸ್ತ್ರದಾನ ಯಜ್ಞದಾನ ಧನದಾನ ಮೊದಲಾದ ವಿವಿಧ ದಾನಗಳನ್ನು ಮಾಡಿ ಗ್ರೀಷ್ಮಋತುವಿನಲ್ಲಿ ಅರವಟ್ಟಿಗೆಗಳನ್ನಿಡಲೋಸುಗವೂ ಹೇಮಂತದಲ್ಲಿ ಅಗ್ನಿಷ್ಟಿಕೆಗಳಿಗೆ ಕಾಷ್ಠಾದಿಗಳಿಗೋಸುಗವೂ ಬಹಳವಾಗಿ ದ್ರವ್ಯವನ್ನು ಕೊಟ್ಟರು.

೧೭-೧೮. ವರ್ಷಾಕಾಲಕ್ಕೆ ಉಚಿತವಾದ ಬಲವಾದ ಮೇಲು ಚಾವಣಿಯುಳ್ಳ ಭವನಗಳನ್ನೂ ರಾತ್ರಿಯ ಕಾಲಗಳಲ್ಲಿ ಪಾಠಪ್ರವಚನಾದಿಗಳು ನಡೆಯಲು ದೀಪಾದಿಗಳನ್ನೂ ಪಾದಾಭ್ಯಂಜನವೇ ಮೊದಲಾದುವುಗಳನ್ನೂ ಅಳವಡಿಸಿ ಕೊಟ್ಟರು. ಪ್ರತಿಯೊಂದು ದೇವಾಲಯಕ್ಕೂ ಅಧಿಕವಾದ ಧನವನ್ನು ದಾನ ಮಾಡಿ, ಅವುಗಳಲ್ಲಿ ಪುರಾಣವನ್ನು ನಡೆಸಲು ಪೌರಾಣಿಕರನ್ನು ನೇಮಿಸಿ ಅವುಗಳಲ್ಲಿ ನೃತ್ಯಗೀತಗಳು ನಡೆಯಲೋಸುಗ ಏರ್ಪಾಟುಮಾಡಿದರು.

ದೇವಾಲಯಸುಧಾಕಾರ್ಯೈರ್ಜೀರ್ಣೋದ್ಧಾರೈರನೇಕಧಾ ।
ಚಿತ್ರಲೇಖನಮೂಲ್ಯೈಶ್ಚ ರಂಗಮಾಲಾದಿಮಂಡನೈಃ ॥ ೧೯ ॥
ನೀರಾಜನೈರ್ಗುಗ್ಗುಲುಭಿರ್ದಶಾಂಗಾದಿಸುಧೂಪಕೈಃ ।
ಕರ್ಪೂರವರ್ತಿಕಾದ್ಯೈಶ್ಚ ದೇವಾರ್ಚಾರ್ಥೈರನೇಕಶಃ ॥ ೨೦ ॥
ಪಂಚಾಮೃತಾನಾಂ ಸ್ನಪನೈಃ ಸುಗಂಧಸ್ನಪನೈರಪಿ ।
ದೇವಾರ್ಥಂ ಮುಖವಾಸೈಶ್ಚ ದೇವೋದ್ಯಾನೈರನೇಕಶಃ ॥ ೨೧ ॥
ಮಹಾಪೂಜಾರ್ಥಮಾಲ್ಯಾದಿಗುಂಫನಾರ್ಥೈಸ್ತ್ರಿಕಾಲತಃ ।
ಶಂಖಭೇರೀಮೃದಂಗಾದಿವಾದ್ಯನಾದೈಃ ಶಿವಾಲಯೇ ॥ ೨೨ ॥
ಘಂಟಾಗುಡುಕಕುಂಭಾದಿಸ್ನಾನೋಪಸ್ಕರಭಾಜನೈಃ ।
ಶ್ವೇತೈರ್ಮಾರ್ಜನವಸ್ತ್ರೈಶ್ಚ ಸುಗಂಧೈರ್ಯಕ್ಷಕರ್ದಮೈಃ ॥ ೨೩ ॥
ಜಪಹೋಮೈಃ ಸ್ತೋತ್ರಪಾಠೈಃ ಶಿವನಾಮೋಚ್ಚಭಾಷಣೈಃ ।
ರಾಸಕ್ರೀಡಾದಿಸಂಯುಕ್ತೈಶ್ಚಲನೈಃ ಸಪ್ರದಕ್ಷಿಣೈಃ ॥ ೨೪ ॥
ಏವಮಾದಿಭಿರುದ್ದಂಡೈಃ ಕ್ರಿಯಾಕಾಂಡೈರನೇಕಶಃ ।
ಪಂಚರಾತ್ರಮುಷಿತ್ವಾ ತು ಕೃತ್ವಾ ತೀರ್ಥಾನ್ಯನೇಕಶಃ ॥ ೨೫ ॥

---

೧೯. ದೇವಾಲಯಗಳಿಗೆ ಸುಣ್ಣ ತೊಳೆಸಿ, ಬಗೆಬಗೆಯ ಜೀರ್ಣೋದ್ಧಾರ ಕಾರ್ಯಗಳನ್ನೆಸಗಿ ಅವುಗಳಿಗೆ ಚಿತ್ರಗಳನ್ನು ಬರೆಯಲು ಮೂಲ್ಯಗಳನ್ನಿತ್ತು, ಸಾರಣೆ ಕಾರಣೆಗಳನ್ನು ಮಾಡಿ ಪ್ರತಿಯೊಂದು ದಿನವೂ ರಂಗವಲ್ಲ್ಯಾದಿಗಳನ್ನು ಇಟ್ಟು ಸಿಂಗರಿಸಲು ಏರ್ಪಡಿಸಿದರು.

೨೦–೨೨. ದೇವತಾರ್ಚನೆಗೋಸುಗ ನೀರಾಜನಗಳು ಗುಗ್ಗುಳ ದಶಾಂಗ ಮೊದಲಾದ ಧೂಪಗಳು ಕರ್ಪೂರವರ್ತಿಗಳೇ ಮೊದಲಾದುವನ್ನು ಸಜ್ಜುಗೊಳಿಸಿದರು. ಪಂಚಾಮೃತಾಭಿಷೇಕಕ್ಕೂ ಸುಗಂಧಸ್ನಪನಕ್ಕೂ ದೇವತೆಗಳ ಮುಖವಾಸಕ್ಕೂ ಏರ್ಪಡಿಸಿ ಅನೇಕ ದೇವೋದ್ಯಾನಗಳನ್ನು ನಿರ್ಮಿಸಿದರು. ತ್ರಿಕಾಲಗಳಲ್ಲಿಯೂ ಮಹಾಪೂಜೆಯು ನಡೆಯುವುದಕ್ಕಾಗಿ ಪುಷ್ಪಹಾರಾದಿಗಳನ್ನು ಕಟ್ಟುವುದಕ್ಕೂ ಶಿವಾಲಯದಲ್ಲಿ ಶಂಖ ಭೇರಿ ಮೃದಂಗ ಮೊದಲಾದ ವಾದ್ಯವಾದನವು ನಡೆಯುವುದಕ್ಕೂ ಏರ್ಪಡಿಸಿದರು.

೨೩. ಘಂಟೆ ಅಂಗುಲೀಯಕ ಕುಂಭ ಉಪಕರಣ ಪಾತ್ರೆಗಳು ಶುಭ್ರವಾದ ಮಾರ್ಜನವಸ್ತ್ರಗಳು ಸುವಾಸನೆಯಾದ ಕರ್ಪೂರ ಅಗುರು ಕಸ್ತೂರಿ ಕಂಕೋಲಗಳಿಂದಮಾಡಿದ ಹಸಿ ಗಂಧ—ಇವುಗಳನ್ನು ಅಣಿಗೊಳಿಸಿದರು

೨೪–೨೫. ಜಪ ಹೋಮ ಸ್ತೋತ್ರಪಾಠ ಶಿವಸಹಸ್ರನಾಮಪಠನ ರಾಸಕ್ರೀಡಾದಿಗಳಿಂದ ಕೂಡಿದ ಪ್ರದಕ್ಷಿಣ ಇವೇ ಮೊದಲಾದ ನಾನಾ ಪ್ರಕಾರಗಳಾದ

ದೀನಾಽನಾಥಾಂಶ್ಚ ಸಂತರ್ಪ್ಯ ನತ್ವಾ ವಿಶ್ವೇಶ್ವರಂ ವಿಭುಂ ।
ಬ್ರಹ್ಮಚರ್ಯಾದಿನಿಯಮೈಸ್ತೀರ್ಥಮೇವಂ ಪ್ರಸಾಧ್ಯ ಚ ॥ ೨೬ ॥
ಪುನಃ ಪುನರ್ವಿಶ್ವನಾಥಂ ದೃಷ್ಟ್ವಾ ಸ್ತುತ್ವಾ ಪ್ರಣಮ್ಯ ಚ ।
ಜಗ್ಮುಃ ಪರೋಪಕಾರಾರ್ಥಮಗಸ್ತಿರ್ಯತ್ರ ತಿಷ್ಠತಿ ॥ ೨೭ ॥
ಸ್ವನಾಮ್ನಾ ಲಿಂಗಮಾಸ್ಥಾಪ್ಯ ಕುಂಡಂ ಕೃತ್ವಾ ತದಗ್ರತಃ ।
ಶತರುದ್ರಿಯಸೂಕ್ತೇನ ಜಪನ್ನಿಶ್ಚಲಮಾನಸಃ ॥ ೨೮ ॥
ತಂ ದೃಷ್ಟ್ವಾ ದೂರತೋ ದೇವಾ ದ್ವಿತೀಯಮಿವಭಾಸ್ಕರಂ ।
ಜ್ವಲಜ್ವಲನಸಂಕಾಶೈರಂಗೈಃ ಸರ್ವತ್ರ ಸೋಜ್ವಲಂ ॥ ೨೯ ॥
ಸಾಕ್ಷಾತ್ಕಿಂ ಬಾಡಬಾಗ್ನಿರ್ವಾ ಮೂರ್ತ್ಯಾ ವೈ ತಪ್ಯತೇ ತಪಃ ।
ಸ್ಥಾಣುವನ್ನಿಶ್ಚಲತರಂ ನಿರ್ಮಲಂ ಸನ್ಮನೋ ಯಥಾ ॥ ೩೦ ॥
ಅಥವಾ ಸರ್ವತೇಜಾಂಸಿ ಶ್ರಿತ್ವೇಮಾಂ ಬ್ರಾಹ್ಮಣೀಂ ತನುಂ ।
ಶೀಲಯಂತಿ ಪರಂ ಧಾಮ ಶಾಂತಂ ಶಾಂತಪದಾಪ್ತಯೇ ॥ ೩೧ ॥

---

ಕ್ರಿಯಾ ಕಾಂಡದಲ್ಲಿ ಉಕ್ತವಾಗಿರುವ ಅರ್ಚನ ಕರ್ಮಗಳಿಂದ ಆ ದೇವತೆಗಳೆಲ್ಲರೂ ಆ ವಾರಾಣಸಿ ಕ್ಷೇತ್ರದಲ್ಲಿ ಐದು ರಾತ್ರಿಗಳು ವಾಸಮಾಡಿ, ಅನೇಕ ತೀರ್ಥಗಳನ್ನು ನಿರ್ಮಿಸಿದರು

೨೬–೨೭ ಆ ಬಳಿಕ ದೀನರಿಗೂ ಅನಾಥರಿಗೂ ಯಥೇಚ್ಛವಾದ ಅನ್ನದಾನಾದಿಗಳನ್ನುಮಾಡಿ ತೃಪ್ತಿಯನ್ನುಂಟುಮಾಡಿ, ಸರ್ವಾಂತರ್ಯಾಮಿಯಾದ ವಿಶ್ವೇಶ್ವರನನ್ನು ದರ್ಶನಮಾಡಿಕೊಂಡು, ಬ್ರಹ್ಮಚರ್ಯವೇ ಮೊದಲಾದ ನಿಯಮಗಳಿಂದ ತೀರ್ಥಯಾತ್ರೆಯನ್ನು ಸಾಂಗಗೊಳಿಸಿ, ಪುನಃ ಪುನಃ ವಿಶ್ವನಾಥ ವಿಭುವನ್ನು ಸಂದರ್ಶಿಸಿ ಸ್ತುತಿಸಿ ನಮಸ್ಕರಿಸಿದ ತರುವಾಯ, ಪರೋಪಕಾರವನ್ನೊಸಗಲೋಸುಗ ಅಗಸ್ತ್ಯಮುನಿಯ ಆಶ್ರಮಕ್ಕೆ ಹೊರಟರು.

೨೮. ಆ ಅಗಸ್ತ್ಯಮುನೀಂದ್ರನು ತನ್ನ ಹೆಸರಿನ ಶಿವಲಿಂಗವನ್ನು ಸ್ಥಾಪಿಸಿ, ಅದರ ಮುಂಗಡೆ ಯಜ್ಞಕುಂಡವನ್ನು ಮಾಡಿಕೊಂಡು ಕುಳಿತು, ಶತರುದ್ರೀಯ ಸೂಕ್ತವನ್ನು ಜಪಿಸುತ್ತ ಸ್ಥಿರಮನಸ್ಕನಾಗಿದ್ದನು.

೨೯–೩೦ ಎರಡನೆಯ ಸೂರ್ಯನೋ, ಪ್ರಜ್ವಲಿಸುತ್ತಿರುವ ಯಜ್ಞೇಶ್ವರನೊ ಎಂಬಂತೆ ತೇಜಸ್ಸಂಪನ್ನವಾದ ಅಂಗಗಳಿಂದ ಅಲ್ಲಿನ ಪ್ರದೇಶವೆಲ್ಲವನ್ನೂ ಉಜ್ಜ್ವಲವನ್ನಾಗಿ ಮಾಡುತ್ತಿದ್ದ ಆ ಮುನಿಯನ್ನು ದೇವತೆಗಳೆಲ್ಲರೂ ದೂರದಿಂದ ನೋಡಿ, ಆಹ! ಸಾಕ್ಷಾತ್ ಬಡಬಾಗ್ನಿಯೇ ಮೂರ್ತೀಭವಿಸಿ ಬಂದು ಸ್ಥಾಣುವಿನಂತೆ, ನಿಶ್ಚಲತರವೂ ನಿರ್ಮಲವೂ ಆದ ಸತ್ಪುರುಷನ ಮನಸ್ಸಿನಂತೆ, ಈ ರೀತಿ ತಪಸ್ಸನ್ನಾಚರಿಸುತ್ತಿರುವುದೊ!

೩೧. ಅಥವಾ ಸಮಸ್ತ ತೇಜಸ್ಸುಗಳೂ ಒಟ್ಟುಗೂಡಿ ಬಂದು ಈ ಬ್ರಾಹ್ಮಣನ

ತಪನಸ್ತಪ್ಯತೇಽತ್ಯರ್ಥಂ ದಹನೋಽಪಿ ಹಿ ದಹ್ಯತೇ ।
ಯತ್ತೀವ್ರತಪಸಾಽದ್ಯಾಪಿ ಚಪಲಾಽಚಪಲಾಽಭವತ್ ॥ ೩೨ ॥
ಯಸ್ಯಾಶ್ರಮೇಽತ್ರ ದೃಶ್ಯಂತೇ ಹಿಂಸ್ರಾ ಅಪಿ ಸಮಂತತಃ ।
ಸತ್ವರೂಪಾ ಅಮೀ ಸತ್ವಾಸ್ತ್ಯಕ್ತ್ವಾ ವೈರಂ ಸ್ವಭಾವಜಂ ॥ ೩೩ ॥
ಶುಂಡಾದಂಡೇನ ಕರಟೀಃ ಸಿಹ್ಮಂ ಕಂಡೂಯತೇಽಭಯಃ ।
ಅಷ್ಟಾಪದಾಂಕೇ ಸ್ವಪಿತಿ ಕೇಸರೀ ಕೇಸರೋದ್ಭಟಃ ॥ ೩೪ ॥
ಸೂಕರಃ ಸ್ತಬ್ಧರೋಮಾಽಪಿ ವಿಹಾಯ ನಿಜಯೂಥಕಂ ।
ಚರೇದ್ವನಶುನಾಂ ಮಧ್ಯೇ ಮುಸ್ತಾನ್ಯಸ್ತೇಕ್ಷಣೋ ಬಲೀ ॥ ೩೫ ॥
ಭೂದಾರೋಽಪಿ ನ ಭೂದಾರಂ ತಥಾ ಕುರ್ಯಾದ್ಯಥಾನ್ಯತಃ ।
ಸರ್ವಾ ಲಿಂಗಮಯೀ ಕಾಶೀ ಯತಸ್ತದ್ಭೀತಿಯಂತ್ರಿತಃ ॥ ೩೬ ॥
ಕ್ರೋಡೀಕೃತ್ಯ ಕ್ರೋಡಪೋತಂ ತರಕ್ಷುಃ ಕ್ರೀಡಯತ್ಯಹೋ ।
ಶಾರ್ದೂಲಬಾಲಾನುತ್ಸಾರ್ಯ ಶಾರ್ದೂಲೀಮೇಣಪೋತಕಃ ॥ ೩೭ ॥

---

ಶರೀರವನ್ನು ಆಶ್ರಯಿಸಿ, ಶಾಂತವಾದ ಪದವಿಯ ಪ್ರಾಪ್ತಿಗಾಗಿ ಶಾಂತ ಸ್ವರೂಪವೇ ಆಗಿರುವ ಪರಂಧಾಮವನ್ನು ಈ ರೀತಿ ಪ್ರಕಟಗೊಳಿಸುತ್ತಿರುವುದೊ !

೩೨. ಈ ಮುನಿಯ ತಪಸ್ಸಿನಿಂದ ಸೂರ್ಯನೂ ಬಹಳವಾಗಿ ತಪಿಸಿ ಹೋಗುತ್ತಾನೆ; ಅಗ್ನಿಯೂ ದಹಿಸಲ್ಪಡುತ್ತಾನೆ. ಚಂಚಲವಾದ ಮಿಂಚಿನ ಬಳ್ಳಿಯು ಅತ್ತಿತ್ತ ಕದಲದುದಾಗುತ್ತದೆ.

೩೩. ಈ ಮುನಿಯ ಆಶ್ರಮದ ಸುತ್ತಮುತ್ತಲೂ ಇರುವ ಈ ಕ್ರೂರ ಮೃಗಗಳೆಲ್ಲವೂ ಸತ್ತ್ವಗುಣವನ್ನು ಹೊಂದಿ, ಸ್ವಾಭಾವಿಕವಾದ ತಮ್ಮ ಪರಸ್ಪರ ವೈರವನ್ನು ತೊರೆದಿರುತ್ತವೆ

೩೪ ಆನೆಯು ತನ್ನ ಸೊಂಡಿಲಿನಿಂದ ಸಿಂಹದ ಮೈಯನ್ನು ನಿರ್ಭಯವಾಗಿ ಕೆರೆಯುತ್ತಿದೆ. ಶರಭದ ತೊಡೆಯಮೇಲೆ ಸಿಂಹವು ಮಲಗಿ ನಿದ್ರಿಸುತ್ತಿದೆ.

೩೫. ಹಂದಿಯು ನಿಮಿರಿ ನಿಂತ ಮೈಗೂದಲುಳ್ಳುದುದಾಗಿದ್ದರೂ ತನ್ನ ಹಿಂಡನ್ನು ತೊರೆದು ಕಾಡನಾಯಿ (ಹುಲಿ)ಗಳ ನಡುವೆ ಮುಸ್ತಾಕ್ಷತ (ಕೆಸ್ಸಾರಿ ಗಡ್ಡೆ)ಗಳನ್ನು ಮೇಯುತ್ತಿದೆ

೩೬–೩೭ ಆ ಹಂದಿಯು ಭೂಮಿಯನ್ನು ತೋಡುವುದಾದರೂ ಈ ಆಶ್ರಮ ಪ್ರದೇಶದಲ್ಲಿ ಆ ತನ್ನ ಸ್ವಭಾವವನ್ನು ತೊರೆದು ಸಾಧುವಾಗಿದೆ. ಹಾಗೆ ಮಾಡಲು ಒಂದು ಕಾರಣವೂ ಉಂಟು ಕಾಶೀಪಟ್ಟಣದ ಪ್ರದೇಶವೆಲ್ಲವೂ ಶಿವಲಿಂಗ ಮಯವಾಗಿರುವುದರಿಂದ ಅದು ಬಗೆಗೊಂಡ ನೆಲವನ್ನು ತೋಡದೆ ಸುಮ್ಮನಿರುವುದು ಹಂದಿಯ ಮರಿಗಳನ್ನು ಒಟ್ಟುಗೂಡಿಸಿಕೊಂಡು ತೋಳವು ಆಟವಾಡುತ್ತಿದೆ ಹುಲಿಮರಿಗಳನ್ನು ಹಿಡಿಸಿ ಜಿಂಕೆ ಮರಿಯು ತಾಯಿ ಹುಲಿಯ ಬಳಿ ಕ್ರೀಡಿಸುತ್ತಿದೆ

ಚಲತ್ಪುಚ್ಛೋಽಥ ಪಿಬತಿ ಫೇನಿಲೇನಾನನೇನ ವೈ ।
ಸ್ವಪಂತಂ ಲೋಮಶಂ ಭಲ್ಲಂ ವಾನರಶ್ಚಲದಂಗುಲಿಃ ॥ ೩೮ ॥
ಯೂಕಾಂಸಂ ವೀಕ್ಷ್ಯ ವೀಕ್ಷ್ಯೈವ ಭಕ್ಷಯೇದ್ದಂತಕೋಟಿಭಿಃ ।
ಗೋಲಾಂಗೂಲಾ ರಕ್ತಮುಖಾ ನೀಲಾಂಗಾ ಯೂಥನಾಯಕಾಃ ॥ ೩೯ ॥
ಜಾತಿಸ್ವಭಾವಮಾತ್ಸರ್ಯಂ ತ್ಯಕ್ತ್ವೈಕತ್ರ ರಮಂತಿ ಚ ।
ಶಶಾಃ ಕ್ರೀಡಂತಿ ಚ ವೃಕೈಸ್ತೈಃ ಪೃಷ್ಠಲುಂಠನೈರ್ಮುಹುಃ ॥ ೪೦ ॥
ಆಖುಶ್ಚಾಖುಭುಜಃ ಕರ್ಣಂ ಕಂಡೂಯೇತ ಚಲಾನನಃ ।
ಮಯೂರಪುಚ್ಛಪುಟಗೋ ನಿದ್ರಾತ್ಯೋತುಃ ಸುಖಾಧಿಕಂ ॥ ೪೧ ॥
ಸ್ವಕಂಠಂ ಘರ್ಷಯತ್ಯೇವ ಕೇಕಿಕಂಠೇ ಭುಜಂಗಮಃ ।
ಭುಜಂಗಮಫಣಾಪೃಷ್ಠೇ ನಕುಲಃ ಸ್ವಕುಲೋಚಿತಂ ॥ ೪೨ ॥
ವೈರಂ ಪರಿತ್ಯಜ್ಯ ಲುಠೇದುತ್ಪ್ಲುತ್ಯೋತ್ಪ್ಲುತ್ಯ ಲೀಲಯಾ ।
ಆಲೋಕ್ಯ ಮೂಷಕಂ ಸರ್ಪಶ್ಚರಂತಂ ವದನಾಗ್ರತಃ ॥ ೪೩ ॥

---

೩೮–೪೦. ಅಲ್ಲದೆ ಅದು ಬಾಲವನ್ನಲುಗಾಡಿಸುತ್ತ ನೊರೆದುಂಬಿದ ಮುಖವುಳ್ಳದಾಗಿ ಆ ಹುಲಿಯ ಮೊಲೆಯಲ್ಲಿ ಹಾಲುಕುಡಿಯುತ್ತಿದೆ. ಮಲಗಿರುವ ಕರಡಿಯ ಕೂದಲುಗಳನ್ನು ಕೆದರಿ ಕೋಡಗವು ಹೇನುಗಳನ್ನು ಹುಡುಕಿ ತೆಗೆದು ಕುಕ್ಕಿ ತಿನ್ನುತ್ತಿದೆ. ಕೆಂಪುಮೂತಿಯ ಗೋಲಾಂಗೂಲಗಳೆಂಬ ಕೋಡಗಗಳೂ ನೀಲಿಬಣ್ಣದ ದೊಡ್ಡ ಕೋತಿಗಳೂ ತಮ್ಮತಮ್ಮ ಜಾತಿಗೆ ಸಹಜವಾದ ಮಾತ್ಸರ್ಯವನ್ನು ಬಿಟ್ಟು ಒಂದೇ ಕಡೆಯಲ್ಲಿಯೇ ಆಟವಾಡುತ್ತಿವೆ. ಮೊಲಗಳು ತೋಳಗಳ ಬೆನ್ನೇರಿ ಉರುಳಾಡುತ್ತ ಅವುಗಳೊಡನೆ ಸರಸವಾಗಿ ಕ್ರೀಡಿಸುತ್ತಿವೆ.

೪೧. ಇಲಿಯು ಬೆಕ್ಕಿನ ಕಿವಿಗಳನ್ನು ಮುಖವಲುಗಾಡಿಸುತ್ತ ಕೆರೆಯುತ್ತಿದೆ. ಬೆಕ್ಕುಗಳು ನವಿಲಿನ ಗರಿಗಳ ಅಡಿ ಬಹು ಸುಖವಾಗಿ ನಿದ್ರೆಮಾಡುತ್ತಿವೆ.

೪೨–೪೫. ನಾಗಸರ್ಪವು ನವಿಲಿನ ಕುತ್ತಿಗೆಯಲ್ಲಿ ಮೈನವೆಯಿಂದ ತಿಕ್ಕುತ್ತಿದೆ. ಆ ಸರ್ಪದ ಹೆಡೆಯ ಮೇಲೇರಿ ಮುಂಗುಸಿಯು ತನ್ನ ಜಾತಿಗೆ ಅನುಗುಣವಾದ ವಿಪರೀತಭಾವವನ್ನು ತೊರೆದು, ಲೀಲೆಯಿಂದ ಹಾರಿ ಹಾರಿ ಉರುಳಾಡುತ್ತಿದೆ ಸರ್ಪವು ತನ್ನ ಬಾಯ ಬಳಿ ಓಡಾಡುತ್ತಿದ್ದರೂ, ಬಹಳ ಮಟ್ಟಿಗೆ ಹಸಿವಾಗಿದ್ದರೂ ಸಹ, ಇಲಿಯನ್ನು ಹಿಡಿಯುತ್ತಿಲ್ಲ. ಅದೂ ಸಹ ಆ ಸರ್ಪಕ್ಕೆ ಅಂಜದೆ ಸುಖವಾಗಿ ಕ್ರೀಡಿಸುತ್ತಿದೆ. ವ್ಯಾಘ್ರವು ಈಯುತ್ತಿರುವ ಹೆಣ್ಣುಜಿಂಕೆಯನ್ನು ನೋಡಿ, ದಯೆಯಿಂದ ಕಂಬನಿದುಂಬಿದ ಕಣ್ಣುಗಳುಳ್ಳದಾಗಿ, ಆ ಜಿಂಕೆಯ ಕಣ್ಣಿಗೆ ತಾನು ಬೀಳಬಾರದೆಂದು ಬಗೆದು ಮರೆಯಾಗಿ

ಕ್ಷುಧಾಽಂಧೋಽಪಿ ನ ಗೃಹ್ಣಾತಿ ಸೋಽಪಿ ತಸ್ಮಾದ್ಬಿಭೇತಿ ನೋ ।
ಪ್ರಸೂಯಮಾನಾಂ ಹರಿಣೀಂ ದೃಷ್ಟ್ವಾ ಕಾರುಣ್ಯಪೂರ್ಣದೃಕ್ ॥ ೪೪ ॥
ತದ್ದೃಷ್ಟಿಪಾತಂ ಮುಂಚನ್ವೈ ವ್ಯಾಘ್ರೋ ದೂರಂ ವ್ರಜತ್ಯಹೋ ।
ವ್ಯಾಘ್ರೀ ವ್ಯಾಘ್ರಸ್ಯ ಚರಿತಂ ಮೃಗೀ ಮೃಗವಿಚೇಷ್ಟಿತಂ ।
ಉಭೇ ಕಥಯತೋಽನ್ಯೋನ್ಯಂ ಸಖ್ಯಾವಿವ ಮುದಾಽನ್ವಿತೇ ॥ ೪೫ ॥
ದೃಷ್ಟ್ವಾಽಪ್ಯುದ್ದಂಡಕೋದಂಡಂ ಶಬರಂ ಶಂಬರೋ ಮೃಗಃ ।
ಧೃಷ್ಟೋ ನ ಪಥ್ಯಂ ತ್ಯಜತಿ ಸೋಽಪಿ ಕಂಡೂಯತೇಽಪಿ ತಂ ॥ ೪೬ ॥
ರೋಹಿತೋಽರಣ್ಯಮಹಿಷಮುದ್ಘರ್ಷತಿ ನಿರಾಕುಲಃ ।
ಚಮರೀ ಶಬರೀಕೇಶೈಃ ಸಂಮಿಮೀತೇ ಸ್ವವಾಲಧಿಂ ॥ ೪೭ ॥
ಗವಯಃ ಶಲ್ಯಕಶ್ಚಾಽಯುಮುಭಾವೇಕತ್ರ ತಿಷ್ಠತಃ ।
ತೀವ್ರಮಾತ್ಸರ್ಯಮುತ್ಸೃಜ್ಯ ಮುನಿತೇಜೋನಿಯಂತ್ರಿತೌ ॥ ೪೮ ॥
ಹುಂಡೌ ಚ ಮುಂಡಯುದ್ಧಾಯ ನ ಸಜ್ಜೇತೇ ಜಯೈಷಿಣೌ ।
ಏಣಶಾವಂ ಸೃಗಾಲೋಽಪಿ ಮೃದು ಸ್ಪೃಶತಿ ಪಾಣಿನಾ ॥ ೪೯ ॥

---

ದೂರ ಸರಿಯುತ್ತಿದೆ. ಹೆಣ್ಣುಹುಲಿಯು ತನ್ನ ಗಂಡನ ಆ ನಡತೆಯನ್ನೂ ಹೆಣ್ಣು ಜಿಂಕೆಯು ತನ್ನ ನಲ್ಲನ ಆ ನಡತೆಯನ್ನೂ ಅನ್ಯೋನ್ಯಸ್ನೇಹವಿದ್ದವರಂತೆ ಒಂದ ರೊಡನೊಂದು ಹೇಳಿಕೊಂಡು ಸಂತೋಷಗೊಳ್ಳುತ್ತಿವೆ.

೪೬. ಬಹಳ ನೀಳವಾದ ಬಿಲ್ಲನ್ನು ಹಿಡಿದು ಬರುತ್ತಿರುವ ಬೇಡನನ್ನು ಕಂಡು ಶಂಬರಮೃಗವು ಧೈರ್ಯಗೊಂಡು ದಾರಿಯನ್ನು ಬಿಡದೆ ಅಡ್ಡಗಟ್ಟು ತ್ತದೆ. ಆ ಬೇಡನೂ ಸಹ ಆ ಮೃಗವನ್ನು ದಯೆಯಿಂದ ಕರೆದು ಸಂತೈಸು ತ್ತಿದ್ದಾನೆ.

೪೭. ಸಾರಂಗವು ಕಾಡೆಮ್ಮೆಯನ್ನು ಯಾವೊಂದು ಭಯವೂ ಇಲ್ಲದೆ ಸೋಕಿ ಆಟವಾಡುತ್ತಿದೆ. ಚಮರೀಮೃಗವು ಬೇಡಿತಿಯ ಕೇಶರಾಶಿಯಿಂದ ತನ್ನ ಬಾಲವನ್ನು ಅಳೆಯುತ್ತಿದೆ.

೪೮. ಗವಯಮೃಗವೂ ಶಲ್ಯಕ ಮೃಗವೂ ಪರಸ್ಪರವಾದ ವಿಷಮ ವೈರವನ್ನು ತೊರೆದು ಈ ಅಗಸ್ತ್ಯಮುನಿಯ ಪ್ರಭಾವ ವಿಶೇಷದಿಂದ ಒಂದೆಡೆ ಯಲ್ಲಿಯೇ ನಿಂತಿವೆ.

೪೯. ನೀರಾನೆಗಳು ಹುಂಕಾರಮಾಡಿ ಒಂದನ್ನೊಂದು ಗೆಲ್ಲಬೇಕೆಂಬ ಹುರುಡನ್ನು ತೊರೆದು ಶಾಂತವಾಗಿವೆ. ಜಿಂಕೆಮರಿಯನ್ನು ನರಿಯು ತನ್ನ ಕೈಯಿಂದ ಬಹು ಮೃದುವಾಗಿ ಮುಟ್ಟಿ ಸವರುತ್ತಿದೆ.

ತೃಣ್ವಂತಿ ತೃಣಗುಲ್ಮಾದೀನ್ ಶ್ವಾಪದಾಸ್ತ್ವಾಪದಾಸ್ಪದಂ ।
ಲೋಕದ್ವಯೇ ದುಃಖದಂ ಹಿ ಧಿಕ್ ತನ್ಮಾಂಸಸ್ಯ ಭಕ್ಷಣಂ ॥ ೫೦ ॥
ಯಃ ಸ್ವಾರ್ಥಂ ಮಾಂಸಪಚನಂ ಕುರುತೇ ಪಾಪಮೋಹಿತಃ ।
ಯಾವಂತ್ಯಸ್ಯ ತು ರೋಮಾಣಿ ತಾವತ್ಸ ನರಕೇ ವಸೇತ್ ॥ ೫೧ ॥
ಪರಪ್ರಾಣೈಸ್ತು ಯೇ ಪ್ರಾಣಾನ್ ಸ್ವಾನ್ಪುಷ್ಣಂತಿ ಹಿ ದುರ್ಧಿಯಃ ।
ಆಕಲ್ಪಂ ನರಕಾನ್ಭುಕ್ತ್ವಾ ತೇ ಭುಜ್ಯಂತೇಽತ್ರ ತೈಃ ಪುನಃ ॥ ೫೨ ॥
ಜಾತು ಮಾಂಸಂ ನ ಭೋಕ್ತವ್ಯಂ ಪ್ರಾಣೈಃ ಕಂಠಗತೈರಪಿ ।
ಭೋಕ್ತವ್ಯಂ ತರ್ಹಿ ಭೋಕ್ತವ್ಯಂ ಸ್ವಮಾಂಸಂ ನೇತರಸ್ಯ ಚ ॥ ೫೩ ॥
ವರಮೇತೇ ಶ್ವಾಪದಾ ವೈ ಮೈತ್ರಾವರುಣಿಸೇವಯಾ ।
ಯೇಷಾಂ ನ ಹಿಂಸನೇ ಬುದ್ಧಿರ್ನ ತು ಹಿಂಸಾಪರಾ ನರಾಃ ॥ ೫೪ ॥
ಬಕೋಽಪಿ ಪಲ್ವಲೇ ಮತ್ಸ್ಯಾನ್ನಾಽಶ್ನಾತ್ಯಗ್ರೇಚರಾನಪಿ ।
ನ ಮಹಾಂತೋಽಪ್ಯಮಹತೋ ಮತ್ಸ್ಯಾ ಮತ್ಸ್ಯಾನದಂತಿ ವೈ ॥ ೫೫ ॥

---

೫೦. ಹುಲಿಯೇ ಮೊದಲಾದ ಕ್ರೂರ ಜಂತುಗಳು ಈ ಮಾಂಸಭಕ್ಷಣವು ಉಭಯ ಲೋಕಗಳಲ್ಲೂ ದುಃಖವನ್ನುಂಟುಮಾಡತಕ್ಕುದೇ ಎಂದು ಬಗೆದು, ಹುಲ್ಲು ಮೇಯುತ್ತಿವೆ. ಅಂತೆಯೇ ತೋಳ ನರಿ ಮೊದಲಾದುವು ಆಪತ್ತನ್ನು ತರುವ ಮಾಂಸಭಕ್ಷಣವನ್ನು ಬದಿಗಿಟ್ಟು ಪೊದೆಗಳನ್ನು ಮೇಯುತ್ತಿವೆ.

೫೧. ಯಾವನು ಪಾಪಿಷ್ಠನಾಗಿ ತನಗಾಗಿಯೇ ಮಾಂಸವನ್ನು ಬೇಯಿಸುತ್ತಾನೆಯೋ ಅವನು ಆ ಮೃಗದ ಮಯ್ಯಲ್ಲಿ ಎಷ್ಟು ರೋಮಗಳಿರುವುವೊ ಅಷ್ಟು ವರ್ಷಗಳಕಾಲ ನರಕವಾಸಿಯಾಗುತ್ತಾನೆ.

೫೨. ಯಾವ ದುರಾತ್ಮರು ಇತರರ ಪ್ರಾಣಗಳನ್ನು ತೆಗೆದು ತಮ್ಮ ಪ್ರಾಣಗಳನ್ನು ಪುಷ್ಟಿಗೊಳಿಸಿಕೊಳ್ಳುವರೊ ಅವರು ಕಲ್ಪಾಂತದವರೆಗೂ ನರಕಗಳನ್ನು ಅನುಭವಿಸಿ, ಆ ತರುವಾಯ ಈ ಲೋಕದಲ್ಲಿಯೂ ಜನ್ಮವೆತ್ತಿದ ಬಳಿಕ ಆ ಇತರರಿಂದಲೆ ಭಕ್ಷಿಸಲ್ಪಡುತ್ತಾರೆ.

೫೩. ಪ್ರಾಣಗಳು ಕುತ್ತಿಗೆಗೆ ಹತ್ತಿಬಂದರೂ ಕೂಡ ಮಾಂಸವನ್ನು ತಿನ್ನಲೇಬಾರದು ಹಾಗೆ ತಿನ್ನಬೇಕಾಗಿ ಬಂದರೂ ತನ್ನ ಮಾಂಸವನ್ನು ತಾನೇ ತಿನ್ನಬೇಕಾಗಲಿ ಇತರ ಪ್ರಾಣಿಗಳ ಮಾಂಸವನ್ನು ಮುಟ್ಟಬಾರದು.

೫೪. ಈ ತಪೋವನದಲ್ಲಿರುವ ಮೃಗಗಳೆಲ್ಲವೂ ಮೈತ್ರಾವರುಣಿಯಾದ ಅಗಸ್ತ್ಯಮುನಿಯ ಸೇವೆಯ ಪ್ರಭಾವದಿಂದ ಅತ್ಯುತ್ತಮಗಳಾಗಿ ಪರಿಣಮಿಸಿವೆ. ಇವುಗಳಿಗೆ ಹಿಂಸಾಬುದ್ಧಿಯೇ ಇರುವುದಿಲ್ಲ. ಇಲ್ಲಿರುವ ಮಾನವರೂ ಹಿಂಸೆಯನ್ನುಳಿದು ಶಾಂತಿಯಿಂದ ನಡೆದುಕೊಳ್ಳುತ್ತಿದ್ದಾರೆ.

೫೫. ಬಕವು ಕೊಳಗಳಲ್ಲಿ ಮೀನುಗಳು ತಮ್ಮ ಮುಂದೆಯೇ ಚಲಿಸಿ

ಏಕತಃ ಸರ್ವಮಾಂಸಾನಿ ಮತ್ಸ್ಯಮಾಂಸಂ ತಥೈಕತಃ ।
ಸ್ಮೃತಿಃ ಸ್ಮೃತೇತಿ ಕಿಂತ್ವೇಭಿರತೋ ಮತ್ಸ್ಯಾನ್ನಹತ್ಯಮೀ ॥ ೫೬ ॥
ಶ್ಯೇನೋಽಪಿ ವರ್ತಿಕಾಂ ದೃಷ್ಟ್ವಾ ಭವತ್ಯೇಷ ಪರಾಙ್ಮುಖಃ ।
ಚಿತ್ರಮತ್ರಾಽಪಿ ಮಧುಪಾ ಭ್ರಮಂತಿ ಮಲಿನಾಶಯಾಃ ॥ ೫೭ ॥
ಸುಚಿರಂ ನರಕಾನ್ಭುಕ್ತ್ವಾ ಮದಿರಾಪಾನಲಂಪಟಾಃ ।
ಮಧುಪಾ ಏವ ಗಾಯಂತೇ ಭ್ರಾಂತಿಭಾಜಃ ಪುನಃ ಪುನಃ ॥ ೫೮ ॥
ಅತ ಏವ ಪುರಾಣೇಷು ಗಾಥೇತಿ ಪರಿಗೀಯತೇ ।
ಸ್ಫುಟಾಽರ್ಥಾತ್ರ ಪುರಾಣಜ್ಞೈರ್ಜ್ಞಾತ್ವಾ ತತ್ವಂ ಪಿನಾಕಿನಃ ॥ ೫೯ ॥
ಕ್ವ ಮಾಂಸಂ ಕ್ವ ಶಿವೇ ಭಕ್ತಿಃ ಕ್ವ ಮದ್ಯಂ ಕ್ವ ಶಿವಾರ್ಚನಂ ।
ಮದ್ಯಪಾನರತಾನಾಂ ಚ ದೂರೇ ತಿಷ್ಠತಿ ಶಂಕರಃ ॥ ೬೦ ॥
ವಿನಾ ಶಿವಪ್ರಸಾದಂ ಹಿ ಭ್ರಾಂತಿಃ ಕ್ವಾಽಪಿ ನ ನಶ್ಯತಿ ।
ಅತ ಏವ ಭ್ರಮಂತ್ಯೇತೇ ಭ್ರಮರಾಃ ಶಿವವರ್ಜಿತಾಃ ॥ ೬೧ ॥

---

ಹೋಗುತ್ತಿದ್ದರೂ ಅವುಗಳನ್ನು ಭಕ್ಷಿಸುತ್ತಿಲ್ಲ. ದೊಡ್ಡ ಮೀನುಗಳು ಸಣ್ಣ ಪುಟ್ಟ ಮೀನುಗಳನ್ನು ಭಕ್ಷಿಸುತ್ತಿಲ್ಲ.

೫೬-೫೮. ಮಹಾ ಮತ್ಸ್ಯಾದಿ ಈ ಪ್ರಾಣಿಗಳು ಜಗತ್ತಿನ ಎಲ್ಲ ಪ್ರಾಣಿಗಳ ಮಾಂಸವೂ ಒಂದು ತೂಕವಾದರೆ, ಮತ್ಸ್ಯದ ಮಾಂಸವೇ ಒಂದು ತೂಕ ಎಂಬ ಬುದ್ಧಿಯಿಂದ ಅವುಗಳನ್ನು ತಿನ್ನದೆ ತೊರೆದಿರುತ್ತವೆ ಗಿಡುಗವೂ ಸಹ ಕಾಡುಪಾರಿವಾಳವನ್ನು ಕಂಡು ಹಿಮ್ಮೆಟ್ಟುತ್ತಿದೆ. ದುಂಬಿಗಳು ಬುದ್ಧಿಗೆಟ್ಟು ಹಿಂದಿನ ಜನ್ಮದಲ್ಲಿ ಮದ್ಯಪಾನ ಮಾಡಿದ ಪಾಪದ ಫಲವಾಗಿ ಬಹಳಕಾಲ ನರಕವನ್ನನುಭವಿಸಿ ದುಃಖಗೊಂಡವುಗಳಂತೆ, ಇನ್ನು ಮುಂದೆ ಆ ನರಕದುಃಖವು ತಮಗೆ ಬಾರದಿರಲೆಂದು ಅವುಗಳುಂಡ ಮಧುವನ್ನು ಆಡಿಗಡಿಗೂ ವಮನ ಮಾಡುತ್ತಿವೆ, ಅಲ್ಲದೆ ಅಮಲೇರಿ ಭ್ರಾಂತಿಗೆ ತುತ್ತಾಗಿ ಝುಂಕಾರ ನಾದವನ್ನೂ ಮಾಡುತ್ತಿವೆ.

೫೯. ಆದುದರಿಂದಲೆ ಪುರಾಣಗಳಲ್ಲಿ ಗಾಥೆಗಳೆಂಬವು ಹೇಳಲ್ಪಟ್ಟಿವೆ. ಈ ಗಾಥೆಗಳ ವಿಷಯದಲ್ಲಿ ಪುರಾಣವನ್ನು ಬಲ್ಲವರ ಮೂಲಕ ಶಿವತತ್ತ್ವವನ್ನು ತಿಳಿದುಕೊಳ್ಳಬೇಕು. ಅಂತಹ ಗಾಥೆಗಳಲ್ಲಿ ಇದೊಂದು

೬೦. "ಮಾಂಸವೆಲ್ಲಿ? ಶಿವಭಕ್ತಿಯೆಲ್ಲಿ? ಮದ್ಯವೆಲ್ಲಿ? ಶಿವಾರ್ಚನೆಯೆಲ್ಲಿ? ಈ ಮದ್ಯಮಾಂಸಗಳಲ್ಲಿ ಆಸಕ್ತರಾದ ಮಾನವರಿಗೆ ಶಂಕರನು ಬಹಳ ದೂರವಾಗಿರುತ್ತಾನೆ.

೬೧. ಪರಶಿವನ ಅನುಗ್ರಹವಿಲ್ಲದೆ ಭ್ರಾಂತಿಯು ಎಂದಿಗೂ ಕಳೆಯುವುದಿಲ್ಲ. ಆದುದರಿಂದಲೇ ಈ ಭ್ರಮರಗಳು ಶಿವವರ್ಜಿತಗಳಾಗಿ (ಈಶ್ವರನಿಗೆ ವಿಮುಖಳಾಗಿ) ಭ್ರಮಿಸುತ್ತಿವೆ."

ಇತ್ಯಾಶ್ರಮಚರಾನ್ದೃಷ್ಟ್ವಾ ತಿರ್ಯಂಚೋಽಪಿ ಮುನೀನಿವ ।
ಅಬೋಧಿ ವಿಬುಧೈರಿತ್ಥಂ ಪ್ರಭಾವಃ ಕ್ಷೇತ್ರಜಸ್ತ್ವಯಂ ॥ ೬೨ ॥
ಯತೋ ವಿಶ್ವೇಶ್ವರೇಣೈತೇ ತಿರ್ಯಂಚೋಽಪ್ಯತ್ರ ವಾಸಿನಃ ।
ನಿಧನಾವಸರೇ ಮೋಚ್ಯಾಸ್ತಾರಕಸ್ಯೋಪದೇಶತಃ ॥ ೬೩ ॥
ಜ್ಞಾತ್ವಾ ಕ್ಷೇತ್ರಸ್ಯ ಮಾಹಾತ್ಮ್ಯಂ ಯೋ ವಸೇತ್ಕೃತನಿಶ್ಚಯಃ ।
ತಂ ತಾರಯತಿ ವಿಶ್ವೇಶೋ ಜೀವಂತಮಥವಾ ಮೃತಂ ॥ ೬೪ ॥
ಅವಿಮುಕ್ತರಹಸ್ಯಜ್ಞಾ ಮುಚ್ಯಂತೇ ಜ್ಞಾನಿನೋ ನರಾಃ ।
ಅಜ್ಞಾನಿನೋಽಪಿ ತಿರ್ಯಂಚೋ ಮುಚ್ಯಂತೇ ಗತಕಿಲ್ಬಿಷಾಃ ॥ ೬೫ ॥
ಇತ್ಯಾಶ್ಚರ್ಯಪರಾ ದೇವಾ ಯಾವದ್ಯಾಂತ್ಯಾಶ್ರಮಂ ಮುನೇಃ ।
ತಾವತ್ಪಕ್ಷಿಕುಲಂ ದೃಷ್ಟ್ವಾ ಭೃಶಂ ಮುಮುದಿರೇ ಪುನಃ ॥ ೬೬ ॥
ಸಾರಸೋ ಲಕ್ಷ್ಮಣಾಕಂಠೇ ಕಂಠಮಾಧಾಯ ನಿಶ್ಚಲಃ ।
ಮನ್ಯಾಮಹೇ ನ ನಿದ್ರಾತಿ ಧ್ಯಾಯೇದ್ವಿಶ್ವೇಶ್ವರಂ ಕಿಲ ॥ ೬೭ ॥

---

೬೨–೬೩. ಎಲೈ ಸೂತಮುನಿಯೆ, ಈ ಪ್ರಕಾರವಾಗಿ ಅಲ್ಲಿನ ತಿರ್ಯಗ್ಜಂತುಗಳೆಲ್ಲವನ್ನೂ ಕಂಡು ಅವುಗಳೆಲ್ಲವೂ ಮುನಿಗಳಂತೆಯೇ ವರ್ತಿಸುತ್ತಿರುವುದನ್ನರಿತು ಆ ವಿಬುಧರು ಅದು ಆ ತಪೋವನ (ಕ್ಷೇತ್ರ)ದ ಪ್ರಭಾವವೆಂದು ತಿಳಿದರು. ಇಲ್ಲಿ ವಾಸಮಾಡುತ್ತಿರುವ ತಿರ್ಯಗ್ಜಂತುಗಳಿಗೂ ಸಹ ಸಾಕ್ಷಾತ್ ವಿಶ್ವೇಶ್ವರನು ಅವಸಾನಕಾಲದಲ್ಲಿ ತಾರಕಮಂತ್ರೋಪದೇಶವನ್ನು ಮಾಡಿ ಮುಕ್ತಗಳನ್ನಾಗಿ ಮಾಡುವುದರಿಂದಲೇ ಇವುಗಳೆಲ್ಲವೂ ಈ ಮುನಿವೃತ್ತಿಯನ್ನವಲಂಬಿಸಿ ನಡೆಯುತ್ತಿವೆ. ಇದು ಈ ಕ್ಷೇತ್ರದ ಮಹಿಮೆಯೇ ಸರಿ.

೬೪–೬೫. ಇಂತಹ ಈ ಕ್ಷೇತ್ರದ ಮಾಹಾತ್ಮ್ಯವನ್ನು ಅರಿತುಕೊಂಡು ಇಲ್ಲಿಯೇ ವಾಸಮಾಡುವುದಾಗಿ ಸ್ಥಿರವಾದ ನಿಶ್ಚಯವನ್ನು ಮಾಡಿ ನೆಲಸುವ ಮಾನವನು ಬದುಕಲಿ ಅಥವಾ ಮೃತಿಯನ್ನು ಪಡೆಯಲಿ ಅವನನ್ನು ವಿಶ್ವೇಶ್ವರನು ಉದ್ಧಾರ ಮಾಡುತ್ತಾನೆ. ಅವಿಮುಕ್ತಕ್ಷೇತ್ರದ ರಹಸ್ಯವನ್ನು ತಿಳಿದ ಜ್ಞಾನಿಗಳು ಮೋಕ್ಷವನ್ನು ಪಡೆಯುತ್ತಾರೆ. ಅಜ್ಞಾನಿಗಳಾದ ತಿರ್ಯಗ್ಜಂತುಗಳೂ ಕೂಡ ಕಲ್ಮಷರಹಿತಗಳಾಗಿ ಮೋಕ್ಷವನ್ನೈದುತ್ತವೆ.

೬೬. ಹೀಗೆ ದೇವತೆಗಳೆಲ್ಲರೂ ಆ ಆಶ್ರಮದ ಪ್ರಭಾವವನ್ನು ಪರಿಭಾವಿಸಿ ಆಶ್ಚರ್ಯಗೊಂಡು ಆ ಪ್ರದೇಶದಲ್ಲಿ ಮುಂದುವರಿಯುತ್ತಿರಲು ಅಲ್ಲಿದ್ದ ಹಕ್ಕಿಗಳ ಬಳಗವನ್ನು ಕಂಡು ಮತ್ತಷ್ಟು ಸಂತೋಷಗೊಂಡರು.

೬೭. ಆಹ! ಸಾರಸ ಪಕ್ಷಿಯು ತನ್ನ ನಲ್ಲೆಯ ಕತ್ತಿನ ಮೇಲೆ ಕತ್ತನ್ನಿಟ್ಟು ನಿಶ್ಚಲವಾಗಿ ಮಲಗಿದೆ. ಇದು ಮಲಗಿ ನಿದ್ರಿಸುತ್ತಿಲ್ಲ. ವಿಭುವಾದ ವಿಶ್ವೇಶ್ವರನನ್ನು ತದೇಕಾಯತ್ತಚಿತ್ತದಿಂದ ಧ್ಯಾನಮಾಡುತ್ತಿದೆ.

ಕಂಡೂಯಮಾನಾ ವರಟಾ ಸ್ವಯಂ ಚುಪುಟಕೋಟಿಭಿಃ ।
ಹಂಸಂ ಕಾಮಯಮಾನಂ ತು ವಾರಯೇತ್ಪಕ್ಷಧೂನನೈಃ ॥ ೬೮ ॥
ನಿರುಧ್ಯಮಾನಾ ಚಕ್ರೇಣ ಚಕ್ರೀ ಕ್ರೇಂಕಿತಭಾಷಣೈಃ ।
ವದತೀತಿ ಕಿಮತ್ರಾಽಪಿ ಕಾಮಿತಾ ಕಾಮಿನಾಂ ವರ ॥ ೬೯ ॥
ಕಲಕಂಠಃ ಕಿಲೋತ್ಕಂಠಂ ಮಂಜು ಗುಂಜತಿ ಕುಂಜಗಃ ।
ಧ್ಯಾನಸ್ಥಃ ಶ್ರೋಷ್ಯತಿ ಮುನಿಃ ಪಾರಾವತ್ಯೇತಿ ವಾರ್ಯತೇ ॥ ೭೦ ॥
ಕೇಕೀ ಕೇಕಾಂ ಪರಿತ್ಯಜ್ಯ ಮೌನಂ ತಿಷ್ಠತಿ ತದ್ಭಯಾತ್ ।
ಚಕೋರಶ್ಚಂದ್ರಿಕಾಭೋಕ್ತಾ ನಕ್ತವ್ರತಮಿವಾಸ್ಥಿತಃ ॥ ೭೧ ॥
ಪಠಂತೀ ಸಾರಿಕಾ ಸಾರಂ ಶುಕಂ ಸಂಬೋಧಯತ್ಯಹೋ ।
ಅಪಾರಾವಾರಸಂಸಾರಸಿಂಧುಪಾರಪ್ರದಃ ಶಿವಃ ॥ ೭೨ ॥
ಕೋಕಿಲಃ ಕೋಮಲಾಲಾಪೈಃ ಕಲಯನ್ಕಿಲ ಕಾಕಲೀಂ ।
ಕಲಿಕಾಲೌ ಕಲಯತಃ ಕಾಶೀಸ್ಥಾನ್ನೇತಿ ಭಾಷತೇ ॥ ೭೩ ॥

---

೬೮. ತನ್ನ ಕೊಕ್ಕಿನ ತುದಿಯಿಂದ ಕೆರೆದು ರತಿಗಾಗಿ ಹಂಬಲಿಸುತ್ತಿರುವ ಹಂಸಪಕ್ಷಿಯನ್ನು ಹೆಣ್ಣುಹಂಸೆ ರೆಕ್ಕೆಗಳನ್ನು ಕೊಡವಿ 'ಬೇಡ ಬೇಡ'ವೆಂದು ತಡೆಗಟ್ಟುತ್ತಿರುವುದೊ ಎಂಬಂತೆ ಕಂಗೊಳಿಸುತ್ತಿದೆ.

೬೯–೭೦. ಗಂಡುಚಕ್ರವಾಕಪಕ್ಷಿಯು ಕ್ರೇಂಕಾರಧ್ವನಿ ಪೂರ್ಣವಾಗಿ ಬೇಡಿಕೊಳ್ಳುತ್ತಿರಲು ಅದರ ನಲ್ಲೆಯಾದ ಚಕ್ರವಾಕಿಯು, "ಓ ಕಾಮುಕಶ್ರೇಷ್ಠ! ಏನೇನು, ಈ ತಪೋವನದಲ್ಲಿಯೂ ಇಂತಹ ಕಾಮವಾಸನೆಯೆ? ಸಾಕುಮಾಡು" ಎನ್ನುವಂತಿದೆ. ಬಹು ಮಧುರವಾದ ಕಂಠಸ್ವರವುಳ್ಳ ಗಂಡುಪಾರಿವಾಳವು ಕತ್ತೆತ್ತಿ ಅವ್ಯಕ್ತಮಧುರವಾದ ಶಬ್ದವನ್ನು ಮಾಡುತ್ತಿರಲು, ಲತಾನಿಕುಂಜದಲ್ಲಿ ಅಡಗಿರುವ ಈ ಹೆಣ್ಣುಪಾರಿವಾಳವು, "ಅಯ್ಯೊ ಸುಮ್ಮನಿರು. ಅಗಸ್ತ್ಯಮುನಿಯು ಧ್ಯಾನಾಸಕ್ತನಾಗಿದ್ದಾನೆ, ಕೇಳಿಯಾನು!" ಎನ್ನುವಂತಿದೆ.

೭೧. ನವಿಲು ಕೇಕೆ ಹಾಕುವುದನ್ನು ತೊರೆದು ಮುನಿಯ ಭಯದಿಂದ ಮೌನವಾಗಿ ಕುಳಿತಿದೆ. ಚಂದ್ರಕಿರಣಗಳನ್ನು ಮೆಲ್ಲುವ ಚಕೋರವು ನಕ್ತವ್ರತವನ್ನು ತೊಟ್ಟಿರುವುದೊ ಎಂಬಂತೆ ಒಪ್ಪಿ ಮೆರೆಯುತ್ತಿದೆ.

೭೨. ಹೆಣ್ಣುಗಿಳಿ ಗಂಡುಗಿಳಿಗೆ "ಎಲ್ಲೈ ಕೇಳು. ಶಿವನು ತಡಿಗಾಣದ ಈ ಭವಸಾಗರದಲ್ಲಿ ಮುಳುಗಿರುವ ಭಕ್ತರನ್ನು ಪಾರುಗಾಣಿಸಿ ಸಲಹುತ್ತಾನೆ" ಎಂದು ಉಪದೇಶಿಸುತ್ತಿದೆ.

೭೩. ಕೋಗಿಲೆಯು ಕೋಮಲವಾದ ಆಲಾಪದಿಂದ ಕಲಿಯಾಗಲಿ ಯಮನಾಗಲಿ ಕಾಶಿವಾಸಿಗಳನ್ನು ಎಂದಿಗೂ ಮುತ್ತುವುದಿಲ್ಲ ಎಂದು ಅವ್ಯಕ್ತ ಮಧುರವಾಗಿ ನುಡಿಯುತ್ತಿದೆ

ಮೃಗಾಣಾಂ ಪಕ್ಷಿಣಾಮಿತ್ಥಂ ದೃಷ್ಟ್ವಾ ಚೇಷ್ಟಾಂ ತ್ರಿವಿಷ್ಟಪಂ ।
ಅಕಾಂಡಪಾತಸಂಕಷ್ಟಂ ನಿನಿಂದುಸ್ತ್ರಿದಶಾ ಬಹು ॥ ೭೪ ॥
ವರಮೇತೇ ಪಕ್ಷಿಮೃಗಾಃ ಪಶವಃ ಕಾಶಿವಾಸಿನಃ ।
ಯೇಷಾಂ ನ ಪುನರಾವೃತ್ತಿರ್ನ ದೇವಾ ನ ಪುನರ್ಭವಾಃ ॥ ೭೫ ॥
ಕಾಶೀಸ್ಥೈಃ ಪತಿತೈಸ್ತುಲ್ಯಾ ನ ವಯಂ ಸ್ವರ್ಗಿಣಃ ಕ್ವಚಿತ್ ।
ಕಾಶ್ಯಾಂ ಪಾತಾದ್ಭಯಂ ನಾಸ್ತಿ ಸ್ವರ್ಗೇ ಪಾತಾದ್ಭಯಂ ಮಹತ್ ॥ ೭೬ ॥
ವರಂ ಕಾಶೀಪುರೀವಾಸೋ ಮಾಸೋಪವಸನಾದಿಭಿಃ ।
ವಿಚಿತ್ರಛತ್ರಸಂಛಾಯಂ ರಾಜ್ಯಂ ನಾಽನ್ಯತ್ರ ನೀರಿಪುಃ ॥ ೭೭ ॥
ಶಶಕೈರ್ಮಶಕೈಃ ಕಾಶ್ಯಾಂ ಯತ್ಪದಂ ಹೇಲಯಾಪ್ಯತೇ ।
ತತ್ಪದಂ ನಾಪ್ಯತೇಽನ್ಯತ್ರ ಯೋಗಯುಕ್ತ್ಯಾಽಪಿ ಯೋಗಿಭಿಃ ॥ ೭೮ ॥
ವರಂ ವಾರಾಣಸೀರಂಕೋ ನಿಃಶಂಕೋ ಯೋ ಯಮಾದಪಿ ।
ನ ವಯಂ ತ್ರಿದಶಾ ಯೇಷಾಂ ಗಿರಿತೋಪೀದೃಶೀ ದಶಾ ॥ ೭೯ ॥

---

೭೪–೭೫. ಎಲೈ ಸೂತಮಹಾಮುನಿಯೆ, ದೇವತೆಗಳೆಲ್ಲರೂ ಹೀಗೆ ಆ ಅಗಸ್ತ್ಯಾಶ್ರಮದ ಮೃಗಪಕ್ಷಿಸಂಕುಲವನ್ನು ಕಂಡು, ಇದ್ದಕ್ಕಿದ್ದಂತೆಯೆ ಪತನವನ್ನು ತಂದೊಡ್ಡಿ ಕಷ್ಟಕ್ಕೆ ಸಿಲುಕಿಸುವ ತಮ್ಮ ಸ್ವರ್ಗಲೋಕವನ್ನು ಬಹುವಾಗಿ ನಿಂದಿಸಿದರು. ಮತ್ತೆಮತ್ತೆ ಹುಟ್ಟುವ ಸ್ವಭಾವವನ್ನೊಳಗೊಂಡ ನಮ್ಮಂತಹ ದೇವತೆಗಳಾಗದೆ, ನೇರವಾಗಿ ಮೋಕ್ಷವನ್ನೇ ಪಡೆಯುವ ಕಾಶೀವಾಸಿಗಳಾದ ಈ ಪಶುಪಕ್ಷಿಗಳೆಲ್ಲವೂ ಎಷ್ಟೋ ಮೇಲು.

೭೬. ಸ್ವರ್ಗವಾಸಿಗಳಾದ ನಾವೆಲ್ಲರೂ ಈ ಕಾಶೀ ಕ್ಷೇತ್ರದಲ್ಲಿ ನೆಲಸಿರುವ ಪತಿತರಿಗೂ ಸಮಾನರಲ್ಲ. ಕಾಶಿಯಲ್ಲಿ ಪತನವೆಂಬುದರಿಂದ ಯಾವ ಭಯವೂ ಇರುವುದಿಲ್ಲ. ಅದೇ ಸ್ವರ್ಗಲೋಕದಲ್ಲಿ ಪತನವೇನಾದರೂ ಆದರೆ ಮಹತ್ತರವಾದ ಭಯವುಂಟು

೭೭. ಮಾಸೋಪವಾಸಾದಿ ವ್ರತಗಳನ್ನಾಚರಿಸುತ್ತ ಕಾಶೀಕ್ಷೇತ್ರದಲ್ಲಿ ವಾಸಮಾಡುವುದು ಸರ್ವೋತ್ತಮವಾದುದು. ಅದಕ್ಕೆ ಸಮಾನವಾದುದು ವಿಚಿತ್ರವಾದ ಶ್ವೇತಚ್ಛತ್ರದ ನೆಳಲನ್ನೊಳಗೊಂಡ ರಾಜ್ಯವೂ ಸಹ ಅಲ್ಲ.

೭೮. ಈ ಕಾಶೀ ಕ್ಷೇತ್ರದಲ್ಲಿ ಮಶಕಶಶಕಗಳೂ (ಮೊಲ, ಸೊಳ್ಳೆಗಳು) ಯಾವ ಪದವಿಯನ್ನು ಪಡೆಯುತ್ತವೆಯೊ ಆ ಉತ್ತಮಪದವಿಯನ್ನು ಬೇರೆ ಕಡೆಗಳಲ್ಲಿ ಯೋಗಾಸಕ್ತರಾದ ಸ್ತ್ರೀರಾತ್ರಿಂದಲೂ ಪಡೆಯಲಾಗುವುದಿಲ್ಲ.

೭೯ ಯಮಭಯವಿಲ್ಲದೆ ಇಲ್ಲಿಯೆ ಇರುವ ಈ ವಾರಾಣಸಿಯ ಆಶ್ರಯವು ಉತ್ತಮೋತ್ತಮವಾದುದು. ನಾವು ದೇವತೆಗಳಾಗಿದ್ದರೂ ನಮ್ಮ ಈಗಿನ ದಶೆಯು ವಿಂಧ್ಯಗಿರಿಯಿಂದಲೂ ಹೀನಾಯವಾಗಿದೆ

ಬ್ರಹ್ಮಣೋ ದಿವಸಾಽಷ್ಟಾಂಶೇ ಪದಮೈಂದ್ರಂ ವಿನಶ್ಯತಿ ।
ಸಲೋಕಪಾಲಂ ಸಾರ್ಕಂ ಚ ಸಚಂದ್ರಗ್ರಹತಾರಕಂ ॥ ೮೦ ॥
ಪರಾರ್ಧದ್ವಯನಾಶೇಽಪಿ ಕಾಶೀಸ್ಥೋ ಯೋ ನ ನಶ್ಯತಿ ।
ತಸ್ಮಾತ್ಸರ್ವಪ್ರಯತ್ನೇನ ಕಾಶ್ಯಾಂ ಶ್ರೇಯಃ ಸಮಾಚರೇತ್ ॥ ೮೧ ॥
ಯತ್ಸುಖಂ ಕಾಶಿವಾಸೇಽತ್ರ ನ ತದ್ಬ್ರಹ್ಮಾಂಡಮಂಡಪೇ ।
ಅಸ್ತಿ ಚೇತ್ತತ್ಕಥಂ ಸರ್ವೇ ಕಾಶೀವಾಸಾಭಿಲಾಷುಕಾಃ ॥ ೮೨ ॥
ಜನ್ಮಾಂತರಸಹಸ್ರೇಷು ಯತ್ಪುಣ್ಯಂ ಸಮುಪಾರ್ಜಿತಂ ।
ತತ್ಪುಣ್ಯಪರಿವರ್ತೇನ ಕಾಶ್ಯಾಂ ವಾಸೋಽತ್ರ ಲಭ್ಯತೇ ॥ ೮೩ ॥
ಲಬ್ಧೋಽಪಿ ಸಿದ್ಧಿರ್ನೋ ಯಾಯಾದ್ಯದಿ ಕ್ರುದ್ಧ್ಯೇತ್ತ್ರಿಲೋಚನಃ ।
ತಸ್ಮಾದ್ವಿಶ್ವೇಶ್ವರಂ ನಿತ್ಯಂ ಶರಣ್ಯಂ ಶರಣಂ ವ್ರಜೇತ್ ॥ ೮೪ ॥
ಧರ್ಮಾರ್ಥಕಾಮಮೋಕ್ಷಾಖ್ಯಂ ಪುರುಷಾರ್ಥಚತುಷ್ಟಯಂ ।
ಅಖಂಡಂ ಹಿ ಯಥಾ ಕಾಶ್ಯಾಂ ನ ತಥಾಽನ್ಯತ್ರ ಕುತ್ರಚಿತ್ ॥ ೮೫ ॥
ಆಲಸ್ಯೇನಾಽಪಿ ಯೋ ಯಾಯಾದ್ಗೃಹಾದ್ವಿಶ್ವೇಶ್ವರಾಲಯಂ ।
ಅಶ್ವಮೇಧಾಧಿಕೋ ಧರ್ಮಸ್ತಸ್ಯ ಸ್ಯಾಚ್ಚ ಪದೇ ಪದೇ ॥ ೮೬ ॥

---

೮೦. ಬ್ರಹ್ಮನ ಒಂದು ದಿನದ ಎಂಟನೆಯ ಒಂದು ಅಂಶದ ಕಾಲವಾದ ಮೇಲೆ ಲೋಕಪಾಲಕರನ್ನೂ ಸೂರ್ಯ ಚಂದ್ರರನ್ನೂ ಗ್ರಹನಕ್ಷತ್ರಗಳನ್ನೂ ಒಡಗೊಂಡಿರುವ ಇಂದ್ರನ ತ್ರೈಲೋಕ್ಯಾಧಿಪತ್ಯವು ನಾಶವಾಗಿ ಹೋಗುತ್ತದೆ.

೮೧. ಆದರೆ, ಈ ಕಾಶೀಕ್ಷೇತ್ರದಲ್ಲಿ ವಾಸವಾಗಿರುವವನು ಅದೇ ಬ್ರಹ್ಮನಿಗೆ ಶತಮಾನವು ಪೂರ್ತಿಯಾಗಿ ಪ್ರಾಕೃತಿಕ ಪ್ರಳಯವೇ ಆಗಿಹೋದರೂ ನಾಶವನ್ನೈದುವುದಿಲ್ಲ ಆದುದರಿಂದ ಪ್ರತಿಯೊಬ್ಬರೂ ಕಾಶಿಯಲ್ಲಿಯೇ ಶ್ರೇಯಸ್ಕರವಾದ ಸತ್ಕರ್ಮಗಳನ್ನು ಆಚರಿಸಬೇಕು.

೮೨ ಕಾಶಿಯಲ್ಲಿ ವಾಸಮಾಡುವುದರಿಂದುಂಟಾಗುವ ಸುಖವು ಬ್ರಹ್ಮಾಂಡ ಮಂಡಲದಲ್ಲಿಯೇ ಇರುವುದಿಲ್ಲ ಹಾಗೊಂದು ವೇಳೆ ಇದ್ದುದಾದರೆ ಸಮಸ್ತರೂ ಕಾಶೀವಾಸವನ್ನೇ ಏಕೆ ಅಪೇಕ್ಷಿಸುತ್ತಾರೆ?

೮೩ ಒಂದು ಸಾವಿರ ಜನ್ಮಗಳಲ್ಲಿ ಆರ್ಜಿಸಿದ ಪುಣ್ಯಪರಿಪಾಕದಿಂದ ಕಾಶೀ ವಾಸವು ಲಭಿಸುತ್ತದೆ.

೮೪ ಹಾಗೊಂದುವೇಳೆ ಕಾಶೀವಾಸವು ಸಿದ್ಧಿಸಿದರೂ ಕಾಶೀಪತಿಯಾದ ವಿಶ್ವೇಶ್ವರನು ಪ್ರಸನ್ನನಾಗದಿದ್ದರೆ ಅದು ನಿಷ್ಪ್ರಯೋಜನವಾಗುವುದು. ಆದುದರಿಂದ ಶಾಶ್ವತನೂ ಶರಣ್ಯನೂ ಆದ ವಿಶ್ವೇಶ್ವರನಲ್ಲಿಗೆ ಶರಣು ಹೋಗಬೇಕು

೮೫. ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳು ಈ ಕಾಶೀ ಕ್ಷೇತ್ರದಲ್ಲಿ ಅಖಂಡವಾಗಿರುವಂತೆ ಮತ್ತೆಲ್ಲಿಯೂ ಇರುವುದಿಲ್ಲ

೮೬. ಬೇಸರದಿಂದಾದರೂ ಮನೆಯನ್ನು ತೊರೆದು ವಿಶ್ವೇಶ್ವರನ ಆಲಯ

ಯಃ ಸ್ನಾತ್ವೋತ್ತರವಾಹಿನ್ಯಾಂ ಯಾತಿ ವಿಶ್ವೇಶದರ್ಶನೇ ।
ಶ್ರದ್ಧಯಾ ಪರಯಾ ತಸ್ಯ ಶ್ರೇಯಸೋಽಂತೋ ನ ವಿದ್ಯತೇ ॥ ೮೭ ॥
ಸ್ವರ್ಧುನೀದರ್ಶನಾತ್ಸ್ಪರ್ಶಾತ್ಸ್ನಾನಾದಾಚಮನಾದಪಿ ।
ಸಂಧ್ಯೋಪಾಸನತೋ ಜಪ್ಯಾತ್ತರ್ಪಣಾದ್ದೇವಪೂಜನಾತ್ ॥ ೮೮ ॥
ಪಂಚತೀರ್ಥಾವಲೋಕಾಚ್ಚ ತತೋ ವಿಶ್ವೇಶ್ವರೇಕ್ಷಣಾತ್ ।
ಶ್ರದ್ಧಾಸ್ಪರ್ಶನಪೂಜಾಭ್ಯಾಂ ಧೂಪದೀಪಾದಿದಾನತಃ ॥ ೮೯ ॥
ಪ್ರದಕ್ಷಿಣೈಃ ಸ್ತೋತ್ರಜಪ್ಯೈರ್ನಮಸ್ಕಾರೈಸ್ತು ನರ್ತನೈಃ ।
ದೇವ ದೇವ ಮಹಾದೇವ ಶಂಭೋ ಶಿವಶಿವೇತಿ ಚ ॥ ೯೦ ॥
ಧೂರ್ಜಟೇ ನೀಲಕಂಠೇಶ ಪಿನಾಕಿಂಛಶಿಶೇಖರ ।
ತ್ರಿಶೂಲಪಾಣೇ ವಿಶ್ವೇಶ ರಕ್ಷರಕ್ಷೇತಿ ಭಾಷಣೈಃ ॥ ೯೧ ॥
ಮುಕ್ತಿಮಂಡಪಿಕಾಯಾಂ ಚ ನಿಮೇಷಾರ್ಧೋಪವೇಶನಾತ್ ।
ತತ್ರ ಧರ್ಮಕಥಾಲಾಪಾತ್ಪುರಾಣಶ್ರವಣಾದಪಿ ॥ ೯೨ ॥
ನಿತ್ಯಾದಿಕರ್ಮಕರಣಾತ್ತಥಾಽತಿಥಿಸಮರ್ಚನೈಃ ।
ಪರೋಪಕರಣಾದ್ಯೈಶ್ಚ ಧರ್ಮಃ ಸ್ಯಾದುತ್ತರೋತ್ತರಃ ॥ ೯೩ ॥
ಶುಕ್ಲಪಕ್ಷೇ ಯಥಾ ಚಂದ್ರಃ ಕಲಯಾ ಕಲಯೈಧತೇ ।
ಏವಂ ಕಾಶ್ಯಾಂ ನಿವಸತಾಂ ಧರ್ಮರಾಶಿಃ ಪದೇ ಪದೇ ॥ ೯೪ ॥

---

ವೆನಿಸಿದ ಕಾಶೀಕ್ಷೇತ್ರವನ್ನು ಕುರಿತು ಯಾತ್ರೆ ಹೋಗುವವನು ಒಂದೊಂದು ಅಡಿಗೂ ಅಶ್ವಮೇಧಕ್ಕೂ ಮೀರಿದ ಧರ್ಮವನ್ನು ಪಡೆಯುತ್ತಾನೆ.

೮೭. ಯಾವನು ಉತ್ತರವಾಹಿನಿಯೆನಿಸಿದ ಗಂಗೆಯಲ್ಲಿ ಸ್ನಾನವನ್ನುಮಾಡಿ, ಉತ್ತಮಶ್ರದ್ಧೆಯಿಂದ ವಿಶ್ವೇಶ್ವರನ ಸಂದರ್ಶನಾರ್ಥಿಯಾಗಿ ಹೋಗುತ್ತಾನೆಯೊ ಅವನಿಗೆ ಲಭಿಸುವ ಶ್ರೇಯಸ್ಸಿಗೆ ಅಂತ್ಯವೇ ಇರುವುದಿಲ್ಲ.

೮೮–೯೪. ದೇವಗಂಗಾನದಿಯ ದರ್ಶನ ಸ್ಪರ್ಶನಗಳಿಂದಲೂ ಸ್ನಾನ ಶುದ್ಧಾಚಮನಗಳಿಂದಲೂ ಸಂಧ್ಯೋಪಾಸನ ಜಪ ತರ್ಪಣ ದೇವ ಪೂಜನಾದಿಗಳಿಂದಲೂ ಕಪಾಲಮೋಚನ ಪಾಪಮೋಚನ ಋಣಮೋಚನ ಕುಲಸ್ತಂಭ ವೈತರಣಿಗಳೆಂಬ ಪಂಚತೀರ್ಥಗಳ ಸಂದರ್ಶನದಿಂದಲೂ, ಆ ತರುವಾಯ ವಿಶ್ವೇಶ್ವರರನ್ನು ಸಂದರ್ಶಿಸುವುದರಿಂದಲೂ ಆ ಸ್ವಾಮಿಯನ್ನು ಶ್ರದ್ಧೆಯಿಂದ ಸ್ಪರ್ಶಿಸಿ ಪೂಜಿಸಿ ಧೂಪ ದೀಪಾದಿಗಳನ್ನು ಸಮರ್ಪಿಸಿ ಪ್ರದಕ್ಷಿಣೆಮಾಡಿ, ಸ್ತೋತ್ರ ಜಪ ನಮಸ್ಕಾರ ನರ್ತನಗಳಿಂದ "ದೇವದೇವ! ಮಹಾದೇವ! ಶಂಭೊ! ಶಿವಶಿವಾ! ಧೂರ್ಜಟಿ! ನೀಲಕಂಠ! ಈಶ! ಪಿನಾಕಿ! ಶಶಿಶೇಖರ! ತ್ರಿಶೂಲಪಾಣೇ! ವಿಶ್ವೇಶ್ವರ! ಕಾಪಾಡು ಕಾಪಾಡು!" ಎಂಬ ನುಡಿಗಳಿಂದಲೂ ಸೇವೆಮಾಡಿ ಮುಕ್ತಿಮಂಟಪದಲ್ಲಿ ಅರೆಗಳಿಗೆ ಕುಳಿತು ಅಲ್ಲಿ ಧರ್ಮಕಥಾಲಾಪಗಳನ್ನೂ

ಶ್ರದ್ಧಾಬೀಜೋ ವಿಪ್ರಪಾದಾಂಬುಸಿಕ್ತಃ
ಶಾಖಾವಿದ್ಯಾಸ್ತಾಶ್ಚತಸ್ರೋ ದಶಾಽಪಿ ।
ಪುಷ್ಪಾಣ್ಯರ್ಥಾದ್ವೇ ಫಲೇ ಸ್ಥೂಲಸೂಕ್ಷ್ಮೇ
ಮೋಕ್ಷಃ ಕಾಮೋ ಧರ್ಮವೃಕ್ಷೋಽಯಮಿಡ್ಯಃ ॥೯೫॥
ಸರ್ವಾರ್ಥಾನಾಮತ್ರ ದಾತ್ರೀ ಭವಾನೀ
ಸರ್ವಾನ್ಕಾಮಾನ್ಪೂರಯೇದತ್ರ ಢುಂಢಿಃ ।
ಸರ್ವಾನ್ ಜಂತೂನ್ಮೋಚಯೇದಂತಕಾಲೇ
ವಿಶ್ವೇಶೋಽತ್ರ ಶ್ರೋತ್ರಮಂತ್ರೋಪದೇಶಾತ್ ॥ ೯೬ ॥
ಕಾಶ್ಯಾಂ ಧರ್ಮಸ್ತಚ್ಚತುಷ್ಪಾದರೂಪಃ
ಕಾಶ್ಯಾಂ ಘರ್ಮಃ ಸೋಽಪ್ಯನೇಕ ಪ್ರಕಾರಃ ।
ಕಾಶ್ಯಾಂ ಕಾಮಃ ಸರ್ವಸೌಖ್ಯೈಕಭೂಮಿಃ
ಕಾಶ್ಯಾಂ ಶ್ರೇಯಸ್ತತ್ತು ಕಿಂ ನಾತ್ರ ಯಚ್ಚ ॥ ೯೭ ॥

---

ಪುರಾಣಶ್ರವಣವನ್ನು ಮಾಡಿದ ತರುವಾಯ ನಿತ್ಯಕರ್ಮವನ್ನಾಚರಿಸಿ ಅತಿಥಿಗಳನ್ನು ಪೂಜಿಸಿ ಪರೋಪಕಾರವೇ ಮೊದಲಾದ ಸದ್ಧರ್ಮವನ್ನಾಚರಿಸಿದಲ್ಲಿ ಒಂದಕ್ಕಿಂತಲೂ ಒಂದು ಮಹತ್ತರವಾದ ಪುಣ್ಯವನ್ನು ಗಳಿಸಿಕೊಡುತ್ತದೆ. ಶುಕ್ಲಪಕ್ಷದಲ್ಲಿಯ ಚಂದ್ರನು ದಿನದಿನವೂ ಕಲಾಸಮೃದ್ಧಿಯಿಂದ ಹೇಗೆ ಅಭಿವೃದ್ಧಿಯನ್ನೈದುವನೊ ಹಾಗೆಯೇ ಕಾಶಿಯಲ್ಲಿ ವಾಸಮಾಡುವವರಿಗೂ ಅಡಿಗಡಿಗೂ ಧರ್ಮರಾಶಿಯು ಬೆಳೆಯುತ್ತ ಬರುವುದು.

೯೫. ಶ್ರದ್ಧೆಯೆಂಬ ಬೀಜವನ್ನು ಬಿತ್ತಿ, ಬ್ರಾಹ್ಮಣರ ಪಾದೋದಕವನ್ನು ಹಾಕಿದುದರಿಂದ ಚತುರ್ದಶ ವಿದ್ಯೆಗಳೆಂಬ ಕೊಂಬೆಗಳಿಂದ ಕಂಗೊಳಿಸಿ, ಚತುರ್ವಿಧ ಪುರುಷಾರ್ಥಗಳೆಂಬ ಪುಷ್ಪಗಳಿಂದ ಸೊಗಸುಗೊಂಡು, ಸ್ಥೂಲಸೂಕ್ಷ್ಮ ಸ್ವರೂಪಗಳಾಗಿರುವ ಕಾಮಮೋಕ್ಷಗಳೆಂಬ ಫಲದ್ವಯವಿರಾಜಿತವಾಗಿ ಶೋಭಿಸುತ್ತಿರುವ ಶ್ರೀ ಕಾಶೀ ಎಂಬ ಧರ್ಮವೃಕ್ಷವು ಸಮಸ್ತಮಾನವರಿಗೂ ಪೂಜ್ಯವಾದುದು.

೯೬–೯೭. ಈ ಕಾಶೀ ಕ್ಷೇತ್ರದಲ್ಲಿ ಅಧಿಷ್ಠಾತ್ರಿಯಾಗಿ ವಿರಾಜಿಸುತ್ತಿರುವ ಭವಾನೀದೇವಿಯು ಭಕ್ತರ ಸರ್ವಾಭೀಷ್ಟಗಳನ್ನೂ ಸಲ್ಲಿಸುವಳು. ಢುಂಢೀಶ್ವರನು (ಗಣಪತಿಯು) ಸರ್ವಕಾಮಗಳನ್ನೂ ಸಂಪೂರ್ಣಗೊಳಿಸುವನು. ವಿಶ್ವೇಶ್ವರನು ಇಲ್ಲಿ ನೆಲಸಿರುವ ಸಮಸ್ತ ಪ್ರಾಣಿಗಳಿಗೂ ಅವಸಾನಕಾಲದಲ್ಲಿ ತಾರಕಮಂತ್ರೋಪದೇಶಮಾಡಿ ಸಂಸಾರಸಾಗರದಿಂದ ಪಾರುಮಾಡಿ ಮುಕ್ತಿಯನ್ನು ದಯಪಾಲಿಸುವನು. ಕಾಶಿಯಲ್ಲಿ ಧರ್ಮವು ನಾಲ್ಕು ಪಾದಗಳಿಂದ ನೆಲಸಿದೆ. ಕಾಶಿಯಲ್ಲಿ ಅರ್ಥವು (ಸಂಪತ್ತು) ಅನೇಕ ಪ್ರಕಾರವಾಗಿ ಬೆಳಗುತ್ತಿದೆ. ಇಲ್ಲಿನ ಕಾಮವು

ವಿಶ್ವೇಶ್ವರೋ ಯತ್ರ ನ ತತ್ರ ಚಿತ್ರಂ
ಧರ್ಮಾರ್ಥಕಾಮಾಽಮೃತರೂಪರೂಪಃ ।
ಸ್ವರೂಪರೂಪಃ ಸ ಹಿ ವಿಶ್ವರೂಪ
ಸ್ತಸ್ಮಾನ್ನ ಕಾಶೀಸದೃಶೀ ತ್ರಿಲೋಕೀ ॥ ೯೮ ॥
ಇತಿ ಬ್ರುವಾಣಾ ಗೀರ್ವಾಣಾ ದದೃಶುಸ್ತೂಟಜಂ ಮುನೇಃ ।
ಹೋಮಧೂಮಸುಗಂಧಾಢ್ಯಂ ಬಟುಭಿರ್ಬಹುಭಿರ್ವೃತಂ ॥ ೯೯ ॥
ಶ್ಯಾಮಾಕಾಂಜಲಿಯಾಚ್ಞಾರ್ಥಮೃಷಿಕನ್ಯಾಽನುಯಾಯಿಭಿಃ ।
ಧೃತೋಪಗ್ರಹದರ್ಭಾಸ್ಯೈರ್ಮೃಗಶಾವೈರಲಂಕೃತಂ ॥ ೧೦೦ ॥
ಸಾಽಽದ್ರವಲ್ಕಲಕೌಪೀನೈರ್ವೃಕ್ಷಶಾಖಾಽವಲಂಬಿಭಿಃ ।
ಬದ್ಧಂ ವಿಘ್ನಮೃಗಾನ್ ದಿಕ್ಷು ವಾಗುರಾಭಿರಿವಾವೃತಂ ॥ ೧೦೧ ॥
ಪತಿವ್ರತಾಶಿರೋರತ್ನಲೋಪಾಮುದ್ರಾಂಘ್ರಿಮುದ್ರಯಾ ।
ಮುದ್ರಿತಂ ವೀಕ್ಷ್ಯ ಸನ್ನೇಮುಃ ಪರ್ಣಶಾಲಾಽಂಗಣಂ ಸುರಾಃ ॥ ೧೦೨ ॥

---

ಸಮಸ್ತ ಜೀವರಾಶಿಗಳಿಗೂ ಸೌಖ್ಯವನ್ನು ದೊರಕಿಸುವ ಏಕಭೂಮಿಕೆಯಾಗಿ ಬೆಳಗುತ್ತಿದೆ. ಶ್ರೇಯಸ್ಸಂತೂ ಇದ್ದೇ ಇದೆ. ಇಲ್ಲಿ ಇಲ್ಲದಿರುವುದು ಏನುತಾನೆ ಬೇರೆಡೆಗಳಲ್ಲಿ ಇದ್ದೀತು!

೯೮. ಧರ್ಮಾರ್ಥ ಕಾಮಮೋಕ್ಷಗಳ ಸಾಕ್ಷಾತ್ ಸ್ವರೂಪವನ್ನು ತಳೆದು ಸ್ವಸ್ವರೂಪದಿಂದ ಸುಮನೋಹರನಾಗಿ ವಿಶ್ವಸ್ವರೂಪಿಯಾದ ವಿಶ್ವೇಶ್ವರನೇ ಇಲ್ಲಿ ನೆಲಸಿರುವನೆಂದಮೇಲೆ ಈ ಮೇಲೆ ಹೇಳಿರುವುವುಗಳೆಲ್ಲವೂ ಇಲ್ಲಿ ನೆಲೆಯಾಗಿ ನಿಂತಿರುವುವೆಂದರೆ ಆಶ್ಚರ್ಯವೇನೂ ಇರುವುದಿಲ್ಲ ಆದುದರಿಂದ ಈ ಕಾಶೀ ಕ್ಷೇತ್ರಕ್ಕೆ ಸಮಾನವಾದುದು ಮೂರು ಲೋಕಗಳಲ್ಲಿ ಮತ್ತಾವುದೂ ಇರುವುದಿಲ್ಲ.''

೯೯–೧೦೨. ಈ ಪ್ರಕಾರವಾಗಿ ಹೇಳಿಕೊಳ್ಳುತ್ತ ಆ ಗೀರ್ವಾಣರು, ಹೋಮ ಧೂಮದಿಂದ ಸುಗಂಧಭರಿತವಾಗಿ ಅನೇಕ ವಟುಗಳಿಂದ ತುಂಬಿ ತುಳುಕುತ್ತ, ದರ್ಭೆಯ ಕವಳಗಳಿಂದ ಕಂಗೊಳಿಸುವ ಮುಖಗಳುಳ್ಳವುಗಳಾಗಿ, ನವಣೆಯ ಅನ್ನದ ಹಿಡಿಗಳಿಗಾಗಿ ಆಶಿಸುತ್ತ ಋಷಿಕನ್ಯೆಯರನ್ನು ಹಿಂಬಾಲಿಸಿ ಬರುತ್ತಿರುವ ಮರಿಜಿಂಕೆಗಳಿಂದೊಪ್ಪಿ, ಆಶ್ರಮಕ್ಕೆ ವಿಘ್ನವನ್ನೊಡ್ಡುವ ಕ್ರೂರ ಮೃಗಗಳನ್ನು ಹಿಡಿಯಲೋಸುಗ ಹರಡಿರುವ ಬಲೆಗಳನ್ನು ಹೋಲುತ್ತಿರುವ ಮರದ ರೆಂಬೆಗಳಿಗೆ ಇಳಿಯಬಿಟ್ಟು ಒದ್ದೆಯಾದ ನಾರುಮಡಿಯ ಕೌಪೀನಗಳಿಂದ ಕೂಡಿದುದಾಗಿ, ಪತಿವ್ರತೆಯರಿಗೆಲ್ಲ ಶಿರೋರತ್ನಪ್ರಾಯಳಾದ ಲೋಪಾಮುದ್ರಾ ದೇವಿಯ ಚರಣ ಚಿಹ್ನೆಗಳಿಂದ ಚಿಹ್ನಿತವಾದುದೂ ಆದ ಅಗಸ್ತ್ಯಮಹಾ ಮುನಿಯ ಆ ಪರ್ಣಶಾಲೆಯನ್ನು ಕಂಡು ದೀರ್ಘದಂಡಪ್ರಣಾಮವನ್ನೆಸಗಿದರು.

ವಿಸರ್ಜಿತಸಮಾಧಿಂ ಚ ಧೃತಕರ್ಣಾಽಕ್ಷಮಾಲಿಕಂ ।
ಅಧಿಷ್ಠಿತಂ ಬೃಸೀಪೃಷ್ಠಂ ಪರಮೇಷ್ಠಿವದುತ್ಕಟಂ ॥ ೧೦೩ ॥
ಪುರೋಽಗಸ್ತ್ಯಂ ಸಮಾಲೋಕ್ಯ ಸರ್ವೇ ದೇವಾಃ ಸವಾಸವಾಃ ।
ಪ್ರಹೃಷ್ಟವದನಾಃ ಪ್ರೋಚುಃ ಪ್ರೋಚ್ಚೈರ್ಜಯಜಯೇತಿ ಚ ॥ ೧೦೪ ॥
ಮುನಿರುತ್ಥಾಯ ತಾನ್ಸರ್ವಾನುಪಾವೇಶ್ಯ ಯಥೋಚಿತಂ ।
ಆಶೀರ್ಭಿರಭಿನಂದ್ಯಾಽಥ ಪಪ್ರಚ್ಛಾಗಮಕಾರಣಂ ॥ ೧೦೫ ॥

ವ್ಯಾಸ ಉವಾಚ :—

ಇದಂ ಪುಣ್ಯತಮಾಖ್ಯಾನಂ ಶ್ರುತ್ವಾ ಭಕ್ತಿಸಮನ್ವಿತಃ ।
ಪಠಿತ್ವಾ ಪಾಠಯಿತ್ವಾ ಚ ವ್ರತಶ್ರದ್ಧಾವತಾಂ ಪುರಃ ॥ ೧೦೬ ॥
ವಿಧೂಯ ಸರ್ವಪಾಪಾನಿ ಜ್ಞಾತ್ವಾಽಜ್ಞಾತ್ವಾ ಕೃತಾನ್ಯಪಿ ।
ಹಂಸವರ್ಣೇನ ಯಾನೇನ ಗಚ್ಛೇಚ್ಛಿವಪುರಂ ಧ್ರುವಂ ॥ ೧೦೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಽಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಅಗಸ್ತ್ಯಾಶ್ರಮವರ್ಣನಂ" ನಾಮ ತೃತೀಯೋಽಧ್ಯಾಯಃ

---

೧೦೩–೧೦೪. ಸಮಾಧಿಯಿಂದೆದ್ದು, ಅಕ್ಷಮಾಲಿಕೆಯನ್ನು ಧರಿಸಿ ದರ್ಭಾಸನವನ್ನಲಂಕರಿಸಿ ಪರಮೇಷ್ಠಿಯಂತೆ ಉತ್ತಮೋತ್ತಮನಾಗಿ ಕಂಗೊಳಿಸುತ್ತಿದ್ದ ಆ ಅಗಸ್ತ್ಯಮುನಿಯನ್ನು ಕಂಡೊಡನೆಯೆ ವಾಸವಾದಿ ಸಮಸ್ತ ದೇವತೆಗಳೂ ಸಂತೋಷದಿಂದ ಅರಳಿದ ಮುಖಗಳುಳ್ಳವರಾಗಿ ಉಚ್ಚಧ್ವನಿಯಿಂದ "ಜಯ ಜಯ" ಎಂದರು.

೧೦೫. ಅಗಸ್ತ್ಯಮುನಿಯೂ ಆಸನವನ್ನು ಬಿಟ್ಟೆದ್ದು ಆ ದೇವತೆಗಳೆಲ್ಲರನ್ನೂ ಅವರವರಿಗೆ ಉಚಿತವಾದ ಆಸನಗಳಲ್ಲಿ ಕುಳ್ಳಿರಿಸಿ ಆಶೀರ್ವದಿಸಿ ಅಭಿನಂದಿಸಿದ ತರುವಾಯ, ತನ್ನ ಆಶ್ರಮಕ್ಕೆ ಚಿತ್ತೈಸಿದ ಕಾರಣವನ್ನು ಕುರಿತು ಪ್ರಶ್ನಿಸಿದನು.

೧೦೬–೧೦೭. ವ್ಯಾಸನು ಹೇಳುತ್ತಾನೆ —ಪುಣ್ಯತಮವಾದ ಈ ಆಖ್ಯಾನವನ್ನು ಯಾವನು ಭಕ್ತಿಸಮನ್ವಿತನಾಗಿ ಕೇಳುತ್ತಾನೆಯೊ, ಯಾವನು ಶ್ರದ್ಧಾವಂತರ ಮುಂಗಡೆ ಓದಿಯೂ ಓದಿಸಿಯೂ ತಿಳಿದು ತಿಳಿಸುತ್ತಾನೆಯೊ ಅವನು ತಿಳಿದೊ ತಿಳಿಯದೆಯೊ ಮಾಡಿದ ಪಾಪಗಳೆಲ್ಲವನ್ನೂ ಕೊಡವಿಕೊಂಡು ಹಂಸವರ್ಣ ವಿರಾಜಿತವಾದ ವ್ಯೋಮಯಾನದಲ್ಲಿ ಕುಳಿತು ಶಿವಪುರಿಯಾದ ಕೈಲಾಸಕ್ಕೆ ಹೋಗುತ್ತಾನೆ. ಇದರಲ್ಲಿ ಸಂಶಯವಿಲ್ಲವು

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಅಗಸ್ತ್ಯಾಶ್ರಮ ವರ್ಣನ"ವೆಂಬ ಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಚತುರ್ಥೋಽಧ್ಯಾಯಃ

### ಪತಿವ್ರತಾಖ್ಯಾನಂ

ಸೂತ ಉವಾಚ :—

ಮುನಿಪೃಷ್ಟಾಸ್ತದಾ ದೇವಾ ಭಗವಂಸ್ತೇ ಕಿಮಬ್ರುವನ್ ।
ಸರ್ವಲೋಕಹಿತಾರ್ಥಾಯ ತದಾಖ್ಯಾಹಿ ಮಹಾಮುನೇ ॥ ೧ ॥

ಶ್ರೀವ್ಯಾಸ ಉವಾಚ —

ಅಗಸ್ತಿವಚನಂ ಶ್ರುತ್ವಾ ಬಹುಮಾನಪುರಸ್ಸರಂ ।
ಧಿಷಣಾಧಿಪತೇರಾಸ್ಯಂ ವಿಬುಧಾ ವ್ಯಾಲುಲೋಕಿರೇ ॥ ೨ ॥

ವಾಕ್ಪತಿರುವಾಚ :—

ಶೃಣ್ವಗಸ್ತೇ ಮಹಾಭಾಗ ದೇವಾಗಮನಕಾರಣಂ ।
ಧನ್ಯೋಽಸಿ ಕೃತಕೃತ್ಯೋಽಸಿ ಮಾನ್ಯೋಽಸಿ ಮಹತಾಮಪಿ ॥ ೩ ॥
ಪ್ರತ್ಯಾಶ್ರಮಂ ಪ್ರತಿನಗಂ ಪ್ರತ್ಯರಣ್ಯಂ ತಪೋಧನಾಃ ।
ಕಿಂ ನ ಸಂತಿ ಮುನಿಶ್ರೇಷ್ಠ ಕಾಚಿದನ್ಯೈವ ತೇ ಸ್ಥಿತಿಃ ॥ ೪ ॥

---

## ಕನ್ನಡದ ಅನುವಾದ

### ಪತಿವ್ರತಾಖ್ಯಾನ

೧. ಸೂತಮುನಿಯು ಪ್ರಶ್ನಿಸುತ್ತಾನೆ —ಎಲೈ ವ್ಯಾಸಮಹಾಮುನಿಯೆ, ಅಗಸ್ತ್ಯಮುನಿಯು ಆ ರೀತಿ ಪ್ರಶ್ನಿಸಿದಮೇಲೆ ದೇವತೆಗಳು ಏನೆಂದು ಹೇಳಿದರು? ಭೋ ಭಗವನ್! ಸಮಸ್ತ ಲೋಕಗಳಿಗೂ ಹಿತವಾಗುವುದಕ್ಕೋಸ್ಕರ ನೀನು ಈ ಆಖ್ಯಾನವನ್ನು ಅಪ್ಪಣೆಕೊಡಿಸುವವನಾಗು.

೨. ವ್ಯಾಸನು ಹೇಳುತ್ತಾನೆ —ಎಲೈ ಸೂತಪುರಾಣಿಕನೆ, ಅಗಸ್ತ್ಯ ಮಹರ್ಷಿಯ ಮಾತುಗಳನ್ನು ಕೇಳಿ ದೇವತೆಗಳೆಲ್ಲರೂ ತಮ್ಮ ವಿಷಯವನ್ನು ಆತನಿಗೆ ಅರಿಕೆಮಾಡಿಕೊಳ್ಳಲೋಸುಗ ತಮ್ಮ ಗುರುವಾದ ಬೃಹಸ್ಪತ್ಯಾಚಾರ್ಯರ ಮುಖವನ್ನು ಬಹುಮಾನ ಪುರಸ್ಸರವಾಗಿ ನೋಡಿದರು.

೩. ವಾಕ್ಪತಿಯು ಹೇಳುತ್ತಾನೆ:—ಎಲೈ ಮಹಾ ಪುಣ್ಯಶಾಲಿಯಾದ ಅಗಸ್ತ್ಯಮುನಿಯೆ, ಕೇಳು. ದೇವತೆಗಳು ನಿನ್ನ ಆಶ್ರಮಕ್ಕೆ ಬಿಜಮಾಡಿದುದರ ಕಾರಣವನ್ನು ಅರಿಕೆಮಾಡುತ್ತೇನೆ. ನೀನು ಧನ್ಯನು. ಮಹಾತ್ಮರಿಗೂ ನೀನೇ ಮಾನ್ಯನಾಗಿರುವೆ.

೪. ಪ್ರತಿಯೊಂದು ಆಶ್ರಮದಲ್ಲಿರುವವರೂ ಪ್ರತಿಯೊಂದು ಪರ್ವತದಲ್ಲಿ ನೆಲಸಿರುವವರೂ ಪ್ರತಿಯೊಂದು ಅರಣ್ಯದಲ್ಲಿ ವಾಸಿಸುವವರೂ ಆದ

ತಪೋಲಕ್ಷ್ಮೀಸ್ತ್ವಯಿ ಯಾಽಸ್ತಿ ಬ್ರಾಹ್ಮಂ ತೇಜಸ್ತ್ವಯಿ ಸ್ಥಿರಂ ।
ಪುಣ್ಯಲಕ್ಷ್ಮೀಸ್ತ್ವಯಿ ಪರಾ ತ್ವಯ್ಯೌದಾರ್ಯಂ ಮನಸ್ತ್ವಯಿ ॥ ೫ ॥
ಪತಿವ್ರತೇಯಂ ಕಲ್ಯಾಣೀ ಲೋಪಾಮುದ್ರಾ ಸಧರ್ಮಿಣೀ ।
ತವಾಂಗಚ್ಛಾಯಯಾ ತುಲ್ಯಾ ಯತ್ಕಥಾ ಪುಣ್ಯಕಾರಿಣೀ ॥ ೬ ॥
ಪತಿವ್ರತಾಸ್ವರುಂಧತ್ಯಾ ಸಾವಿತ್ರ್ಯಾಽಪ್ಯನಸೂಯಯಾ ।
ಶಾಂಡಿಲ್ಯಯಾ ಚ ಸತ್ಯಾ ಚ ಲಕ್ಷ್ಮ್ಯಾ ಚ ಶತರೂಪಯಾ ॥ ೭ ॥
ಮೇನಯಾ ಚ ಸುನೀತ್ಯಾ ಚ ಸಂಜ್ಞಯಾ ಸ್ವಾಹಯಾ ತಥಾ ।
ಯಥೈಷಾ ವರ್ಣ್ಯತೇ ಶ್ರೇಷ್ಠಾ ನ ತಥಾಽನ್ಯೇತಿ ನಿಶ್ಚಿತಂ ॥ ೮ ॥
ಭುಂಕ್ತೇ ಭುಕ್ತೇ ತ್ವಯಿ ಮುನೇ ತಿಷ್ಠತಿ ತ್ವಯಿ ತಿಷ್ಠತಿ ।
ವಿನಿದ್ರಿತೇ ಚ ನಿದ್ರಾತಿ ಪ್ರಥಮಂ ಪ್ರತಿಬುಧ್ಯತೇ ॥ ೯ ॥
ಅನಲಂಕೃತಮಾತ್ಮಾನಂ ತವ ನೋ ದರ್ಶಯೇತ್ಕ್ವಚಿತ್ ।
ಕಾರ್ಯಾರ್ಥಂ ಪ್ರೋಷಿತೇ ಕ್ವಾಽಪಿ ಸರ್ವಮಂಡನವರ್ಜಿತಾ ॥ ೧೦ ॥

---

ತಪೋಧನರು ಎಷ್ಟು ಮಂದಿ ಇರುವುದಿಲ್ಲ. ಎಲೈ ಮುನಿಶ್ರೇಷ್ಠನೆ, ಆದರೆ ನಿನ್ನ ಇರುವಿಕೆಯೇ ಬೇರೆ ಬಗೆಯಾದುದು

೫. ನಿನ್ನಲ್ಲಿ ತಪೋಲಕ್ಷ್ಮಿಯು ನೆಲಸಿರುವಳಲ್ಲದೆ ಬ್ರಹ್ಮತೇಜಸ್ಸೂ ನಿನ್ನಲ್ಲಿ ಸ್ಥಿರವಾಗಿರುವುದು ಅತ್ಯುತ್ತಮವಾದ ಪುಣ್ಯಲಕ್ಷ್ಮಿಗೆ ನೀನೇ ನೆಲೆಯಾಗಿರುವೆಯಲ್ಲದೆ ನಿನ್ನ ಮನಸ್ಸು ಅನುಪಮವಾದ ಔದಾರ್ಯವನ್ನು ಒಳಗೊಂಡುದಾಗಿದೆ.

೬. ಯಾವಾಕೆಯು ನಿನ್ನ ಮೈನೆಳಲಿನಂತೆ ಇದ್ದುಕೊಂಡು, ಯಾವಾಕೆಯ ಚರಿತ್ರೆಯನ್ನು ಹೇಳಿಕೊಳ್ಳುವುದರಿಂದಲೆ ಪುಣ್ಯವು ಲಭಿಸುತ್ತದೆಯೊ ಅಂತಹ ಮಂಗಳಕರಳೂ ಪತಿವ್ರತೆಯೂ ಆದ ಲೋಪಾಮುದ್ರಾದೇವಿಯೇ ನಿನ್ನ ಸಹಧರ್ಮಿಣಿಯಾಗಿರುವಳು.

೭–೮. ಎಲೈ ಮುನಿಯೆ, ಪತಿವ್ರತೆಯರಲ್ಲಿ ಅರುಂಧತಿ ಸಾವಿತ್ರಿ ಅನಸೂಯ ಶಾಂಡಿಲ್ಯೆ ಸತಿ ಲಕ್ಷ್ಮಿ ಶತರೂಪ ಮೇನೆ ಸುನೀತಿ ಸಂಜ್ಞೆ ಸ್ವಾಹೆ ಇವರೆಲ್ಲರೊಡನೆಯೂ ನಿನ್ನ ಮಡದಿಯಾದ ಈ ಲೋಪಾಮುದ್ರೆಯು ಸಮಸಮವಾಗಿ ಹೇಗೆ ಪಾತಿವ್ರತ್ಯಕ್ಕೆ ನಿದರ್ಶನವಾಗಿ ವರ್ಣಿಸಲ್ಪಡುವಳೊ ಹಾಗೆ ಇತರ ಯಾವ ಸ್ತ್ರೀಯೂ ವರ್ಣಿಸಲ್ಪಡುವುದಿಲ್ಲ

೯. ಓ ಮುನಿಪುಂಗವ, ಈಕೆಯು ನೀನು ಭುಜಿಸಿದರೆ ಭೋಜನಮಾಡಿ, ನೀನು ಕುಳಿತರೆ ತಾನೂ ಕುಳಿತು, ನೀನು ನಿದ್ರಿಸಿದರೆ ನಿದ್ರಿಸಿ, ನೀನು ಎಚ್ಚರಗೊಳ್ಳುವ ಮೊದಲೇ ತಾನು ಎಚ್ಚರಗೊಳ್ಳುವಳು

೧೦. ಈಕೆಯು ಎಂದಿಗೇ ಆಗಲಿ ಅಲಂಕರಿಸಿಕೊಳ್ಳದೆ ನಿನ್ನ ಮುಂಗಡ

.. 4509

ನ ಚ ತೇ ನಾಮ ಗೃಹ್ಣೀಯಾತ್ತವಾಯುಷ್ಯವಿವೃದ್ಧಯೇ ।
ಪುರುಷಾಂತರನಾಮಾಽಪಿ ನ ಗೃಹ್ಣಾತಿ ಕದಾಚನ ॥ ೧೧ ॥
ಆಕ್ರುಷ್ಟಾಽಪಿ ನ ಚಾಕ್ರೋಶೇತ್ತಾಡಿತಾಽಪಿ ಪ್ರಸೀದತಿ ।
ಇದಂ ಕುರು ಕೃತಂ ಸ್ವಾಮಿನ್ಮನ್ಯತಾಮಿತಿ ವಕ್ತಿ ಚ ॥ ೧೨ ॥
ಆಹೂತಾ ಗೃಹಕಾರ್ಯಾಣಿ ತ್ಯಕ್ತ್ವಾಽಽಗಚ್ಛತಿ ಸತ್ವರಂ ।
ಕಿಮರ್ಥಂ ವ್ಯಾಹೃತಾ ನಾಥ ಸ ಪ್ರಸಾದೋ ವಿಧೀಯತಾಂ ॥ ೧೩ ॥
ನ ಚಿರಂ ತಿಷ್ಠತಿ ದ್ವಾರಿ ನ ದ್ವಾರಮುಪಸೇವತೇ ।
ಅದಾಪಿತಂ ತ್ವಯಾ ಕಿಂಚಿತ್ಕಸ್ಮೈಚಿನ್ನ ದದಾತ್ಯಪಿ ॥ ೧೪ ॥
ಪೂಜೋಪಕರಣಂ ಸರ್ವಮನುಕ್ತಾ ಸಾಧಯೇತ್ಸ್ವಯಂ ।
ನಿಯಮೋದಕಬರ್ಹೀಂಷಿ ಪತ್ರಪುಷ್ಪಾಕ್ಷತಾದಿಕಂ ॥ ೧೫ ॥

---

ನಿಲ್ಲುವುದಿಲ್ಲ. ನೀನು ಯಾವುದಾದರೂ ಕೆಲಸಕ್ಕಾಗಿ ಬೇರೊಂದೆಡೆಗೆ ಹೋಗಿರಲು ತಾನು ಏನೊಂದು ಅಲಂಕಾರವಿಲ್ಲದೆಯೇ ಇರುವಳು.

೧೧. ಈ ಮಹಾ ಸತಿವ್ರತೆಯು ನಿನ್ನ ಆಯುಷ್ಯವನ್ನು ಹೆಚ್ಚಿಸಲೋಸುಗ ಎಂದಿಗೇ ಆಗಲಿ ನಿನ್ನ ಹೆಸರನ್ನು ಹಿಡಿದು ಕೂಗುವುದಿಲ್ಲ. ಯಾವ ಸಮಯ ದಲ್ಲಿಯೂ ಪರಪುರುಷನ ಹೆಸರನ್ನಂತೂ ಉಸುರುವುದಿಲ್ಲ.

೧೨. ಕೋಪಗೊಳಿಸಿದರೂ ಈಕೆಯು ಕೋಪಗೊಳ್ಳುವುದಿಲ್ಲ. ಹೊಡೆದರೂ ಪ್ರಸನ್ನತೆಯನ್ನು ಬಿಡುವುದಿಲ್ಲ. ಈ ಕೆಲಸವನ್ನು ಮಾಡೆಂದು ಬೆಸಸಿದರೆ, " ಸ್ವಾಮಿನ್, ಈ ಕೆಲಸವನ್ನು ಮಾಡಿಯಾಯಿತೆಂದೇ ತಿಳಿದುಕೊಳ್ಳುವುದಾಗಲಿ " ಎಂದು ವಿನಯದಿಂದ ಮಧುರವಾಗಿ ಹೇಳುವಳು.

೧೩. ಕರೆದರೆ ಮನೆಗೆಲಸಗಳನ್ನು ಅಲ್ಲಿಗೇ ಬಿಟ್ಟು ಬಹುಬೇಗನೆ ಹೊರಟು ಬರುತ್ತಾಳೆ " ನಾಥ, ಕರೆದುದೇನು ? ಏನಪ್ಪಣೆ ? ಅನುಗ್ರಹವಾಗಬೇಕು " ಎಂದು ಬೇಡುತ್ತಾಳೆ

೧೪ ಬಹಳ ಹೊತ್ತು ಹೊರಬಾಗಿಲಿನಲ್ಲಿ ನಿಂತಿರುವುದಿಲ್ಲ. ನೀನು ಎಲ್ಲಿಗಾದರೂ ಹೋಗಿದ್ದಲ್ಲಿ ಬಾಗಿಲಿನಲ್ಲಿಯೇ ಕುಳಿತೂ ಇರುವುದಿಲ್ಲ. ಅಲ್ಲಿ ಮಲಗಿಯೂ ಇರುವುದಿಲ್ಲ ನೀನಾಗಿ ನೀನು ಕೊಡೆಂದು ಹೇಳದಿರುವ ಯಾವ ಪದಾರ್ಥವನ್ನೂ ಯಾರಿಗೂ ಕೊಡುವುದಿಲ್ಲ

೧೫–೧೬ ನಿಯಮೋದಕ ಬರ್ಹಿಸ್ಸು, ಪತ್ರ ಪುಷ್ಪ ಅಕ್ಷತೆ ಮೊದಲಾದ ದೇವತಾ ಪೂಜೆಗೆ ಬೇಕಾದ ಸಲಕರಣೆಗಳೆಲ್ಲವನ್ನೂ ಹೇಳಿಸಿಕೊಳ್ಳದೆಯೆ ಅಣಿಗೊಳಿಸಿ ಇಡುವಳು ಯಾವುದಕ್ಕಾದರೂ ಕಾಯಬೇಕಾದ ಸಂದರ್ಭಗಳಲ್ಲೆಲ್ಲ ಆಯಾಯ ಸಂದರ್ಭಗಳಲ್ಲಿ ಬೇಕುಬೇಕಾದುವುಗಳನ್ನೆಲ್ಲ ಯಾವೊಂದು ತಳ

ಪ್ರತೀಕ್ಷಮಾಣಾಽವಸರಂ ಯಥಾ ಕಾಲೋಚಿತಂ ಹಿ ಯತ್ ।
ತದುಪಸ್ಥಾಪಯೇತ್ಸರ್ವಮನುದ್ವಿಗ್ನಾಽತಿಹೃಷ್ಟವತ್ ॥ ೧೬ ॥
ದೇವತೇ ಭರ್ತುರುಚ್ಛಿಷ್ಟಮಿಷ್ಟಮನ್ನಂ ಫಲಾದಿಕಂ ।
ಮಹಾಪ್ರಸಾದ ಇತ್ಯುಕ್ತ್ವಾ ಪರಿದತ್ತಂ ಪ್ರತೀಚ್ಛತಿ ॥ ೧೭ ॥
ಅವಿಭಜ್ಯ ನ ಚಾಽಶ್ನೀಯಾದ್ದೇವಪಿತ್ರತಿಥಿಷ್ವಪಿ ।
ಪರಿಚಾರಕವರ್ಗೇಷು ಗೋಷು ಭಿಕ್ಷುಕುಲೇಷು ಚ ॥ ೧೮ ॥
ಸಂಯುತೋಪಸ್ಕರಾ ದಕ್ಷಾ ಹೃಷ್ಟಾ ವ್ಯಯಪರಾಙ್ಮುಖೀ ।
ಕುರ್ಯಾತ್ತ್ವಯಾಽನನುಜ್ಞಾತಾ ನೋಪವಾಸವ್ರತಾದಿಕಂ ॥ ೧೯ ॥
ದೂರತೋ ವರ್ಜಯೇದೇಷಾ ಸಮಾಜೋತ್ಸವದರ್ಶನಂ ।
ನ ಗಚ್ಛೇತ್ತೀರ್ಥಯಾತ್ರಾದಿವಿವಾಹಪ್ರೇಕ್ಷಣಾದಿಷು ॥ ೨೦ ॥
ಸುಖಸುಪ್ತಂ ಸುಖಾಸೀನಂ ರಮಮಾಣಂ ಯದೃಚ್ಛಯಾ ।
ಅಂತರೇಷ್ವಪಿ ಕಾರ್ಯೇಷು ಪತಿಂ ನೋತ್ಥಾಪಯೇತ್ಕ್ವಚಿತ್ ॥ ೨೧ ॥

---

ಮಳವೂ ಇಲ್ಲದೆ, ಯಾವೊಂದು ಆವೇಶವೂ ಇಲ್ಲದೆ ಬಹು ಸಂತೋಷದಿಂದ ಸಿದ್ಧಪಡಿಸಿಕೊಳ್ಳುವಳು.

೧೭. ಪತಿಯಾದ ನೀನು ತಿಂದು ಉಳಿದ ಇಷ್ಟಮಿಷ್ಟಾನ್ನಗಳನ್ನಾಗಲಿ ಫಲಾದಿಗಳನ್ನಾಗಲಿ ಮಹಾ ಪ್ರಸಾದವೆಂದುಕೊಂಡು, ನೀನು ಕೊಟ್ಟಿದ್ದನ್ನು ತಾನು ತೆಗೆದುಕೊಳ್ಳುವ ಧನ್ಯಾತ್ಮಳೀಕೆಯು.

೧೮–೧೯. ದೇವತೆಗಳಿಗೂ ಪಿತೃಗಳಿಗೂ ಅತಿಥಿಗಳಿಗೂ ಸೇವಕರಿಗೂ ಗೋವುಗಳು ಮತ್ತು ಭಿಕ್ಷುಕರಿಗೂ ವಿಭಾಗಮಾಡಿ ಇಡದೆ ಏನನ್ನೂ ಈಕೆಯು ತಿನ್ನುವುದಿಲ್ಲ. ಪದಾರ್ಥಗಳನ್ನು ಈಕೆಯು ಅಡಕವಾಗಿ ಮಿತವಾಗಿ ಉಪಯೋಗಿಸುತ್ತಾಳೆ. ಹಾಗೆ ಮಾಡುವುದರಲ್ಲಿ ಈಕೆಯು ದಕ್ಷಳಾದವಳು. ಯಾವಾಗಲೂ ಈಕೆಯು ನಗುನಗುತ್ತ ಸಂತೋಷವಾಗಿಯೆ ಇರುತ್ತಾಳೆ ಎಂದಿಗೂ ಪದಾರ್ಥಗಳನ್ನು ದುಂದುಮಾಡುವವಳಲ್ಲ. ನಿನ್ನ ಅಪ್ಪಣೆಯ ಹೊರತು ಉಪವಾಸಾದಿ ವ್ರತಗಳನ್ನು ಎಂದಿಗೂ ಮಾಡುವುದಿಲ್ಲ

೨೦. ಸಮಾಜದಲ್ಲಿ ನಡೆಯುವ ಜನರ ಗುಂಪುಕೂಡಿದ ಉತ್ಸವಾದಿಗಳನ್ನು ನೋಡುವುದನ್ನು ಈಕೆಯು ಬಹುದೂರದಲ್ಲಿ ಬಿಟ್ಟುಬಿಡುತ್ತಾಳೆ. ತೀರ್ಥಯಾತ್ರಾದಿಗಳಿಗಾಗಲಿ ಇತರರ ಮನೆಗಳಲ್ಲಿ ನಡೆಯುವ ಮದುವೆ ಮುಂಜಿ ಮೊದಲಾದ ಶುಭ ಕಾರ್ಯಗಳಿಗಾಗಲಿ ಈಕೆಯು ನಿನ್ನ ಅನುಜ್ಞೆಯಿಲ್ಲದೆ ಹೋಗಳು.

೨೧ ಸುಖವಾಗಿ ಮಲಗಿರುವಾಗಲಾಗಲಿ ಕುಳಿತಿರುವಾಗಲಾಗಲಿ ಅಕಸ್ಮಾತ್ತಾಗಿ ಕ್ರೀಡಿಸುತ್ತಿರುವಾಗಲಾಗಲಿ ರಹಸ್ಯವಾದ ಇತರ ಕಾರ್ಯಗಳಿದ್ದರೂ ಪತಿದೇವನಾದ ನಿನ್ನನ್ನು ಈಕೆಯು ಎಂದಿಗೂ ಎಬ್ಬಿಸುವುದಿಲ್ಲ.

ಸ್ತ್ರೀಧರ್ಮಿಣೀ ತ್ರಿರಾತ್ರಂ ತು ಸ್ವಮುಖಂ ನೈವ ದರ್ಶಯೇತ್ ।
ಸ್ವವಾಕ್ಯಂ ಶ್ರಾವಯೇನ್ನಾಽಪಿ ಯಾವತ್ ಸ್ನಾತಾ ನ ಶುದ್ಧಿತಃ ॥ ೨೨ ॥
ಸುಸ್ನಾತಾ ಭರ್ತೃವದನಮೀಕ್ಷತೇಽನ್ಯಸ್ಯ ನ ಕ್ವಚಿತ್ ।
ಅಥವಾ ಮನಸಿ ಧ್ಯಾತ್ವಾ ಪತಿಂ ಭಾನುಂ ವಿಲೋಕಯೇತ್ ॥ ೨೩ ॥
ಹರಿದ್ರಾಂ ಕುಂಕುಮಂ ಚೈವ ಸಿಂದೂರಂ ಕಜ್ಜಲಂ ತಥಾ ।
ಕೂರ್ಪಾಸಕಂ ಚ ತಾಂಬೂಲಂ ಮಾಂಗಲ್ಯಾಭರಣಂ ಶುಭಂ ॥ ೨೪ ॥
ಕೇಶಸಂಸ್ಕಾರಕಬರೀಕರಕರ್ಣಾದಿಭೂಷಣಂ ।
ಭರ್ತುರಾಯುಷ್ಯಮಿಚ್ಛಂತೀ ದೂರಯೇನ್ನ ಪತಿವ್ರತಾ ॥ ೨೫ ॥
ನ ರಜಕ್ಯಾ ನ ಹೈತುಕ್ಯಾ ತಥಾ ಶ್ರಮಣಯಾ ನ ಚ ।
ನ ಚ ದುರ್ಭಗಯಾ ಕ್ವಾಽಪಿ ಸಖಿತ್ವಂ ಕುರುತೇ ಸತೀ ॥ ೨೬ ॥
ಭರ್ತೃವಿದ್ವೇಷಿಣೀಂ ನಾರೀಂ ನೈಷಾ ಸಂಭಾಷತೇ ಕ್ವಚಿತ್ ।
ನೈಕಾಕಿನೀ ಕ್ವಚಿದ್ಭೂಯಾನ್ನ ನಗ್ನಾ ಸ್ನಾತಿ ಚ ಕ್ವಚಿತ್ ॥ ೨೭ ॥

---

೨೨. ಸ್ತ್ರೀ ಧರ್ಮಕ್ಕೆ ಸಹಜವಾಗಿ ಹೊರಗಾದಾಗ ಈ ಪತಿವ್ರತೆಯು ಮೂರುದಿನಗಳ ಕಾಲ ನಿನಗೆ ಮುಖವನ್ನೇ ತೋರಿಸುವುದಿಲ್ಲ. ಸ್ನಾನಮಾಡಿ ಶುದ್ಧಳಾಗುವವರೆಗೂ ಕಡೆಗೆ ತನ್ನ ಮಾತುಗಳನ್ನೂ ಸಹ ನಿನ್ನ ಕಿವಿಗೆ ಬೀಳುವಂತೆ ಮಾಡುವುದಿಲ್ಲ.

೨೩. ಸ್ನಾನಮಾಡಿ ನಿನ್ನ ಮುಖವನ್ನು ನೋಡುವವರೆಗೂ ಪರಪುರುಷನ ಮುಖವನ್ನೆಂದಿಗೂ ನೋಡಳು. ಹಾಗೊಂದುವೇಳೆ ಸಾಧ್ಯವಿಲ್ಲದ್ದಾದರೆ ನಿನ್ನನ್ನು ಧ್ಯಾನಿಸಿ ಜಗಚ್ಚಕ್ಷುವಾದ ಸೂರ್ಯಭಗವಂತನನ್ನು ಸಂದರ್ಶಿಸುತ್ತಾಳೆ.

೨೪–೨೫. ಈ ಮಹಾಪತಿವ್ರತೆಯು ಅರಿಸಿನ ಕುಂಕುಮಗಳನ್ನೂ ಚಂದ್ರಕಾಡಿಗೆಗಳನ್ನೂ ರವಿಕೆಯನ್ನೂ ತಾಂಬೂಲವನ್ನೂ ಮಂಗಳಕರವಾದ ಮಾಂಗಲ್ಯಾಭರಣಗಳನ್ನೂ ತೊಟ್ಟು, ಕೂದಲು ಬಾಚಿ ಜಡೆಹಾಕಿಕೊಂಡು, ಕೈಗಳಿಗೆ ಬಳೆಗಳನ್ನೂ ಕಿವಿಗಳಿಗೆ ಓಲೆಗಳನ್ನೂ ಧರಿಸಿ ಭರ್ತನಾದ ನಿನ್ನ ಆಯುಷ್ಯವನ್ನೇ ಸತತವೂ ಹಾರೈಸುತ್ತಿರುತ್ತಾಳೆ.

೨೬. ಸತೀಮಣಿಯಾದ ಈಕೆಯು ಅಗಸಗಿತ್ತಿ, ಭ್ರಷ್ಟೆಯಾಗಿ ಸತ್ಪಮಾರ್ಗಗಳಲ್ಲಿ ಸಂದೇಹವನ್ನು ತಂದೊಡ್ಡುವ ದುರ್ಮಾರ್ಗಗಳು, ಪಾಷಂಡಮಾರ್ಗವನ್ನವಲಂಬಿಸಿದ ಕಾಪಾಲಿಕರ ಹೆಂಗಸು, ಬೌದ್ಧ ಸಂನ್ಯಾಸಿನಿಯರು, ದುರಾಚಾರಕ್ಕೆ ಬಿದ್ದವರು ಮೊದಲಾದವರ ಸ್ನೇಹವನ್ನು ಎಂದಿಗೂ ಮಾಡುವುದಿಲ್ಲ.

೨೭. ಗಂಡನನ್ನು ದ್ವೇಷಿಸುವ ಹೆಂಗಸಿನೊಡನೆ ಈಕೆಯು ಎಂದಿಗೇ

ನೋಲೂಖಲೇ ನ ಮುಸಲೇ ನ ವರ್ಧನ್ಯಾಂ ದೃಷದ್ಯಪಿ ।
ನ ಯಂತ್ರಕೇ ನ ದೇಹಲ್ಯಾಂ ಸತೀ ಚೋಪವಿಶೇತ್ಕ್ವಚಿತ್ ॥ ೨೮ ॥
ವಿನಾ ವ್ಯವಾಯಸಮಯಂ ಪ್ರಾಗಲ್ಭ್ಯಂ ನ ಕ್ವಚಿಚ್ಚರೇತ್ ।
ಯತ್ರ ಯತ್ರ ರುಚಿರ್ಭರ್ತುಸ್ತತ್ರ ಪ್ರೇಮವತೀ ಸದಾ ॥ ೨೯ ॥
ಇದಮೇವ ವ್ರತಂ ಸ್ತ್ರೀಣಾಮಯಮೇವ ಪರೋ ವೃಷಃ ।
ಇಯಮೇಕಾ ದೇವಪೂಜಾ ಭರ್ತುರ್ವಾಕ್ಯಂ ನ ಲಂಘಯೇತ್ ॥ ೩೦ ॥
ಕ್ಲೀಬಂ ವಾ ದುರವಸ್ಥಂ ವಾ ವ್ಯಾಧಿತಂ ವೃದ್ಧಮೇವ ವಾ ।
ಸುಸ್ಥಿತಂ ದುಃಖಿತಂ ವಾಽಪಿ ಪತಿಮೇಕಂ ನ ಲಂಘಯೇತ್ ॥ ೩೧ ॥
ಹೃಷ್ಟಾ ಹೃಷ್ಟೇ ವಿಷಣ್ಣಾಸ್ಯಾ ವಿಷಣ್ಣಾಸ್ಯೇ ಪ್ರಿಯೇ ಸದಾ ।
ಏಕರೂಪಾ ಭವೇತ್ಪುಣ್ಯಾ ಸಂಪತ್ಸು ಚ ವಿಪತ್ಸು ಚ ॥ ೩೨ ॥
ಸರ್ಪಿರ್ಲವಣತೈಲಾದಿಕ್ಷಯೇಽಪಿ ಚ ಪತಿವ್ರತಾ ।
ಪತಿಂ ನಾಽಸ್ತೀತಿ ನ ಬ್ರೂಯಾದಾಯಾಸೇಷು ನ ಯೋಜಯೇತ್ ॥ ೩೩ ॥

---

ಆಗಲಿ ಮಾತನಾಡುವುದಿಲ್ಲ. ಯಾವ ಕಾಲದಲ್ಲಿಯೂ ಒಂಟಿಯಾಗಿರುವುದಿಲ್ಲ; ಅಲ್ಲದೆ ಬತ್ತಲೆಯಾಗಿ ಸ್ನಾನವನ್ನು ಮಾಡುವುದಿಲ್ಲ.

೨೮–೨೯. ಈ ಸತಿಯು ಒರಳು ಒನಕೆಗಳ ಮೇಲಾಗಲಿ ಪೊರಕೆ, ಅರೆಯುವ ಕಲ್ಲು, ಬೀಸುವಕಲ್ಲು ಮೊದಲಾದುವುಗಳ ಮೇಲಾಗಲಿ ಎಂದಿಗೂ ಕುಳಿತುಕೊಳ್ಳುವುದಿಲ್ಲ. ಸಂಭೋಗ ಸಮಯಗಳಲ್ಲಲ್ಲದೆ ಬೇರಾವ ಸಮಯಗಳಲ್ಲಿಯೂ ಬಳುಕಿ ಬೀಗದೆ, ಗಂಡನಿಗೆ ಯಾವ ಯಾವ ವಿಷಯಗಳಲ್ಲಿ ಅಭಿರುಚಿಯೊ ಅವುಗಳಲ್ಲೆಲ್ಲ ಪ್ರೀತಿಯನ್ನಿಟ್ಟಿರುವುದೇ ಪತಿವ್ರತೆಯ ಧರ್ಮ.

೩೦. ಸ್ತ್ರೀಯರಿಗೆ ಇದೇ ವ್ರತವು. ಇದೇ ಪರಮ ಧರ್ಮವು. ಇದೇ ದೇವತಾಪೂಜೆಯು. ಸ್ತ್ರೀಯರು ಪತಿಯ ವಾಕ್ಯವನ್ನೆಂದಿಗೂ ಮೀರಬಾರದು.

೩೧ ಷಂಡನಾಗಲಿ ದುರವಸ್ಥೆಗೀಡಾದವನಾಗಲಿ ರೋಗಿಯಾಗಲಿ ಐಶ್ವರ್ಯವಂತನಾಗಲಿ ದರಿದ್ರನಾಗಲಿ ಪತಿವ್ರತೆಯಾದವಳು ಪತಿಯನ್ನೆಂದಿಗೂ ಮೀರಿ ಹೋಗಬಾರದು.

೩೨ ಗಂಡನು ಸಂತೋಷಗೊಂಡರೆ ತಾನೂ ಸಂತೋಷಗೊಂಡು, ಖತಿಗೊಂಡರೆ ತಾನೂ ಖತಿಗೊಂಡು, ಪತಿಯ ಸಂಪತ್ತುಗಳಲ್ಲಿಯೂ ವಿಪತ್ತುಗಳಲ್ಲಿಯೂ ಸಮಪುಣ್ಯಶಾಲಿನಿಯಾಗಿರಬೇಕು

೩೩. ತುಪ್ಪ ಉಪ್ಪು ಎಣ್ಣೆ ಮೊದಲಾದುವುಗಳು ಮುಗಿದುಹೋಗಿದ್ದರೂ ಕೂಡ ಪತಿವ್ರತೆಯಾದ ಹೆಣ್ಣು 'ಇಲ್ಲ' ಎಂದು ಪತಿಗೆ ಹೇಳಬಾರದು. ಅವನನ್ನು ಆಯಾಸಗೊಳಿಸಬಾರದು.

**ತೀರ್ಥಸ್ನಾನಾರ್ಥಿನೀ ನಾರೀ ಪತಿಪಾದೋದಕಂ ಪಿಬೇತ್ ।**
**ಶಂಕರಾದಪಿ ವಿಷ್ಣೋರ್ವಾ ಪತಿರೇಕೋಽಧಿಕಃ ಸ್ತ್ರಿಯಾಃ ॥ ೩೪ ॥**
**ವ್ರತೋಪವಾಸನಿಯಮಂ ಪತಿಮುಲ್ಲಂಘ್ಯ ಯಾ ಚರೇತ್ ।**
**ಆಯುಷ್ಯಂ ಹರತೇ ಭರ್ತುರ್ಮೃತಾ ನಿರಯಮೃಚ್ಛತಿ ॥ ೩೫ ॥**
**ಉಕ್ತಾ ಪ್ರತ್ಯುತ್ತರಂ ದದ್ಯಾದ್ಯಾ ನಾರೀ ಕ್ರೋಧತತ್ಪರಾ ।**
**ಸರಮಾ ಜಾಯತೇ ಗ್ರಾಮೇ ಸೃಗಾಲೀ ನಿರ್ಜನೇ ವನೇ ॥ ೩೬ ॥**
**ಸ್ತ್ರೀಣಾಂ ಹಿ ಪರಮಶ್ಚೈಕೋ ನಿಯಮಃ ಸಮುದಾಹೃತಃ ।**
**ಅಭ್ಯರ್ಚ್ಯ ಚರಣೌ ಭರ್ತುರ್ಭೋಕ್ತವ್ಯಂ ಕೃತನಿಶ್ಚಯಂ ॥ ೩೭ ॥**
**ಉಚ್ಚಾಸನಂ ನ ಸೇವೇತ ನ ವ್ರಜೇತ್ಪರವೇಶ್ಮಸು ।**
**ನ ತ್ರಪಾಕರವಾಕ್ಯಾನಿ ವಕ್ತವ್ಯಾನಿ ಕದಾಚನ ॥ ೩೮ ॥**
**ಅಪವಾದೋ ನ ವಕ್ತವ್ಯಃ ಕಲಹಂ ದೂರತಸ್ತ್ಯಜೇತ್ ।**
**ಗುರೂಣಾಂ ಸನ್ನಿಧೌ ಕ್ವಾಽಪಿ ನೋಚ್ಚೈರ್ಬ್ರೂಯಾನ್ನ ವಾ ಹಸೇತ್ ॥ ೩೯ ॥**

---

೩೪. ತೀರ್ಥಸ್ನಾನವನ್ನು ಮಾಡಬೇಕೆಂದು ಬಯಸುವ ಸತಿಯು ಪತಿಯ ಪಾದೋದಕವನ್ನು ಪಾನಮಾಡಬೇಕು. ಪತಿವ್ರತೆಯಾದ ಸ್ತ್ರೀಗೆ ಪತಿಯು ಹರಿಹರರಿಗಿಂತಲೂ ಅಧಿಕನಾದವನು.

೩೫. ಪತಿಯನ್ನು ಲೆಕ್ಕಿಸದೆ ಯಾವ ಸ್ತ್ರೀಯು ವ್ರತೋಪವಾಸ ನಿಯಮಗಳನ್ನು ಆಚರಿಸುತ್ತಾಳೆಯೊ ಅವಳು ಆ ಪತಿಯ ಆಯುಸ್ಸನ್ನು ಕಳೆಯುವುದು ಮಾತ್ರವಲ್ಲದೆ ಮಡಿದಮೇಲೆ ನರಕಕ್ಕೂ ಹೋಗುತ್ತಾಳೆ

೩೬. ಆಡಿದ ಮಾತಿಗೆ ಮರುಮಾತನಾಡುವ ಸಿಡುಕಿಯಾದ ಹೆಂಗಸು ತಾನು ಸತ್ತಮೇಲೆ ಮುಂದಣ ಜನ್ಮದಲ್ಲಿ ಊರಿನಲ್ಲಿ ಹುಟ್ಟಿದರೆ ನಾಯಿಯಾಗಿಯೂ ಕಾಡಿನಲ್ಲಿ ಹುಟ್ಟಿದರೆ ನರಿಯಾಗಿಯೂ ಹುಟ್ಟುತ್ತಾಳೆ.

೩೭. ಅಯ್ಯಾ ಸೂತಪುರಾಣಿಕನೆ, ಸ್ತ್ರೀಯರಿಗೆ ಅತ್ಯುತ್ತಮವಾದ ಒಂದೇ ನಿಯಮವು ಹೇಳಿದೆ. ಪತಿಚರಣವನ್ನು ಪೂಜಿಸಿ ಸ್ಥಿರವಾದ ಮನಸ್ಸಿನಿಂದ ಭುಜಿಸತಕ್ಕದ್ದು.

೩೮. ಎತ್ತರವಾದ ಆಸನಗಳಲ್ಲಿ ಕುಳಿತುಕೊಳ್ಳಬಾರದು, ಇತರರ ಮನೆಗಳಿಗೆ ಹೋಗಬಾರದು, ಎಂದಿಗೇ ಆಗಲಿ ನಾಚಿಕೆಗೆಟ್ಟ ಮಾತುಗಳನ್ನಾಡಬಾರದು.

೩೯. ಇತರರನ್ನು ಹಳಿಯಬಾರದು, ಜಗಳವನ್ನು ದೂರದಲ್ಲಿಯೇ ತೊರೆಯಬೇಕು. ಹಿರಿಯರ ಎದುರಿಗೆ ಗಟ್ಟಿಯಾಗಿ ಮಾತನಾಡಬಾರದು, ನಗಲೂ ಬಾರದು.

ಯಾ ಭರ್ತಾರಂ ಪರಿತ್ಯಜ್ಯ ರಹಶ್ಚರತಿ ದುರ್ಮತಿಃ ।
ಉಲೂಕೀ ಜಾಯತೇ ಕ್ರೂರಾ ವೃಕ್ಷಕೋಟರಶಾಯಿನೀ ॥ ೪೦ ॥
ತಾಡಿತಾ ತಾಡಿತುಂ ಚೇಚ್ಛೇತ್ಸಾ ವ್ಯಾಘ್ರೀ ಪೃಷದಂಶಿಕಾ ।
ಕಟಾಕ್ಷಯತಿ ಯಾಽನ್ಯಂ ವೈ ಕೇಕರಾಕ್ಷೀ ತು ಸಾ ಭವೇತ್ ॥ ೪೧ ॥
ಯಾ ಭರ್ತಾರಂ ಪರಿತ್ಯಜ್ಯ ಮಿಷ್ಟಮಶ್ನಾತಿ ಕೇವಲಂ ।
ಗ್ರಾಮೇ ವಾ ಸೂಕರೀ ಭೂಯಾದ್ವಲ್ಗುರ್ವಾಽಪಿ ಸ್ವವಿಟ್ಭುಜಾ ॥ ೪೨ ॥
ಯಾ ತ್ವಂಕೃತ್ವಾಽಪ್ರಿಯಂ ಬ್ರೂತೇ ಮೂಕಾ ಸಾ ಜಾಯತೇ ಖಲು ।
ಯಾ ಸಪತ್ನೀಂ ಸದೇರ್ಷ್ಯೇತ ದುರ್ಭಗಾ ಸಾ ಪುನಃ ಪುನಃ ॥ ೪೩ ॥
ದೃಷ್ಟಿಂ ವಿಲುಪ್ಯ ಭರ್ತುರ್ಯಾ ಕಂಚಿದನ್ಯಂ ಸಮೀಕ್ಷತೇ ।
ಕಾಣಾ ಚ ವಿಮುಖೀ ಚಾಽಪಿ ಕುರೂಪಾ ಚಾಽಪಿ ಜಾಯತೇ ॥ ೪೪ ॥
ಬಾಹ್ಯಾದಾಯಾಂತಮಾಲೋಕ್ಯ ತ್ವರಿತಾ ಚ ಜಲಾಽಶನೈಃ ।
ತಾಂಬೂಲೈರ್ವ್ಯಜನೈಶ್ಚೈವ ಪಾದಸಂವಾಹನಾದಿಭಿಃ ॥ ೪೫ ॥

---

೪೦. ಯಾವಳು ಭರ್ತನನ್ನು ತೊರೆದು ಯಾರಿಗೂ ತಿಳಿಯದಂತೆ ಗುಟ್ಟಾಗಿ ವ್ಯಭಿಚಾರಾದಿಗಳನ್ನು ಮಾಡುವಳೊ ಆ ದುಷ್ಟೆಯು ಮುಂದಣ ಜನ್ಮದಲ್ಲಿ ಮರದ ಪೊಟರೆಗಳಲ್ಲಿ ಹಗಲೆಲ್ಲ ಮಲಗಿ ನಿದ್ರಿಸುವ ಭಯಂಕರವಾದ ಗೂಬೆ ಯಾಗಿ ಹುಟ್ಟುತ್ತಾಳೆ.

೪೧. ಗಂಡನು ಹೊಡೆದರೆ ಹಿಂತಿರುಗಿಸಿ ಹೊಡೆಯಬಯಸುವವರು ಮುಂದಣ ಜನ್ಮದಲ್ಲಿ ಹೆಣ್ಣು ಹುಲಿಗಳಾಗಿಯೊ, ಬೆಕ್ಕುಗಳಾಗಿಯೊ ಹುಟ್ಟುತ್ತಾರೆ. ಪರಪುರುಷನನ್ನು ಕಣ್ಣಿಟ್ಟು ನೋಡುವವಳು ಕಿರುಗಣ್ಣುಗಳುಳ್ಳವಳಾಗಿ ಹುಟ್ಟುತ್ತಾಳೆ.

೪೨–೪೩. ಯಾವಳಾದರೆ ಗಂಡನನ್ನು ತೊರೆದು ತಾನೊಬ್ಬಳೇ ಕುಳಿತು ಮಿಷ್ಟಾನ್ನವನ್ನು ಭುಜಿಸುವಳೊ, ಅವಳು ಹಳ್ಳಿಯ ಹಂದಿಯಾಗಿಯೊ ತನ್ನ ಅಮೇಧ್ಯವನ್ನು ತಾನೇ ತಿನ್ನುವ ಕಾಲುಗಳು ಮೇಲಕ್ಕೂ ತಲೆಯು ಕೆಳಕ್ಕೂ ಇರುವ ವಲ್ಗು ಎಂಬ ಹಕ್ಕಿಯಾಗಿಯೂ ಹುಟ್ಟುತ್ತಾಳೆ. ಯಾವಳು ಗಂಡನನ್ನು ನೀನು ತಾನೆಂದು ಹಳಿಯುವಳೊ ಅವಳು ಮೂಗಿಯಾಗುತ್ತಾಳೆ. ಸವತಿಯನ್ನು ದ್ವೇಷಮಾಡುವವಳು ಮತ್ತೆ ಮತ್ತೆ ದುರ್ಭಗೆಯಾಗಿ ಹುಟ್ಟುತ್ತಾಳೆ.

೪೪. ಗಂಡನಿಗೆ ಕಾಣದಂತೆ ಬೇರೊಬ್ಬನನ್ನು ಕಣ್ಣಿಟ್ಟು ನೋಡುವವಳು ಕುರುಡಿಯಾಗಿಯೂ, ಕೆಟ್ಟ ಮೋರೆಯುಳ್ಳವಳಾಗಿಯೂ, ಕುರೂಪಿಯಾಗಿಯೂ ಹುಟ್ಟುತ್ತಾಳೆ.

೪೫–೪೬. ಹೊರಗೆ ಹೋಗಿ ಮನೆಗೆ ಬರುವ ಗಂಡನನ್ನು ಕಂಡು ಯಾವ ಹೆಂಗಸು ತ್ವರೆಗೊಂಡು ನೀರು ಕೊಟ್ಟು ಊಟಕ್ಕಿಟ್ಟು ತಾಂಬೂಲವನ್ನಿತ್ತು

**ತಥೈವ ಚಾಟುವಚನೈಃ ಖೇದಸನ್ನೋದನೈಃ ಪರೈಃ ।**
**ಯಾ ಪ್ರಿಯಂ ಪ್ರೀಣಯೇತ್ಪ್ರೀತಾ ತ್ರಿಲೋಕೀ ಪ್ರೀಣಿತಾ ತಯಾ ॥ ೪೬ ॥**
**ಮಿತಂ ದದಾತಿ ಹಿ ಪಿತಾ ಮಿತಂ ಭ್ರಾತಾ ಮಿತಂ ಸುತಃ ।**
**ಅಮಿತಸ್ಯ ಹಿ ದಾತಾರಂ ಭರ್ತಾರಂ ಪೂಜಯೇತ್ಸದಾ ॥ ೪೭ ॥**
**ಭರ್ತಾ ದೇವೋ ಗುರುರ್ಭರ್ತಾ ಧರ್ಮತೀರ್ಥವ್ರತಾನಿ ಚ ।**
**ತಸ್ಮಾತ್ಸರ್ವಂ ಪರಿತ್ಯಜ್ಯ ಪತಿಮೇಕಂ ಸಮರ್ಚಯೇತ್ ॥ ೪೮ ॥**
**ಜೀವಹೀನೋ ಯಥಾ ದೇಹಃ ಕ್ಷಣಾದಶುಚಿತಾಂ ವ್ರಜೇತ್ ।**
**ಭರ್ತೃಹೀನಾ ತಥಾ ಯೋಷಿತ್ಸುಸ್ನಾತಾಽಪ್ಯಶುಚಿಃ ಸದಾ ॥ ೪೯ ॥**
**ಅಮಂಗಲೇಭ್ಯಃ ಸರ್ವೇಭ್ಯೋ ವಿಧವಾ ತ್ಯಕ್ತಮಂಗಲಾ ।**
**ವಿಧವಾದರ್ಶನಾತ್ಸಿದ್ಧಿಃ ಕ್ವಾಽಪಿ ಜಾತು ನ ಜಾಯತೇ ॥ ೫೦ ॥**
**ವಿಹಾಯ ಮಾತರಂ ಚೈಕಾಂ ಸರ್ವಮಂಗಲವರ್ಜಿತಾಂ ।**
**ತದಾಶಿಷಮಪಿ ಪ್ರಾಜ್ಞಸ್ತ್ಯಜೇದಾಶೀವಿಷೋಪಮಾಂ ॥ ೫೧ ॥**

---

ಬೀಸಣಿಗೆಯಿಂದ ಗಾಳಿಹಾಕಿ ಕಾಲುಗಳನ್ನೊತ್ತಿ ವಿನೋದವಾದ ಮಾತುಗಳಿಂದ ಆಯಾಸವನ್ನು ಕಳೆದು ಸಂತುಷ್ಟಳಾಗಿ ಆ ಪ್ರಿಯನನ್ನು ಸಂತೋಷಗೊಳಿಸುವಳೊ ಆ ಪತಿವ್ರತೆಯಿಂದ ಮೂರು ಲೋಕಗಳೂ ಸಂತೋಷಗೊಂಡಂತೆಯೇ ಸರಿ.

೪೭. ತಂದೆಯು ಮಗಳಿಗೆ ಎಷ್ಟೊ ಅಷ್ಟನ್ನು ಮಾತ್ರ ಕೊಡುತ್ತಾನೆ. ಅಣ್ಣ ತಮ್ಮಂದಿರೂ ಅಷ್ಟೇ. ಮಗನೂ ಅಂತೆಯೆ. ಪತಿಯು ಮಾತ್ರ ಅಮಿತ ವಾದ ಸುಖ ಸಂತೋಷಗಳನ್ನು ದೊರಕಿಸುತ್ತಾನೆ. ಪತಿವ್ರತೆಯರು ಅಂತಹ ಪತಿಯನ್ನು ಸತತವೂ ಪ್ರೀತಿಸಬೇಕು.

೪೮. ದೇವರೂ ಗುರುವೂ ಧರ್ಮವೂ ತೀರ್ಥಕ್ಷೇತ್ರಗಳೂ ವ್ರತದಾನಾದಿ ಗಳೂ ಎಲ್ಲವೂ ಪತಿಯೇ. ಆದುದರಿಂದ ಸ್ತ್ರೀಯರು ಎಲ್ಲವನ್ನೂ ತೊರೆದು ಸಂತತವೂ ಪತಿಯನ್ನೇ ಸೇವಿಸಬೇಕು.

೪೯–೫೦. ಜೀವವಿಲ್ಲದ ದೇಹವು ಹೇಗೆ ಒಂದು ಕ್ಷಣಮಾತ್ರದಲ್ಲಿಯೆ ಅಪವಿತ್ರವಾಗಿ ಹೋಗುವುದೊ ಹಾಗೆ ಗಂಡಸಿಲ್ಲದ ಹೆಂಗಸೂ, ಎಷ್ಟೇ ಸ್ನಾನಮಾಡಿ ಶುದ್ಧಳಾದರೂ ಅಶುದ್ಧಳೇ. ಎಲ್ಲ ಅಮಂಗಳ ವಸ್ತುಗಳಿಗಿಂತಲೂ ಮಾಂಗಲ್ಯ ವರ್ಜಿತಳಾದ ವಿಧವೆಯು ಅಮಂಗಳೆಯು. ಆ ವಿಧವೆಯ ದರ್ಶನದಿಂದ ಎಲ್ಲಿಯೂ ಯಾವ ಕಾರ್ಯಸಿದ್ಧಿಯೂ ಆಗುವುದಿಲ್ಲ.

೫೧. ಸರ್ವಮಂಗಳವರ್ಜಿತೆಯಾದವರಲ್ಲಿ ತಾಯಿಯೊಬ್ಬಳನ್ನು ಮಾತ್ರ ಬಿಟ್ಟು ಇತರ ವಿಧವೆಯರ ಆಶೀರ್ವಾದವನ್ನು ಜ್ಞಾನವರು ಆಶೀವಿಷದಂತೆ ತೊರೆಯತಕ್ಕದ್ದು.

ಕನ್ಯಾವಿವಾಹಸಮಯೇ ವಾಚಯೇಯುರಿತಿ ದ್ವಿಜಾಃ ।
ಭರ್ತುಃ ಸಹಚರೀ ಭೂಯಾಜ್ಜೀವತೋಽಜೀವತೋಽಪಿ ವಾ ॥ ೫೨ ॥
ಭರ್ತಾ ಸದಾಽನುಯಾತವ್ಯೋ ದೇಹವಚ್ಛಾಯಯಾ ಸ್ತ್ರಿಯಾ ।
ಚಂದ್ರಮಾ ಜ್ಯೋತ್ಸ್ನಯಾ ಯದ್ವದ್ವಿದ್ಯುತ್ವಾನ್ವಿದ್ಯುತಾ ಯಥಾ ॥ ೫೩ ॥
ಅನುವ್ರಜತಿ ಭರ್ತಾರಂ ಗೃಹಾತ್ಪಿತೃವನಂ ಮುದಾ ।
ಪದೇ ಪದೇಽಶ್ವಮೇಧಸ್ಯ ಫಲಂ ಪ್ರಾಪ್ನೋತ್ಯಸಂಶಯಂ ॥ ೫೪ ॥
ವ್ಯಾಲಗ್ರಾಹೀ ಯಥಾ ವ್ಯಾಲಂ ಬಲಾದುದ್ಧರತೇ ಬಿಲಾತ್ ।
ಏವಮುತ್ಕ್ರಮ್ಯ ದೂತೇಭ್ಯಃ ಪತಿಂ ಸ್ವರ್ಗಂ ನಯೇತ್ಸತೀ ॥ ೫೫ ॥
ಯಮದೂತಾಃ ಪಲಾಯಂತೇ ಸತೀಮಾಲೋಕ್ಯ ದೂರತಃ ।
ಅಪಿ ದುಷ್ಕೃತಕರ್ಮಾಣಂ ಸಮುತ್ಸೃಜ್ಯ ಚ ತತ್ಪತಿಂ ॥ ೫೬ ॥
ನ ತಥಾ ಬಿಭೀಮೋ ವಹ್ನೇರ್ನ ತಥಾ ವಿದ್ಯುತೋ ಯಥಾ ।
ಆಪತಂತೀಂ ಸಮಾಲೋಕ್ಯ ವಯಂ ದೂತಾಃ ಪತಿವ್ರತಾಂ ॥ ೫೭ ॥
ತಪನಸ್ತಪ್ಯತೇಽತ್ಯಂತಂ ದಹನೋಽಪಿ ಚ ದಹ್ಯತೇ ।
ಕಂಪಂತೇ ಸರ್ವತೇಜಾಂಸಿ ದೃಷ್ಟ್ವಾ ಪಾತಿವ್ರತಂ ಮಹಃ ॥ ೫೮ ॥

---

೫೨. ಕನ್ಯಾವಿವಾಹಸಮಯದಲ್ಲಿ ಬ್ರಾಹ್ಮಣರು ಬದುಕಿರಲಿ ಬದುಕದಿರಲಿ ಭರ್ತನಿಗೆ ಯಾವಾಗಲೂ ಸಹಧರ್ಮಚಾರಿಣಿಯಾಗಿರೆಂದು ಕನ್ಯೆಗೆ ಆಶೀರ್ವಾದಮಾಡುತ್ತಾರೆ.

೫೩. ಆದುದರಿಂದ ಹೆಂಗಸು ಮೈನೆರಳಿನಂತೆಯೂ ಚಂದ್ರನ ಬೆಳದಿಂಗಳಂತೆಯೂ ಮುಗಿಲಿನಲ್ಲಿ ಮೂಡುವ ಮಿಂಚಿನಂತೆಯೂ ಭರ್ತನನ್ನೇ ಅನುಸರಿಸಿ ಹೋಗತಕ್ಕದ್ದು.

೫೪. ಮಡಿದ ಭರ್ತನನ್ನು ಅನುಸರಿಸಿ ಸಂತೋಷದಿಂದ ಚಿತಿಯನ್ನೇರಲು ಮನೆಬಿಟ್ಟು ಹೋಗುವ ಹೆಂಗಸಿಗೆ ಅಡಿಗಡಿಗೂ ಅಶ್ವಮೇಧಯಾಗದ ಫಲವು ಲಭಿಸುತ್ತದೆಯೆಂಬುದರಲ್ಲಿ ಸಂದೇಹವಿಲ್ಲ.

೫೫. ಗರುಡಪಕ್ಷಿಯು ಬಲದಿಂದ ಹಾವನ್ನು ಹೇಗೆ ಎತ್ತಿಕೊಂಡು ಹೋಗುತ್ತದೆಯೊ ಹಾಗೆಯೇ ಪತಿವ್ರತೆಯಾದ ಸ್ತ್ರೀಯು ಮಡಿದ ಭರ್ತನನ್ನು ಯಮದೂತರಿಂದ ಬಿಡಿಸಿಕೊಂಡು ಸ್ವರ್ಗಕ್ಕೆ ಒಯ್ಯುತ್ತಾಳೆ.

೫೬. ಯಮದೂತರು ಪತಿವ್ರತೆಯನ್ನು ಕಂಡೊಡನೆ ಅವಳ ಗಂಡನು ಪಾಪಿಷ್ಠನಾಗಿದ್ದರೂ ಅವನನ್ನು ತೊರೆದು ಓಡಿ ಹೋಗುತ್ತಾರೆ.

೫೭–೫೮. ಯಮದೂತರಾದ ನಾವು ಬೆಂಕಿಗಾಗಲಿ ಬೀಳುತ್ತಿರುವ ಸಿಡಿಲಿಗಾಗಲಿ ಹೆದರುವುದಿಲ್ಲ, ಆದರೆ, ಓಡಿ ಬರುತ್ತಿರುವ ಪತಿವ್ರತೆಯನ್ನು

ಯಾವತ್ಸ್ವಲೋಮ ಸಂಖ್ಯಾಽಸ್ತಿ ತಾವತ್ಕೋಟ್ಯಯುತಾನಿ ಚ ।
ಭರ್ತ್ರಾ ಸ್ವರ್ಗಸುಖಂ ಭುಂಕ್ತೇ ರಮಮಾಣಾ ಪತಿವ್ರತಾ ॥ ೫೯ ॥
ಧನ್ಯಾ ಸಾ ಜನನೀ ಲೋಕೇ ಧನ್ಯೋಽಸೌ ಜನಕಃ ಪುನಃ ।
ಧನ್ಯಃ ಸ ಚ ಪತಿಃ ಶ್ರೀಮಾನ್ಯೇಷಾಂ ಗೇಹೇ ಪತಿವ್ರತಾ ॥ ೬೦ ॥
ಪಿತೃವಂಶ್ಯಾ ಮಾತೃವಂಶ್ಯಾಃ ಪತಿವಂಶ್ಯಾಸ್ತ್ರಯಸ್ತ್ರಯಃ ।
ಪತಿವ್ರತಾಯಾಃ ಪುಣ್ಯೇನ ಸ್ವರ್ಗಸೌಖ್ಯಾನಿ ಭುಂಜತೇ ॥ ೬೧ ॥
ಶೀಲಭಂಗೇನ ದುರ್ವೃತ್ತಾಃ ಪಾತಯಂತಿ ಕುಲತ್ರಯಂ ।
ಪಿತುರ್ಮಾತುಸ್ತಥಾ ಪತ್ಯುರಿಹಾಽಮುತ್ರ ಚ ದುಃಖಿತಾಃ ॥ ೬೨ ॥
ಪತಿವ್ರತಾಯಾಶ್ಚರಣೋ ಯತ್ರ ಯತ್ರ ಸ್ಪೃಶೇದ್ಧ್ರುವಂ ।
ತತ್ರೇತಿ ಭೂಮಿರ್ಮನ್ಯೇತ ನಾಽತ್ರ ಭಾರೋಽಸ್ತಿ ಪಾವನೀ ॥ ೬೩ ॥
ಬಿಭ್ಯತ್ಪತಿವ್ರತಾಸ್ಪರ್ಶಂ ಕುರುತೇ ಭಾನುಮಾನಪಿ ।
ಸೋಮೋ ಗಂಧವಹಶ್ಚಾಽಪಿ ಸ್ವಪಾವಿತ್ರ್ಯಾಯ ನಾಽನ್ಯಥಾ ॥ ೬೪ ॥

---

ಕಂಡರೆ ಮಾತ್ರ ನಾವು ಹೆದರುತ್ತೇವೆ. ತಪನನೂ ತಪಿಸಿಹೋಗುತ್ತಾನೆ, ಅಗ್ನಿಯೂ ದಹಿಸಿಹೋಗುತ್ತಾನೆ. ಪಾತಿವ್ರತ್ಯದ ಮಾಹಾತ್ಮ್ಯದಿಂದ ಸಮಸ್ತ ತೇಜಸ್ಸುಗಳೂ ನಡುಗಿಹೋಗುತ್ತವೆ.

೫೯. ಭರ್ತನನ್ನು ಅನುಸರಿಸಿಹೋಗುವ ಸ್ತ್ರೀಯು ತನ್ನ ಮೈಯ್ಯಲ್ಲಿರುವ ಮೂರೂವರೆಕೋಟಿ ರೋಮಗಳ ಸಂಖ್ಯೆಯ ಕಾಲ ಸ್ವರ್ಗಲೋಕದಲ್ಲಿ ಭರ್ತನೊಡನೆ ಸುಖವಾಗಿ ರಮಿಸುತ್ತಾಳೆ.

೬೦. ಯಾರ ಮನೆಯಲ್ಲಿ ಪತಿವ್ರತೆಯಿರುವಳೊ ಆ ಮನೆಯಲ್ಲಿ ಅವಳನ್ನು ಹೆತ್ತ ತಾಯಿಯೂ ತಂದೆಯೂ ಅವಳ ಪತಿಯೂ ಎಲ್ಲರೂ ಲೋಕದಲ್ಲಿ ಧನ್ಯರೂ ಶ್ರೀಮಂತರೂ ಆಗುತ್ತಾರೆ.

೬೧. ಪತಿವ್ರತೆಯ ಪುಣ್ಯಪ್ರಭಾವದಿಂದ ತಂದೆ, ತಾಯಿ ಮತ್ತು ಗಂಡಂದಿರ ಕಡೆಯ ಪಿತೃಪಿತಾಮಹ ಪ್ರಪಿತಾಮಹರಲ್ಲರೂ ಸ್ವರ್ಗಲೋಕವನ್ನೈದಿ ಅಲ್ಲಿನ ಸಮಸ್ತಭೋಗಭಾಗ್ಯಗಳನ್ನೂ ಅನುಭವಿಸುತ್ತಾರೆ.

೬೨. ಸ್ತ್ರೀಯರು ದುರ್ವೃತ್ತೆಯರಾದಲ್ಲಿ ತಂದೆ, ತಾಯಿ ಮತ್ತು ಗಂಡಂದಿರ ಮೂರು ಕುಲಗಳನ್ನೂ ಇಹಲೋಕದಲ್ಲಿ ದುಃಖಕ್ಕೀಡುಮಾಡುವುದೇ ಅಲ್ಲದೆ ಪರಲೋಕದಲ್ಲಿ ನರಕಕ್ಕೂ ತಳ್ಳುತ್ತಾರೆ.

೬೩. ಎಲ್ಲೆಲ್ಲಿ ಪತಿವ್ರತೆಯ ಚರಣಸ್ಪರ್ಶವಾಗುವುದೊ ಅಲ್ಲಲ್ಲಿಯ ಭೂಪ್ರದೇಶವೆಲ್ಲವೂ ಪರಮಪುಣ್ಯಕರವಾದ ಕ್ಷೇತ್ರವಾಗುವುದು. ಆ ಪ್ರದೇಶಗಳಲ್ಲಿ ಭಾರವೇ ಇಲ್ಲವೆಂದು ಭೂದೇವಿಯು ಎಣಿಸುತ್ತಾಳೆ.

೬೪. ಸೂರ್ಯನೂ ಸಹ ಮಹಾ ಭಯಂಕರವೆಂದು ಪತಿವ್ರತೆಯ ಸ್ಪರ್ಶ

**ಆಪಃ ಪತಿವ್ರತಾಸ್ಪರ್ಶಮಭಿಲಷ್ಯಂತಿ ಸರ್ವದಾ ।**
**ಅದ್ಯ ಜಾಡ್ಯವಿನಾಶೋ ನೋ ಜಾತಾಸ್ತ್ವನ್ಯಾಽನ್ಯಪಾವನಾಃ ॥ ೬೫ ॥**
**ಗೃಹೇ ಗೃಹೇ ನ ಕಿಂ ನಾರ್ಯೋ ರೂಪಲಾವಣ್ಯಗರ್ವಿತಾಃ ।**
**ಪರಂ ವಿಶ್ವೇಶಭಕ್ತ್ಯೈವ ಲಭ್ಯತೇ ಸ್ತ್ರೀ ಪತಿವ್ರತಾ ॥ ೬೬ ॥**
**ಭಾರ್ಯಾಮೂಲಂ ಗೃಹಸ್ಥಸ್ಯ ಭಾರ್ಯಾ ಮೂಲಂ ಸುಖಸ್ಯ ಚ ।**
**ಭಾರ್ಯಾಧರ್ಮಫಲಾಽವಾಪ್ತ್ಯೈ ಭಾರ್ಯಾ ಸಂತಾನವೃದ್ಧಯೇ ॥ ೬೭ ॥**
**ಪರಲೋಕಸ್ತ್ವಯಂ ಲೋಕೋ ಜೀಯತೇ ಭಾರ್ಯಯಾ ದ್ವಯಂ ।**
**ದೇವಪಿತ್ರತಿಥೀಜ್ಯಾದಿ ನಾಽಭಾರ್ಯಃ ಕರ್ಮ ಚಾರ್ಹತಿ ॥ ೬೮ ॥**
**ಗೃಹಸ್ಥಃ ಸ ಹಿ ವಿಜ್ಞೇಯೋ ಯಸ್ಯ ಗೇಹೇ ಪತಿವ್ರತಾ ।**
**ಗ್ರಸತೇಽನ್ಯಾ ಪ್ರತಿಪದಂ ರಾಕ್ಷಸ್ಯಾ ಜರಯಾಽಥ ವಾ ॥ ೬೯ ॥**
**ಯಥಾ ಗಂಗಾಽವಗಾಹೇನ ಶರೀರಂ ಪಾವನಂ ಭವೇತ್ ।**
**ತಥಾ ಪತಿವ್ರತಾದೃಷ್ಟ್ವಾ ಶುಭಯಾ ಪಾವನಂ ಭವೇತ್ ॥ ೭೦ ॥**

---

ವನ್ನೂ ಮಾಡುವುದಿಲ್ಲ. ಚಂದ್ರನೂ ವಾಯುವೂ ತಾವು ಪವಿತ್ರಗೊಳ್ಳುವುದಕ್ಕೋಸುಗ ಮಾತ್ರ ಪತಿವ್ರತೆಯನ್ನು ಸ್ಪರ್ಶಿಸುವರಾಗಲಿ ಮತ್ತೆ ಬೇರೆಯಲ್ಲ.

೬೫. ಜಲವು ಇಂದಿಗೆ ನಮ್ಮ ಜಡತೆಯೆಲ್ಲ ನಾಶವಾಗಿ ಇತರ ಪದಾರ್ಥಗಳನ್ನು ಪಾವನಗೊಳಿಸುವ ಶಕ್ತಿಯು ಬರಲೆಂದು ಪತಿವ್ರತೆಯ ಅಂಗಸ್ಪರ್ಶವನ್ನು ಅಪೇಕ್ಷಿಸುತ್ತದೆ.

೬೬. ಮನೆಮನೆಯಲ್ಲಿಯೂ ರೂಪಲಾವಣ್ಯಗರ್ವಿತೆಯರಾದ ಸ್ತ್ರೀಯರು ಇದ್ದರೂ ಅವರೆಲ್ಲರೂ ಅಲ್ಪರಾದವರೇ! ಅವರಿಗೆ ವಿಶ್ವೇಶ್ವರನಲ್ಲಿ ಭಕ್ತಿಯು ಎಂದಿಗೂ ಉಂಟಾಗುವುದಿಲ್ಲ. ಆ ಭಕ್ತಿಯು ಪತಿವ್ರತೆಯಾದ ಸ್ತ್ರೀಯೊಬ್ಬಳಿಗೆ ಮಾತ್ರವೇ ಲಭಿಸುತ್ತದೆ.

೬೭. ಗೃಹಸ್ಥಧರ್ಮವು ಸಿದ್ಧಿಸಬೇಕಾದರೂ ಸುಖವು ದೊರಕಬೇಕಾದರೂ ಸದ್ಧರ್ಮದ ಫಲವು ಲಭಿಸಬೇಕಾದರೂ ಸಂತಾನವೃದ್ಧಿಯಾಗಬೇಕಾದರೂ ಮಾನವನಿಗೆ ಪತಿವ್ರತೆಯಾದ ಪತ್ನಿಯೇ ಮೂಲಕಾರಣಳು.

೬೮. ಭರಣಶೀಲೆಯಾದ ಪತಿವ್ರತೆಯು ಇಹಲೋಕ ಪರಲೋಕಗಳನ್ನು ಸುಲಭವಾಗಿ ಜಯಿಸುತ್ತಾಳೆ. ಭಾರ್ಯಾವಿಹೀನನಾದವನು ದೇವ ಪಿತೃ ಅತಿಥಿ ಪೂಜಾದಿಗಳಿಗೆ ಅರ್ಹನಾಗುವುದಿಲ್ಲ.

೬೯–೭೦. ಯಾವನ ಮನೆಯಲ್ಲಿ ಪತಿವ್ರತೆಯಾದ ಪತ್ನಿಯು ಇರುತ್ತಾಳೆಯೋ ಅವನೇ ಗೃಹಸ್ಥನೆಂದು ತಿಳಿಯಬೇಕು ಪತಿವ್ರತಾಸ್ತ್ರೀಯು ಇಲ್ಲದಿರುವ ಗೃಹಗಳಲ್ಲಿಯೇ ಮುಪ್ಪೆಂಬ ರಾಕ್ಷಸಿಯು ಪ್ರತಿನಿತ್ಯವೂ ಗೃಹಸ್ಥನನ್ನು ಹಿಡಿಯುತ್ತಿರುತ್ತಾಳೆ. ಗಂಗಾನದೀಸ್ನಾನದಿಂದ ಹೇಗೆ ಶರೀರವು ಪರಿಶುದ್ಧವಾಗುತ್ತದೆಯೊ

ಅನುಯಾತಿ ನ ಭರ್ತಾರಂ ಯದಿ ದೈವಾತ್ಕಥಂಚನ ।
ತತ್ರಾಽಪಿ ಶೀಲಂ ಸಂರಕ್ಷ್ಯಂ ಶೀಲಭಂಗಾತ್ಪತತ್ಯಧಃ ॥ ೭೧ ॥
ತದ್ವೈಗುಣ್ಯಾದಪಿ ಸ್ವರ್ಗಾತ್ಪತಿಃ ಪತತಿ ನಾಽನ್ಯಥಾ ।
ತಸ್ಯಾಃ ಪಿತಾ ಚ ಮಾತಾ ಚ ಭ್ರಾತೃವರ್ಗಸ್ತಥೈವ ಚ ॥ ೭೨ ॥
ಪತ್ಯೌ ಮೃತೇ ಚ ಯಾ ಯೋಷಿದ್ವೈಧವ್ಯಂ ಪಾಲಯೇತ್ಕ್ವಚಿತ್ ।
ಸಾ ಪುನಃ ಪ್ರಾಪ್ಯ ಭರ್ತಾರಂ ಸ್ವರ್ಗಭೋಗಾನ್ಸಮಶ್ನುತೇ ॥ ೭೩ ॥
ವಿಧವಾಕಬರೀಬಂಧೋ ಭರ್ತೃಬಂಧಾಯ ಜಾಯತೇ ।
ಶಿರಸೋ ವಪನಂ ತಸ್ಮಾತ್ಕಾರ್ಯಂ ವಿಧವಯಾ ಸದಾ ॥ ೭೪ ॥
ಏಕಾಹಾರಃ ಸದಾ ಕಾರ್ಯೋ ನ ದ್ವಿತೀಯಃ ಕದಾಚನ ।
ತ್ರಿರಾತ್ರಂ ಪಂಚರಾತ್ರಂ ವಾ ಪಕ್ಷವ್ರತಮಥಾಽಪಿ ವಾ ॥ ೭೫ ॥
ಮಾಸೋಪವಾಸಂ ವಾ ಕುರ್ಯಾಚ್ಚಾಂದ್ರಾಯಣಮಥಾಽಪಿ ವಾ ।
ಕೃಚ್ಛ್ರಂ ಪರಾಕಂ ವಾ ಕುರ್ಯಾತ್ತಪ್ತಕೃಚ್ಛ್ರಮಥಾಽಪಿ ವಾ ॥ ೭೬ ॥
ಯವಾನ್ನೈರ್ವಾ ಫಲಾಹಾರೈಃ ಶಾಕಾಹಾರೈಃ ಪಯೋವ್ರತೈಃ ।
ಪ್ರಾಣಯಾತ್ರಾಂ ಪ್ರಕುರ್ವೀತ ಯಾವತ್ಪ್ರಾಣಃ ಸ್ವಯಂ ವ್ರಜೇತ್ ॥ ೭೭ ॥

---

ಹಾಗೆಯೇ ಮಂಗಳಕರವಾದ ಪತಿವ್ರತಾಸಂದರ್ಶನಮಾತ್ರದಿಂದಲೆ ಮಾನವನಿಗೆ ಪಾವಿತ್ರ್ಯವುಂಟಾಗುತ್ತದೆ.

೭೧ ಒಂದುವೇಳೆ ಪತ್ನಿಯಾದವಳು ಪತಿಯನ್ನು ದುರ್ದೈವಪರಿಪಾಕದಿಂದ ಮೃತಿಯೊಂದಿದ ಮೇಲೆ ಅನುಸರಿಸದಿದ್ದರೂ ಶೀಲವನ್ನಾದರೂ ಚೆನ್ನಾಗಿ ಕಾಪಾಡಿಕೊಳ್ಳಬೇಕು. ಹಾಗಲ್ಲದೆ ಆ ಶೀಲಕ್ಕೂ ಭಂಗವನ್ನು ತಂದುಕೊಂಡರೆ ಅವಳಿಗೆ ಅಧಃಪತನವುಂಟಾಗುತ್ತದೆ.

೭೨ ಪತ್ನಿಯು ದುಶ್ಶೀಲೆಯಾಗಿ ವರ್ತಿಸತೊಡಗಿದರೆ, ಪತಿಯು ಸ್ವರ್ಗದಲ್ಲಿದ್ದರೂ ಪತಿತನಾಗುವುದು ಮಾತ್ರವಲ್ಲದೆ ಆ ಸ್ತ್ರೀಯ ತಂದೆ ತಾಯಿ ಅಣ್ಣ ತಮ್ಮಂದಿರು ಎಲ್ಲರೂ ಅಧೋಗತಿಗೆ ಬರುತ್ತಾರೆ.

೭೩. ಯಾವ ಹೆಂಗಸು ಪತಿಯು ಮೃತನಾದ ಮೇಲೆ ವೈಧವ್ಯಧರ್ಮಗಳನ್ನು ಬಿಡದೆ ಪಾಲಿಸುತ್ತಾಳೆಯೊ ಅವಳು ಪುನಃ ಭರ್ತನ ಸಾಲೋಕ್ಯವನ್ನು ಪಡೆದು ಸ್ವರ್ಗಭೋಗಗಳನ್ನು ಅನುಭವಿಸುತ್ತಾಳೆ.

೭೪. ವಿಧವೆಯ ಕಬರೀಬಂಧನವು ಭರ್ತನ ಬಂಧನಕ್ಕೆ ಕಾರಣವಾಗುತ್ತದೆ. ಆದುದರಿಂದ ವಿಧವೆಯು ಯಾವಾಗಲೂ ಶಿರೋಮುಂಡನವನ್ನು ಮಾಡಿಕೊಳ್ಳಬೇಕು.

೭೫–೭೭. ಯಾವಾಗಲೂ ಒಪ್ಪೊತ್ತು ಮಾತ್ರ ಊಟಮಾಡಬೇಕಾಗಲಿ ಎರಡನೆಯ ಹೊತ್ತು ಬಾರದು. ತ್ರಿರಾತ್ರ ಪಂಚರಾತ್ರ ಪಕ್ಷವ್ರತ ಮಾಸೋಪ

**ಪರ್ಯಂಕಶಾಯಿನೀ ನಾರೀ ವಿಧವಾ ಪಾತಯೇತ್ಪತಿಂ ।**
**ತಸ್ಮಾದ್ಭೂಶಯನಂ ಕಾರ್ಯಂ ಪತಿಸೌಖ್ಯಸಮೀಹಯಾ ॥ ೭೮ ॥**
**ನ ಚಾಂಗೋದ್ವರ್ತನಂ ಕಾರ್ಯಂ ಸ್ತ್ರಿಯಾ ವಿಧವಯಾ ಕ್ವಚಿತ್ ।**
**ಗಂಧದ್ರವ್ಯಸ್ಯ ಸಂಯೋಗೋ ನೈವ ಕಾರ್ಯಸ್ತಯಾ ಪುನಃ ॥ ೭೯ ॥**
**ತರ್ಪಣಂ ಪ್ರತ್ಯಹಂ ಕಾರ್ಯಂ ಭರ್ತುಃ ಕುಶತಿಲೋದಕೈಃ ।**
**ತತ್ಪಿತುಸ್ತತ್ಪಿತುಶ್ಚಾಪಿ ನಾಮಗೋತ್ರಾದಿಪೂರ್ವಕಂ ॥ ೮೦ ॥**
**ವಿಷ್ಣೋಸ್ತು ಪೂಜನಂ ಕಾರ್ಯಂ ಪತಿಬುದ್ಧ್ಯಾ ನ ಚಾಽನ್ಯಥಾ ।**
**ಪತಿಮೇವ ಸದಾ ಧ್ಯಾಯೇದ್ವಿಷ್ಣುರೂಪಧರಂ ಹರಿಂ ॥ ೮೧ ॥**
**ಯದ್ಯದಿಷ್ಟತಮಂ ಲೋಕೇ ಯಚ್ಚ ಪತ್ಯುಃ ಸಮೀಹಿತಂ ।**
**ತತ್ತದ್ಗುಣವತೇ ದೇಯಂ ಪತಿಪ್ರೀಣನಕಾಮ್ಯಯಾ ॥ ೮೨ ॥**
**ವೈಶಾಖೇ ಕಾರ್ತಿಕೇ ಮಾಘೇ ವಿಶೇಷನಿಯಮಾಂಶ್ಚರೇತ್ ।**
**ಸ್ನಾನಂ ದಾನಂ ತೀರ್ಥಯಾತ್ರಾಂ ವಿಷ್ಣೋರ್ನಾಮಗ್ರಹಂ ಮುಹುಃ॥೮೩॥**

---

ವಾಸ ಚಾಂದ್ರಾಯಣ ಕೃಚ್ಛ್ರ ಪರಾಕ ತಪ್ತಕೃಚ್ಛ್ರ ಫಲಾಹಾರ ಮುಂತಾದವುಗಳಿಂದಲೂ ಶಾಕಾಹಾರಗಳಿಂದಲೂ ಪಯೋವ್ರತಗಳಿಂದಲೂ ಕಠಿನವಾದ ನಿಯಮವನ್ನಾಚರಿಸಿ ತಾನಾಗಿಯೇ ಪ್ರಾಣವು ಹೋಗುವವರೆಗೆ ಪ್ರಾಣಯಾತ್ರೆಯನ್ನು ಮಾಡಿಕೊಳ್ಳುತ್ತಿರಬೇಕು

೭೮. ಮಂಚದ ಮೇಲೆ ಮಲಗಿ ನಿದ್ರಿಸುವ ವಿಧವೆಯು ಪತಿಯನ್ನು ಸ್ವರ್ಗದಿಂದ ಬೀಳಿಸುತ್ತಾಳೆ. ಆದುದರಿಂದ ಪತಿಗೆ ಸೌಖ್ಯವನ್ನು ಕೋರುವ ವಿಧವೆಯು ಯಾವಾಗಲೂ ನೆಲದ ಮೇಲೆಯೇ ಮಲಗಬೇಕು.

೭೯–೮೦. ವಿಧವೆಯು ಅಭ್ಯಂಗಸ್ನಾನಾದಿಗಳನ್ನು ಮಾಡಕೂಡದು. ಗಂಧಾದಿ ಸುಗಂಧದ್ರವ್ಯಗಳನ್ನು ಉಪಯೋಗಿಸಬಾರದು. ಪ್ರತಿನಿತ್ಯವೂ ಗಂಡನಿಗೂ ಮಾವನಿಗೂ ಅವನ ತಂದೆಗೂ ನಾಮಗೋತ್ರಾದಿಗಳನ್ನು ಹೇಳಿಕೊಂಡು ಕುಶತಿಲೋದಕಗಳಿಂದ ತರ್ಪಣವನ್ನು ಕೊಡಬೇಕು

೮೧. ಪತಿಬುದ್ಧಿಯಿಂದಲೇ ವಿಷ್ಣುವನ್ನು ಪೂಜಿಸತಕ್ಕದ್ದು. ಪತಿಯನ್ನು ವಿಷ್ಣುರೂಪಧರನಾದ ಹರಿಯೆಂದು ಭಾವಿಸತಕ್ಕದ್ದು.

೮೨. ಈ ಲೋಕದಲ್ಲಿ ಪತಿಗೆ ಯಾವ ಯಾವ ಪದಾರ್ಥಗಳು ಇಷ್ಟಗಳೊ ಅವುಗಳನ್ನೆಲ್ಲ ಆತನನ್ನು ಸಂತೋಷಗೊಳಿಸುವುದಕ್ಕಾಗಿಯೇ ಗುಣಾಢ್ಯರಾದ ಬ್ರಾಹ್ಮಣರಿಗೆ ದಾನಮಾಡತಕ್ಕದ್ದು.

೮೩. ವೈಶಾಖ ಕಾರ್ತಿಕ ಮಾಘಮಾಸಗಳಲ್ಲಿ ಸ್ನಾನ ದಾನ ತೀರ್ಥಯಾತ್ರೆ ವಿಷ್ಣುಸಹಸ್ರನಾಮಪಠನ ಮೊದಲಾದ ನಿಯಮಗಳನ್ನು ಪುನಃ ಪುನಃ ಬಿಡದೆ ಅನುಸರಿಸತಕ್ಕದ್ದು.

ವೈಶಾಖೇ ಜಲಕುಂಭಾಶ್ಚ ಕಾರ್ತಿಕೇ ಘೃತದೀಪಕಾಃ ।
ಮಾಘೇ ಧಾನ್ಯತಿಲೋತ್ಸರ್ಗಃ ಸ್ವರ್ಗಲೋಕೇ ವಿಶಿಷ್ಯತೇ ॥ ೮೪ ॥
ಪ್ರಪಾ ಕಾರ್ಯಾ ಚ ವೈಶಾಖೇ ದೇವೇ ದೇಯಾ ಗಲಂತಿಕಾ ।
ಉಪಾನದ್ವ್ಯಜನಂ ಛತ್ರಂ ಸೂಕ್ಷ್ಮವಾಸಾಂಸಿ ಚಂದನಂ ॥ ೮೫ ॥
ಸಕರ್ಪೂರಂ ಚ ತಾಂಬೂಲಂ ಪುಷ್ಪದಾನಂ ತಥೈವ ಚ ।
ಜಲಪಾತ್ರಾಣ್ಯನೇಕಾನಿ ತಥಾ ಪುಷ್ಪಗೃಹಾಣಿ ಚ ॥ ೮೬ ॥
ಪಾನಾನಿ ಚ ವಿಚಿತ್ರಾಣಿ ದ್ರಾಕ್ಷಾರಂಭಾಫಲಾನಿ ಚ ।
ದೇಯಾನಿ ದ್ವಿಜಮುಖ್ಯೇಭ್ಯಃ ಪತಿರ್ಮೇ ಪ್ರೀಯತಾಮಿತಿ ॥ ೮೭ ॥
ಊರ್ಜೇ ಯವಾನ್ನಮಶ್ನೀಯಾದೇಕಾನ್ನಮಥವಾ ಪುನಃ ।
ವೃಂತಾಕಂ ಸೂರಣಂ ಚೈವ ಶೂಕಶಿಂಬಿಂ ಚ ವರ್ಜಯೇತ್ ॥ ೮೮ ॥
ಕಾರ್ತಿಕೇ ವರ್ಜಯೇತ್ತೈಲಂ ಕಾರ್ತಿಕೇ ವರ್ಜಯೇನ್ಮಧು ।
ಕಾರ್ತಿಕೇ ವರ್ಜಯೇತ್ಕಾಂಸ್ಯಂ ಕಾರ್ತಿಕೇ ಚಾಽಪಿ ಸಂಧಿತಂ ॥ ೮೯ ॥
ಕಾರ್ತಿಕೇ ಮೌನನಿಯಮೇ ಘಂಟಾಂ ಚಾರು ಪ್ರದಾಪಯೇತ್ ।
ಪತ್ರಭೋಜೀ ಕಾಂಸ್ಯಪಾತ್ರಂ ಘೃತಪೂರ್ಣಂ ಪ್ರಯಚ್ಛತಿ ॥ ೯೦ ॥

---

೮೪. ವೈಶಾಖಮಾಸದಲ್ಲಿ ಜಲಕುಂಭದಾನವನ್ನೂ ಕಾರ್ತಿಕದಲ್ಲಿ ಘೃತ ದೀಪದಾನವನ್ನೂ ಮಾಘಮಾಸದಲ್ಲಿ ಧಾನ್ಯತಿಲದಾನಗಳನ್ನೂ ಮಾಡಿದಲ್ಲಿ ಅದರಿಂದ ಅಮಿತವಾದ ಪುಣ್ಯಲಾಭವಾಗಿ ಸ್ವರ್ಗಲೋಕದಲ್ಲಿ ವಿಶೇಷವೆನಿಸುತ್ತದೆ.

೮೫-೮೭. ವೈಶಾಖಮಾಸದಲ್ಲಿ ಅರವಟ್ಟಿಗೆಗಳನ್ನು ನಡೆಸಿ ಸ್ವಾಮಿಯ ಅಭಿಷೇಕಕ್ಕಾಗಿ ಧಾರಾಪಾತ್ರೆಗಳನ್ನಿತ್ತು, ಬ್ರಾಹ್ಮಣರಿಗೆ ಪಾದರಕ್ಷೆ ಬೀಸಣಿಗೆ ಕೊಡೆ ತೆಳುಬಟ್ಟೆಗಳು ಚಂದನಾದಿ ಸುಗಂಧ ದ್ರವ್ಯಗಳು ಕರ್ಪೂರ ತಾಂಬೂಲ ಗಳು, ಉದಕುಂಭಗಳು, ಅಂತೆಯೇ ಪುಷ್ಪಗೃಹಗಳು ಚಿತ್ರವಿಚಿತ್ರವಾದ ಪಾನೀಯಗಳು ದ್ರಾಕ್ಷಿ ರಸಬಾಳೆಯಹಣ್ಣು ಮೊದಲಾದುವುಗಳನ್ನು "ನನ್ನ ಪತಿಯು ಪ್ರೀತನಾಗಲಿ" ಎಂದು ಸಂಕಲ್ಪಮಾಡಿ ದಾನಮಾಡಬೇಕು.

೮೮-೮೯. ಕಾರ್ತಿಕಮಾಸದಲ್ಲಿ ಒಪ್ಪೊತ್ತು ಮಾತ್ರ ಯವಾನ್ನವನ್ನು ಊಟ ಮಾಡಬೇಕು. ಬದನೆಕಾಯಿ, ಸುವರ್ಣದ ಗಡ್ಡೆ, ಶೂಕಶಿಂಬೆಕಾಯಿ ಮೊದಲಾದು ವುಗಳನ್ನು ವರ್ಜಿಸಬೇಕು. ತೈಲ ಜೇನು ಕಂಚು ಮೊದಲಾದವುಗಳನ್ನೂ ತೊರೆಯತಕ್ಕದ್ದು.

೯೦. ಕಾರ್ತಿಕಮಾಸದಲ್ಲಿ ಮೌನನಿಯಮಗಳಿಂದಿದ್ದು ಘಂಟಾದಾನವನ್ನು ಮಾಡತಕ್ಕದ್ದು. ಪತ್ರದಲ್ಲಿ ಭೋಜನಮಾಡುವಾತನು ಕಂಚಿನ ತಟ್ಟೆಯಲ್ಲಿ ತುಪ್ಪವನ್ನು ಹಾಕಿ ದಾನಮಾಡಬೇಕು

ಭೂಮಿಶಯ್ಯಾವ್ರತೇ ದೇಯಾ ಶಯ್ಯಾ ಶ್ಲಕ್ಷ್ಣಾ ಸತೂಲಿಕಾ ।
ಫಲತ್ಯಾಗೇ ಫಲಂ ದೇಯಂ ರಸತ್ಯಾಗೇ ಚ ತದ್ರಸಂ ॥ ೯೧ ॥
ಧಾನ್ಯತ್ಯಾಗೇ ಚ ತದ್ಧಾನ್ಯಮಥವಾ ಶಾಲಯಃ ಸ್ಮೃತಾಃ ।
ಧೇನೂರ್ದದ್ಯಾತ್ಪ್ರಯತ್ನೇನ ಸಾಽಲಂಕಾರಾಃ ಸಕಾಂಚನಾಃ ॥ ೯೨ ॥
ಏಕತಃ ಸರ್ವದಾನಾನಿ ದೀಪದಾನಂ ತಥೈಕತಃ ।
ಕಾರ್ತಿಕೇ ದೀಪದಾನಸ್ಯ ಕಲಾಂ ನಾಽರ್ಹಂತಿ ಷೋಡಶೀಂ ॥ ೯೩ ॥
ಕಿಂಚಿದಭ್ಯುದಿತೇ ಸೂರ್ಯೇ ಮಾಘಸ್ನಾನಂ ಸಮಾಚರೇತ್ ।
ಯಥಾಶಕ್ತ್ಯಾ ಚ ನಿಯಮಾನ್ಮಾಘಸ್ನಾಯೀ ಸಮಾಚರೇತ್ ॥ ೯೪ ॥
ಪಕ್ವಾನ್ನೈರ್ಭೋಜಯೇದ್ವಿಪ್ರಾನ್ಯತಿನೋಽಪಿ ತಪಸ್ವಿನಃ ।
ಲಡ್ಡುಕೈಃ ಫೇಣಿಕಾಭಿಶ್ಚ ವಟಕೇಂಡರಿಕಾದಿಭಿಃ ॥ ೯೫ ॥
ಘೃತಪಕ್ವೈಃ ಸಮರಿಚೈಃ ಶುಚಿಕರ್ಪೂರವಾಸಿತೈಃ ।
ಗರ್ಭೇ ಶರ್ಕರಯಾ ಪೂರ್ಣೈರ್ನೇತ್ರಾನಂದ್ಯೈಃ ಸುಗಂಧಿಭಿಃ ॥ ೯೬ ॥

---

೯೧–೯೨. ನೆಲದ ಮೇಲೆ ಮಲಗುವ ವ್ರತವನ್ನು ಹಿಡಿದಾಕೆಯು ಮೃದುವಾದ ಹತ್ತಿಯ ಹಾಸಿಗೆಯನ್ನು ದಾನಮಾಡಬೇಕು. ಹಣ್ಣುಗಳನ್ನೇನಾದರೂ ತ್ಯಾಗಮಾಡಿದ್ದಲ್ಲಿ ಹಣ್ಣುಗಳನ್ನೂ ರಸಗಳನ್ನು ತ್ಯಾಗಮಾಡಿದ್ದಲ್ಲಿ ಫಲರಸಗಳನ್ನೂ ದಾನಮಾಡಬೇಕು. ಧಾನ್ಯಾದಿಗಳನ್ನು ತ್ಯಾಗಮಾಡಿದ್ದಲ್ಲಿ ಅವುಗಳನ್ನೂ ಅಥವಾ ಅವುಗಳಿಗೆ ಬದಲಾಗಿ ಅಕ್ಕಿಯನ್ನೂ ದಾನಮಾಡಬಹುದು. ಪ್ರಯತ್ನಪೂರ್ವಕವಾಗಿ ಅಲಂಕಾರಸಹಿತವಾಗಿಯೂ, ಸ್ವರ್ಣಸಹಿತವಾಗಿಯೂ ಗೋದಾನಗಳನ್ನು ಮಾಡಬೇಕು.

೯೩. ಕಾರ್ತಿಕಮಾಸದಲ್ಲಿ ಎಲ್ಲ ದಾನಗಳೂ ಒಂದು, ದೀಪದಾನವೇ ಒಂದು. ಸಮಸ್ತ ದಾನಗಳೂ ಕಾರ್ತಿಕದ ದೀಪದಾನದ ಹದಿನಾರನೆಯ ಒಂದು ಕಲೆಗೂ ಸಮಾನವಾಗುವುದಿಲ್ಲ.

೯೪. ಸೂರ್ಯನು ಸ್ವಲ್ಪ ಮಾತ್ರ ಉದಯಿಸಿರುವಾಗಲೇ ಮಾಘಮಾಸದಲ್ಲಿ ಸ್ನಾನವನ್ನಾಚರಿಸತಕ್ಕದ್ದು. ಹೀಗೆ ಮಾಘಸ್ನಾನವನ್ನು ಮಾಡುವವಳು ಶಕ್ತ್ಯನುಸಾರ ಮಾಘಮಾಸದ ನಿಯಮಗಳನ್ನನುಸರಿಸತಕ್ಕದ್ದು.

೯೫–೯೬ ಪಕ್ವಾನ್ನಗಳಿಂದಲೂ ಲಾಡು, ಫೇಣಿ, ವಡೆ, ಇಂಡರಿ(ಜಗನ್ನಾಥ ಕ್ಷೇತ್ರದಲ್ಲಿ ಬಹು ಅಮೋಘವಾದ ಭಕ್ಷ್ಯ) ಪೂರಿ, ಮಂಡಿಗೆ ಮೊದಲಾದ ಘೃತಪಕ್ವಗಳೂ, ಪರಿಶುದ್ಧಗಳೂ, ಮೆಣಸು ಕರ್ಪೂರಾದಿಗಳಿಂದ ಸುವಾಸನೆ ಕಟ್ಟಿದವೂ ಒಳಗೆ ಸಕ್ಕರೆಯನ್ನು ಹುದುಗಿಸಿ ಹೊರಗೆ ನೋಡಲು ನೇತ್ರಾನಂದಕರವೂ ಆದ ಭೋಜನಗಳಿಂದ ವಿಪ್ರಶ್ರೇಷ್ಠರಿಗೂ ಯತಿಗಳಿಗೂ ತಪಸ್ವಿಗಳಿಗೂ ಭೋಜನ ಮಾಡಿಸಬೇಕು.

ಶುಷ್ಕೇಂಧನಾನಾಂ ಭಾರಾಂಶ್ಚ ದದ್ಯಾಚ್ಛೀತಾಽಪನುತ್ತಯೇ ।
ಕಂಚುಕಂ ತೂಲಗರ್ಭಂ ಚ ತೂಲಿಕಾಂ ಸೂಪವೀತಿಕಾಂ ॥ ೯೭ ॥
ಮಂಜಿಷ್ಠಾರಕ್ತವಾಸಾಂಸಿ ತಥಾ ತೂಲವತೀಂ ಪಟೀಂ ।
ಜಾತೀಫಲಲವಂಗೈಶ್ಚ ತಾಂಬೂಲಾನಿ ಬಹೂನ್ಯಪಿ ॥ ೯೮ ॥
ಕಂಬಲಾನಿ ವಿಚಿತ್ರಾಣಿ ನಿರ್ವಾತಾನಿ ಗೃಹಾಣಿ ಚ ।
ಮೃದುಲಾಃ ಪಾದರಕ್ಷಾಶ್ಚ ಸುಗಂಧ್ಯುದ್ವರ್ತನಾನಿ ಚ ॥ ೯೯ ॥
ಘೃತಕಂಬಲಪೂಜಾಭಿರ್ಮಹಾಸ್ನಾನಪುರಃಸರಂ ।
ಕೃಷ್ಣಾಗುರುಪ್ರಭೃತಿಭಿರ್ಗರ್ಭಾಗಾರೇ ಪ್ರಧೂಪನೈಃ ॥ ೧೦೦ ॥
ಸ್ಥೂಲವರ್ತಿಪ್ರದೀಪೈಶ್ಚ ನೈವೇದ್ಯೈರ್ವಿವಿಧೈಸ್ತಥಾ ।
ಭರ್ತೃಸ್ವರೂಪೋ ಭಗವಾನ್ಪ್ರೀಯತಾಮಿತಿ ಚೋಚ್ಚರೇತ್ ॥ ೧೦೧ ॥
ಏವಂವಿಧೈಶ್ಚ ವಿಧವಾ ವಿವಿಧೈರ್ನಿಯಮೈರ್ವ್ರತೈಃ ।
ವೈಶಾಖಾನ್ಕಾರ್ತಿಕಾನ್ಮಾಘಾನೇವಮೇವಾಽತಿವಾಹಯೇತ್ ॥ ೧೦೨ ॥
ನಾಽಧಿರೋಹೇದನಡ್ವಾಹಂ ಪ್ರಾಣೈಃ ಕಂಠಗತೈರಪಿ ।
ಕಂಚುಕಂ ನ ಪರೀದಧ್ಯಾದ್ವಾಸೋ ನ ವಿಕೃತಂ ನ್ಯಸೇತ್ ॥ ೧೦೩ ॥

---

೯೭–೯೯ ಒಣಕಟ್ಟಿಗೆಗಳ ಕಟ್ಟುಗಳನ್ನು ಶೀತಶಾಂತ್ಯರ್ಥವಾಗಿ ವಿಪ್ರರಿಗೆ ದಾನಮಾಡಬೇಕಲ್ಲದೆ, ಹತ್ತಿಯ ಡಕಿದ ಹೊದಿಕೆ ಹಾಸಿಗೆಗಳನ್ನೂ ಶಾಲುಗಳನ್ನೂ ಕೆಂಪುಬಟ್ಟೆಗಳನ್ನೂ ಹತ್ತಿಬಟ್ಟೆಗಳನ್ನೂ ಕೊಡುವುದೇ ಅಲ್ಲದೆ, ಜಾಯಿಕಾಯಿ ಲವಂಗಗಳು ಬೆರೆತ ತಾಂಬೂಲಗಳನ್ನೂ, ಚಿತ್ರವಿಚಿತ್ರವಾದ ಕಂಬಳಿಗಳನ್ನೂ, ಬೆಚ್ಚನೆಯ ಮನೆಗಳನ್ನೂ, ಮೃದುವಾದ ಪಾದರಕ್ಷೆಗಳನ್ನೂ, ಸುಗಂಧ ತೈಲಾದಿಗಳನ್ನೂ ದಾನಮಾಡತಕ್ಕದ್ದು.

೧೦೦–೧೦೧. ಘೃತಕಂಬಲಪೂಜೆಗಳಿಂದಲೂ ಮಹಾಸ್ನಾನಪುರಸ್ಸರವಾಗಿಯೂ ಕೃಷ್ಣಾಗುರುವೇ ಮೊದಲಾದ ಧೂಪಾದಿಗಳನ್ನು ಹಾಕಿ ಗರ್ಭಗುಡಿಗಳನ್ನು ಸುವಾಸನೆಗೊಳಿಸಿ ದಪ್ಪನೆಯ ಬತ್ತಿಗಳನ್ನು ಹಾಕಿ ಬೆಳಗಿಸಿದ ದೀಪಗಳಿಂದಲೂ ಬಗೆಬಗೆಯ ನೈವೇದ್ಯಗಳಿಂದಲೂ ಭಗವಂತನನ್ನರ್ಚಿಸಿ, “ಭರ್ತೃಸ್ವರೂಪನಾದ ಓ ಸ್ವಾಮಿಯೇ, ಪ್ರಸನ್ನನಾಗು” ಎಂದು ಹೇಳಬೇಕು.

೧೦೨. ವಿಧವೆಯಾದವಳು ಈ ಪ್ರಕಾರವಾಗಿ ಅನೇಕ ಬಗೆಯಾದ ವ್ರತಗಳಿಂದ ವೈಶಾಖ ಕಾರ್ತಿಕ ಮಾಘ ಮಾಸಗಳನ್ನು ಕಳೆಯತಕ್ಕದ್ದು.

೧೦೩. ಪ್ರಾಣವು ಕುತ್ತಿಗೆಗೆ ಹತ್ತಿಬರುತ್ತಿದ್ದರೂ ಕೂಡ, ಎತ್ತಿನ ಮೇಲೆ ಪ್ರಯಾಣಮಾಡಬಾರದು. ರವಿಕೆಯನ್ನು ತೊಡಬಾರದು. ಬಣ್ಣಬಣ್ಣದ ಬೆಲೆಬಾಳುವ ಪಟ್ಟುಸೀರೆಗಳನ್ನು ಉಡಬಾರದು.

ಅಪೃಷ್ಟ್ವಾ ತು ಸುತಾನ್ಕಿಂಚಿನ್ನ ಕುರ್ಯಾದ್ಭರ್ತೃತತ್ಪರಾ ।
ಏವಂ ಚರ್ಯಾಪರಾ ನಿತ್ಯಂ ವಿಧವಾಽಪಿ ಶುಭಾ ಮತಾ ॥ ೧೦೪ ॥
ಏವಂ ಧರ್ಮಸಮಾಯುಕ್ತಾ ವಿಧವಾಽಪಿ ಪತಿವ್ರತಾ ।
ಪತಿಲೋಕಾನವಾಪ್ನೋತಿ ನ ಭವೇತ್ಕ್ವಾಪಿ ದುಃಖಭಾಕ್ ॥ ೧೦೫ ॥
ನ ಗಂಗಯಾ ತಯಾ ಭೇದೋ ಯಾ ನಾರೀ ಪತಿದೇವತಾ ।
ಉಮಾಶಿವಸಮಾ ಸಾಕ್ಷಾತ್ತಸ್ಮಾತ್ತಾಂ ಪೂಜಯೇದ್ಬುಧಃ ॥ ೧೦೬ ॥

ಬೃಹಸ್ಪತಿರುವಾಚ :—

ಗಂಗಾಸ್ನಾನಫಲಂ ತ್ವೇತದ್ಯಜ್ಞಾತಂ ತವ ದರ್ಶನಂ ।
ಲೋಪಾಮುದ್ರೇ ಮಹಾಮಾತರ್ಭರ್ತೃಪಾದಾಂಬುಜೇಕ್ಷಣೇ ॥ ೧೦೭ ॥
ಇತಿ ಸ್ತುತ್ವಾ ಮಹಾಭಾಗಾಂ ರಾಜಪುತ್ರೀಂ ಪತಿವ್ರತಾಂ ।
ಪ್ರಣಮ್ಯ ಚ ಗುರುಃ ಪ್ರಾಹ ಮುನಿಂ ಸರ್ವಾರ್ಥಕೋವಿದಃ ॥ ೧೦೮ ॥

---

೧೦೪. ಮಕ್ಕಳನ್ನು ಕೇಳದೆ ಭರ್ತೃತತ್ಪರಗಳಾಗಿರುವ ವಿಧವೆಯು ಏನೊಂದನ್ನೂ ಮಾಡಬಾರದು. ಈ ರೀತಿಯಾಗಿ ನಡೆದುಕೊಳ್ಳುವ ವಿಧವೆಯು ಯಾವಾಗಲೂ ಮಂಗಳಕರಳೆಂದೇ ಅಭಿಪ್ರಾಯವು.

೧೦೫. ಈ ಧರ್ಮಾಚರಣೆಗಳಿಂದ ಕೂಡಿದವಳು ವಿಧವೆಯಾದರೂ ಪತಿವ್ರತೆಯೆಂದೇ ಎನಿಸಿಕೊಳ್ಳುವಳು. ಅವಳು ಪತಿಲೋಕವನ್ನೇ ಸೇರುತ್ತಾಳೆ. ಎಂದಿಗೂ ದುಃಖಭಾಗಿನಿಯಾಗುವುದಿಲ್ಲ.

೧೦೬. ಯಾವ ನಾರಿಯು ಪತಿಯನ್ನೇ ದೇವರನ್ನಾಗಿ ಭಾವಿಸುವಳೋ ಅವಳಿಗೂ ಗಂಗೆಗೂ ಯಾವ ಭೇದವೂ ಇರುವುದಿಲ್ಲ. ಅವಳು ಉಮಾಮಹೇಶ್ವರರಿಗೆ ಸಮಾನಳಾದವಳು. ಆದುದರಿಂದ ಪಂಡಿತನಾದವನು ಅವಳನ್ನು ಪೂಜಿಸತಕ್ಕದ್ದು.

೧೦೭. ಬೃಹಸ್ಪತಿಯು ಹೇಳುತ್ತಾನೆ —ಎಲೈ ಮಹಾಮಾತೆಯೂ ಭರ್ತೃಚರಣಗಳಲ್ಲಿಯೇ ನಟ್ಟ ದೃಷ್ಟಿಯುಳ್ಳವಳೂ ಆದ ಲೋಪಾಮುದ್ರಾದೇವಿಯು, ನಿನ್ನ ದರ್ಶನವಾದುದರಿಂದ ನಮಗೆ ಇದೀಗ ಗಂಗಾಸ್ನಾನದ ಫಲವು ದೊರೆಯಿತು.

೧೦೮. ಎಲೈ ಸೂತಪುರಾಣಿಕನೆ, ದೇವಗುರುವಾದ ಆ ಬೃಹಸ್ಪತಿಯು ಈ ವಿಧವಾಗಿ ಮಹಾ ಭಾಗ್ಯಶಾಲಿನಿಯೂ ರಾಜಪುತ್ರಿಯೂ ಪತಿವ್ರತೆಯೂ ಆದ ಲೋಪಾಮುದ್ರಾದೇವಿಯನ್ನು ಸ್ತುತಿಸಿ, ಆ ತರುವಾಯ ಸಮಸ್ತ ತತ್ತ್ವಾರ್ಥಗಳನ್ನೂ ಬಲ್ಲವನಾದುದರಿಂದ ಅಗಸ್ತ್ಯಮುನಿಪುಂಗವನನ್ನು ಕುರಿತು ಹೇಳತೊಡಗಿದನು.

ಪ್ರಣವಸ್ತ್ವಂ ಶ್ರುತಿರಿಯಂ ಕ್ಷಮೈಷಾ ತ್ವಂ ಸ್ವಯಂ ತಪಃ ।
ಸತ್ಕ್ರಿಯೇಯಂ ಫಲಂ ತ್ವಂ ಹಿ ಧನ್ಯೋಽಸೀತಿ ಮಹಾಮುನೇ ॥ ೧೦೯ ॥
ಇದಂ ಪಾತಿವ್ರತಂ ತೇಜೋ ಬ್ರಹ್ಮತೇಜೋ ಭವಾನ್ಪರಂ ।
ತತ್ರಾಽಪ್ಯೇತತ್ತಪಸ್ತೇಜಃ ಕಿಮಸಾಧ್ಯತಮಂ ತವ ॥ ೧೧೦ ॥
ತವ ನಾಽವಿದಿತಂ ಕಿಂಚಿತ್ತಥಾಽಪಿ ಚ ವದಾಮ್ಯಹಂ ।
ಯದರ್ಥಮಾಗತಾ ದೇವಾಸ್ತನ್ಮನೇಽತ್ರ ನಿಶಾಮಯ ॥ ೧೧೧ ॥
ಅಯಂ ಶತಮಖಃ ಶ್ರೀಮಾನ್ವೃತ್ರಹಾ ಕುಲಿಶಾಯುಧಃ ।
ಸಿದ್ಧ್ಯಷ್ಟಕಂ ಹಿ ಯದ್ದ್ವಾರಿ ದೃಕ್ಪ್ರಸಾದಂ ಸಮೀಕ್ಷತೇ ॥ ೧೧೨ ॥
ಯಸ್ಯ ಪುರ್ಯಾಃ ಪರಿಸರೇ ಕಾಮಧೇನುವ್ರಜಶ್ಚರೇತ್ ।
ಯತ್ಪೌರಾಃ ಕಲ್ಪವೃಕ್ಷಾಣಾಂ ನಿತ್ಯಂ ಛಾಯಾಸು ಶೇರತೇ ॥ ೧೧೩ ॥
ಯದ್ರಥ್ಯಾಸು ಚ ತಿಷ್ಠಂತಿ ತೇ ಚಿಂತಾಮಣಿಕರ್ಕರಾಃ ।
ಅಯಮಗ್ನಿರ್ಜಗದ್ಯೋನಿರ್ಧರ್ಮರಾಜಸ್ತ್ವಯಂ ಪುನಃ ॥ ೧೧೪ ॥

---

೧೦೯–೧೧೦. ಎಲೈ ಮಹರ್ಷಿಯೆ, ನೀನು ಪ್ರಣವಸ್ವರೂಪನಾದರೆ ನಿನ್ನ ಪತ್ನಿಯಾದ ಈ ಲೋಪಾಮುದ್ರಾದೇವಿಯು ಶ್ರುತಿಸ್ವರೂಪಿಣಿಯು. ಕ್ಷಮಾ ರೂಪಿಣಿಯೇ ಈಕೆಯು. ತಪಸ್ಸ್ವರೂಪನೇ ನೀನು. ಈಕೆಯು ಸತ್ಕ್ರಿಯೆಯು. ನೀನು ಆ ಸತ್ಕರ್ಮಗಳ ಫಲಸ್ವರೂಪನು. ಓ ಮಹಾ ಮುನಿ, ನೀನೇ ಧನ್ಯ ತಮನು. ಇದು ಪಾತಿವ್ರತ್ಯದ ತೇಜಸ್ಸು. ನೀನು ಉತ್ತಮೋತ್ತಮವಾದ ಬ್ರಹ್ಮ ತೇಜಸ್ಸಿನ ಮೂರ್ತಸ್ವರೂಪ. ಅದರಲ್ಲಿಯೂ ನಿನಗೆ ಅಪರಿಮಿತವಾದ ತಪಸ್ಸಿ ನಿಂದುಂಟಾದ ತೇಜಸ್ಸು ಇರುವುದು. ಇಂತಹ ನಿನಗೆ ಸಾಧ್ಯವಾಗದುದು ಏನುಂಟು?

೧೧೧. ನಿನಗೆ ತಿಳಿಯದುದು ಏನೂ ಇರುವುದಿಲ್ಲ. ಆದರೂ ಈ ದೇವತೆ ಗಳೆಲ್ಲರೂ ಎತಕ್ಕಾಗಿ ಬಂದಿರುವರೆಂಬುದನ್ನು ಅರಿಕೆಮಾಡುತ್ತೇನೆ, ಲಾಲಿಸು.

೧೧೨. ಇದೊ, ಈತನೆ ನೂರು ಯಾಗಗಳನ್ನು ಮಾಡಿ ಇಂದ್ರಪಟ್ಟವನ್ನೇರಿ ರುವ ಪುಣ್ಯಾತ್ಮನು. ತೇಜಸ್ಸಂಪನ್ನನಾದ ಈತನೆ ವೃತ್ರಾಸುರನನ್ನು ಸಂಹರಿಸಿ ದವನು, ವಜ್ರಾಯುಧಧಾರಿಯು. ಅಣಿಮಾದಿ ಅಷ್ಟಸಿದ್ಧಿಗಳು ಈತನ ಕಟಾಕ್ಷ ವೀಕ್ಷಣವನ್ನು ಕಾಂಕ್ಷಿಸಿ ಈತನ ಭವನದ್ವಾರದಲ್ಲಿ ಕಾದಿರುತ್ತವೆ.

೧೧೩–೧೧೪. ಈತನ ಪಟ್ಟಣವಾದ ಅಮರಾವತಿಯ ಸಮೀಪದಲ್ಲಿಯೆ ಕಾಮಧೇನುವಿನ ಬಳಗವು ಸಂಚರಿಸುತ್ತಿರುತ್ತದೆ. ಆ ಪಟ್ಟಣಿಗರೆಲ್ಲ ಕಲ್ಪವೃಕ್ಷ ಗಳ ನೆರಳಿನಲ್ಲಿ ಮಲಗಿ ನಿದ್ರಿಸುತ್ತಾರೆ. ಆ ಪಟ್ಟಣದ ರಾಜಬೀದಿಗಳಲ್ಲೆಲ್ಲ ಚಿಂತಾಮಣಿಯೇ ಮೊದಲಾದ ಅನರ್ಘ್ಯರತ್ನಗಳು ಕಲ್ಲುಗಳಾಗಿ ಬಿದ್ದಿವೆ.

ನಿರ್ಋತಿರ್ವರುಣೋ ವಾಯುಃ ಶ್ರೀದರುದ್ರಾದಯಸ್ತ್ವಮೀ ।
ಆರಾಧ್ಯಂತೇ ಚ ಚಾರಿತ್ರ್ಯೈಃ ಸರ್ವಕಾಮಾರ್ಥಮೀಶ್ವರಾಃ ॥ ೧೧೫ ॥
ಸಮಭ್ಯರ್ಥಯಿತಾರೋಽಮೀ ತ್ವಂ ಯಾಚ್ಯಸ್ತು ಜಗತ್ಕೃತೇ ।
ವಾಙ್ಮಾತ್ರೋದ್ಯಮಸಾಧ್ಯಂ ತತ್ತವ ವಿಶ್ವೋಪಕಾರಕಂ ॥ ೧೧೬ ॥
ಕಶ್ಚಿಚ್ಛೈಲೋ ವಿಂಧ್ಯನಾಮಾ ಭಾನುಮಾರ್ಗಾವರೋಧಕಃ ।
ವರ್ಧಿತಃ ಸ್ಪರ್ಧಯಾ ಮೇರೋಸ್ತದ್ವೃದ್ಧಿಂ ತ್ವಂ ನಿವಾರಯ ॥ ೧೧೭ ॥
ಯೇ ಚ ಸ್ವಭಾವಕಠಿನಾ ಯೇ ಚ ಮಾರ್ಗಾವರೋಧಕಾಃ ।
ಯೇ ಸ್ಪರ್ಧಯಾ ವೃದ್ಧಿಮಂತಸ್ತದ್ವೃದ್ಧಿರ್ವರ್ಧಿತಾಽಶುಭಾ ॥ ೧೧೮ ॥
ಇತಿ ಶ್ರುತ್ವಾ ಗುರೋರ್ವಾಕ್ಯಮವಿಚಾರ್ಯ ಮಹಾಮುನಿಃ ।
ಕ್ಷಣಂ ಮುನಿಃ ಸಮಾಧಾಯ ತಥೇತಿ ಪ್ರತ್ಯುವಾಚ ಹ ॥ ೧೧೯ ॥
ಸಾಧಯಿಷ್ಯಾಮಿ ವಃ ಕಾರ್ಯಂ ವಿಸರ್ಜ್ಯೇತಿ ದಿವೌಕಸಃ ।
ಪುನಶ್ಚಿಂತಾಪರೋ ಭೂತ್ವಾಽಗಸ್ತಿರ್ಧ್ಯಾನಪರೋಽಭವತ್ ॥ ೧೨೦ ॥

---

ಅಂತಹ ಮಹೇಂದ್ರನೇ ಈತನು. ಈತನೇ ಜಗದ್ಯೋನಿಯೆನಿಸಿದ ಅಗ್ನಿದೇವನು. ಈತನು ಯಮಧರ್ಮರಾಯನು.

೧೧೫ ಇವರೇ ನಿರ್ಋತಿ ವರುಣ ವಾಯು ಕುಬೇರ ರುದ್ರರು. ಇವರು ಸಮಸ್ತ ಇಷ್ಟಾರ್ಥಗಳಿಗೂ ಒಡೆಯರು. ಅವುಗಳ ಪ್ರಾಪ್ತಿಗಾಗಿ ಲೋಕವೆಲ್ಲ ಇವರನ್ನು ನಿಯಮದಿಂದ ಪೂಜಿಸುತ್ತಾರೆ.

೧೧೬. ಇಂತಹ ಮಹಾಮಹಿಮರಾದ ಈ ದೇವೋತ್ತಮರೆಲ್ಲರೂ ನಿನ್ನನ್ನು ಪ್ರಾರ್ಥಿಸಿ ಲೋಕ ಕಲ್ಯಾಣಕ್ಕಾಗಿ ನಿನ್ನನ್ನು ಬೇಡಬಂದಿದ್ದಾರೆ ಪ್ರಪಂಚಕ್ಕೇ ಉಪಕಾರಕವಾದ ಇವರ ಯಾಚನೆಯನ್ನು ನಲ್ಲಿಸುವುದು ನಿನಗೆ ಬಾಯಿ ಮಾತಿನಿಂದಲೆ ಸಾಧ್ಯ. ಮತ್ತಾವ ಉದ್ಯಮವೂ ಬೇಕಿಲ್ಲ.

೧೧೭. ವಿಂಧ್ಯವೆಂಬ ಅದೊಂದು ಬೆಟ್ಟವು ಸೂರ್ಯಗತಿಯನ್ನೂ ಅಡ್ಡಗಟ್ಟಿ ಬೆಳೆದು, ಮೇರುಪರ್ವತದೊಡನೆ ಸೆಣಸಿ ನಿಂತಿದೆ. ನೀನು ಅದರ ಬೆಳವಣಿಗೆಯನ್ನು ತಡೆಯಬೇಕು.

೧೧೮. ಯಾರ ಸ್ವಭಾವವು ಕಠಿನವೊ, ಯಾರು ಸತ್ಪುರುಷರ ಮಾರ್ಗವನ್ನು ತಡೆಗಟ್ಟುವರೊ, ಸ್ಪರ್ಧೆಯಿಂದಲೆ ಯಾರು ವೃದ್ಧಿಗೊಳ್ಳುವರೊ ಅಂತಹವರ ವೃದ್ಧಿಯು ಲೋಕಕ್ಕೆ ಅಮಂಗಳಕರವಾದುದು

೧೧೯. ಎಲೈ ಸೂತಪುರಾಣಿಕನೆ, ಅಗಸ್ತ್ಯಮುನೀಶ್ವರನು ಬೃಹಸ್ಪತಿಯ ಮಾತುಗಳನ್ನು ಕೇಳಿ, ಏನೊಂದೂ ಯೋಚಿಸದೆ ಒಂದು ಕ್ಷಣಕಾಲ ಸುಮ್ಮನಿದ್ದು, "ಆಗಬಹುದು" ಎಂದು ಉತ್ತರವಿತ್ತನು.

೧೨೦. "ಅಯ್ಯಾ ದೇವತೆಗಳಿರಾ, ನಿಮ್ಮ ಕಾರ್ಯವನ್ನು ಸಾಧಿಸಿಕೊಡು

**ವೇದವ್ಯಾಸ ಉವಾಚ :—**

**ಇಮಂ ಪತಿವ್ರತಾಽಧ್ಯಾಯಂ ಶ್ರುತ್ವಾ ಸ್ತ್ರೀ ಪುರುಷೋಽಪಿ ವಾ ।**
**ಪಾಪಕಂಚುಕಮುತ್ಸೃಜ್ಯ ಶಕ್ರಲೋಕಂ ಪ್ರಯಾಸ್ಯತಿ ॥ ೧೨೧ ॥**

**ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಪತಿವ್ರತಾಖ್ಯಾನಂ" ನಾಮ ಚತುರ್ಥೋಽಧ್ಯಾಯಃ**

---

ತ್ತೇನೆ" ಎಂದೂ ಹೇಳಿದನು. ಹೀಗೆ ಹೇಳಿಯಾದ ಮೇಲೆ ಆ ಮುನಿಯು ಮತ್ತೆ ಯೋಚನೆಗೀಡಾಗಿ ಧ್ಯಾನಿಸತೊಡಗಿದನು.

೧೨೧. ವೇದವ್ಯಾಸನು ಹೇಳುತ್ತಾನೆ.— ಎಲೈ ಸೂತಪುರಾಣಿಕನೆ, ಪತಿವ್ರತಾಧ್ಯಾಯವೆನಿಸಿದ ಈ ಅಧ್ಯಾಯವನ್ನು ಶ್ರದ್ಧೆಯಿಂದ ಕೇಳಿದ ಸ್ತ್ರೀಯಾಗಲಿ ಪುರುಷನಾಗಲಿ ಪಾಪದ ತೊಡಗೆಯನ್ನು ತೊಡೆದುಹಾಕಿ ಇಂದ್ರ ಲೋಕಕ್ಕೆ ಹೋಗುತ್ತಾರೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲ "ಪತಿವ್ರತಾಖ್ಯಾನ"ವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಪಂಚಮೋಽಧ್ಯಾಯಃ

## ಅಗಸ್ತ್ಯಪ್ರಸ್ಥಾನಂ

**ಪರಾಶರ ಉವಾಚ :—**

**ತತೋ ಧ್ಯಾನೇನ ವಿಶ್ವೇಶಮಾಲೋಕ್ಯ ಸ ಮುನೀಶ್ವರಃ ।**
**ಸೂತಃ ಪ್ರೋವಾಚ ತಾಂ ಪುಣ್ಯಾಂ ಲೋಪಾಮುದ್ರಾಮಿದಂ ವಚಃ ॥ ೧ ॥**
**ಅಯಿ ಪಶ್ಯ ವರಾರೋಹೇ ಕಿಮೇತತ್ಸಮುಪಸ್ಥಿತಂ ।**
**ಕ್ವ ತತ್ಕಾರ್ಯಂ ಕ್ವ ಚ ವಯಂ ಮುನಿಮಾರ್ಗಾನುಸಾರಿಣಃ ॥ ೨ ॥**
**ಯೇನ ಗೋತ್ರಭಿದಾ ಗೋತ್ರಾ ವಿಪಕ್ಷಾ ಹೇಲಯಾ ಕೃತಾಃ ।**
**ಭವೇತ್ಕುಂಠಿತಸಾಮರ್ಥ್ಯಃ ಸ ಕಥಂ ಗಿರಿಮಾತ್ರಕೇ ॥ ೩ ॥**
**ಕಲ್ಪವೃಕ್ಷೋಽಂಗಣೇ ಯಸ್ಯ ಕುಲಿಶಂ ಯಸ್ಯ ಚಾಯುಧಂ ।**
**ಸಿದ್ಧ್ಯಷ್ಟಕಂ ಹಿ ಯದ್ದ್ವಾರಿ ಸ ಸಿದ್ಧ್ಯೈ ಪ್ರಾರ್ಥಯೇದ್ದ್ವಿಜಂ ॥ ೪ ॥**
**ಕ್ರಿಯಂತೇ ವ್ಯಾಕುಲಾಃ ಶೈಲಾ ಅಹೋ ದಾವಾಗ್ನಿನಾ ಪ್ರಿಯೇ ।**
**ತದ್ವೃದ್ಧಿಸ್ತಂಭನೇ ಶಕ್ತಿಃ ಕ್ವ ಗತಾ ಸಾಽಶುಶುಕ್ಷಣೇಃ ॥ ೫ ॥**

---

## ಕನ್ನಡದ ಅನುವಾದ

### ಅಗಸ್ತ್ಯಪ್ರಸ್ಥಾನ

೧. ಪರಾಶರನು ಹೇಳುತ್ತಾನೆ —ಎಲೈ ಸೂತನೆ, ತರುವಾಯ ಆ ಅಗಸ್ತ್ಯ ಮುನೀಶ್ವರನು ಧ್ಯಾನದಲ್ಲಿಯೇ ವಿಶ್ವೇಶ್ವರನನ್ನು (ಚಿಂತಿಸಿ) ಕಂಡು, ಪುಣ್ಯಶೀಲೆಯಾದ ಲೋಪಾಮುದ್ರೆಯನ್ನು ಕುರಿತು ಈ ಮಾತನ್ನು ಹೇಳಿದನು.

೨ "ಎಲೈ ವರಾರೋಹೆ, ಇದೇನು ಸಂಪ್ರಾಪ್ತವಾಯಿತೆಂಬುದನ್ನು ನೋಡಿದೆಯಾ? ಈ ವಿಂಧ್ಯಮರ್ದನ ಕಾರ್ಯವೆಲ್ಲಿ? ಮನನಶೀಲರಾದ ಮುನಿಗಳ ವೃತ್ತಿಯನ್ನು ನಡೆಸುವ ನಾವೆಲ್ಲಿ?

೩–೪. ವಿಲಾಸಮಾತ್ರದಿಂದಲೆ ಬೆಟ್ಟಗಳ ರೆಕ್ಕೆಗಳನ್ನೆಲ್ಲ ಕತ್ತರಿಸಿ ಕೆಡವಿದ ಆ ಮಹೇಂದ್ರನ ಸಾಮರ್ಥ್ಯವು ಈ ವಿಂಧ್ಯಪರ್ವತದ ವಿಷಯದಲ್ಲಿ ಮಾತ್ರ ಏಕೆ ಕುಗ್ಗಿಹೋಗಬೇಕು? ಯಾವನ ಭವನಾಂಗಣದಲ್ಲಿ ಕಲ್ಪವೃಕ್ಷವೇ ನೆಲಸಿರುವುದೊ, ಯಾವನ ಆಯುಧವೇ ಸಿಡಿಲಾಗಿರುವುದೊ, ಯಾವನ ಭವನದ್ವಾರದಲ್ಲಿ ಅಣಿಮಾದ್ಯಷ್ಟಸಿದ್ಧಿಗಳು ಕಾದು ನಿಂತಿರುವುವೊ ಅಂತಹ ಸ್ವರ್ಗಾಧೀಶ್ವರನು ನನ್ನಂತಹ ಬಡಬ್ರಾಹ್ಮಣನನ್ನು ಪ್ರಾರ್ಥಿಸುವುದೆಂದರೇನು?

೫. ಪ್ರಿಯಳೆ, ಕಾಳ್ಗಿಚ್ಚಿನಿಂದ ಶೈಲಗಳೆಲ್ಲವನ್ನೂ ವ್ಯಾಕುಲಗೊಳಿಸುವ ಯಜ್ಞೇಶ್ವರನಿಗೆ ಈ ವಿಂಧ್ಯಪರ್ವತದ ಹೆಚ್ಚಳವನ್ನಡಗಿಸುವ ಶಕ್ತಿಯು ಅದೆಲ್ಲಿ ಹೋಯಿತೊ!

ನಿಯಂತಾ ಸರ್ವಭೂತಾನಾಂ ಯೋಽಸೌ ದಂಡಧರಃ ಪ್ರಭುಃ ।
ಸ ಕಿಂ ದಂಡಯಿತುಂ ನಾಽಲಮೇಕಂ ತಂ ಗ್ರಾವಮಾತ್ರಕಂ ॥ ೬ ॥
ಆದಿತ್ಯಾ ವಸವೋ ರುದ್ರಾಸ್ತುಷಿತಾಃ ಸಮರುದ್ಗಣಾಃ ।
ವಿಶ್ವೇದೇವಾಸ್ತಥಾ ದಸ್ರೌ ಯೇ ಚಾಽನ್ಯೇಽಪಿ ದಿವೌಕಸಃ ॥ ೭ ॥
ಯೇಷಾಂ ದೃಕ್ಪಾತಮಾತ್ರೇಣ ಪತಂತಿ ಭುವನಾನ್ಯಪಿ ।
ತೇ ಕಿಂ ಸಮರ್ಥಾ ನೋ ಕಾಂತೇ ನಗವೃದ್ಧಿನಿಷೇಧನೇ ॥ ೮ ॥
ಅಜ್ಞಾತಂ ಕಾರಣಂ ತಚ್ಚ ಸ್ಮೃತಂ ವಾಕ್ಯಂ ಸುಭಾಷಿತಂ ।
ಕಾಶೀಮುದ್ದಿಶ್ಯ ಯದ್ಗೀತಂ ಮುನಿಭಿಸ್ತತ್ತ್ವದರ್ಶಿಭಿಃ ॥ ೯ ॥
ಅವಿಮುಕ್ತಂ ನ ಮೋಕ್ತವ್ಯಂ ಸರ್ವಥೈವ ಮುಮುಕ್ಷುಭಿಃ ।
ಕಿಂ ತು ವಿಘ್ನಾ ಭವಿಷ್ಯಂತಿ ಕಾಶ್ಯಾಂ ನಿವಸತಾಂ ಸತಾಂ ॥ ೧೦ ॥
ಉಪಸ್ಥಿತೋಽಯಂ ಕಲ್ಯಾಣಿ ಸೋಽಂತರಾಯೋ ಮಹಾನಿಹ ।
ನ ಶಕ್ಯತೇಽನ್ಯಥಾ ಕರ್ತುಂ ವಿಶ್ವೇಶೋ ವಿಮುಖೋ ಯತಃ ॥ ೧೧ ॥

---

೬. ಸಮಸ್ತ ಭೂತಗಳನ್ನೂ ಶಾಸನಮಾಡುವ ಸಾಮರ್ಥ್ಯವುಳ್ಳ ದಂಡಧರನಾದ ಯಮಧರ್ಮರಾಜನು ಕೇವಲ ಗ್ರಾವಮಾತ್ರಕವಾದ ಈ ವಿಂಧ್ಯಪರ್ವತವನ್ನು ದಂಡಿಸಲು ಸಮರ್ಥನಾಗದೆ ಹೋದನೆ?

೭–೮. ಯಾರ ಕಟಾಕ್ಷವೀಕ್ಷಣಮಾತ್ರದಿಂದಲೆ ತ್ರಿಭುವನಗಳೂ ಉರುಳಿ ಹೋಗುವುವೊ ಅಂಥ ದ್ವಾದಶಾದಿತ್ಯರೂ ಅಷ್ಟವಸುಗಳೂ ಏಕಾದಶರುದ್ರರೂ ಮೂವತ್ತಾರು ಮಂದಿ ಗಣದೇವತೆಗಳೂ ನಲವತ್ತೊಂಬತ್ತು ಮಂದಿ ಪೂತಾತ್ಮ ಪ್ರಮುಖರಾದ ಮರುದ್ಗಣಗಳೂ ವಿಶ್ವೇದೇವತೆಗಳೂ ಈ ಪರ್ವತದ ಕೊಬ್ಬನ್ನಡಗಿಸುವುದರಲ್ಲಿ ಸಮರ್ಥರಾಗದೆ ಹೋದುದು ಹೇಗೆ?

೯. ಇದಕ್ಕೆ ಕಾರಣವೇನೊ ತಿಳಿಯಲಿಲ್ಲ. ಇವರ ಪ್ರಾರ್ಥನೆಯನ್ನು ಕುರಿತು ಯೋಚಿಸಿದರೆ, ತತ್ತ್ವಜ್ಞಾನಿಗಳಾದ ಮುನಿಗಳು ಕಾಶಿಯನ್ನು ಕುರಿತು ಹೇಳಿರುವ ಒಂದು ಸುಭಾಷಿತದ ವಾಕ್ಯವು ಸ್ಮರಣೆಗೆ ಬರುತ್ತದೆ.

೧೦. "ಮೋಕ್ಷಾಪೇಕ್ಷಿಗಳಾದವರೆಲ್ಲರೂ ಅವಿಮುಕ್ತಕ್ಷೇತ್ರವೆಂದು ಹೆಸರಾದ ಈ ಕಾಶೀಕ್ಷೇತ್ರವನ್ನು ಎಂದಿಗೂ ಬಿಡಬಾರದು. ಹಾಗೆ ಬಿಡದಿದ್ದರೂ ಇಲ್ಲಿ ವಾಸಮಾಡುತ್ತಿರುವ ಸತ್ಪುರುಷರೆಲ್ಲರಿಗೂ ಆಗಿಂದಾಗ್ಗೆ ಎಡರುಗಳು ಬರುತ್ತಲೆ ಇರುತ್ತವೆ." ಇದೇ ಆ ಸುಭಾಷಿತ.

೧೧. ಓ ಕಲ್ಯಾಣೀ, ಅಂತಹ ಮಹತ್ತರವಾದ ವಿಘ್ನವು ಇದೀಗ ಪ್ರಾಪ್ತವಾಗಿದೆ. ಮಾಡುವುದೇನು? ವಿಶ್ವೇಶ್ವರನ ಅನುಗ್ರಹವು ವಿಮುಖವಾಗಿರುವಾಗ ಏನುಮಾಡಲೂ ಸಾಧ್ಯವಿರುವುದಿಲ್ಲ.

ಕಾಶೀ ದ್ವಿಜಾಶೀರ್ಭಿರಹೋ ಯದಾಪ್ತಾ
ಕಸ್ತಾಂ ಮುಮುಕ್ಷುರ್ಯದಿ ವಾಽಮುಮುಕ್ಷುಃ ।
ಗ್ರಾಸಂ ಕರಸ್ಥಂ ಸ ವಿಸೃಜ್ಯ ಹೃದ್ಯಂ
ಸ್ವಕರ್ಪರಂ ಲೇಢಿ ವಿಮೂಢ ಚೇತಾಃ ॥ ೧೨ ॥
ಅಹೋ ಜನಾ ಬಾಲಿಶವತ್ಕಿಮೇತಾಂ
ಕಾಶೀಂ ತ್ಯಜೇಯುಃ ಸುಕೃತೈಕರಾಶಿಂ ।
ಶಾಲೂಕಕಂದಃ ಪ್ರತಿಮಜ್ಜನಂ ಕಿಂ
ಲಭೇತ ತದ್ವತ್ಸುಲಭಾ ಕಿಮೇಷಾ ॥ ೧೩ ॥
ಭವಾಂತರಾವರ್ಜಿತಪುಣ್ಯರಾಶಿಂ
ಕೃಚ್ಛ್ರೈರ್ಮಹದ್ಭಿರ್ಹ್ಯವಗಮ್ಯ ಕಾಶೀಂ ।
ಪ್ರಾಪ್ಯಾಽಪಿ ಕಿಂ ಮೂಢಧಿಯೋಽನ್ಯತೋ ವೈ
ಯಿಯಾಸವೋ ದುರ್ಗತಿಮುದ್ಯಿಯಾಸವಃ ॥ ೧೪ ॥
ಕ್ವ ಕಾಶಿಕಾ ವಿಶ್ವಪದಪ್ರಕಾಶಿಕಾ
ಕ್ವ ಕಾರ್ಯಮನ್ಯತ್ಪರಿತೋಽತಿದುಃಖಂ ।
ತತ್ಪಂಡಿತೋಽನ್ಯತ್ರ ಕುತಃ ಪ್ರಯಾತಿ
ಕಿಂ ಯಾತಿ ಕೂಷ್ಮಾಂಡಫಲಂ ಹ್ಯಜಾಸ್ಯೇ ॥ ೧೫ ॥

---

೧೨ ಬ್ರಾಹ್ಮಣರ ಆಶೀರ್ವಾದಗಳ ಬಲದಿಂದ ಲಭಿಸಿರುವ ಕಾಶೀಕ್ಷೇತ್ರ ವಾಸವನ್ನು ಮುಮುಕ್ಷುವಾಗಿರಲಿ ಆಗದಿರಲಿ ಯಾವನು ತಾನೆ ತೊರೆದು ಹೋಗುತ್ತಾನೆ? ಹಾಗೆ ತೊರೆದ ಬುದ್ಧಿಹೀನನು ಕೈಯಲ್ಲಿರುವ ರಸಕವಳವನ್ನು ತೊರೆದು ತನ್ನ ತಿರುಪೆಯ ಬವನಾಸಿಯನ್ನೇ ನೆಕ್ಕುತ್ತಾನೆ.

೧೩. ಪುಣ್ಯದ ರಾಶಿಯೇ ಮೂರ್ತಿವೆತ್ತಂತಿರುವ ಈ ಕಾಶೀಕ್ಷೇತ್ರವನ್ನು ಜನರು ಮತಿಗೇಡಿಗಳಾಗಿ ಅದೇಕೆ ತೊರೆಯುತ್ತಾರೆಯೊ? ಇದು ತೀರಾ ವಿಚಿತ್ರ ವಾಗಿದೆ. ನೀರಿನಲ್ಲಿ ಮುಳುಗಿದಾಗಲೆಲ್ಲ ಸೌಗಂಧಿಕದ ಗೆಡ್ಡೆಯು ದೊರಕು ತ್ತದೆಯೆ? ಅದಾದರೂ ಆಗಿಂದಾಗ್ಗೆ ದೊರಕೀತು ಆದರೆ ಈ ಕಾಶೀಕ್ಷೇತ್ರ ವಾಸವು ಪುನಃ ಪುನಃ ಲಭಿಸಲಾರದು.

೧೪–೧೫ ಸಂಸಾರ ದುಃಖಗಳ ಸಂಪರ್ಕದಿಂದ ದೂರವಾಗಿ ಸಾಕ್ಷಾತ್ ಪರಮೇಶ್ವರನಲ್ಲಿಯೇ ಪುಣ್ಯರಾಶಿಯನ್ನೆಲ್ಲ ಸಮರ್ಪಣೆಮಾಡುವ ಮಾನವನಿಗೆ ಈ ಕಾಶೀಕ್ಷೇತ್ರವಾಸವು ಲಭಿಸುತ್ತದೆ. ಇದು ಮಹಾತ್ಮರಾದವರಿಂದ ಮಾತ್ರವೆ ಬಹು ಕಷ್ಟಪಟ್ಟು ಸಂಪಾದಿಸತಕ್ಕದ್ದಾಗಿದೆ. ಅಂತಹುದನ್ನು ಹೊಂದಿಯೂ ಮಂದ ಬುದ್ಧಿಗಳಾದ ಜನರು ದುರ್ಗತಿಯನ್ನು ಪಡೆಯುವುದಕ್ಕಾಗಿ ಬೇರೊಂದೆಡೆಗೆ ಏಕಾದರೂ ಹೋಗಬಯಸುವರೊ! ಪರಮೇಶ್ವರನ ಸ್ವರೂಪವನ್ನು ಪ್ರಕಾಶ

ಕಾಶೀಂ ಪ್ರಕಾಶೀಕೃತಪುಣ್ಯರಾಶಿಂ
ಹಾ ಶೀಘ್ರನಾಶೀ ವಿಸೃಜೇನ್ನರಃ ಕಿಂ ।
ನೂನಂ ಸ್ವನೂನಂ ಸುಕೃತಂ ತದೀಯಂ
ಮದೀಯಮೇವಂ ವಿವೃಣೋತಿ ಚೇತಃ ॥ ೧೬ ॥
ನರೋ ನ ರೋಗೀ ಯದಿಹಾಽವಿಹಾಯ
ಸಹಾಯಭೂತಾಂ ಸಕಲಸ್ಯ ಜಂತೋಃ ।
ಕಾಶೀಮನಾಶೀತ್ಸುಕೃತೈಕರಾಶಿ
ಮನ್ಯತ್ರ ಯಾತುಂ ಯತತಾಂ ನ ಚಾಽನ್ಯಃ ॥ ೧೭ ॥
ವಿತ್ರಸ್ತಪಾಪಾಂ ತ್ರಿದಶೈರ್ದುರಾಪಾಂ
ಗಂಗಾಂ ಸದಾಪಾಂ ಭವಪಾಶಶಾಪಾಂ ।
ಶಿವಾವಿಮುಕ್ತಾಮಮೃತೈಕಶುಕ್ತಿಂ
ಮುಕ್ತಾ ವಿಮುಕ್ತಾ ನ ಪರಿತ್ಯಜಂತಿ ॥ ೧೮ ॥

---

ಗೊಳಿಸುವುದಾಗಿ, ಪುನರಾವೃತ್ತಿರಹಿತವಾದ ಮೋಕ್ಷವನ್ನು ದಯೆಗೆಯ್ಯುವು ದಾಗಿ ವಿರಾಜಿಸುತ್ತಿರುವ ಈ ಕಾಶೀಕ್ಷೇತ್ರವೆಲ್ಲಿ? ಎತ್ತೆತ್ತಲೂ ದುಃಖದಿಂದಲೆ ತುಂಬಿ ತುಳುಕುತ್ತಿರುವ ಬೇರೊಂದು ಕಾರ್ಯಕ್ಕಾಗಿ ಹೋಗುವ ಪ್ರದೇಶವೆಲ್ಲಿ? ಪಂಡಿತನಾದವನು ಇಂತಹ ಕಾಶೀಕ್ಷೇತ್ರವನ್ನು ತೊರೆದು ಬೇರೊಂದೆಡೆಗೆ ಹೋದಾನೆ? ಹಾಗೆ ಹೋದುದಾದರೆ, ಕುಂಬಳದ ಹಣ್ಣು ಆಡಿನ ಬಾಯಿಗೆ ನುಗ್ಗಿದಂತೆಯೇ ಆಗುತ್ತದೆ.

೧೬. ಅಯ್ಯೋ, ಪುಣ್ಯರಾಶಿಯನ್ನು ಪ್ರಕಾಶಗೊಳಿಸುವ ಈ ಕಾಶೀಕ್ಷೇತ್ರ ವಾಸವನ್ನು ಬಹುಬೇಗನೆಯೆ ವ್ಯಾತಿಯೊಂದುವ ಮಾನವನು ತೊರೆಯುವನೆ? ಹಾಗೆ ತೊರೆಯುವವನ ಸುಕೃತದ ಹಾಗೆ ನನ್ನ ಪುಣ್ಯವೂ ಆಯಿತೆಂದು ನನ್ನ ಬುದ್ಧಿಯೇ ವಿವರಿಸುತ್ತಿದೆ. ನನ್ನ ಪುಣ್ಯವೂ ಕ್ಷೀಣವಾಗಿ ಹೋಯಿತೊ ಏನೊ!

೧೭. ಅಂಡಜ ಸ್ವೇದಜ ಜರಾಯುಜ ಉದ್ಭಿಜ್ಜಗಳೆಂಬ ಚತುರ್ವಿಧ ಭೂತಪ್ರಪಂಚಕ್ಕೂ ಧರ್ಮಾರ್ಥ ಕಾಮಮೋಕ್ಷ ಸಾಧನೆಯಲ್ಲಿ ಸಹಾಯವನ್ನು ನೀಡುವುದಾಗಿರುವುದೂ ಶಾಶ್ವತವಾದ ಮೋಕ್ಷವನ್ನು ದೊರಕಿಸುವುದೂ ಆದ ಈ ಕಾಶೀಪಟ್ಟಣವನ್ನು ಹೊಂದಿ ನೆಲಸುವವನು ಇಂದ್ರಿಯಗಳ ಚಾಂಚಲ್ಯಕ್ಕೆ ಒಳಗಾಗದೆ, ಭವರೋಗಕ್ಕೆ ತುತ್ತಾಗದೆ ನಿತ್ಯಸುಖವನ್ನು ಪಡೆಯುವ ಧನ್ಯಾತ್ಮನು. ಹಾಗಿಲ್ಲದಿರುವವನು ಶ್ರೇಯಸ್ಕಾಮಿಯೇ ಅಲ್ಲ.

೧೮. ಪಾಪಗಳೆಲ್ಲವನ್ನೂ ದೂರೀಕರಿಸುವಂತಹುದೂ, ದೇವತೆಗಳಿಂದಲೂ ಹೊಂದಲಸದಳವಾದುದೂ, ಗಂಗಾನದಿಯ ಪಾವನವಾದ ನೀರಿನಿಂದ ಸೇವಿತ

ಹಂಹೋ ಕಿಮುಂಹೋ ನಿಚಿತಾಃ ಪ್ರಲಬ್ಧಾ
ಬಂಹೀಯಸಾಯಾಸಭರೇಣ ಕಾಶೀಂ ।
ಪ್ರಭೂತಪುಣ್ಯದ್ರನಿಣ್ಯೈಕಪುಣ್ಯಾಂ
ಪ್ರಾಪ್ಯಾಽಪಿ ಹಿತ್ವಾ ಕ್ವ ಚ ಗಂತುಮುದ್ಯತಾಃ ॥ ೧೯ ॥
ಅಹೋ ಜನಾನಾಂ ಜಡತಾಂ ವಿಹಾಯ
ಕಾಶೀಂ ಯದನ್ಯತ್ರ ನಯಂತಿ ಚೇತಃ ।
ಪರಿಸ್ಫುರದ್ಗಾಂಗಜಲಾಽಭಿರಾಮಾಂ
ಕಾಮಾಽರಿಶೂಲಾಽಗ್ರಧೃತಾಂ ಲಯೇಷು ॥ ೨೦ ॥
ರೇ ರೇ ಭವೇ ಶೋಕಜಲೈಕಪೂರ್ಣೇ
ಪಾಪೇಸ್ಮ ಲೋಕಾಃ ಪತಿತಾಽಬ್ಧಿಮಧ್ಯೇ ।
ವಿದ್ರಾಣನಿದ್ರಾಣವಿರೋಧಿಪಾಪಾಂ
ಕಾಶೀಂ ಪರಿತ್ಯಜ್ಯ ತರಿಂ ಕಿಮರ್ಥಂ ॥ ೨೧ ॥
ನ ಸತ್ಪಥೇನಾಽಪಿ ನ ಯೋಗಯುಕ್ತ್ಯಾ
ದಾನೈರ್ನವಾ ನೈವ ತಪೋಭಿರುಗ್ರೈಃ ।

---

ವಾಗಿರುವುದೂ, ಭವಪಾಶಕ್ಕೆ ರಾಪಸ್ವರೂಪವಾಗಿರುವುದೂ, ಪಾರ್ವತೀ ಪರಮೇಶ್ವರರಿಂದ ನಿರಂತರವೂ ಅಧಿಷ್ಠಿಸಲ್ಪಟ್ಟಿರುವುದೂ ಆದ ಈ ಕಾಶೀಕ್ಷೇತ್ರವನ್ನು ಜೀವನ್ಮುಕ್ತರಾದ ಮಾನವರು ಎಂದಿಗೂ ತೊರೆಯುವುದಿಲ್ಲ.

೧೯. ಅಯ್ಯಾ ಜನಗಳಿರಾ, ಬಹಳವಾದ ಪುಣ್ಯಗಳಿಂದ ಮಾತ್ರವೆ ಪಡೆಯಲು ಸಾಧ್ಯವಾದ ಈ ಕಾಶೀಕ್ಷೇತ್ರವನ್ನು ಹೊಂದಿಯೂ ಅಧಿಕಾಧಿಕವಾದ ಪಾಪಗಳಿಂದ ವಂಚಿತರಾಗಿ ಬೇರೊಂದೆಡೆಗೆ ಹೊರಡಲು ಏಕೆ ಉದ್ಯಮಿಸುತ್ತೀರಿ? ಬಹು ಕಷ್ಟಪಟ್ಟು ಈ ಕಾಶೀಪಟ್ಟಣವನ್ನು ಸೇರಿ ಪುಣ್ಯಭಾಗಿಗಳಾಗಿರುವ ನೀವು ಇದನ್ನು ತೊರೆಯುವುದು ಯೋಗ್ಯವಲ್ಲ.

೨೦. ಮನೋಹರವಾದ ಗಂಗಾನದಿಯ ಜಲದಿಂದ ಎತ್ತೆತ್ತಲೂ ಬೆಳಗುತ್ತಿರುವುದೂ, ಪ್ರಳಯಕಾಲದಲ್ಲಿಯೂ ಮದನಾರಿಯಾದ ಮಹೇಶ್ವರನಿಂದ ಶೂಲಾಗ್ರಭಾಗದಲ್ಲಿ ಧರಿಸಲ್ಪಡುವುದೂ ಆದ ಈ ಕಾಶೀಪಟ್ಟಣವನ್ನು ಬಿಟ್ಟು ಮನಸ್ಸನ್ನು ಬೇರೊಂದೆಡೆಗೆ ಹರಿಯಬಿಡುವ ಜನಗಳ ಅಜ್ಞಾನವನ್ನೇನೆಂದು ಹೇಳಬೇಕು? ಆಶ್ಚರ್ಯ!

೨೧–೨೨. ದುಃಖವೆಂಬ ನೀರಿನಿಂದ ತುಂಬಿ ಬಹು ಪಾಪಿಷ್ಠವಾಗಿರುವ ಭವಸಾಗರದ ಮಧ್ಯದಲ್ಲಿ ಬಿದ್ದು ನರಳುತ್ತಿರುವ ಅಯ್ಯಾ ಜನಗಳಿರಾ, ಮುಕ್ತಿಲಾಭಕ್ಕೆ ವಿರೋಧಿಗಳಾದ ಪಾಪಗಳನ್ನು ತೊಲಗಿಸುವ ಸಾಮರ್ಥ್ಯವುಳ್ಳ ಓಡೆಯಂತಿರುವ ಈ ಕಾಶೀಕ್ಷೇತ್ರವನ್ನು ಏತಕ್ಕೆ ತೊರೆಯುತ್ತೀರಿ? ಬ್ರಾಹ್ಮಣರ

ಕಾಶೀ ದ್ವಿಜಾಶೀರ್ಭಿರಹೋ ಸುಲಭ್ಯಾ
ಕಿಂ ವಾ ಪ್ರಸಾದೇನ ಚ ವಿಶ್ವಭರ್ತುಃ ॥ ೨೨ ॥
ಧರ್ಮಸ್ತು ಸಂಪತ್ತಿಭರೈಃ ಕಿಲೋಽಹ್ಯತೇಽ
ಪ್ಯರ್ಥೋಽ ಹಿ ಕಾಮ್ಯೈರ್ಬಹುದಾನಭೋಗಕೈಃ ।
ಅನ್ಯತ್ರ ಸರ್ವಂ ಸ ಚ ಮೋಕ್ಷ ಏಕಃ
ಕಾಶ್ಯಾಂ ನ ಚಾಽನ್ಯತ್ರ ತಥಾ ಯಥಾಽತ್ರ ॥ ೨೩ ॥
ಕ್ಷೇತ್ರಂ ಪವಿತ್ರಂ ಹಿ ಯಥಾಽವಿಮುಕ್ತಂ
ನಾಽನ್ಯತ್ತಥಾ ಯಚ್ಛ್ರುತಿಭಿಃ ಪ್ರಯುಕ್ತಂ ।
ನ ಧರ್ಮಶಾಸ್ತ್ರೈರ್ನ ಚ ತೈಃ ಪುರಾಣೈ
ಸ್ತಸ್ಮಾಚ್ಛರಣ್ಯಂ ಹಿ ಸದಾಽವಿಮುಕ್ತಂ ॥ ೨೪ ॥
ಸ ಹೋವಾಚೇತಿ ಜಾಬಾಲಿರಾರುಣೇಽಸಿರಿಡಾ ಮತಾ ।
ವರಣಾ ಪಿಂಗಲಾ ನಾಡೀ ತದಂತಸ್ತ್ವವಿಮುಕ್ತಕಂ ॥ ೨೫ ॥
ಸಾ ಸುಷುಮ್ನಾ ಪರಾ ನಾಡೀ ತ್ರಯಂ ವಾರಾಣಸೀ ತ್ವಸೌ ।
ತದತ್ರೋತ್ಕ್ರಮಣೇ ಸರ್ವಜಂತೂನಾಂ ಹಿ ಶ್ರುತೌ ಹರಃ ॥ ೨೬ ॥

---

ಆಶೀರ್ವಾದದ ಪ್ರಭಾವದಿಂದ ದೊರಕುವ ವಿಶ್ವೇಶ್ವರನ ಅನುಗ್ರಹದಿಂದಲ್ಲದೆ ಈ ಕಾಶೀಕ್ಷೇತ್ರವಾಸವು ಯಾವ ಸದಾಚಾರಗಳಿಂದಲೆ ಆಗಲಿ ಮಹಾದಾನಾದಿಗಳಿಂದಾಗಲಿ ಉಗ್ರವಾದ ತಪಸ್ಸುಗಳಿಂದಾಗಲಿ ದೊರಕುವುದಿಲ್ಲ.

೨೩. ಅಧಿಕವಾದ ಐಶ್ವರ್ಯದಿಂದ ಸಂಪಾದಿಸುವ ಧರ್ಮ, ಬಹುದಾನಭೋಗಾದಿಗಳಿಂದ ಪಡೆಯುವ ಅರ್ಥಕಾಮಗಳು—ಇವೆಲ್ಲಕ್ಕೂ ಮುಖ್ಯವಾಗಿ ದೊರಕಬೇಕಾದ ಫಲವು ಮೋಕ್ಷವೊಂದೇ. ಆ ಮೋಕ್ಷವು ಈ ಕಾಶೀಕ್ಷೇತ್ರದಲ್ಲಿ ಲಭಿಸುವ ಹಾಗೆ ಇನ್ನೆಲ್ಲಿಯೂ ಲಭಿಸುವುದಿಲ್ಲ.

೨೪. ಶ್ರುತಿಗಳಲ್ಲಿಯೂ ಧರ್ಮಶಾಸ್ತ್ರಗಳು ಮತ್ತು ಪುರಾಣಗಳಲ್ಲಿಯೂ ಅವಿಮುಕ್ತವೆಂದು ಪ್ರಸಿದ್ಧವಾದ ಈ ಕಾಶೀಕ್ಷೇತ್ರವು ಪವಿತ್ರವೆಂದು ಪರಿಗಣಿತವಾಗಿರುವಂತೆ ಮತ್ತಾವ ಕ್ಷೇತ್ರವೂ ಪರಿಗಣಿತವಾಗಿರುವುದಿಲ್ಲ. ಆದುದರಿಂದ ಈ ಕ್ಷೇತ್ರವು ಸರ್ವಕಾಲಗಳಲ್ಲಿಯೂ ಸಮಸ್ತರಿಗೂ ಶರಣ್ಯವಾದುದು.

೨೫–೨೮. ಸುಪ್ರಸಿದ್ಧನಾದ ಆ ಜಾಬಾಲಿಮಹರ್ಷಿಯು ತನ್ನ ಶಿಷ್ಯನನ್ನು ಕುರಿತು ಉಪದೇಶ ಪೂರ್ವಕವಾಗಿ ಹೇಳುತ್ತಾನೆ —ಎಲೈ ಆರುಣಿಯೆ, ಅಸಿ ಎಂಬುದೇ ಇಡಾ ಎಂಬ ನಾಡಿಯೆಂಬುದಾಗಿ ತಿಳಿಯಲ್ಪಟ್ಟಿದೆ. ವರಣ ಎಂಬುದೇ ಪಿಂಗಲಾ ನಾಡಿಯು. ಈ ಎರಡೂ ನಾಡಿಗಳ ಮಧ್ಯದಲ್ಲಿ ನೆಲಸಿರುವುದೇ ಅವಿಮುಕ್ತವು. ಅದೇ ಅತ್ಯುತ್ತಮವಾದ ಸುಷುಮ್ನಾ ನಾಡಿಯು. ಇವು ಮೂರು ಸೇರಿರುವುದೇ ವಾರಾಣಸೀ ಎನಿಸಿರುತ್ತದೆ. ಈ ಕ್ಷೇತ್ರದಲ್ಲಿಯೇ

ತಾರಕಂ ಬ್ರಹ್ಮ ವ್ಯಾಚಷ್ಟೇ ತೇನ ಬ್ರಹ್ಮ ಭವಂತಿ ಹಿ ।
ಏವಂ ಶ್ಲೋಕೋ ಭವತ್ಯೇಷ ಆಹುರ್ವೈ ವೇದವಾದಿನಃ ॥ ೨೭ ॥
ಭಗವಾನಂತಕಾಲೇಽತ್ರ ತಾರಕಸ್ಯೋಪದೇಶತಃ ।
ಅವಿಮುಕ್ತೇ ಸ್ಥಿತಾಂ ಜಂತೂನ್ಮೋಚಯೇನ್ನಾಽತ್ರ ಸಂಶಯಃ ॥ ೨೮ ॥
ನಾಽವಿಮುಕ್ತಸಮಂ ಕ್ಷೇತ್ರಂ ನಾಽವಿಮುಕ್ತಸಮಾ ಗತಿಃ ।
ನಾಽವಿಮುಕ್ತಸಮಂ ಲಿಂಗಂ ಸತ್ಯಂ ಸತ್ಯಂ ಪುನಃ ಪುನಃ ॥ ೨೯ ॥
ಅವಿಮುಕ್ತಂ ಪರಿತ್ಯಜ್ಯ ಯೋಽನ್ಯತ್ರ ಕುರುತೇ ರತಿಂ ।
ಮುಕ್ತಿಂ ಕರತಲಾನ್ಮುಕ್ತ್ವಾ ಸೋಽನ್ಯಾಂ ಸಿದ್ಧಿಂ ಗವೇಷಯೇತ್ ॥ ೩೦ ॥

ಇತ್ಥಂ ಸುನಿಶ್ಚಿತ್ಯ ಮುನಿರ್ಮಹಾತ್ಮಾ
ಕ್ಷೇತ್ರಪ್ರಭಾವಂ ಶ್ರುತಿತಃ ಪುರಾಣಾತ್ ।
ಶ್ರೀವಿಶ್ವನಾಥೇನ ಸಮಂ ನ ಲಿಂಗಂ
ಪುರೀ ನ ಕಾಶೀಸದೃಶೀ ತ್ರಿಕೋಟ್ಯಾಂ ॥ ೩೧ ॥

---

ಸಮಸ್ತ ಜಂತುಗಳಿಗೂ ಉತ್ಕ್ರಮಣಾವಸ್ಥೆಯಲ್ಲಿ ಸಾಕ್ಷಾತ್ ಪರಮೇಶ್ವರನು ಕಿವಿಯಲ್ಲಿ ತಾರಕಮಂತ್ರೋಪದೇಶವನ್ನು ಮಾಡುತ್ತಾನೆ. ಅದರಿಂದ ಆ ಪ್ರಾಣಿಯು ಬ್ರಹ್ಮಸ್ವರೂಪವನ್ನೇ ಪಡೆಯುತ್ತದೆ. ಈ ಪ್ರಕಾರವಾದ ಅರ್ಥವುಳ್ಳ ಜಾಬಾಲಿ ಶಿಷ್ಯಸಂವಾದ ರೂಪವಾದ ಶ್ಲೋಕವೇ ಅಲ್ಲದೆ ವೇದ ವಿದರಾದ ಬ್ರಾಹ್ಮಣರು ಈ ರೀತಿ ಹೇಳುತ್ತಾರೆ—ಅವಿಮುಕ್ತ ಕ್ಷೇತ್ರದಲ್ಲಿ ನೆಲಸಿರುವ ಸಮಸ್ತ ಜಂತುಗಳಿಗೂ ಷಡ್ಗುಣೈಶ್ವರ್ಯಸಂಪನ್ನನಾದ ಪರಮೇಶ್ವರನು ಶ್ರೀರಾಮಷಡಕ್ಷರವೆಂಬ ತಾರಕಬ್ರಹ್ಮೋಪದೇಶವನ್ನು ಬಲ ಗಿವಿಯಲ್ಲಿ ಮಾಡಿ ಈ ಭವಸಾಗರದಿಂದ ಪಾರುಗಾಣಿಸಿ ಮುಕ್ತಿ ದೊರಕಿಸುತ್ತಾನೆ.

೨೯–೩೦. ಅವಿಮುಕ್ತ ಕ್ಷೇತ್ರಕ್ಕೆ ಸಮಾನವಾದ ಕ್ಷೇತ್ರವು ಮತ್ತೆಲ್ಲಿಯೂ ಇರುವುದಿಲ್ಲ. ಈ ಕ್ಷೇತ್ರದಲ್ಲಿ ಕ್ರಿಮಿಕೀಟಾದಿಗಳಿಂದ ಮೊದಲುಗೊಂಡು ಸಮಸ್ತ ಪ್ರಾಣಿಗಳಿಗೂ ದೊರಕುವ ಸದ್ಗತಿಯು ಬೇರಾವ ಕ್ಷೇತ್ರದಲ್ಲಿಯೂ ದೊರಕುವುದಿಲ್ಲ. ಈ ಕ್ಷೇತ್ರದಲ್ಲಿನ ಅವಿಮುಕ್ತಕಲಿಂಗಕ್ಕೆ ಸಮಾನವಾದ ಲಿಂಗವು ಮತ್ತೆಲ್ಲಿಯೂ ಇರುವುದಿಲ್ಲ. ಇದು ಮೂರು ಮೂರು ಬಾರಿಗೂ ಸತ್ಯವು. ಅವಿಮುಕ್ತ ಕ್ಷೇತ್ರವನ್ನು ತೊರೆದು ಬೇರೊಂದು ಕ್ಷೇತ್ರದಲ್ಲಿ ನೆಲಸ ಬೇಕೆಂದು ಆಶಿಸುವ ಮಾನವನು ಕೈಗೆ ಬಂದಿರುವ ಮುಕ್ತಿಯನ್ನು ತೊರೆದು ಮತ್ತಾವುದೊ ಸಿದ್ಧಿಗಾಗಿ ಹುಡುಕಿಕೊಂಡು ಹೋಗುವವನಂತೆ ಆಗುತ್ತಾನೆ.''

೩೧. ಎಲೈ ಸೂತಪುರಾಣಿಕನೆ, ಈ ಪ್ರಕಾರವಾಗಿ ಮಹಾತ್ಮನಾದ ಅಗಸ್ತ್ಯ ಮಹಾಮುನಿಯು, ಶ್ರುತಿಗಳಿಂದಲೂ, ಪುರಾಣಗಳಿಂದಲೂ ಸುಪ್ರಸಿದ್ಧವಾಗಿರುವ

ಶ್ರೀ ಕಾಲರಾಜಂ ಚ ತತಃ ಪ್ರಣಮ್ಯ
ವಿಜ್ಞಾಪಯಾಮಾಸ ಮುನೀಶವರ್ಯಃ ।
ಆಪೃಚ್ಛನಾಯಾಹಮಿಹಾಗತೋಽಸ್ಮಿ
ಶ್ರೀಕಾಶಿಪುರ್ಯಾಸ್ತು ಯತಃ ಪ್ರಭುಸ್ತ್ವಂ ॥ ೩೨ ॥
ಹಾ ಕಾಲರಾಜ ಪ್ರತಿಭೂತಮತ್ರ
ಪ್ರತ್ಯಷ್ಟಮಿಾ ಪ್ರತ್ಯವನೀಸುತಾರ್ಕಂ ।
ನಾರಾಧಯೇ ಮೂಲಫಲಪ್ರಸೂನೈಃ
ಕಿಂ ಮಯ್ಯನಾಗಸ್ಯಪರಾಧದೃಕ್ ಸ್ಯಾಃ ॥ ೩೩ ॥
ಹಾ ಕಾಲಭೈರವ ಭವಾನಭಿತೋ ಭಯಾರ್ತಾನ್
ಮಾಭೈಷ್ಟ ಚೇತಿ ಭಣನೈಃ ಸ್ವಕರಂ ಪ್ರಸಾರ್ಯ ।
ಮೂರ್ತಿಂ ನಿಧಾಯ ವಿಕಟಾಂ ಕಟುಪಾಪಭೋಕ್ತ್ರೀಂ
ವಾರಾಣಸೀಸ್ಥಿತಜನಾನ್ಪರಿಪಾತಿ ಕಿಂ ನ ॥ ೩೪ ॥
ಹೇ ಯಕ್ಷರಾಜ ರಜನೀಕರಚಾರುಮೂರ್ತೇ
ಶ್ರೀ ಪೂರ್ಣಭದ್ರಸುತನಾಯಕ ದಂಡಪಾಣೇ ।
ತ್ವಂ ವೈ ತಪೋಜನಿತದುಃಖಮುಪೈಷಿ ಸರ್ವಂ
ಕಿಂ ಮಾಂ ಬಹಿರ್ನಯಸಿ ಕಾಶಿನಿವಾಸಿರಕ್ಷನ್ ॥ ೩೫ ॥

---

ವಾರಾಣಸೀ ಕ್ಷೇತ್ರದ ಪ್ರಭಾವವನ್ನು ನಿಶ್ಚಯಿಸಿ, ಶ್ರೀ ವಿಶ್ವನಾಥಲಿಂಗಕ್ಕೆ ಸಮಾನವಾದ ಲಿಂಗವೂ, ಕಾಶೀಕ್ಷೇತ್ರಕ್ಕೆ ಸಮಾನವಾದ ಕ್ಷೇತ್ರವೂ ಮೂರು ಕೋಟಿ ಕ್ಷೇತ್ರಗಳಲ್ಲಿಯೂ ಇರುವುದಿಲ್ಲವೆಂದು ನಿರ್ಧರಿಸಿದನು.

೩೨–೩೩. ತರುವಾಯ ಆ ಮುನೀಶ್ವರನು ಕಾಲಭೈರವನನ್ನು ನಮಸ್ಕರಿಸಿ, ಆತನಿಗೆ ಈ ರೀತಿ ಅರಿಕೆಮಾಡಿದನು:—"ಎಲೈ ಕಾಲಭೈರವ ಸ್ವಾಮಿಯೇ, ನೀನು ಈ ಕಾಶೀಪಟ್ಟಣಕ್ಕೆ ಒಡೆಯನಾಗಿರುವುದರಿಂದ ನಿನ್ನ ಅಪ್ಪಣೆಯನ್ನು ಬೇಡುವುದಕ್ಕೋಸ್ಕರ ಇಲ್ಲಿಗೆ ಬಂದಿದ್ದೇನೆ. ಎಲೈ ಕಾಲಭೈರವನೆ, ನಾನು ಪ್ರತಿ ಚತುರ್ದಶಿ, ಅಷ್ಟಮಿ, ಮಂಗಳವಾರ, ಭಾನುವಾರ—ಈ ದಿನಗಳಲ್ಲಿ ಮೂಲಫಲ ಪುಷ್ಪಾದಿಗಳಿಂದ ನಿನ್ನನ್ನು ಪೂಜಿಸಿದ್ದೇನೆ. ಹೀಗೆ ಎಡೆಬಿಡದೆ ನಿನ್ನನ್ನೇ ಪೂಜಿಸಿ ಅಪರಾಧವೇನೂ ಇಲ್ಲದಿರುವ ನನ್ನನ್ನು ಅಪರಾಧಿಯನ್ನಾಗಿ ಏಕೆ ಕಾಣುವೆ?

೩೪. ಎಲೈ ಕಾಲಭೈರವಸ್ವಾಮಿಯೆ, ನೀನು ಈ ಕ್ಷೇತ್ರದಲ್ಲಿರುವ ಭಯಾರ್ತರಾದ ಜನರೆಲ್ಲರನ್ನೂ "ಹೆದರಬೇಡಿರಿ" ಎಂದು ಕೈಯೆತ್ತಿ ಸಮಾಧಾನಗೊಳಿಸಿ, ಅತ್ಯುತ್ಕಟವಾದ ಅವರ ಪಾಪಗಳೆಲ್ಲವನ್ನೂ ನುಂಗುವ ಭಯಂಕರ ರೂಪವನ್ನು ತಳೆದು, ಕಾಪಾಡುತ್ತಿಲ್ಲವೆ?"

೩೫. ಎಲೈ ಸೂತಪುರಾಣಿಕನೆ, ಆ ಮುನಿಯು ಕಾಲಭೈರವ ಸ್ವಾಮಿಯ

ತ್ವಮನ್ನದಸ್ತ್ವಂ ಕಿಲ ಜೀವದಾತಾ
ತ್ವಂ ಜ್ಞಾನದಸ್ತ್ವಂ ಕಿಲ ಮೋಕ್ಷದೋಽಪಿ ।
ತ್ವಮನ್ತ್ಯಭೂಷಾಂ ಕುರುಷೇ ಜನಾನಾಂ
ಜಟಾಕಲಾಪೈರುರಗೇಂದ್ರಹಾರೈಃ ॥ ೩೬ ॥
ಗಣೌ ತ್ವದೀಯೌ ಕಿಲ ಸಂಭ್ರಮೋದ್ಭ್ರಮೌ
ಅತ್ರಸ್ಥವೃತ್ತಾಂತವಿಚಾರಕೋವಿದೌ ।
ಸಂಭ್ರಾಂತಿಮುತ್ಪಾದ್ಯ ಪರಾಮಸಾಧೂನ್
ಕ್ಷೇತ್ರಾತ್ಕ್ಷಣಂ ದೂರಯತಸ್ತ್ವಮುಷ್ಮಾತ್ ॥ ೩೭ ॥
ಶೃಣು ಪ್ರಭೋ ಢುಂಢಿವಿನಾಯಕ ತ್ವಂ
ವಾಚಂ ಮದೀಯಾಂ ತು ರಟಾಮ್ಯನಾಥವತ್ ।
ತ್ವತ್ತಸ್ತ್ವಃ ಸಮಸ್ತಾಃ ಕಿಲ ವಿಘ್ನಪೂಗಾಃ
ಕಿಮತ್ರ ದುರ್ವೃತ್ತವದಾಸ್ಥಿತೋಽಹಂ ॥ ೩೮ ॥

---

ಮುಂದೆ ಈ ರೀತಿ ಪ್ರಾರ್ಥನೆಯನ್ನು ಸಲ್ಲಿಸಿ ತರುವಾಯ, ಶ್ರೀ ದಂಡಪಾಣಿಯು ಮುಂಗಡೆ ನಿಂತು, "ಎಲೈ ಯಕ್ಷರಾಜನೆ, ಚಂದ್ರನಂತೆ ಸುಂದರನಾದವನೆ! ಶ್ರೀ ಪೂರ್ಣಭದ್ರಸ್ವಾಮಿಯ ಕುಮಾರನೆ! ತಪಸ್ವಿಶ್ರೇಷ್ಠನಾದ ನೀನು ತಪಶ್ಚರಣದಿಂದುಂಟಾಗುವ ದುಃಖವನ್ನು ಚೆನ್ನಾಗಿಯೇ ಬಲ್ಲೆ. ಕಾಶೀಕ್ಷೇತ್ರದಲ್ಲಿ ವಾಸಮಾಡುತ್ತಿರುವ ಎಲ್ಲರನ್ನೂ ಸಲಹುವವನಾಗಿ, ನನ್ನ ದುಃಖವನ್ನು ತಿಳಿದೂ ನನ್ನನ್ನೇಕೆ ಈ ಕ್ಷೇತ್ರದಿಂದ ಹೊರಗಟ್ಟುವೆ?

೩೬. ಪ್ರಭು, ಸಮಸ್ತ ಪ್ರಾಣಿಗಳಿಗೂ ಅನ್ನವನ್ನು ದೊರೆಯಿಸುವವನು ನೀನೆ. ಆದುದರಿಂದಲೆ ನೀನು ಜೀವದಾತೃವೆಂದು ಪ್ರಸಿದ್ಧನಾಗಿರುವೆ. ಜ್ಞಾನದಾತೃವಾಗಿ ಎಲ್ಲರಿಗೂ ಮೋಕ್ಷವನ್ನು ದಯಪಾಲಿಸುವವನೂ ನೀನೆ. ಈ ಕ್ಷೇತ್ರದಲ್ಲಿ ಪ್ರತಿಪ್ರಾಣಿಯೂ ದೇಹವನ್ನು ತೊರೆಯುವ ಸಮಯದಲ್ಲಿ ನೀನು, ಅವುಗಳಿಗೆ ಜಟಾಕಲಾಪಗಳಿಂದಲೂ ಉರಗೇಂದ್ರಹಾರಗಳಿಂದಲೂ ಅಂತ್ಯಾಲಂಕಾರಗಳನ್ನೆಸಗುವೆ.

೩೭. ಈ ಕ್ಷೇತ್ರದಲ್ಲಿ ನಡೆಯುವ ಎಲ್ಲ ವೃತ್ತಾಂತಗಳನ್ನೂ ತಿಳಿಯುವುದರಲ್ಲಿ ಚತುರರಾದ ಸಂಭ್ರಮ ಉದ್ಭ್ರಮರಿಬ್ಬರೂ ನಿನ್ನ ಸೇವಕರು. ಇವರು ದುಷ್ಟರಾದವರಿಗೆ ಸಂಭ್ರಾಂತಿಯನ್ನು ಹುಟ್ಟಿಸಿ, ಒಂದು ಕ್ಷಣಮಾತ್ರದಲ್ಲಿಯೇ ಈ ಕ್ಷೇತ್ರದಿಂದ ಹೊರಕ್ಕೆ ಸಾಗಿಸುತ್ತಾರೆ."

೩೮. ಇಂತು ಆ ಮುನಿಪುಂಗವನು ದಂಡಪಾಣಿಯನ್ನು ಸ್ತುತಿಸಿ,

ಶೃಣ್ವಂತ್ವಮೀ ಪಂಚವಿನಾಯಕಾಶ್ಚ
ಚಿಂತಾಮಣಿಶ್ಚಾಽಪಿ ಕಪರ್ದಿನಾಮಾ ।
ಆಶಾಗಜಾಖ್ಯೌ ಚ ವಿನಾಯಕೌ ತೌ
ಶೃಣೋತ್ವಸೌ ಸಿದ್ಧಿವಿನಾಯಕಶ್ಚ ॥ ೩೯ ॥
ಪರಾಽಪವಾದೋ ನ ಮಯಾ ಕಿಲೋಕ್ತಃ
ಪರಾಽಪಕಾರೋಽಪಿ ಮಯಾ ಕೃತೋ ನ ।
ಪರಸ್ವಬುದ್ಧಿಃ ಪರದಾರಬುದ್ಧಿಃ
ಕೃತಾ ಮಯಾ ನಾಽತ್ರ ಕ ಏಷ ಪಾಕಃ ॥ ೪೦ ॥
ಗಂಗಾ ತ್ರಿಕಾಲಂ ಪರಿಸೇವಿತಾ ಮಯಾ
ಶ್ರೀವಿಶ್ವನಾಥೋಽಪಿ ಸದಾ ವಿಲೋಕಿತಃ ।
ಯಾತ್ರಾಃ ಕೃತಾಸ್ತಾಃ ಪ್ರತಿಪರ್ವ ಸರ್ವತಃ
ಕೋಽಯಂ ವಿಪಾಕೋ ಮಮ ವಿಘ್ನಹೇತುಃ ॥ ೪೧ ॥

---

ಢುಂಢೀಶ್ವರನನ್ನು ಪ್ರಾರ್ಥಿಸುತ್ತಾನೆ —''ಎಲೈ ಢುಂಢಿ ವಿನಾಯಕನೆ, ನನ್ನ ಮಾತನ್ನು ದಯವಿಟ್ಟು ಆಲಿಸು. ಈಗ ನಾನು ದಿಕ್ಕಿಲ್ಲದವನಂತೆ ಅಳುತ್ತಿದ್ದೇನೆ. ನಿನ್ನ ಆಧೀನದಲ್ಲಿದ್ದು ನಿನ್ನ ಆಜ್ಞೆಯಂತೆ ನಡೆಯುವ ನನ್ನನ್ನು ವಿಘ್ನಸಮೂಹ ಗಳನ್ನು ತಂದೊಡ್ಡಿ, ಯಾವನೊ ಒಬ್ಬ ದುರ್ವೃತನನ್ನೆಂತೊ ಅಂತು ಹೊರದೂಡು ವೆಯೇಕೆ? ನಾನು ಈ ಅವಿಮುಕ್ತ ಕ್ಷೇತ್ರದಲ್ಲಿ ಇರುವನೆ ಇಲ್ಲವೆ?

೩೯. ಮೋದ, ಪ್ರಮೋದ, ಆಮೋದ, ಸುಮೋದ, ದುರ್ಮೋದ ರೆಂಬ ಅಭಿಧಾನಗಳುಳ್ಳ ಓ ಪಂಚ ವಿನಾಯಕರೆ, ಕಪರ್ದಿಯೆಂಬ ಚಿಂತಾ ಮಣಿಯೆ, ಆಶಾಗಜರೆಂಬ ವಿನಾಯಕರೆ, ಸಿದ್ಧಿ ವಿನಾಯಕನೆ, ನೀವೆಲ್ಲರೂ ಕೇಳಿರಿ.

೪೦. ನಾನು ಪರದೂಷಣೆಯನ್ನೆಂದಿಗೂ ಮಾಡಿರುವುದಿಲ್ಲ. ಪರರಿಗೆ ಅಪಕಾರವನ್ನೂ ಎಸಗಿರುವುದಿಲ್ಲ. ಪರರ ಸ್ವತ್ತಿಗೆ ಆಸೆಪಟ್ಟಿರುವುದೂ ಇಲ್ಲ. ಪರಸ್ತ್ರೀಯರ ವಿಷಯದಲ್ಲಿ ನನ್ನ ಮನಸ್ಸನ್ನು ಎಂದಿಗೂ ಹರಿಯಬಿಟ್ಟವನಲ್ಲ. ಹೀಗಿರುವಲ್ಲಿ ಯಾವ ಪಾಪದ ಪರಿಪಾಕದಿಂದ ಈಗ ನನಗೆ ಈ ಕ್ಷೇತ್ರದಿಂದ ಸಾಗಣೆಯು ನಡೆಯುತ್ತಿದೆ?

೪೧. ನಾನು ತ್ರಿಕಾಲಗಳಲ್ಲಿಯೂ ಗಂಗೆಯನ್ನು ಸೇವಿಸಿರುತ್ತೇನೆ. ಶ್ರೀ ವಿಶ್ವನಾಥನ ಸಂದರ್ಶನವನ್ನು ಸತತವೂ ಮಾಡಿದ್ದೇನೆ. ಪ್ರತಿ ಪರ್ವಕಾಲ ದಲ್ಲಿಯೂ ಆಯಾಯ ಯಾತ್ರೆಯನ್ನು ಮಾಡಿರುತ್ತೇನೆ. ಹೀಗಾದರೂ ನನಗೆ ಇಂತಹ ವಿಘ್ನವುಂಟಾಗುವುದಕ್ಕೆ ಅದೇನು ಕಾರಣವೊ ತಿಳಿಯದಾಗಿದೆ.

ಮಾತರ್ವಿಶಾಲಾಕ್ಷಿ ಭವಾನಿ ಮಂಗಳೇ
ಜ್ಯೇಷ್ಠೇಶಿ ಸೌಭಾಗ್ಯವಿಧಾನಸುಂದರಿ ।
ವಿಶ್ವೇ ವಿಧೇ ವಿಶ್ವಭುಜೇ ನಮೋಽಸ್ತು ತೇ
ಶ್ರೀ ಚಿತ್ರಘಂಟೇ ವಿಕಟೇ ಚ ದುರ್ಗಿಕೇ ॥ ೮೨ ॥
ಸಾಕ್ಷಿಣ್ಯ ಏತಾಃ ಕಿಲ ಕಾಶಿದೈವತಾಃ
ಶೃಣ್ವಂತು ನಃ ಸ್ವಾರ್ಥಮಹಂ ವ್ರಜಾಮ್ಯತಃ ।
ಅಭ್ಯರ್ಥಿತೋ ದೇವಗಣೈಃ ಕರೋಮಿ ಕಿಂ
ಪರೋಪಕಾರಾಯ ನ ಕಿಂ ವಿಧೀಯತೇ ॥ ೮೩ ॥
ದಧೀಚಿರಸ್ಥೀನಿ ಸ ಕಿಂ ಪುರಾ ದದೌ
ಜಗತ್ತ್ರಯಂ ಕಿಂ ನ ದದೇಽರ್ಥಿನೇ ಬಲಿಃ ।
ದತ್ತಃ ಸ್ಮ ಕಿಂ ನೋ ಮಧುಕೈಟಭೌ ಶಿರೋ
ಬಭೂವ ತಾರ್ಕ್ಷ್ಯೋಽಪಿ ಚ ವಿಷ್ಣುವಾಹನಂ ॥ ೮೪ ॥
ಆಪೃಚ್ಛ್ಯ ಸರ್ವಾನ್ಸಮುನೀನ್ಮುನೀಶ್ವರಃ
ಸಬಾಲವೃದ್ಧಾನಪಿ ತತ್ರ ವಾಸಿನಃ ।
ತೃಣಾನಿ ವೃಕ್ಷಾಂಶ್ಚ ಲತಾಃ ಸಮಸ್ತಾಃ
ಪುರೀಂ ಪರಿಕ್ರಮ್ಯ ಚ ನಿರ್ಯಯೌ ಚ ॥ ೮೫ ॥

---

೮೨–೮೩. ಓ ತಾಯಿ ' ವಿಶಾಲಾಕ್ಷಿ, ಭವಾನೀ, ಮಂಗಳೆ, ಜ್ಯೇಷ್ಠೇಶಿ, ಓ ಸೌಭಾಗ್ಯವಿಧಾನ ಸುಂದರಿ, ವಿಶ್ವೆ, ವಿಧಿ, ವಿಶ್ವಭುಜೆ, ಶ್ರೀಚಿತ್ರಘಂಟೆ, ವಿಕಟೆ, ದುರ್ಗೆ, ಕಾಶೀನಿವಾಸಿಗಳೂ ದೇವತೆಗಳೂ ಆದ ನೀವೆಲ್ಲರೂ ಸಾಕ್ಷಿಗಳಾಗಿರಿ. ನಾನು ಸ್ವಾರ್ಥಕ್ಕಾಗಿ ಈ ಕ್ಷೇತ್ರವನ್ನು ಬಿಟ್ಟುಹೊರಹೋಗುತ್ತಿಲ್ಲ. ದೇವತಾ ಸಮೂಹವೇ ಬಂದು ನನ್ನನ್ನು ಪ್ರಾರ್ಥಿಸಿರಲು ಏನನ್ನು ತಾನೆ ಮಾಡುವುದಕ್ಕಾದೀತು ? ಪರೋಪಕಾರಕ್ಕಾಗಿ ಮಾಡಬಾರದುದು ತಾನೆ ಏನು ?

೮೪. ಪೂರ್ವದಲ್ಲಿ ದೇವತೆಗಳು ಬಂದು ಬೇಡಿದೊಡನೆ, ಮಹಾತ್ಮನಾದ ದಧೀಚಿಮುನಿಯು ತನ್ನ ಮೈಯೆಲುಬುಗಳನ್ನೆಲ್ಲ ಅವರಿಗೆ ದಾನಮಾಡಲಿಲ್ಲವೆ? ಬಲಿಚಕ್ರವರ್ತಿಯು ಯಾಚಕನಾಗಿ ಬಂದು ಕೇಳಿದ ಭಗವಂತನಿಗೆ ಮೂರು ಲೋಕಗಳನ್ನೂ ದಾನವಾಗಿ ಕೊಡಲಿಲ್ಲವೆ ? ಮಧುಕೈಟಭರು, ಬಯಸಿದೊಡನೆಯೆ ಮಹಾವಿಷ್ಣುವಿಗೆ ತಮ್ಮ ಮಂಡಲಗಳನ್ನೇ ತರಿದು ಕೊಡಲಿಲ್ಲವೆ ? ಪಕ್ಷಿರಾಜನಾದ ಗರುಡನು ಶ್ರೀಮನ್ನಾರಾಯಣನಿಗೆ ವಾಹನನಾಗಲಿಲ್ಲವೆ ? ''

೮೫. ಎಲೈ ಸೂತಪುರಾಣಿಕನೆ, ಈ ಪ್ರಕಾರವಾಗಿ ಆ ಮುನೀಶ್ವರನು ಕ್ಷೇತ್ರದ ಅಭಿಮಾನಿ ದೇವತೆಗಳೆಲ್ಲರನ್ನೂ ಪ್ರಾರ್ಥಿಸಿಯಾದ ಬಳಿಕ, ಅಲ್ಲಿದ್ದ

ಪ್ರೋಷಿತಸ್ಯ ಪರಿತೋಽಪಿ ಲಕ್ಷಣೈ
ರ್ನೀಚವರ್ತ್ಮ ಪರಿವರ್ತಿನೋಽಪಿ ವಾ ।
ಚಂದ್ರಮೌಲಿಮವಲೋಕ್ಯ ಯಾಸ್ಯತಃ
ಕಸ್ಯ ಸಿದ್ಧಿರಿಹ ನೋ ಪರಿಸ್ಫುರೇತ್ ॥ ೪೬ ॥
ವರಂ ಹಿ ಕಾಶ್ಯಾಂ ತೃಣವೃಕ್ಷಗುಲ್ಮಕಾ
ಶ್ಚರಂತಿ ಪಾಪಂ ನ ಚರಂತಿ ನಾಽನ್ಯತಃ ।
ವಯಂ ಚರಾಣಾಂ ಪ್ರಥಮಾ ಧಿಗಸ್ತು ನೋ
ವಾರಾಣಸೀಂ ಹಾಽದ್ಯ ವಿಹಾಯ ಗಚ್ಛತಃ ॥ ೪೭ ॥
ಅಸಿಂ ಹ್ಯುಪಸ್ಪೃಶ್ಯ ಪುನಃ ಪುನರ್ಮುನಿಃ
ಪ್ರಾಸಾದಮಾಲಾಃ ಪರಿತೋ ವಿಲೋಕಯನ್ ।
ಉವಾಚ ನೇತ್ರೇ ಸರಲೇ ಪ್ರಪಶ್ಯತಂ
ಕಾಶೀಂ ಯುವಾಂ ಕ್ವ ಕ್ವ ಪುರೀತ್ವಿಯಂ ಬತ ॥ ೪೮ ॥

---

ಸಮಸ್ತ ಮುನಿಗಳನ್ನೂ, ಹುಡುಗರು ಮುದುಕರು ಮೊದಲಾದ ಎಲ್ಲರನ್ನೂ, ಗಿಡ ಮರ ಬಳ್ಳಿ, ಕಡೆಗೆ ತೃಣ ಎಲ್ಲವನ್ನೂ ಕಂಡು ಅಪ್ಪಣೆಯನ್ನು ಕೈಕೊಂಡು, ಪಟ್ಟಣಕ್ಕೆ ಪ್ರದಕ್ಷಿಣೆಯನ್ನು ಮಾಡಿ ಹೊರಟನು.

೪೬. ಅಯ್ಯಾ, ಸೂತಮಹರ್ಷಿಯೆ, ಶ್ರೀ ಚಂದ್ರಮೌಳೀಶ್ವರನನ್ನು ಸಂದರ್ಶಿಸಿ, ಕಾರ್ಯಸಿದ್ಧಿಗಾಗಿ ಹೊರಡುವ ಯಾರಿಗೆ ತಾನೆ ಸುತ್ತಮುತ್ತಲೂ ಶುಭಶಕುನಗಳೇನೂ ಇಲ್ಲದಿದ್ದರೂ, ದುರ್ಗಮವಾದ ಮಾರ್ಗದಲ್ಲಿ ಸಂಚಾರ ಮಾಡಬೇಕಾಗಿದ್ದರೂ ಸಿದ್ಧಿಯೆಂಬುದು ಸ್ಫುರಿಸುವುದಿಲ್ಲ?

೪೭. ಕಾಶೀಕ್ಷೇತ್ರದಲ್ಲಿ ವಾಸಮಾಡುವ ತೃಣಗುಲ್ಮವೃಕ್ಷಾದಿಗಳೆಲ್ಲವೂ ಪಾಪವನ್ನು ಆಚರಿಸದೆ ಇರುವುವಲ್ಲದೆ ಆ ಕ್ಷೇತ್ರವನ್ನು ಬಿಟ್ಟು ಮತ್ತೆಲ್ಲಿಗೂ ಹೋಗುವುದಿಲ್ಲ. ಹೀಗಿರುವಾಗ ಆ ವಾರಾಣಸಿಯನ್ನೇ ತೊರೆದು ಹೊರಡುತ್ತಿರುವ ಚರಪ್ರಾಣಿಗಳಲ್ಲಿ ಮೊದಲಿಗರೂ ಬ್ರಾಹ್ಮಣರೂ ಆಗಿರುವ ನಿಮಗೆ ಒಂದಿಷ್ಟು ಧಿಕ್ಕಾರವಿರಲಿ.

೪೮. ಎಲೈ ಸೂತನೆ, ತರುವಾಯ ಆ ಅಗಸ್ತ್ಯಮುನಿಯು ಕಾಶೀಕ್ಷೇತ್ರಕ್ಕೆ ಉತ್ತರದಲ್ಲಿರುವ ಅಸೀ ನದಿಯಲ್ಲಿ ಸ್ನಾನಾಹ್ನಿಕಗಳನ್ನು ಮಾಡಿ, ಅಡಿಗಡಿಗೂ ಆ ಕ್ಷೇತ್ರದ ದೇವಾಲಯಗಳ ಉಪ್ಪರಿಗೆಗಳನ್ನೆಲ್ಲ ನೋಡುತ್ತ, "ಎಲೌ ನನ್ನ ಸ್ನೇಹಪೂರ್ಣವಾದ ನಯನಗಳೆ, ನೀವು ಈ ಕಾಶೀಪಟ್ಟಣವನ್ನು ತೃಪ್ತಿಯಾಗುವಂತೆ ನೋಡಿರಿ. ಇಂತಹ ಪಟ್ಟಣವು ಮತ್ತೆಲ್ಲಿರುವುದು?" ಎಂದು ಕಣ್ಣುಗಳನ್ನು ಕುರಿತು ತಾನೇ ಹೇಳಿದನು.

ಸ್ವೈರಂ ಹಸಂತ್ವದ್ಯ ವಿಧಾಯ ತಾಲಿಕಾಂ
ಮಿಥಃ ಕರೇಣಾಽಪಿ ಕರಂ ಪ್ರಗೃಹ್ಯ ।
ಸೀಮಾಚರಾ ಭೂತಗಣಾ ವ್ರಜಾಮ್ಯಹಂ
ವಿಹಾಯ ಕಾಶೀಂ ಸುಕೃತೈಕರಾಶಿಂ ॥ ೪೯ ॥
ಇತ್ಥಂ ವಿಲಪ್ಯ ಬಹುಶಃ ಸಮುನಿಸ್ತ್ವಗಸ್ತ್ಯ
ಸ್ತತ್ಕ್ರೌಂಚಯುಗ್ಮವದಹೋ ಅಬಲಾಸಹಾಯಃ ।
ಮೂರ್ಛಾಮವಾಪ ಮಹತೀಂ ವಿರಹೀವ ಜಲ್ಪನ್
ಹಾ ಕಾಶಿ ಕಾಶಿ ಪುನರೇಹಿ ಚ ದೇಹಿ ದೃಷ್ಟಿಂ ॥ ೫೦ ॥
ಸ್ಥಿತ್ವಾ ಕ್ಷಣಂ ಶಿವ ಶಿವೇತಿ ಶಿವೇತಿ ಚೋಕ್ತ್ವಾ
ಯಾ ವಃ ಪ್ರಿಯೇತಿ ಕಠಿನಾ ಹಿ ದಿವೌಕಸಸ್ತೇ ।
ಕಿಂ ನ ಸ್ಮರೇಸ್ತ್ರಿಜಗತೀಸುಖದಾನದಕ್ಷಂ
ತ್ರ್ಯಕ್ಷಂ ಪ್ರಹಿತ್ಯ ಮದನಂ ಯದಕಾರಿ ತೈಸ್ತು ॥ ೫೧ ॥
ಯಾವದ್ವ್ರಜೇತ್ತ್ರಿಚತುರಾಣಿ ಪದಾನಿ ಖೇದಾ
ತ್ಸ್ವೇದೋದಬಿಂದುಕಣಿಕಾಂಚಿತಭಾಲದೇಶಃ ।
ಪ್ರತ್ಯುದ್ಗಮಾಽಕರಣತಃ ಕಿಲ ನೋ ವಿನಾಶ
ಸ್ತಾವದ್ಧರಾ ಭಯವಶಾದಿವ ಸಂಚುಕೋಪ ॥ ೫೨ ॥

---

೪೯. ಇದೊ, ಪುಣ್ಯಕ್ಕೆ ಒಂದೇ ಒಂದು ರಾಶಿಯಂತೆ ಕಂಗೊಳಿಸುತ್ತಿರುವ ಕಾಶಿಯನ್ನು ತೊರೆದು ಹೋಗುತ್ತಿದ್ದೇನೆ. ಈ ಪಟ್ಟಣದ ಗಡಿಯಲ್ಲಿರುವ ಭೂತಗಣಗಳೆಲ್ಲವೂ ಚಪ್ಪಾಳೆ ಹಾಕುತ್ತ, ನನ್ನನ್ನು ಹಾಸ್ಯಮಾಡಿಕೊಂಡು ನಗಲಿ.

೫೦. ಎಲೈ ಸೂತಪುರಾಣಿಕನೆ, ಹೀಗೆ ಆ ಅಗಸ್ತ್ಯಮುನಿಯು, ಪೂರ್ವದಲ್ಲಿ ಕ್ರೌಂಚ ಮಿಥುನದಲ್ಲಿ ವ್ಯಾಧನಿಂದ ಗಂಡುಹಕ್ಕಿಯು ಮಡಿದುರಳಿದಮೇಲೆ ಹೆಣ್ಣುಹಕ್ಕಿಯು ಪ್ರಲಪಿಸಿದಂತೆ ಬಹುವಾಗಿ ಪ್ರಲಪಿಸಿ, ಧೃತಿಗೆಟ್ಟು, "ಎಲೌ ಕಾಶಿಯೇ, ಮತ್ತೆ ನನ್ನ ಕಣ್ಣಿಗೆ ಗೋಚರವಾಗುವುದು ಯಾವಾಗಲೊ, ಹೇಗೊ!" ಎಂದು ವಿರಹಿಯಂತೆ ಕೂಗುತ್ತ ಗಾಢವಾಗಿ ಮೂರ್ಛೆಗೊಂಡನು.

೫೧. ಆ ಮುನಿಯು ಕ್ಷಣಕಾಲ ನಿಂತು, "ಶಿವಶಿವಾ! ಎಲೌ ಕಾಶೀ ಕ್ಷೇತ್ರವೆ, ಇದೊ ನಾವು ಹೊರಡುತ್ತೇವೆ· ನನಗೆ ಅತ್ಯಂತ ಪ್ರೀತಿಪಾತ್ರವಾದ ನೀನು ನನ್ನನ್ನು ಮರೆಯದಿರು. ಆ ದೇವತೆಗಳು ಬಹಳ ಕಠಿನಾತ್ಮರು. ಪ್ರಪಂಚಕ್ಕೇ ಸುಖಸಂತೋಷಗಳನ್ನು ನೀಡುವುದರಲ್ಲಿ ದಕ್ಷನಾಗಿರುವ ತ್ರ್ಯಕ್ಷನ ಬಳಿಗೆ ಮದನನನ್ನು ಕಳಿಸಿ ಏನುಮಾಡಿದರೆಂಬುದು ನಿನಗೆ ನೆನಪಿಲ್ಲವೆ? ಎಂದು ಬಿಸುಸುಯ್ದನು."

೫೨. ಇಂತು ನುಡಿದ ತರುವಾಯ ಆ ಮುನಿಯು ಕಾಶೀಕ್ಷೇತ್ರದಿಂದ

ತಪೋಯಾನಮಿವಾರುಹ್ಯ ನಿಮೇಷಾರ್ಧೇನ ವೈ ಮುನಿಃ ।
ಅಗ್ರೇ ದದರ್ಶ ತಂ ವಿಂಧ್ಯಂ ರುದ್ಧಾಂಬರಮುಥೋನ್ನತಂ ॥ ೫೩ ॥
ಚಕಂಪೇ ಚಾಽಚಲಸ್ತೂರ್ಣಂ ದೃಷ್ಟ್ವೈವಾಗ್ರಸ್ಥಿತಂ ಮುನಿಂ ।
ತಮಗಸ್ತ್ಯಂ ಸಪತ್ನೀಕಂ ವಾತಾಪೀಲ್ವಲವೈರಿಣಂ ॥ ೫೪ ॥
ತಪಃಕ್ರೋಧಸಮುತ್ಥಾಭ್ಯಾಂ ಕಾಶೀವಿರಹಜನ್ಮನಾ ।
ಪ್ರಲಯಾಽನಲವತ್ತೀವ್ರಂ ಜ್ವಲಂತಂ ತ್ರಿಭಿರಗ್ನಿಭಿಃ ॥ ೫೫ ॥
ಗಿರಿಃ ಖರ್ವತರೋ ಭೂತ್ವಾ ವಿವಿಕ್ಷುರವನೀಮಿವ ।
ಆಜ್ಞಾ ಪ್ರಸಾದಃ ಕ್ರಿಯತಾಂ ಕಿಂ ಕರೋಽಸ್ಮೀತಿ ಚಾಽಬ್ರವೀತ್ ॥ ೫೬ ॥

---

ಮೂರು ನಾಲ್ಕು ಹೆಜ್ಜೆಗಳು ಮುಂದುವರಿಯುತ್ತಲೆ, ಭೂದೇವಿಯು ಅತಿಶಯವಾದ ಭಯದಿಂದಲೊ ಎಂಬಂತೆ, "ಈ ಮುನಿಯು ಈವರೆಗೆ ಕಾಶೀಕ್ಷೇತ್ರದಲ್ಲಿ ವಾಸವಾಗಿದ್ದವನು, ಇದೀಗ ಆ ಕ್ಷೇತ್ರವನ್ನು ಬಿಟ್ಟು ಮನಸ್ಸಿಲ್ಲದ ಮನಸ್ಸಿನಿಂದ ಮುಂದುವರಿಯುತ್ತ, ಬೆಮರಿಡಿದಿರುವ ಹಣೆಯುಳ್ಳವನಾಗಿ ಕಂಗೊಳಿಸಿ ಬರುತ್ತಿದ್ದಾನೆ. ನಾನು ಬಂದರೂ ಇವಳು ಅಭ್ಯುತ್ಥಾನಾದಿಗಳಿಂದ ಸನ್ಮಾನಗಳನ್ನು ಸಲ್ಲಿಸುತ್ತಿಲ್ಲ ಎಂದು ಮುನಿದಾನೊ ಏನೊ" ಎಂಮಕೊಂಡು ಸಂಕೋಚಗೊಂಡಳು.

೫೩. ತಪಸ್ಸನ್ನೇ ರಥವನ್ನಾಗಿ ಮಾಡಿಕೊಂಡು ಅದನ್ನೇರಿ ಬರುತ್ತಿರುವನೊ ಎಂಬಂತೆ ತೋರುತ್ತ ಆ ಮುನಿಪುಂಗವನು ಅರೆನಿಮಿಷದಲ್ಲಿಯೇ ಬಹಳ ದೂರ ಬಂದು, ತನ್ನ ಮುಂಗಡೆಯೆ ಬಹಳವಾಗಿ ಬೆಳೆದು ಗಗನಮಾರ್ಗವನ್ನು ಅಡ್ಡಗಟ್ಟಿ ನಿಂತಿದ್ದ ಆ ವಿಂಧ್ಯಗಿರಿಯನ್ನು ಕಂಡನು.

೫೪. ಆ ಪರ್ವತರಾಜನು ವಾತಾಪಿ ಇಲ್ವಲರೆಂಬ ರಾಕ್ಷಸರ ವೈರಿಯೂ ಮಹೋಗ್ರತಪಸ್ವಿಯೂ ಆದ ಆ ಅಗಸ್ತ್ಯಮುನಿಯು ಪತ್ನಿಯಾದ ಲೋಪಾಮುದ್ರಾದೇವಿಯೊಡನೆ ತನ್ನ ಮುಂಗಡೆ ನಿಂತಿರುವುದನ್ನು ಕಂಡೊಡನೆ ಬೆದರಿ ನಡುಗಿಹೋದನು.

೫೫–೫೬. ತಪಸ್ಸಿನಿಂದಲೂ ಕೋಪದಿಂದಲೂ ಹುಟ್ಟಿದ ತೀವ್ರವಾದ ಕಾಶೀವಿರಹವೆಂಬ ಅಗ್ನಿಯಿಂದ ಪ್ರಳಯಾಗ್ನಿಯೋಪಾದಿಯಲ್ಲಿ ಪ್ರಜ್ವಲಿಸುತ್ತ, ಗಾರ್ಹಪತ್ಯ ಆಹವನೀಯ ದಾಕ್ಷಿಣೇಯಗಳೆಂಬ ಅಗ್ನಿತ್ರಯಗಳಿಂದೊಪ್ಪಿರುವ ಆ ಮುನಿಪುಂಗವನನ್ನು ಕಂಡು, ಆ ಪರ್ವತರಾಜನು ಬಹುವಾಗಿ ಕುಗ್ಗಿದವನಾಗಿ, ನೆಲವನ್ನೇ ಕುರಿತು ಹೇಳುವವನಂತೆ, "ಎಲೈ ಮುನಿಯೆ, ಅಪ್ಪಣೆಯಿತ್ತು ಅನುಗ್ರಹಿಸಬೇಕು. ಪ್ರಕೃತದಲ್ಲಿ ನನ್ನಿಂದ ಆಗಬೇಕಾದುದೇನು?" ಎಂದು ಹೇಳಿದನು.

ಅಗಸ್ತ್ಯ ಉವಾಚ :—
ವಿಂಧ್ಯ ಸಾಧುರಸಿ ಪ್ರಾಜ್ಞ ಮಾಂ ಚ ಜಾನಾಸಿ ತತ್ವತಃ ।
ಪುನರಾಗಮನಂ ಚೇನ್ಮೇ ತಾವತ್ಖರ್ವತರೋ ಭವ ॥ ೫೭ ॥
ಇತ್ಯುಕ್ತ್ವಾ ದಕ್ಷಿಣಾಮಾಶಾಂ ಸನಾಥಾಮಕರೋನ್ಮುನಿಃ ।
ನಿಜೈಶ್ಚರಣವಿನ್ಯಾಸೈಸ್ತಯಾ ಸಾಧ್ವ್ಯಾ ತಪೋನಿಧಿಃ ॥ ೫೮ ॥
ಗತೇ ತಸ್ಮಿನ್ಮುನಿವರೇ ನೇಪವಾನಸ್ತದಾ ಗಿರಿಃ ।
ಪಶ್ಯತ್ಯುತ್ಕಂಠಮಿವ ಚ ಗತಶ್ಚೇತ್ಸಾಧ್ವಭೂತ್ತತಃ ॥ ೫೯ ॥
ಅದ್ಯ ಜಾತಃ ಪುನರಹಂ ನ ಶಪ್ತೋ ಯದಗಸ್ತಿನಾ ।
ನ ಮಯಾ ಸದೃಶೋ ಧನ್ಯ ಇತಿ ಮೇನೇ ಸ ವೈ ಗಿರಿಃ ॥ ೬೦ ॥
ಅರುಣೋಽಪಿ ಚ ತತ್ಕಾಲೇ ಕಾಲಜ್ಞೋಽಶ್ವಾನಕಾಲಯತ್ ।
ಜಗತ್ಸ್ವಾಸ್ಥ್ಯಮವಾಪೋಚ್ಚೈಃ ಪೂರ್ವವದ್ಭಾನುಸಂಚರೈಃ ॥ ೬೧ ॥
ಅದ್ಯ ಶ್ವೋ ವಾ ಪರಶ್ವೋ ವಾಽಸ್ಯಾಗಮಿಷ್ಯತಿ ವೈ ಮುನಿಃ ।
ಇತಿ ಚಿಂತಾಮಹಾಭಾರೈರ್ಗಿರಿಕಾಕ್ರಾಂತವತ್ಸ್ಥಿತಃ ॥ ೬೨ ॥

---

೫೭. ಅಗಸ್ತ್ಯನು ಹೇಳುತ್ತಾನೆ:—"ಅಯ್ಯಾ ವಿಂಧ್ಯಗಿರಿಯೆ, ಬಹಳ ಸಂತೋಷವಾಯಿತು. ಪ್ರಾಜ್ಞನಾದ ನೀನು ನನ್ನ ವಿಷಯವನ್ನು ಯಥಾರ್ಥವಾಗಿಯೆ ತಿಳಿದುಕೊಂಡಿದ್ದೀಯೆ. ಪ್ರಕೃತದಲ್ಲಿ ನನಗೆ ಆಗಬೇಕಾದುದು ಏನೂ ಇರುವುದಿಲ್ಲ. ಆದರೆ, ನಾನು ಹೋಗಿ ಬರುವವರೆಗೂ ನೀನು ಹೀಗೆಯೇ ನಮ್ರನಾಗಿರಬೇಕು."

೫೮. ಎಲೈ ಸೂತಮುನಿಯೆ, ಅಗಸ್ತ್ಯಮುನಿಪುಂಗವನು ಆ ವಿಂಧ್ಯಪರ್ವತಕ್ಕೆ ಆ ರೀತಿ ಅಪ್ಪಣೆಮಾಡಿ, ಸಾಧ್ವಿಯಾದ ಲೋಪಾಮುದ್ರೆಯೊಡಗೂಡಿ ಕಾಲ್ನಡಗೆಯಿಂದಲೇ ದಕ್ಷಿಣ ದಿಕ್ಕನ್ನು ಸನಾಥಗೊಳಿಸಿದನು.

೫೯–೬೦. ಅತ್ತ ಆ ಮುನಿಯು ಹೊರಟು ಹೋಗುತ್ತಲೆ, ಇತ್ತ ವಿಂಧ್ಯಗಿರಿಯು ಭಯದಿಂದ ತತ್ತಳಿಸುತ್ತಲೆ ಆತನು ಹೊರಟು ಹೋದುದನ್ನೆ ಕಣ್ಣಿಟ್ಟು ನೋಡುತ್ತ ಅದು ತನ್ನ ಭಾಗಕ್ಕೆ ಒಳ್ಳೆಯದೆ ಆಯಿತೆಂದುಕೊಂಡನು. ಈ ಅಗಸ್ತ್ಯಮುನಿಯು ನನ್ನನ್ನು ಶಪಿಸದೆ ಹೋದುದರಿಂದ ಇಂದಿಗೆ ನಾನು ಮತ್ತೆ ಹುಟ್ಟಿದಂತಾಯಿತು. ನನಗೆ ಸಮಾನರಾದ ಧನ್ಯರು ಇರುವುದಿಲ್ಲ ಎಂದು ತಿಳಿದನು.

೬೧. ಇದಾದ ತರುವಾಯ, ಸೂರ್ಯನ ಸಾರಥಿಯಾದ ಅರುಣನೂ ಸಹ, ಕಾಲವೆಷ್ಟಾಯಿತೆಂಬುದನ್ನರಿತುಕೊಂಡು ಕುದುರೆಗಳನ್ನು ತುರುಬಿದನು. ಮೊದಲಿನಂತೆಯೆ ಸೂರ್ಯಸಂಚಾರವೇರ್ಪಟ್ಟು, ಜಗತ್ತು ಒಂದು ನೆಲೆಗೆ ಬಂದಿತು.

೬೨. "ಅಗಸ್ತ್ಯಮುನಿಯು ಇವೊತ್ತೊ ನಾಳೆಯೊ ನಾಡಿದ್ದೊ ಬಂದೇ

ನಾಽದ್ಯಾಽಪಿ ಮುನಿರಾಯಾತಿ ನಾಽದ್ಯಾಽಪಿ ಗಿರಿರೇಧತೇ ।
ಯಥಾ ಖಲಜನಾನಾಂ ಹಿ ಮನೋರಥಮಹೀರುಹಃ ॥ ೬೩ ॥
ವಿವರ್ಧಿಷತಿ ಯೋ ನೀಚಃ ಪರಾಽಸೂಯಾಂ ಸಮುದ್ವಹನ್ ।
ದೂರೇ ತದ್ವೃದ್ಧಿವಾರ್ತಾಽಽಸ್ತಾಂ ಪ್ರಾಗ್ವೃದ್ಧೇರಪಿ ಸಂಶಯಃ ॥ ೬೪ ॥
ಮನೋರಥಾ ನ ಸಿದ್ಧ್ಯೇಯುಃ ಸಿದ್ಧಾ ನಶ್ಯಂತ್ಯಪಿ ಧ್ರುವಂ ।
ಖಲಾನಾಂ ತೇನ ಕುಶಲಂ ವಿಶ್ವಂ ವಿಶ್ವೇಶರಕ್ಷಿತಂ ॥ ೬೫ ॥
ವಿಧವಾನಾಂ ಸ್ತನಾ ಯದ್ವದ್ವೃದ್ಧ್ಯೈವ ವಿಲಯಂತಿ ಚ ।
ಉನ್ನಮ್ಯೋನ್ನಮ್ಯ ತದ್ವತ್ಖಲಮನೋರಥಾಃ ॥ ೬೬ ॥
ಭವೇತ್ಕೂಲಂಕಷಾ ಯದ್ವದಲ್ಪವರ್ಷೇಣ ಕನ್ನದೀ ।
ಖಲರ್ಧಿರಲ್ಪವರ್ಷೇಣ ತದ್ವತ್ಸ್ಯಾತ್ಸ್ವಕುಲಂಕಷಾ ॥ ೬೭ ॥
ಅವಿಜ್ಞಾಯಾಽನ್ಯಸಾಮರ್ಥ್ಯಂ ಸ್ವಸಾಮರ್ಥ್ಯಂ ಪ್ರದರ್ಶಯೇತ್ ।
ಉಪಹಾಸಮವಾಪ್ನೋತಿ ತಥೈವಾಽಯಮಿಹಾಽಚಲಃ ॥ ೬೮ ॥

---

ಬರುತ್ತಾನೆ" ಎಂದು ಚಿಂತಿಸುತ್ತಲೆ ಆ ವಿಂಧ್ಯಮಹಾಗಿರಿಯು ಅಡಗಿದ್ದು ಅಡಗಿದಂತೆಯೇ ಇದ್ದಿತು.

೬೩. ಇಂದಿಗೂ ಆ ಮುನಿಯು ಆ ಕಡೆಗೆ ಬರಲಿಲ್ಲ; ವಿಂಧ್ಯಪರ್ವತವೂ ದುಷ್ಟರ ಮನೋರಥವೃಕ್ಷದಂತೆ ಮೇಲಕ್ಕೇಳಲಿಲ್ಲ.

೬೪. ಯಾವ ನೀಚನು ಇತರರ ಮೇಲಿನ ಅಸೂಯೆಯಿಂದ ಸ್ವಂತ ಅಭಿವೃದ್ಧಿಯನ್ನಪೇಕ್ಷಿಸುತ್ತಾನೆಯೊ ಅವನಿಗೆ ಆ ಅಭಿವೃದ್ಧಿಯೆಂಬುದಂತಿರಲಿ, ಪ್ರಕೃತದಲ್ಲಿ ಅವನಿಗಿರುವ ಅಲ್ಪಸ್ವಲ್ಪವೃದ್ಧಿಯೂ ಸ್ಥಿರವಾಗಿರುತ್ತದೆಯೆಂಬುದರಲ್ಲಿ ಸಂಶಯವೇ.

೬೫. ಮೂರ್ಖರ ಮನೋರಥಗಳು ಎಂದಿಗೂ ಸಿದ್ಧಿಸುವುದಿಲ್ಲ. ಒಂದು ವೇಳೆ ಸಿದ್ಧಿಸಿದರೂ ಅವು ಸ್ಥಿರವಾಗಿ ನಿಲ್ಲುವುದಿಲ್ಲ. ಆದುದರಿಂದಲೇ ಪರಮೇಶ್ವರನ ಅಗಸ್ತ್ಯಾದಿ ವಿವಿಧ ರೂಪಗಳಿಂದ ರಕ್ಷಿತವಾದ ಈ ಜಗತ್ತು ಕ್ಷೇಮವಾಗಿರುವುದು.

೬೬. ಬೆಳೆದರೂ ಅಡಗಿಹೋಗುವ ವಿಧವೆಯರ ಸ್ತನಗಳಂತೆ ಮೂರ್ಖರ ಮನೋರಥಗಳು ಅತ್ಯುನ್ನತಗಳಾಗಿ ಬೆಳೆದರೂ ಪತನವಾಗತಕ್ಕವೆ.

೬೭. ಸ್ವಲ್ಪ ಮಳೆ ಸುರಿದೂ ದಡಕಿತ್ತು ಹರಿಯುವ ಕೀಳು ಹೊಳೆಯಂತೆ, ಮೂರ್ಖರ ವೃದ್ಧಿಯು ಕುಲವನ್ನೇ ನಾಶಗೊಳಿಸತಕ್ಕದ್ದು.

೬೮. ಲೋಕದಲ್ಲಿ ಯಾವನು ಇತರರ ಸಾಮರ್ಥ್ಯವನ್ನು ತಿಳಿದುಕೊಳ್ಳದೆ ತನ್ನ ಸಾಮರ್ಥ್ಯವನ್ನೇ ತೋರಿಸಿಕೊಳ್ಳುತ್ತಾನೆಯೊ ಅವನು ಈ ವಿಂಧ್ಯಪರ್ವತದಂತೆ ಕೇವಲ ನಗೆಗೀಡಾಗುತ್ತಾನೆ.

ವ್ಯಾಸ ಉವಾಚ :—

ಗೋದಾವರೀತಟಂ ರಮ್ಯಂ ವಿಚರನ್ನಪಿ ವೈ ಮುನಿಃ ।
ನ ತತ್ಯಾಜ ಚ ತತ್ತಾಪಂ ಕಾಶೀವಿರಹಜಂ ಪರಂ ॥ ೬೯ ॥
ಉದೀಚೀದಿಕ್‌ಸ್ಪೃಶಮಪಿ ಸ ಮುನಿರ್ಮಾತರಿಶ್ವನಂ ।
ಪ್ರಸಾರ್ಯ ಬಾಹೂ ಸಂಶ್ಲಿಷ್ಯ ಕಾಶ್ಯಾಃ ಪೃಚ್ಛೇದನಾಮಯಂ ॥ ೭೦ ॥
ಲೋಪಾಮುದ್ರೇ ನ ಸಾ ಮುದ್ರಾ ಕಾಽಪೀಹ ಜಗತೀ ತಲೇ ।
ವಾರಾಣಸ್ಯಾಃ ಪ್ರದೃಶ್ಯೇತ ತತ್ಕರ್ತಾ ಸ ಯುತೋ ವಿಧಿಃ ॥ ೭೧ ॥
ಕ್ವಚಿತ್ತಿಷ್ಠನ್ಕ್ವಚಿಜ್ಜಲ್ಪನ್ಕ್ವಚಿದ್ಧಾವನ್ಕ್ವಚಿತ್ಸ್ಖಲನ್ ।
ಕ್ವಚಿಚ್ಛೋಪವಿಶಂಶ್ಚೇತಿ ಬಭ್ರಾಮೇತಸ್ತತೋ ಮುನಿಃ ॥ ೭೨ ॥
ತತೋ ವ್ರಜನ್ದದರ್ಶಾಗ್ರೇ ಪುಣ್ಯರಾಶಿಸ್ತಪೋಧನಃ ।
ಚಂಚಚ್ಚಂದ್ರಶತಾಭಾಸಾಂ ಭಾಗ್ಯವಾನಿವ ಸುಶ್ರಿಯಂ ॥ ೭೩ ॥

---

೬೯. ವ್ಯಾಸನು ಹೇಳುತ್ತಾನೆ.—ಎಲೈ ಸೂತಪುರಾಣಿಕನೆ, ಇತ್ತ ಅಗಸ್ತ್ಯಮುನಿಯು ಗೋದಾವರೀತೀರವನ್ನು ಸೇರಿ ಅಲ್ಲಿನ ಮನೋಹರವಾದ ವನಪ್ರದೇಶದಲ್ಲಿ ಸಂಚರಿಸಿದರೂ ಕಾಶೀಕ್ಷೇತ್ರವನ್ನು ತೊರೆದುದರಿಂದುಂಟಾದ ಅತ್ಯುತ್ಕಟವಾದ ತಾಪಕ್ಕೆ ಶಾಂತಿಯನ್ನು ಪಡೆಯಲಿಲ್ಲವು.

೭೦. ಆಗಲೂ ಆ ಮುನಿಯು ಉತ್ತರ ದಿಕ್ಕನ್ನು ಸ್ಪರ್ಶಿಸಿ ಬರುತ್ತಿರುವ ಮೆಲುಗಾಳಿಯನ್ನು ತೋಳುಗಳನ್ನು ನೀಡಿ ಆಲಿಂಗಿಸಿಕೊಂಡು ಕಾಶೀ ಕ್ಷೇತ್ರದ ಯೋಗಕ್ಷೇಮವನ್ನು ಕೇಳುವನು.

೭೧. "ಎಲೌ ಲೋಪಾಮುದ್ರೆ, ಕಾಶೀಕ್ಷೇತ್ರಕ್ಕೆ ಸಮಾನವಾದ ಲಕ್ಷಣಗಳುಳ್ಳುದೇ ಅಲ್ಲದೆ, ಅಲ್ಲಿ ನೆಲಸುವುದರಿಂದ ದೊರಕುವ ಸಂತೋಷಕ್ಕೆ ಎಣೆಯಾದ ಸಂತೋಷವುಳ್ಳ ಪ್ರದೇಶವು ಈ ಬ್ರಹ್ಮಾಂಡದಲ್ಲಿ ಮತ್ತೆಲ್ಲಿಯಾದರೂ ಇರುವುದೆ? ಖಂಡಿತವಾಗಿಯೂ ಇಲ್ಲ. ಏಕೆಂದರೆ, ಚತುರ್ದಶ ಭುವನಗಳನ್ನೂ ಸೃಷ್ಟಿಕರ್ತನಾದ ಬ್ರಹ್ಮದೇವನು ನಿರ್ಮಿಸಿದ್ದರೆ, ಸಾಕ್ಷಾತ್ ಪರಮೇಶ್ವರನೇ ಕಾಶೀಕ್ಷೇತ್ರವನ್ನು ನಿರ್ಮಿಸಿದ್ದಾನೆ.

೭೨. ಅಯ್ಯಾ ಸೂತಮಹರ್ಷಿಯೆ, ಆ ಅಗಸ್ತ್ಯಮಹರ್ಷಿಯು ಈ ರೀತಿ ನುಡಿದು ಕೆಲವೆಡೆ ನಿಂತು, ಕೆಲವೆಡೆ ಹುಚ್ಚನಂತೆ ಮಾತನಾಡಿಯೂ, ಇನ್ನು ಕೆಲವೆಡೆ ಓಡುತ್ತಲೂ, ಮತ್ತೆ ಕೆಲವೆಡೆಗಳಲ್ಲಿ ಜಾರಿಬೀಳುತ್ತಲೂ, ಇನ್ನೂ ಕೆಲವೆಡೆಗಳಲ್ಲಿ ಆಯಾಸಗೊಂಡು ಕುಳಿತುಕೊಳ್ಳುತ್ತಲೂ ಅಲೆದಾಡಿದನು.

೭೩. ತರುವಾಯ ಪುಣ್ಯಕರವಾದ ಕಾಶಿಯೇ ಮೂರ್ತಿವೆತ್ತಂತಿರುವ ಆ ತಪೋಧನನು ಬೆಳಗುತ್ತಿರುವ ನೂರುಮಂದಿ ಚಂದ್ರರ ತೇಜಸ್ಸನ್ನು ಒಳಗೊಂಡು

ವಿಜಿತ್ಯ ಭಾನುನಾ ಭಾನುಂ ದಿವಾಽಪಿ ಸಮುದಿತ್ವರಾಂ ।
ನಿರ್ವಾಪಯಂತೀಮಿವ ತಾಂ ಸ್ವಚೇತಸ್ತಾಪಸಂತತಿಂ ॥ ೭೪ ॥
ತತ್ರಾಽಗಸ್ತ್ಯೋ ಮಹಾಲಕ್ಷ್ಮೀಂ ದದೃಶೇ ಸುಚಿರಂ ಸ್ಥಿತಾಂ ॥ ೭೫ ॥
ರಾತ್ರಾವಬ್ಜೇಷು ಸಂಕೋಚೋ ದರ್ಶೇಷ್ವಬ್ಜಃ ಕ್ವಚಿದ್ವ್ರಜೇತ್ ।
ಕ್ಷೀರೋದೇ ಮಂದರತ್ರಾಸಾತ್ತದತ್ರಾಽಧ್ಯುಷಿತಾಮಿವ ॥ ೭೬ ॥
ಯದಾರಭ್ಯ ದಧಾರೈನಾಂ ಮಾಧವೋ ಮಾನತಃ ಕಿಲ ।
ತದಾರಭ್ಯ ಸ್ಥಿತಾಂ ನೂನಂ ಸಪತ್ನೀರ್ಷ್ಯಾವಶಾದಿವ ॥ ೭೭ ॥
ತ್ರೈಲೋಕ್ಯಂ ಕೋಲರೂಪೇಣ ತ್ರಾಸಯಂತಂ ಮಹಾಸುರಂ ।
ವಿನಿಹತ್ಯ ಸ್ಥಿತಾಂ ತತ್ರ ರಮ್ಯೇ ಕೋಲಾಪುರೇ ಪುರೇ ॥ ೭೮ ॥
ಸಂಪ್ರಾಪ್ಯಾಽಥ ಮಹಾಲಕ್ಷ್ಮೀಂ ಮುನಿವರ್ಯಃ ಪ್ರಣಮ್ಯ ಚ ।
ತುಷ್ಟಾವ ವಾಗ್ಭಿರಿಷ್ಟಾಭಿರಿಷ್ಟದಾಂ ಹೃಷ್ಟಮಾನಸಃ ॥ ೭೯ ॥

---

ಪ್ರಕಾಶಿಸುತ್ತಿರುವ ಶ್ರೀದೇವಿಯ ತೇಜೋರಾಶಿಯನ್ನು ಅದೃಷ್ಟಶಾಲಿಯಾದವನು ಅಮಿತೈಶ್ವರ್ಯವನ್ನೆಂತೊ ಅಂತು ಸಂದರ್ಶಿಸಿದನು.

೭೪. ಆ ತೇಜಸ್ಸು ಸೂರ್ಯನ ತೇಜಸ್ಸನ್ನೂ ಜಯಿಸಿ ತನ್ನ ಮನಸ್ಸಿನ ಸಂತಾಪಸಮೂಹವನ್ನು ಆರಿಸುತ್ತಿರುವುದೊ ಎಂಬಂತೆ ವಿರಾಜಿಸುತ್ತಿದ್ದಿತು.

೭೫–೭೬. ಇರುಳಲ್ಲಿ ಕಮಲವು ಸಂಕೋಚಗೊಳ್ಳುವುದರಿಂದಲೂ ದರ್ಶಾದಿ ಸಮಯಗಳಲ್ಲಿ ಅದು ಎತ್ತಲೊ ಅಡಗುವುದರಿಂದಲೂ ಕ್ಷೀರಸಾಗರದಲ್ಲಿ ಮಂದರ ಪರ್ವತದ ಭೀತಿಯಿರುವುದರಿಂದಲೂ ಆ ಮಹಾ ಲಕ್ಷ್ಮಿಯು ಕೋಲಾಪುರದಲ್ಲಿ ಬಹುಕಾಲದಿಂದಲೂ ನೆಲಸಿದ್ದಳು ಇಂತಹ ಆ ದೇವಿಯನ್ನು ಅಗಸ್ತ್ಯಮುನಿಯು ಕಂಡನು.

೭೭–೭೮. ಆ ಶ್ರೀದೇವಿಯು, ಮಾಧವನು ತನ್ನನ್ನು ಸನ್ಮಾನಿಸಿ ವಕ್ಷಸ್ಥಲದಲ್ಲಿ ಧರಿಸಿದಂದಿನಿಂದ ಮೊದಲುಗೊಂಡು ಸವತಿಯಾದ ಭೂದೇವಿಯಲ್ಲಿನ ಅಸೂಯೆಯಿಂದ ಅವನನ್ನು ತೊರೆದು ಆ ಪಟ್ಟಣದಲ್ಲಿಯೇ ನೆಲಸಿರುವಳೊ ಎಂಬಂತೆ ವಿರಾಜಿಸುತ್ತಿದ್ದಳು. ಆಕೆಯು ವರಾಹರೂಪವನ್ನು ತಳೆದು ಮೂರುಲೋಕಗಳನ್ನು ಹೆದರಿಸುತ್ತಿದ್ದ ಮಹಾಸುರನನ್ನು ಸಂಹಾರಮಾಡಿ ಆ ಪಟ್ಟಣದಲ್ಲಿ ನೆಲೆಗೊಂಡಿದ್ದಳು.

೭೯. ಅಗಸ್ತ್ಯಮುನಿಯು ಆ ಮಹಾಲಕ್ಷ್ಮಿಯನ್ನು ಸಂದರ್ಶಿಸಿ ನಮಸ್ಕರಿಸಿ, ಭಕ್ತರೆಲ್ಲರಿಗೂ ಸರ್ವಾಭೀಷ್ಟಪ್ರದಾಯಿನಿಯಾಗಿರುವ ಆಕೆಯನ್ನು ಕಿವಿಗಿಂಪಾದ ಸ್ತೋತ್ರಗಳಿಂದ ಸಂತುಷ್ಟಾಂತರಂಗನಾಗಿ ಸ್ತುತಿಸತೊಡಗಿದನು.

ಅಗಸ್ತಿರುವಾಚ :—

ಮಾತರ್ನಮಾಮಿ ಕಮಲೇ ಕಮಲಾಯತಾಕ್ಷಿ
ಶ್ರೀ ವಿಷ್ಣುಹೃತ್ಕಮಲವಾಸಿನಿ ವಿಶ್ವಮಾತಃ ।
ಕ್ಷೀರೋದಜೇ ಕಮಲಕೋಮಲಗರ್ಭಗೌರಿ
ಲಕ್ಷ್ಮಿ ಪ್ರಸೀದ ಸತತಂ ನಮತಾಂ ಶರಣ್ಯೇ ॥ ೬೦ ॥
ತ್ವಂ ಶ್ರೀರುಪೇಂದ್ರಸದನೇ ಮದನೈಕಮಾತ
ರ್ಜ್ಯೋತ್ಸ್ನಾಽಸಿ ಚಂದ್ರಮಸಿ ಚಂದ್ರಮನೋಹರಾಸ್ಯೇ ।
ಸೂರ್ಯೇ ಪ್ರಭಾಸಿ ಚ ಜಗತ್ತ್ರಿತಯೇ ಪ್ರಭಾಸಿ
ಲಕ್ಷ್ಮಿ ಪ್ರಸೀದ ಸತತಂ ನಮತಾಂ ಶರಣ್ಯೇ ॥ ೬೧ ॥
ತ್ವಂ ಜಾತವೇದಸಿ ಸದಾ ದಹನಾತ್ಮಶಕ್ತಿ
ರ್ವೇಧಾಸ್ತ್ವಯಾ ಜಗದಿದಂ ವಿವಿಧಂ ವಿದಧ್ಯಾತ್ ।
ವಿಶ್ವಂಭರೋಽಪಿ ಬಿಭೃಯಾದಖಿಲಂ ಭವತ್ಯಾ
ಲಕ್ಷ್ಮಿ ಪ್ರಸೀದ ಸತತಂ ನಮತಾಂ ಶರಣ್ಯೇ ॥ ೬೨ ॥

---

೬೦. ಅಗಸ್ತ್ಯನು ಹೇಳುತ್ತಾನೆ :—"ತಾಯೆ, ಕಮಲದಂತೆ ವಿಶಾಲವಾದ ನೇತ್ರಗಳುಳ್ಳವಳಾಗಿ, ಶ್ರೀ ಮನ್ಮಹಾವಿಷ್ಣುವಿನ ಹೃತ್ಕಮಲದಲ್ಲಿ ವಾಸಿಸುವವಳಾಗಿ, ಸಮಸ್ತ ಪ್ರಪಂಚಕ್ಕೂ ತಾಯಿಯಾಗಿ ಕಂಗೊಳಿಸುತ್ತಿರುವ ಓ ಕಮಲೆ, ಕ್ಷೀರ ಸಮುದ್ರದಲ್ಲಿ ಜನಿಸಿದವಳೂ, ಕಮಲದ ಕೋಮಲವಾದ ಕರ್ಣಿಕೆಯಂತೆ ಗೌರವರ್ಣವಿರಾಜಿತಳೂ ಭಕ್ತಿನಮ್ರರಾಗಿ ನಮಸ್ಕರಿಸುವ ಭಕ್ತರೆಲ್ಲರಿಗೂ ಶರಣ್ಯಳೂ ಆದ ನಿನ್ನನ್ನು ನಮಸ್ಕರಿಸುತ್ತೇನೆ. ನೀನು ಸತತವೂ ಪ್ರಸನ್ನಳಾಗಿರು.

೬೧. ಓ ಮಹಾಲಕ್ಷ್ಮಿಯೆ, ಮಹೇಂದ್ರನ ದಿವ್ಯಭವನದ ಸಂಪತ್ತೇ ನೀನಾಗಿರುವೆ. ಮೂರುಲೋಕಗಳನ್ನೂ ಉನ್ಮಾದಗೊಳಿಸುವ ಮನ್ಮಥನನ್ನು ಹೆತ್ತತಾಯಿಯೇ ನೀನು. ನೀನೇ ಚಂದ್ರನಲ್ಲಿರುವ ಬೆಳದಿಂಗಳಾಗಿರುವೆ. ಚಂದ್ರನಂತೆ ಮನೋಹರವಾದ ಮುಖವುಳ್ಳ ಓ ತಾಯೆ, ಸೂರ್ಯನಲ್ಲಿಯ ಪ್ರಭೆಯೂ ಮೂರುಲೋಕಗಳ ಬೆಳಕೂ ನೀನೇ ಆಗಿರುವೆ. ನಮಸ್ಕರಿಸುವ ಭಕ್ತವೃಂದಕ್ಕೆ ಸತತವೂ ಶರಣ್ಯಳಾಗಿರುವ ನೀನು ನನ್ನ ವಿಷಯದಲ್ಲಿ ಪ್ರಸನ್ನಳಾಗು.

೬೨. ಎಲೌ ಶ್ರೀದೇವಿಯೆ, ಅಗ್ನಿಯಲ್ಲಿ ನೆಲಸಿರುವ ದಹನಾತ್ಮಕವಾದ ಶಕ್ತಿಯೂ ನೀನೇ. ಸೃಷ್ಟಿಕರ್ತನಾದ ಚತುರ್ಮುಖನು ನಿನ್ನ ಕೃಪಾಕಟಾಕ್ಷವೀಕ್ಷಣದಿಂದಲೆ ಈ ವಿವಿಧಪ್ರಪಂಚವನ್ನು ಸೃಷ್ಟಿಮಾಡುತ್ತಾನೆ. ನಿನ್ನ ಅನುಗ್ರಹದಿಂದಲೆ ಶ್ರೀಮನ್ನಾರಾಯಣನೂ ತನ್ನ ಉದರದಲ್ಲಿ ಚತುರ್ದಶಭುವನಗಳನ್ನು ಧರಿಸುತ್ತಾನೆ. ಓ ಮಹಾಲಕ್ಷ್ಮಿ, ಇಂತಹ ನೀನು ಸಂತತವೂ

ತ್ವತ್ತ್ಯಕ್ತಮೇತದಮಲೇ ಹರತೇ ಹರೋಽಪಿ
ತ್ವಂ ಪಾಸಿ ಹಂಸಿ ವಿದಧಾಸಿ ಪರಾವರಾಽಸಿ ।
ಈಡ್ಯೋ ಬಭೂವ ಹರಿರಪ್ಯಮಲೇ ತ್ವದಾಪ್ತ್ಯಾ
ಲಕ್ಷ್ಮಿ ಪ್ರಸೀದ ಸತತಂ ನಮತಾಂ ಶರಣ್ಯೇ ॥ ೮೩ ॥
ಶೂರಃ ಸ ಏವ ಸ ಗುಣೀ ಸ ಬುಧಃ ಸ ಧನ್ಯೋ
ಮಾನ್ಯಃ ಸ ಏವ ಕುಲಶೀಲಕಲಾಕಲಾಪೈಃ ।
ಏಕಃ ಶುಚಿಃ ಸ ಹಿ ಪುಮಾನ್ಸಕಲೇಽಪಿ ಲೋಕೇ
ಯತ್ರಾಪತೇತ್ತವ ಶುಭೇ ಕರುಣಾಕಟಾಕ್ಷಃ ॥ ೮೪ ॥
ಯಸ್ಮಿನ್ವಸೇಃ ಕ್ಷಣಮಹೋ ಪುರುಷೇ ಗಜೇಽಶ್ವೇ
ಸ್ತ್ರೈಣೇ ತೃಣೇ ಸರಸಿ ದೇವಕುಲೇ ಗೃಹೇಽನ್ನೇ ।
ರತ್ನೇ ಪತತ್ರಿಣಿ ಪಶೌ ಶಯನೇ ಧರಾಯಾಂ
ಸಶ್ರೀಕಮೇವ ಸಕಲೇ ತದಿಹಾಽಸ್ತಿ ನಾಽನ್ಯತ್ ॥ ೮೫ ॥

---

ಪ್ರಣಾಮಮಾಡುವ ಭಕ್ತಜನಕ್ಕೆ ಶರಣ್ಯಳಾಗಿರುವವಳು. ನನ್ನಲ್ಲಿ ಅನುಗ್ರಹವನ್ನು ತೋರು.

೮೩. ಎಲೌ ನಿರ್ಮಲೆಯಾದ ಕಮಲಾದೇವಿಯೆ, ನೀನು ಅಧಿಷ್ಠಿಸದಿರುವ (ತೊರೆದ) ಈ ಜಗತ್ತನ್ನು ಪ್ರಳಯದಲ್ಲಿ ಮಹಾರುದ್ರನು ಸಂಹರಿಸುತ್ತಾನೆ. ಓ ಮಹಾಲಕ್ಷ್ಮಿ, ನೀನೇ ಈ ಲೋಕವನ್ನು ಪರಿಪಾಲಿಸಿ ಮುಗಿಸುವೆಯಲ್ಲದೆ ಇದನ್ನು ಮೊದಲು ಸೃಷ್ಟಿಸಿದವಳೂ ನೀನೇ ಆಗಿರುವೆ. ಸ್ಥೂಲ ಸೂಕ್ಷ್ಮಗಳಾದ ಕಾರ್ಯಕಾರಣಗಳ ಸ್ವರೂಪವುಳ್ಳವಳಾಗಿ, ಸ್ವಾಧೀನವಾದ ಸ್ವಸ್ವರೂಪದಿಂದ ಬೆಳಗುತ್ತಿರುವವಳು ನೀನು. ಓ ಲಕ್ಷ್ಮಿಯೆ, ನಿನ್ನನ್ನು ಪಡೆದುದರಿಂದ ಆ ಮಹಾವಿಷ್ಣುವು ಜಗತ್ಪೂಜ್ಯನಾದನು. ಪ್ರಣತಶರಣ್ಯೆಯಾದ ಓ ತಾಯೆ, ನನ್ನಲ್ಲಿ ಅನುಗ್ರಹಮಾಡು.

೮೪. ಓ ಮಂಗಳಾಂಗಿ, ನಿನ್ನ ಕೃಪಾಕಟಾಕ್ಷವು ಯಾವನ ಮೇಲೆ ಬೀಳುವುದೋ ಅವನೇ ಸದ್ಗುಣವಂತನು. ಪಂಡಿತನೂ ಪುಣ್ಯಾತ್ಮನೂ ಮಾನ್ಯನೂ ಕುಲಶೀಲ ಚತುಷ್ಷಷ್ಟಿಕಲಾ ಸಮನ್ವಿತನೂ ಅವನೇ. ಅವನೊಬ್ಬನೇ ಪರಿಶುದ್ಧನು. ಅಲ್ಲದೆ, ಅವನೊಬ್ಬನೇ ಈ ಲೋಕದಲ್ಲೆಲ್ಲ ಉತ್ತಮ ಪುರುಷನೆನಿಸುವವನು. ಶೂರನೂ ಅವನೇ. ಓ ಮಹಾಲಕ್ಷ್ಮಿ, ಇಂತಹ ನೀನು ಸಂತತವೂ ಮಣಿಯುವವರಿಗೆಲ್ಲ ಶರಣ್ಯಳಾಗಿರುವೆ. ತಾಯಿ! ನನ್ನಲ್ಲಿ ಪ್ರಸನ್ನಳಾಗು.

೮೫. ಎಲೌ ಮಹಾಲಕ್ಷ್ಮಿಯೆ, ನೀನು ಕ್ಷಣಮಾತ್ರ ಆಶ್ರಯಿಸುವ ಪುರುಷನಾಗಲಿ ಗಜಾಶ್ವಗಳಾಗಲಿ ಸ್ತ್ರೀಯಾಗಲಿ ತೃಣವಾಗಲಿ ಸರಸ್ಸಾಗಲಿ ದೇವಾಲಯವಾಗಲಿ ವಾಸಗೃಹವಾಗಲಿ ಅನ್ನ ರತ್ನ ಪಕ್ಷಿ ಪಶು ಶಯನಗಳೇ ಆಗಲಿ

ತ್ವತ್ಸ್ಪೃಷ್ಟಮೇವ ಸಕಲಂ ಶುಚಿತಾಂ ಲಭೇತ
ತ್ವತ್ತ್ಯಕ್ತಮೇವ ಸಕಲಂ ತ್ವಶುಚೀಹ ಲಕ್ಷ್ಮಿ ।
ತ್ವನ್ನಾಮ ಯತ್ರ ಚ ಸುಮಂಗಲಮೇವ ತತ್ರ
ಶ್ರೀ ವಿಷ್ಣುಪತ್ನಿ ಕಮಲೇ ಕಮಲಾಲಯೇಽಪಿ ॥ ೮೬ ॥
ಲಕ್ಷ್ಮೀಂ ಶ್ರಿಯಂ ಚ ಕಮಲಾಂ ಕಮಲಾಲಯಾಂ ಚ
ಪದ್ಮಾಂ ರಮಾಂ ನಲಿನಯುಗ್ಮಕರಾಂ ಚ ಮಾಂ ಚ ।
ಕ್ಷೀರೋದಜಾಮಮೃತಕುಂಭಕರಾಮಿರಾಂ ಚ
ವಿಷ್ಣುಪ್ರಿಯಾಮಿತಿ ಸದಾ ಜಪತಾಂ ಕ್ವ ದುಃಖಂ ॥ ೮೭ ॥
ಇತಿ ಸ್ತುತ್ವಾ ಭಗವತೀಂ ಮಹಾಲಕ್ಷ್ಮೀಂ ಹರಿಪ್ರಿಯಾಂ ।
ಪ್ರಣನಾಮ ಸಪತ್ನೀಕಃ ಸಾಽಷ್ಟಾಂಗಂ ದಂಡವನ್ಮುನಿಃ ॥ ೮೮ ॥
ಶ್ರೀರುವಾಚ :—
ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಮಿತ್ರಾವರುಣಸಂಭವ ।
ಪತಿವ್ರತೇ ತ್ವಮುತ್ತಿಷ್ಠ ಲೋಪಾಮುದ್ರೇ ಶುಭವ್ರತೇ ॥ ೮೯ ॥

---

ಈ ಲೋಕದಲ್ಲಿ ಅವುಗಳನ್ನು ಬಿಟ್ಟು ಸಂಪದ್ಯುಕ್ತಗಳಾದುವು ಬೇರಾವುವೂ ಇರುವುದಿಲ್ಲ.

೮೬. ಶ್ರೀಮನ್ಮಹಾವಿಷ್ಣುವಿನ ಮಡದಿಯಾದ ಓ ಕಮಲಾದೇವಿಯೆ, ಈ ಲೋಕದಲ್ಲಿ ನಿನ್ನಿಂದ ಅಧಿಷ್ಠಿತವಾದ ಸಮಸ್ತ ಪದಾರ್ಥಗಳೂ ಪವಿತ್ರಗಳೆನಿಸುತ್ತವೆ. ಓ ಕಮಲವಾಸಿನಿ, ನೀನು ತೊರೆದವುಗಳೆಲ್ಲವೂ ಅಪವಿತ್ರಗಳೇ ಸರಿ. ಎಲ್ಲಿ ನಿನ್ನ ಹೆಸರು ವಿರಾಜಿಸುತ್ತಿರುವುದೊ ಅಲ್ಲಿ ಯಾವಾಗಲೂ ಸುಮಂಗಲವೇ ತಾಂಡವವಾಡುತ್ತಿರುತ್ತದೆ.

೮೭. ಲಕ್ಷ್ಮೀ, ಶ್ರೀಕಮಲೆ, ಕಮಲಾಲಯೆ, ಪದ್ಮೆ, ರಮಾ, ನಲಿನಯುಗ್ಮಕರೆ (ಎರಡು ಕೈಗಳಲ್ಲಿ ಕಮಲಗಳನ್ನು ಧರಿಸಿರುವವಳು), ಮಾ, ಕ್ಷೀರಸಾಗರಕನ್ಯೆ, ಅಮೃತಕುಂಭಕರೆ, ಇರೆ, ವಿಷ್ಣುಪ್ರಿಯೆ, ಎಂಬ ಈ ದಿವ್ಯನಾಮಗಳನ್ನು ಹೇಳಿಕೊಂಡು ಜಪಿಸುತ್ತಿರುವವರಿಗೆ ದುಃಖವೆಲ್ಲಿಯದು ?''

೮೮ ಎಲೈ ಸೂತಪುರಾಣಿಕನೆ, ಈ ಪ್ರಕಾರವಾಗಿ ಆ ಅಗಸ್ತ್ಯಮಹಾಮುನೀಶ್ವರನು ತನ್ನ ಮಡದಿಯಾದ ಲೋಪಾಮುದ್ರಾದೇವಿಯೊಡಗೂಡಿ, ಹರಿಪ್ರಿಯೆಯೂ ಭಗವತಿಯೂ ಆದ ಆ ಮಹಾಲಕ್ಷ್ಮಿಯನ್ನು ಸ್ತುತಿಸಿ ಸಾಷ್ಟಾಂಗದಂಡಪ್ರಣಾಮವನ್ನು ಮಾಡಿದನು.

೮೯–೯೦. ಶ್ರೀದೇವಿಯು ಹೇಳುತ್ತಾಳೆ:—'' ಎಲೈ ಮಿತ್ರಾವರುಣನ ಮಗನಾದ ಅಗಸ್ತ್ಯಮುನಿಯೆ! ಏಳು, ಮೇಲಕ್ಕೇಳು. ಮಂಗಳಕರವಾದ ಪಾತಿವ್ರತ್ಯವ್ರತವುಳ್ಳ ಎಲೌ ಲೋಪಾಮುದ್ರೆ, ಏಳು. ಮುನಿಯೆ,'ನೀನೆಸಗಿದ

ಸ್ತುತ್ಯಾಽನಯಾ ಪ್ರಸನ್ನಾಽಹಂ ವ್ರಿಯತಾಂ ಯದ್ಧೃದೀಪ್ಸಿತಂ ।
ರಾಜಪುತ್ರಿ ಮಹಾಭಾಗೇ ತ್ವಮಿಹೋಪವಿಶಾಽಮಲೇ ॥ ೯೦ ॥
ತ್ವದಂಗಲಕ್ಷಣೈರೇಭಿಃ ಸುಪವಿತ್ರೈಶ್ಚ ತೇ ವ್ರತೈಃ ।
ನಿರ್ವಾಪಯಿತುಮಿಚ್ಛಾಮಿ ದೈತ್ಯಾಽಸ್ತ್ರೈಸ್ತಾಪಿತಾಂ ತನುಂ ॥ ೯೧ ॥
ಇತ್ಯುಕ್ತ್ವಾ ಮುನಿಪತ್ನೀಂ ತಾಂ ಸಮಾಲಿಂಗ್ಯ ಹರಿಪ್ರಿಯಾ ।
ಅಲಂಚಕಾರ ಚ ಪ್ರೀತ್ಯಾ ಬಹು ಸೌಭಾಗ್ಯಮಂಡನೈಃ ॥ ೯೨ ॥
ಪುನರಾಹ ಮುನೇ ಜಾನೇ ತವ ಹೃತ್ತಾಪಕಾರಣಂ ।
ಸಚೇತನಂ ದುನೋತ್ಯೇವ ಕಾಶೀವಿಶ್ಲೇಷಜೋಽನಲಃ ॥ ೯೩ ॥
ಯದಾ ಸ ದೇವೋ ವಿಶ್ವೇಶೋ ಮಂದರಂ ಗತವಾನ್ಪುರಾ ।
ತದಾ ಕಾಶೀವಿಯೋಗೇನ ಜಾತಾ ತಸ್ಯೇದೃಶೀ ದಶಾ ॥ ೯೪ ॥
ತತ್ಪ್ರವೃತ್ತಿಂ ಪುನರ್ಜ್ಞಾತುಂ ಬ್ರಹ್ಮಾಣಂ ಕೇಶವಂ ಗಣಾನ್ ।
ಗಣೇಶ್ವರಂ ಚ ದೇವಾಂಶ್ಚ ಪ್ರೇಷಯಾಮಾಸ ಶೂಲಧೃಕ್ ॥ ೯೫ ॥

---

ಈ ಸ್ತುತಿಯಿಂದ ನಾನು ಪ್ರಸನ್ನಳಾಗಿದ್ದೇನೆ. ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ. ಎಲೌ ರಾಜಪುತ್ರಿಯಾದ ಲೋಪಾಮುದ್ರೆಯೆ, ಮಹಾ ಪುಣ್ಯಶಾಲಿನಿಯೂ ಅಮಲೆಯೂ ಆದ ನೀನು ಇಲ್ಲಿ ಕುಳಿತುಕೊ.

೯೧–೯೨. ನಿನ್ನ ಈ ಅಂಗ ಲಕ್ಷಣಗಳಿಂದಲೂ ಪರಮಪವಿತ್ರಗಳಾದ ನಿನ್ನ ವ್ರತಾಚರಣೆಗಳಿಂದಲೂ ಕೂಡಿದ ಮೈಯ್ಯನ್ನಪ್ಪಿಕೊಂಡು ದೈತ್ಯಾಸ್ತ್ರಗಳಿಂದ ತಪಿಸಿ ಹೋಗಿರುವ ಈ ನನ್ನ ದೇಹವನ್ನು ಶಾಂತಗೊಳಿಸಿಕೊಳ್ಳಬಯಸುವೆನು.'' ಎಲೈ ಸೂತಮುನಿಯೆ, ಆ ಮಹಾಲಕ್ಷ್ಮಿಯು ಇಂತು ನುಡಿದ ತರುವಾಯ ಅಗಸ್ತ್ಯಮುನಿ ಪತ್ನಿಯಾದ ಆ ಲೋಪಾಮುದ್ರೆಯನ್ನು ಆಲಿಂಗಿಸಿಕೊಂಡು, ಆಕೆಯ ತೋಳುಗಳಿಗೆ ಮಾಂಗಲ್ಯಮಂಡನಗಳಿಂದ ಅಲಂಕಾರವನ್ನೆಸಗಿದಳು.

೯೩. ಇದಾದ ಬಳಿಕ ಆ ದೇವಿಯು ಅಗಸ್ತ್ಯಮುನಿಯನ್ನು ಕುರಿತು ಮತ್ತೆ ಹೀಗೆಂದಳು :—''ಓ ಮುನಿಯೆ, ನಿನ್ನ ಹೃದಯದ ಸಂತಾಪಕ್ಕೆ ಕಾರಣವನ್ನು ನಾನು ಬಲ್ಲೆ. ಕಾಶೀವಿರಹದಿಂದ ಉದಿಸಿದ ಬೆಂಕಿಯು ಚೇತನವನ್ನೊಳಗೊಂಡಿರುವ ಎಲ್ಲ ಪ್ರಾಣಿಗಳನ್ನೂ ನೋಯಿಸದೆ ಬಿಡದು.

೯೪–೯೫. ಎಲೈ ಮುನಿಯೆ, ಪೂರ್ವದಲ್ಲಿ ಸಮುದ್ರಮಥನಕ್ಕಾಗಿ ಆ ವಿಶ್ವೇಶ್ವರನು ಮಂದರ ಪರ್ವತಕ್ಕೆ ಹೋದಂದಿನಿಂದಲೂ ಅವನಿಗೇ ಈ ಕಾಶೀಕ್ಷೇತ್ರದ ವಿಯೋಗದ ಸಲುವಾಗಿ ನಿನಗೆ ಪ್ರಕೃತದಲ್ಲಿ ಪ್ರಾಪ್ತವಾಗಿರುವ ದಶೆಯು ಬಂದಿದ್ದಿತು. ಆತನು ಮಂದರವನ್ನು ಸೇರಿಯಾದ ಮೇಲೆ, ಕಾಶೀ ಪಟ್ಟಣದ

ತೇ ಚ ಕಾಶೀಗುಣಾನ್ಸರ್ವೇ ವಿಚಾರ್ಯ ಚ ಪುನಃಪುನಃ ।
ವ್ರಜಂತ್ಯದ್ಯಾಪಿ ನ ಕ್ವಾಽಪಿ ತಾದೃಗಸ್ತಿ ಕ್ವವಾ ಪುರೀ ॥ ೯೬ ॥
ಇತಿ ಶ್ರುತ್ವಾಽಥ ಸ ಮುನಿಃ ಪ್ರತ್ಯುವಾಚ ಶ್ರಿಯಂ ತತಃ ।
ಪ್ರಣಿಪತ್ಯ ಮಹಾಭಾಗೋ ಭಕ್ತಿಗರ್ಭಮಿದಂ ವಚಃ ॥ ೯೭ ॥
ಯದಿ ದೇಯೋ ವರೋ ಮಹ್ಯಂ ವರಯೋಗ್ಯೋಽಸ್ಮ್ಯಹಂ ಯದಿ ।
ತದಾ ವಾರಾಣಸೀಪ್ರಾಪ್ತಿಃ ಪುನರಸ್ತ್ವೇಷ ಮೇ ವರಃ ॥ ೯೮ ॥
ಯೇ ಪಠಿಷ್ಯಂತಿ ಚ ಸ್ತೋತ್ರಂ ತ್ವದ್ಭಕ್ತ್ಯಾ ಮತ್ಕೃತಂ ಸದಾ ।
ತೇಷಾಂ ಕದಾಚಿತ್ಸಂತಾಪೋ ಮಾಽಸ್ತು ಮಾಽಸ್ತು ದರಿದ್ರತಾ ॥ ೯೯ ॥
ಮಾಽಸ್ತು ಚೇಷ್ಟವಿಯೋಗಶ್ಚ ಮಾಽಸ್ತು ಸಂಪತ್ತಿಸಂಕ್ಷಯಃ ।
ಸರ್ವತ್ರ ವಿಜಯಶ್ಚಾಽಸ್ತು ವಿಚ್ಛೇದೋ ಮಾಽಸ್ತು ಸಂತತೇಃ ॥ ೧೦೦ ॥

ಶ್ರೀರುವಾಚ :—

ಏವಮಸ್ತು ಮುನೇ ಸರ್ವಂ ಯತ್ತ್ವಯಾ ಪರಿಭಾಷಿತಂ ।
ಏತತ್ ಸ್ತೋತ್ರಸ್ಯ ಪಠನಂ ಮಮ ಸಾನ್ನಿಧ್ಯಕಾರಣಂ ॥ ೧೦೧ ॥

---

ಯೋಗಕ್ಷೇಮವನ್ನು ತಿಳಿಯಲೋಸುಗ ಬ್ರಹ್ಮನನ್ನೂ, ಕೇಶವನನ್ನೂ, ಶಿವಗಣಗಳನ್ನೂ, ಮಗನಾದ ಗಣೇಶ್ವರನನ್ನೂ, ಇತರ ದೇವತೆಗಳನ್ನೂ ಕಳುಹಿಸಿಕೊಟ್ಟನು.

೯೬. ಅವರು ಕಾಶೀಪಟ್ಟಣಕ್ಕೆ ಬಂದು ಅದರ ಯೋಗಕ್ಷೇಮವನ್ನು ತಿಳಿದುಕೊಂಡು, ಪರಮೇಶ್ವರನಿಗೆ ಆಗಿಂದಾಗ್ಗೆ ತಿಳಿಸುತ್ತಿದ್ದರು. ಇಂಥ ಮಹಾಪಟ್ಟಣವು ಜಗತ್ತಿನಲ್ಲಿ ಎಲ್ಲಿಯಾದರೂ ಇರುವುದೆ ?''

೯೭. ಮಹಾಭಾಗ್ಯಶಾಲಿಯಾದ ಅಗಸ್ತ್ಯಮುನಿಯು ಸಾಕ್ಷಾತ್ ಲಕ್ಷ್ಮೀದೇವಿಯು ನುಡಿದ ಈ ಮಾತುಗಳನ್ನು ಕೇಳಿ, ಭಕ್ತಿಭರಿತವಾಗಿ ಆಕೆಯನ್ನು ಕುರಿತು ಹೀಗೆಂದನು.

೯೮. ''ಓ ಲಕ್ಷ್ಮೀದೇವಿಯೆ, ನನಗೆ ವರವನ್ನು ಕೊಡುವೆಯಾದರೆ, ನಾನು ಆ ವರವನ್ನು ಪಡೆಯಲು ಯೋಗ್ಯನೇ ಆಗಿದ್ದಲ್ಲಿ ನನಗೆ ಮತ್ತೆ ಕಾಶೀಕ್ಷೇತ್ರವಾಸವು ದೊರೆಯಲಿ. ಇದೇ ನೀನು ನನಗೆ ಕೊಡುವ ವರವಾಗಲಿ.

೯೯. ಯಾರು ನಿನ್ನಲ್ಲಿನ ಭಕ್ತಿಯಿಂದ ನಾನು ಹೇಳಿರುವ ನಿನ್ನ ಸ್ತೋತ್ರವನ್ನು ಪಠನಮಾಡುತ್ತಾರೆಯೊ ಅವರಿಗೆ ದುಃಖವೆಂದಿಗೂ ಒದಗದಿರಲಿ. ಎಂದಿಗೇ ಆದರೂ ದಾರಿದ್ರ್ಯವಿಲ್ಲದಿರಲಿ.

೧೦೦. ಇಷ್ಟಜನರ ನಿಯೋಗವಾಗಲಿ ಸಂಪದ್ವಿನಾಶವಾಗಲಿ ಉಂಟಾಗದೆ ಎಲ್ಲೆಡೆಗಳಲ್ಲಿಯೂ ವಿಜಯವೇ ಲಭಿಸಿ, ಸಂತಾನಪ್ರಾಪ್ತಿಯಾಗಲಿ.''

೧೦೧. ಶ್ರೀದೇವಿಯು ಹೇಳುತ್ತಾಳೆ—''ಎಲೈ ಮುನಿಯೆ, ನೀನು ಹೇಳಿ

ಅಲಕ್ಷ್ಮೀಃ ಕಾಲಕರ್ಣೀ ಚ ತದ್ಗೇಹೇ ನ ವಿಶೇತ್ಕ್ವಚಿತ್ ।
ಗಜಾಽಶ್ವಪಶುಶಾಂತ್ಯರ್ಥನೇತತ್ಸ್ತೋತ್ರಂ ಸದಾ ಜಪೇತ್ ॥ ೧೦೨ ।
ಬಾಲಗ್ರಹಾಽಭಿಭೂತಾನಾಂ ಬಾಲಾನಾಂ ಶಾಂತಿಕೃತ್ಪರಂ ।
ಭೂರ್ಜಪತ್ರೇ ಲಿಖಿತ್ವಾ ತು ಬಧ್ನೀಯಾತ್ಕಂಠದೇಶತಃ ॥ ೧೦೩ ।
ಇದಂ ಬೀಜರಹಸ್ಯಂ ಮೇ ರಕ್ಷಣೀಯಂ ಪ್ರಯತ್ನತಃ ।
ಶ್ರದ್ಧಾಹೀನೇ ನ ದಾತವ್ಯಂ ನ ದೇಯಂ ಚಾಽಶುಚೌ ಕ್ವಚಿತ್ ॥ ೧೦೪ ।
ಅನ್ಯಚ್ಚ ಶೃಣು ವಿಪ್ರೇಂದ್ರ ಭವಿಷ್ಯೇ ದ್ವಾಪರೇ ಭವಾನ್ ।
ಏಕೋನತ್ರಿಂಶಕೇ ಬ್ರಹ್ಮನ್ ಸತ್ಯಂ ವ್ಯಾಸೋ ಭವಿಷ್ಯತಿ ॥ ೧೦೫ ।
ತದಾ ವಾರಾಣಸೀಂ ಪ್ರಾಪ್ಯ ಸಿದ್ಧಿಂ ಪ್ರಾಪ್ಸ್ಯಸ್ಯಭೀಪ್ಸಿತಾಂ ।
ವ್ಯಸ್ಯ ವೇದಾನ್ ಪುರಾಣಾನಿ ಧರ್ಮಾನ್ಸಮುಪದಿಶ್ಯ ಚ ॥ ೧೦೬ ।

---

ದಂತೆಯೇ ಆಗಲಿ. ನೀನು ಈಗ ನುಡಿದುದೆಲ್ಲವೂ ಉಂಟಾಗುತ್ತದೆ. ನೀನೆಸಗಿ ಈ ಸೋತ್ರಪಠನವೇ ನಾನು ಸ್ಥಿರವಾಗಿ ನೆಲಸುವುದಕ್ಕೆ ಕಾರಣವಾಗುತ್ತದೆ.

೧೦೨. ಈ ಸ್ತೋತ್ರವನ್ನು ಪಠನಮಾಡುವವನ ಮನೆಯಲ್ಲಿ ದರಿದ್ರಲಕ್ಷ್ಮಿಯಾಗಲಿ ರಾಕ್ಷಸಾದಿಗಳ ಬಾಧೆಯಾಗಲಿ ಇರುವುದಿಲ್ಲ. ಆನೆ, ಕುದುರೆ ಮತ್ತು ಇತರ ಪಶುಗಳ ಶಾಂತ್ಯರ್ಥವಾಗಿ ಈ ಸ್ತೋತ್ರವನ್ನು ಯಾವಾಗಲೂ ಜಪಿ ಬೇಕು.

೧೦೩. ಬಾಲಗ್ರಹದ ಪೀಡೆಗೆ ಒಳಗಾಗಿರುವ ಮಕ್ಕಳಿಗೆ ಶಾಂ ಯುಂಟಾಗಲೋಸುಗ ಈ ಸ್ತೋತ್ರವನ್ನು ಭುಜಪತ್ರಿಯಲ್ಲಿ ಬರೆದು ಕೊರಳಿ ಕಟ್ಟತಕ್ಕದ್ದು.

೧೦೪ ಈ ನನ್ನ ಶ್ರೀಬೀಜರಹಸ್ಯವನ್ನು ಪ್ರಯತ್ನಪೂರ್ವಕವಾಗಿ ಕಾಪಾ ತಕ್ಕದ್ದು. ಶ್ರದ್ಧೆಯಿಲ್ಲದವನಿಗೂ ಮಲಿನಾತ್ಮನಾದವನಿಗೂ ಮಂತ್ರ ಬೀಜಾಕ್ಷ ನ್ಯಾಸ ಪೂರ್ಣವಾಗಿರುವ ಈ ಸ್ತೋತ್ರವನ್ನು ಉಪದೇಶಮಾಡಬಾರದು.

೧೦೫. ಅಯ್ಯಾ ವಿಪ್ರೇಂದ್ರನೆ, ಇನ್ನೊಂದು ವಿಷಯವನ್ನು ಹೇಳುತ್ತೇನೆ ಕೇಳು. ಮುಂದೆ ಬರುವ ಮೂವತ್ತೊಂದನೆಯ ದ್ವಾಪರಯುಗದಲ್ಲಿ ನೀನ ವ್ಯಾಸನಾಗಿ ಅವತರಿಸುತ್ತೀಯೆ, ಇದು ಸತ್ಯವಾದದ್ದು.

೧೦೬. ಆಗ್ಗೆ ನೀನು ಮತ್ತೆ ವಾರಾಣಸೀಕ್ಷೇತ್ರವನ್ನು ಸೇರಿ, ಅಲ್ಲಿಯೆ ವಾಸಮಾಡಿಕೊಂಡಿದ್ದು, ನಿನಗೆ ಅಭಿಮತವಾದ ಇಷ್ಟಾರ್ಥಸಿದ್ಧಿಯನ ಪಡೆಯುತ್ತೀಯೆ. ವೇದಗಳನ್ನು ವಿಭಾಗಮಾಡಿ, ಅಷ್ಟಾದಶ ಪುರಾ ಗಳನ್ನೂ, ಸಾಮಯಾಚಾರಿಕಗಳಾದ ಧರ್ಮಗಳನ್ನೂ ಉಪದೇಶಮಾಡ ತ್ತೀಯೆ.

ಹಿತಂ ಚ ತೇ ವದಾಮ್ಯೇಕಂ ಸಾಂಪ್ರತಂ ತತ್ಸಮಾಚರ ।
ಪಶ್ಯ ಕಿಂಚಿದಿತೋ ಗತ್ವಾ ಸ್ಕಂದಮಗ್ರೇ ಸ್ಥಿತಂ ಪ್ರಭುಂ ॥ ೧೦೭ ॥
ವಾರಾಣಸ್ಯಾ ರಹಸ್ಯಂ ಚ ಯಥಾವಚ್ಛಿವಭಾಷಿತಂ ।
ತವ ತುಷ್ಟಿಕರಂ ಬ್ರಹ್ಮನ್ಕಥಯಿಷ್ಯತಿ ಷಣ್ಮುಖಃ ॥ ೧೦೮ ॥
ಇತಿ ಲಬ್ಧ್ವಾ ವರಂ ಸೋಽಥ ಮಹಾಲಕ್ಷ್ಮೀಂ ಪ್ರಣಮ್ಯ ಚ ।
ಯಯಾವಗಸ್ತಿರ್ಯತ್ರಾಽಸ್ತಿ ಕುಮಾರಃ ಶಿಖಿವಾಹನಃ ॥ ೧೦೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಅಗಸ್ತ್ಯಪ್ರಸ್ಥಾನಂ"
ನಾಮ ಪಂಚಮೋಽಧ್ಯಾಯಃ

---

೧೦೭. ನಿನಗೆ ಪ್ರಕೃತದಲ್ಲಿ ಹಿತವಾದ ಒಂದು ಸಂಗತಿಯನ್ನು ಹೇಳುತ್ತೇನೆ. ಅದರಂತೆ ನಡೆ ಇಲ್ಲಿಂದ ಸ್ವಲ್ಪ ಮುಂದಕ್ಕೆ ಹೋಗಿ ಅಲ್ಲಿ ನೆಲಸಿರುವ ಪ್ರಭುವಾದ ಸ್ಕಂದಸ್ವಾಮಿಯನ್ನು ಸಂದರ್ಶನಮಾಡು.

೧೦೮. ಸಾಕ್ಷಾತ್ ಪರಮೇಶ್ವರನೇ ಅಪ್ಪಣೆಕೊಡಿಸಿರುವುದೂ ನಿನಗೆ ಸಂತೋಷವನ್ನುಂಟುಮಾಡುವುದೂ ಆದ ವಾರಾಣಸೀಕ್ಷೇತ್ರರಹಸ್ಯವನ್ನು ಆತನು ನಿನಗೆ ಹೇಳುತ್ತಾನೆ"

೧೦೯. ಮಹಾಲಕ್ಷ್ಮಿಯಿಂದ ಈ ರೀತಿ ವರವನ್ನು ಪಡೆದಾದಮೇಲೆ ಅಗಸ್ತ್ಯಮುನಿಯು ಆಕೆಗೆ ಮಣಿದು ಅಲ್ಲಿಂದ ಬೀಳ್ಕೊಂಡು, ಶಿಖಿವಾಹನನಾದ ಷಣ್ಮುಖಸ್ವಾಮಿಯು ನೆಲಸಿದ್ದೆಡೆಗೆ ಹೊರಟನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಅಗಸ್ತ್ಯಪ್ರಸ್ಥಾನ"ವೆಂಬ ಐದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷಷ್ಠೋಽಧ್ಯಾಯಃ

## ತೀರ್ಥಾಽಧ್ಯಾಯವರ್ಣನಂ

ಪಾರಾಶರ್ಯ ಉವಾಚ :—

ಶೃಣು ಸೂತ ಮಹಾಭಾಗ ಕಥಾಂ ಶ್ರುತಿಸಹೋದರಾಂ ।
ಯಾಂ ವೈ ಹೃದಿ ನಿಧಾಯೇಹ ಪುರುಷಃ ಪುರುಷಾರ್ಥಭಾಕ್ ॥ ೧ ॥
ತತಃ ಶ್ರೀದರ್ಶನಾನಂದಸುಧಾಧಾರಾಧುನೀಂ ಮುನಿಃ ।
ಅವಗಾಹ್ಯ ಸಪತ್ನೀಕಃ ಪರಾಂ ಮುದಮವಾಪಸಃ ॥ ೨ ॥
ವಹ್ನಿಕುಂಡಸಮುದ್ಭೂತ ಸೂತ ನಿರ್ಮಲಮಾನಸ ।
ಶೃಣುಷ್ವೈಕಂ ಪುರಾವಿದ್ಭಿರ್ಭಾಷಿತಂ ಯತ್ಸುಭಾಷಿತಂ ॥ ೩ ॥
ಪರೋಪಕರಣಂ ಯೇಷಾಂ ಜಾಗರ್ತಿ ಹೃದಯೇ ಸತಾಂ ।
ನಶ್ಯಂತಿ ವಿಪದಸ್ತೇಷಾಂ ಸಂಪದಃ ಸ್ಯುಃ ಪದೇ ಪದೇ ॥ ೪ ॥
ತೀರ್ಥಸ್ನಾನೈರ್ನ ಸಾ ಶುದ್ಧಿರ್ಬಹುದಾನೈರ್ನ ತತ್ಫಲಂ ।
ತಪೋಭಿರುಗ್ರೈಸ್ತನ್ನಾಽಪ್ಯಮುಪಕೃತ್ಯಾ ಯದಾಪ್ಯತೇ ॥ ೫ ॥

---

## ಕನ್ನಡದ ಅನುವಾದ

### ತೀರ್ಥಾಧ್ಯಾಯವರ್ಣನ

೧. ವ್ಯಾಸನು ಹೇಳುತ್ತಾನೆ.—ಎಲೈ ಮಹಾಭಾಗನಾದ ಸೂತಮುನಿಯೆ, ವೇದಕ್ಕೆ ಸಮಾನವಾದುದೂ ಶ್ರದ್ಧೆಯಿಂದ ಕೇಳಿ ಮನಸ್ಕರಿಸುವ ಪುರುಷನಿಗೆ ಧರ್ಮಾರ್ಥಕಾಮಮೋಕ್ಷಗಳನ್ನು ದಯೆಗೆಯ್ಯುವುದೂ ಆದ ಈ ಕಥೆಯನ್ನು ಕೇಳು.

೨. ಇದಾದ ಬಳಿಕ ಆ ಅಗಸ್ತ್ಯಮುನೀಶ್ವರನು ಶ್ರೀದೇವಿಯ ದರ್ಶನದಿಂದುಂಟಾದ ಅಮೃತನದೀಪ್ರವಾಹದಲ್ಲಿ ಮಡದಿಯೊಡನೆ ಮಿಂದು, ನಿರತಿಶಯವಾದ ಆನಂದವನ್ನು ಪಡೆದನು.

೩. ಅಯ್ಯಾ ಸೂತನೆ, ವಹ್ನಿಕುಂಡದಲ್ಲಿ ಉದಿಸಿದವನೂ ನಿರ್ಮಲಚಿತ್ತವುಳ್ಳವನೂ ಆದ ನೀನು ಪೌರಾಣಿಕರು ಹೇಳುವ ಈ ಸುಭಾಷಿತವನ್ನು ಏಕಾಗ್ರಚಿತ್ತದಿಂದ ಕೇಳು.

೪. "ಪರೋಪಕಾರದಲ್ಲಿಯೇ ಮನಸ್ಸು ಎಚ್ಚರವಾಗಿರುವ ಸತ್ಪುರುಷರಿಗೆ ಸಮಸ್ತ ವಿಪತ್ತುಗಳೂ ಕಳೆದು, ಅಡಿಗಡಿಗೂ ಸಂಪತ್ತುಗಳೇ ಲಭಿಸುತ್ತವೆ.

೫. ಪರೋಪಕಾರಕ್ಕಾಗಿ ಯಾವುದು ಕೊಡಲ್ಪಡುತ್ತದೆಯೊ ಅದಕ್ಕೆ ಸಮಾನವಾದ ಫಲವು ತೀರ್ಥಸ್ನಾನಗಳಿಂದಾಗಲಿ ಅನೇಕ ವಿಧವಾದ ದಾನ

ಪರೋಪಕೃತ್ಯಾ ಯೋ ಧರ್ಮೋ ಧರ್ಮೋ ದಾನಾದಿಸಂಭವಃ ।
ಏಕತ್ರ ತುಲಿತೌ ಧಾತ್ರಾ ತತ್ರ ಪೂರ್ವೋಽಭವದ್ಗುರುಃ ॥ ೬ ॥
ಪರಿನಿರ್ಮಥ್ಯ ವಾಗ್ಜಾಲಂ ನಿರ್ಣೀತಮಿದಮೇವ ಹಿ ।
ನೋಪಕಾರಾತ್ಪರೋ ಧರ್ಮೋ ನಾಽಪಕಾರಾದಘಂ ಪರಂ ॥ ೭ ॥
ಉಪಕರ್ತುರಗಸ್ತ್ಯಸ್ಯ ಜಾತಮೇತನ್ನಿದರ್ಶನಂ ।
ಕ್ವ ತಾದೃಕ್ಕಾಶಿಜಂ ದುಃಖಂ ಕ್ವ ತಾದೃಕ್ ಶ್ರೀಮುಖೇಕ್ಷಣಂ ॥ ೮ ॥
ಕರಿಕರ್ಣಾಗ್ರಚಪಲಂ ಜೀವಿತಂ ವಿವಿಧಂ ವಸು ।
ತಸ್ಮಾತ್ಪರೋಪಕರಣಂ ಕಾರ್ಯಮೇಕಂ ವಿಪಶ್ಚಿತಾ ॥ ೯ ॥
ಯಲ್ಲಕ್ಷ್ಮೀನಾಮಮಾತ್ರಾಪ್ತ್ಯಾ ನರೋ ನೋ ಯಾತಿ ಕುತ್ರಚಿತ್ ।
ಸಾಕ್ಷಾತ್ಸಮೀಕ್ಷ್ಯ ತಾಂ ಲಕ್ಷ್ಮೀಂ ಕೃತಕೃತ್ಯೋಽಭವನ್ಮುನಿಃ ॥ ೧೦ ॥
ಗಚ್ಛನ್ಯದೃಚ್ಛಯಾ ಸೋಽಥ ದೂರಾಚ್ಛ್ರೀಶೈಲಮೈಕ್ಷತ ।
ಯತ್ರ ಸಾಕ್ಷಾನ್ನಿವಸತಿ ದೇವಃ ಶ್ರೀತ್ರಿಪುರಾಂತಕಃ ॥ ೧೧ ॥

---

ಗಳಿಂದಾಗಲಿ ಉಗ್ರವಾದ ತಪಸ್ಸುಗಳಿಂದಾಗಲಿ ಪಡೆಯಲಾಗುವುದಿಲ್ಲ. ಮನಶ್ಶುದ್ಧಿಯೂ ಉಂಟಾಗುವುದಿಲ್ಲ.''

೬. ಪೂರ್ವದಲ್ಲಿ ವಿಧಾತೃವು ಪರೋಪಕಾರದಿಂದ ಲಭಿಸುವ ಪುಣ್ಯವನ್ನೂ ದಾನಾದಿ ಸತ್ಕರ್ಮಗಳಿಂದ ಲಭಿಸುವ ಪುಣ್ಯವನ್ನೂ ತಕ್ಕಡಿಯಲ್ಲಿ ಹಾಕಿ ತೂಗಿದನು, ಆಗ ಮೊದಲಿನದೇ ಹೆಚ್ಚು ತೂಕವಾಯಿತು.

೭. ವೇದಾದಿ ಸಮಸ್ತಶಾಸ್ತ್ರಗಳನ್ನೂ ಚೆನ್ನಾಗಿ ಮಥಿಸಿ ನೋಡಿದರೆ, ಇದೇ ನಿರ್ಣಯವೆಂದು ತಿಳಿದುಬರುತ್ತದೆ. ಪರೋಪಕಾರಕ್ಕಿಂತ ಧರ್ಮವಿಲ್ಲ. ಪರಾಪಕಾರಕ್ಕಿಂತ ಮಿಗಿಲಾದ ಪಾಪವಿಲ್ಲ

೮. ಪರೋಪಕಾರಮಾಡಿದ ಅಗಸ್ತ್ಯಮುನಿಗೆ ಲಭಿಸಿದ ಮಹಾಲಕ್ಷ್ಮಿಯ ಸಂದರ್ಶನವೇ ಇದಕ್ಕೆ ನಿದರ್ಶನ. ಅಪರಿಮಿತವಾದ ಅಂಥ ಕಾಶೀವಿರಹ ದುಃಖವೆಲ್ಲಿ? ಯಾರಿಗೂ ದುರ್ಲಭವಾದ ಸಾಕ್ಷಾತ್ ಲಕ್ಷ್ಮೀದೇವಿಯ ಶುಭ ಮುಖ ದರ್ಶನವೆಲ್ಲಿ?

೯. ಆನೆಯ ಕಿವಿಯಂತೆ ಮಾನವನ ಈ ಬಾಳೆಂಬುದೂ, ಸಮಸ್ತ ಸಂಪತ್ತುಗಳೆಂಬುದೂ ತೀರಾ ಚಂಚಲವಾದುವು ಆದುದರಿಂದ ಪಂಡಿತ ನಾದವನು ಪರೋಪಕಾರವೆಂಬ ಸತ್ಕರ್ಮವನ್ನು ಆಚರಿಸತಕ್ಕದ್ದು.

೧೦. ಯಾವ ಮಹಾಲಕ್ಷ್ಮಿಯ ನಾಮಸ್ಮರಣಮಾತ್ರದಿಂದಲೆ ಮಾನವನು ಮಹೋನ್ನತನಾಗಿ ಭೋಗಭಾಗ್ಯಗಳನ್ನನುಭವಿಸುವನೊ ಅಂಥ ಆ ದೇವಿಯನ್ನು ಪ್ರತ್ಯಕ್ಷವಾಗಿಯೆ ಕಂಡು ಆ ಮುನಿಪುಂಗವನು ಕೃತಕೃತ್ಯನಾದನು.

೧೧. ತರುವಾಯ, ಆತನು ಹಾಗೆಯೇ ಮುಂದುವರಿಯುತ್ತ, ಶ್ರೀಪುರ

ಉವಾಚ ವಚನಂ ಪತ್ನೀಂ ತದಾ ಪ್ರೀತಮನಾ ಮುನಿಃ ।
ಇಹಸ್ಥಿತೈವ ಪಶ್ಯ ತ್ವಂ ಕಾಂತೇ ಕಾಂತತರಂ ಪರಂ ॥ ೧೨ ॥
ಶ್ರೀಶೈಲಶಿಖರಂ ಶ್ರೀಮದಿದಂ ತದ್ಯದ್ವಿಲೋಕನಾತ್ ।
ಪುನರ್ಭವೋ ಮನುಷ್ಯಾಣಾಂ ಭವೇತ್ರ ನ ಭವೇತ್ಕ್ವಚಿತ್ ॥ ೧೩ ॥
ಗಿರಿಶ್ಚತುರಶೀತ್ಯಾಽಯಂ ಯೋಜನಾನಾಂ ಹಿ ವಿಸ್ತೃತಃ ।
ಸರ್ವಲಿಂಗಮಯೋ ಯಸ್ಮಾದತಃ ಕುರ್ಯಾತ್ಪ್ರದಕ್ಷಿಣಂ ॥ ೧೪ ॥

ಲೋಪಾಮುದ್ರೋವಾಚ :—

ಕಿಂಚಿದ್ವಿಜ್ಞಪ್ತುಮಿಚ್ಛಾಮಿ ಯದ್ಯಾಜ್ಞಾ ಸ್ವಾಮಿನೋ ಭವೇತ್ ।
ಬ್ರೂತೇ ಹಿ ಯಾಽನನುಜ್ಞಾತಾ ಪತ್ಯಾ ಸಾ ಪತಿತಾ ಭವೇತ್ ॥ ೧೫ ॥

ಅಗಸ್ತ್ಯ ಉವಾಚ :—

ಕಿಂ ವಕ್ತುಕಾಮಾ ದೇವಿ ತ್ವಂ ಬ್ರೂಹಿ ತತ್ತ್ವಮಶಂಕಿತಾ ।
ನ ತ್ವಾದೃಶೀನಾಂ ವಾಕ್ಯಂ ಹಿ ಪತ್ಯುಃ ಖೇದಾಯ ಜಾಯತೇ ॥ ೧೬ ॥

---

ಸಂಹಾರಕನಾದ ಸಾಕ್ಷಾತ್ ಪರಮೇಶ್ವರನೇ ನೆಲಸಿರುವ ಶ್ರೀಶೈಲವನ್ನು ಕಂಡನು.

೧೨. ಒಡನೆಯೆ ಸುಪ್ರೀತಮನಸ್ಕನಾದ ಆ ಮುನಿಯು ತನ್ನ ಮಡದಿಯಾದ ಲೋಪಾಮುದ್ರೆಯನ್ನು ಕುರಿತು, "ಎಲೌ ಕಾಂತೆ, ಕಾಂತತರವೂ ಅತ್ಯುತ್ತಮವೂ ಆದ ಈ ಶ್ರೀಶೈಲವನ್ನು ಇಲ್ಲಿಂದಲೆ ನೋಡು.

೧೩. ಮಾನವರಿಗೆ ಯಾವುದರ ದರ್ಶನಮಾತ್ರದಿಂದಲೇ ಈ ಭವದಲ್ಲಿ ಪುನರ್ಭವವೆಂಬುದು ಎಂದಿಗೂ ಉಂಟಾಗುವುದಿಲ್ಲವೊ ಅಂಥ ಸಂಪತ್ಕರವಾದ ಈ ಶ್ರೀಶೈಲಪರ್ವತದ ಶಿಖರವು ಇದೊ, ಇದೇ!

೧೪. ಎಂಬತ್ತನಾಲ್ಕು ಯೋಜನಗಳ ದೂರ ಹರಡಿ, ಸರ್ವಲಿಂಗಮಯವಾಗಿರುವುದರಿಂದ ಈ ಪರ್ವತಕ್ಕೆ ಪ್ರದಕ್ಷಿಣೆಯನ್ನು ಮಾಡತಕ್ಕದ್ದು" ಎಂದು ಹೇಳಿದನು.

೧೫. ಲೋಪಾಮುದ್ರೆಯು ಕೇಳುತ್ತಾಳೆ:—ಸ್ವಾಮಿಯೆ, ತಾವು ಅಪ್ಪಣೆ ಕೊಟ್ಟದಾದರೆ, ತಮ್ಮಲ್ಲಿ ಒಂದು ವಿಷಯವನ್ನು ಅರಿಕೆಮಾಡಬಯಸುತ್ತೇನೆ. ಪತಿಯ ಆಜ್ಞೆಯಿಲ್ಲದೆ ಪತ್ನಿಯು ಏನನ್ನಾದರೂ ಕೇಳಿದಲ್ಲಿ ಪತಿತೆಯಾಗುತ್ತಾಳೆಯಲ್ಲವೆ?

೧೬. ಅಗಸ್ತ್ಯನು ಹೇಳುತ್ತಾನೆ:—ದೇವಿ, ನೀನೇನನ್ನು ಕೇಳಬಯಸುವೆಯೊ, ಅದನ್ನು ಯಾವ ಶಂಕೆಯೂ ಇಲ್ಲದೆ ಕೇಳು. ನಿನ್ನಂಥ ಸಾಧ್ವಿಯರ ಮಾತು ಪತಿಯಾದವನಿಗೆ ಖೇದವನ್ನುಂಟುಮಾಡುವುದಿಲ್ಲ.

ತತಃ ಪಪ್ರಚ್ಛ ಸಾ ದೇವೀ ಪ್ರಣಮ್ಯ ಮುನಿಮಾನತಾ ।
ಸರ್ವೇಷಾಂ ಚ ಹಿತಾರ್ಥಾಯ ಸ್ವಸಂದೇಹಾಪನುತ್ತಯೇ ॥ ೧೭ ॥

ಲೋಪಾಮುದ್ರೋವಾಚ :—

ಶ್ರೀಶೈಲಶಿಖರಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೇ ।
ಇದಮೇವ ಹಿ ಸತ್ಯಂ ಚೇತ್ಕಿಮರ್ಥಂ ಕಾಶಿರಿಷ್ಯತೇ ॥ ೧೮ ॥

ಅಗಸ್ತಿರುವಾಚ :—

ಆಕರ್ಣಯ ವರಾರೋಹೇ ಸತ್ಯಂ ಪೃಷ್ಟಂ ತ್ವಯಾಽಮಲೇ ।
ನಿರ್ಣೀತಮುಸಕೃಚ್ಚೈತನ್ಮುನಿಭಿಸ್ತತ್ವಚಿಂತಕೈಃ ॥ ೧೯ ॥

ಮುಕ್ತಿಸ್ಥಾನಾನ್ಯನೇಕಾನಿ ಕೃತಸ್ತತ್ರಾಽಪಿ ನಿರ್ಣಯಃ ।
ತಾನಿ ತೇ ಕಥಯಾಮ್ಯತ್ರ ದತ್ತಚಿತ್ತಾ ಭವ ಕ್ಷಣಂ ॥ ೨೦ ॥

ಪ್ರಥಮಂ ತೀರ್ಥರಾಜಂ ತು ಪ್ರಯಾಗಾಖ್ಯಂ ಸುವಿಶ್ರುತಂ ।
ಕಾಮಿಕಂ ಸರ್ವತೀರ್ಥಾನಾಂ ಧರ್ಮಕಾಮಾರ್ಥಮೋಕ್ಷದಂ ॥ ೨೧ ॥

---

೧೭. ಆ ಮುನಿಯು ಇಂತೆನಲು, ಲೋಪಾಮುದ್ರಾದೇವಿಯು ಆತನನ್ನು ನಮಸ್ಕರಿಸಿ, ಸಮಸ್ತಮಾನವರ ಉಪಕಾರಕ್ಕಾಗಿಯೂ ತನಗುಂಟಾದ ಸಂದೇಹದ ನಿವಾರಣೆಗಾಗಿಯೂ ಆತನನ್ನು ಕುರಿತು ಭಕ್ತಿನಮ್ರಳಾಗಿ ಈ ರೀತಿ ಕೇಳಿದಳು.

೧೮. ಲೋಪಾಮುದ್ರೆಯು ಹೇಳುತ್ತಾಳೆ —ಪ್ರಿಯನೆ, ಶ್ರೀಶೈಲಶಿಖರವನ್ನು ಕಂಡಮೇಲೆ ಮಾನವನಿಗೆ ಪುನರ್ಜನ್ಮವೇ ಇರುವುದಿಲ್ಲ ಎಂಬ ವಚನವಿರುವುದಲ್ಲವೆ? ಇದೇ ಸತ್ಯವಾಗಿದ್ದರೆ, ಇನ್ನು ಎಲ್ಲರೂ ಕಾಶೀಕ್ಷೇತ್ರವನ್ನು ಬಯಸುವುದೇಕೆ?

೧೯ ಅಗಸ್ತ್ಯನು ಹೇಳುತ್ತಾನೆ —ಎಲೆ ವರಾರೋಹೆ, ಕೇಳು. ಶುದ್ಧ ಮನಸ್ಕಳಾದ ನೀನು ಯಥಾರ್ಥವಾದುದನ್ನೇ ಕೇಳಿದೆ. ತತ್ತ್ವಚಿಂತಕರಾದ ಮುನಿಗಳು ಈ ವಿಷಯವನ್ನು ಅನೇಕ ಬಾರಿ ಚೆನ್ನಾಗಿ ಪರಿಶೀಲಿಸಿ ಹೀಗೆ ನಿರ್ಣಯಮಾಡಿದ್ದಾರೆ.

೨೦. ಮುಕ್ತಿಸ್ಥಾನಗಳು ಅನೇಕವಾಗಿ ನಿರ್ಮಾಣವಾಗಿವೆಯೆಂದು ಅವರ ನಿರ್ಣಯ. ಅವುಗಳನ್ನೇ ನಿನಗೆ ಹೇಳುತ್ತೇನೆ. ಒಂದು ಕ್ಷಣಕಾಲ ಸಾವಧಾನ ಮನಸ್ಕಳಾಗು

೨೧. ಮೊದಲನೆಯದು ತೀರ್ಥರಾಜವೆನಿಸಿದ ಪ್ರಯಾಗ; ಇದು ಲೋಕ ಪ್ರಸಿದ್ಧವಾದುದು. ಇದು ಸಮಸ್ತ ತೀರ್ಥಗಳಿಗೂ ಉತ್ತಮವಾದುದು. ಧರ್ಮಾರ್ಥಕಾಮಮೋಕ್ಷಗಳನ್ನು ಕೊಡತಕ್ಕದ್ದೆಂದೂ ಆದುದರಿಂದಲೆ ಕಾಮಿಕವೆಂದೂ ಹೆಸರಾಗಿದೆ.

ನೈಮಿಷಂ ಚ ಕುರುಕ್ಷೇತ್ರಂ ಗಂಗಾದ್ವಾರಮವಂತಿಕಾ ।
ಅಯೋಧ್ಯಾ ಮಥುರಾ ಚೈವ ದ್ವಾರಕಾಽಪ್ಯಮರಾವತೀ ॥ ೨೨ ॥
ಸರಸ್ವತೀ ಸಿಂಧುಸಂಗೋ ಗಂಗಾಸಾಗರಸಂಗಮಃ ।
ಕಾಂತೀ ಚ ತ್ರ್ಯಂಬಕಂ ಚಾಽಪಿ ಸಪ್ತಗೋದಾವರೀ ತಟಂ ॥ ೨೩ ॥
ಕಾಲಂಜರಂ ಪ್ರಭಾಸಶ್ಚ ತಥಾ ಬದರಿಕಾಶ್ರಮಃ ।
ಮಹಾಲಯಸ್ತಥೋಂಕಾರಕ್ಷೇತ್ರಂ ವೈ ಪೌರುಷೋತ್ತಮಂ ॥ ೨೪ ॥
ಗೋಕರ್ಣೋ ಭೃಗುಕಚ್ಛಶ್ಚ ಭೃಗುತುಂಗಶ್ಚ ಪುಷ್ಕರಂ ।
ಶ್ರೀಪರ್ವತಾದಿ ತೀರ್ಥಾನಿ ಧರಾತೀರ್ಥಂ ತಥೈವ ಚ ॥ ೨೫ ॥
ಮಾನಸಾನ್ಯಪಿ ತೀರ್ಥಾನಿ ಸತ್ಯಾದೀನಿ ಚ ವೈ ಪ್ರಿಯೇ ।
ಏತಾನಿ ಮುಕ್ತಿದಾನ್ಯೇವ ನಾಽತ್ರ ಕಾರ್ಯಾ ವಿಚಾರಣಾ ॥ ೨೬ ॥
ಗಯಾತೀರ್ಥಂ ಚ ಯತ್ಪ್ರೋಕ್ತಂ ತತ್ಪಿತೄಣಾಂ ಹಿ ಮುಕ್ತಿದಂ ।
ಪಿತಾಮಹಾನಾಮೃಣತೋ ಮುಕ್ತಾಸ್ತತ್ತನಯಾ ಅಪಿ ॥ ೨೭ ॥

ಸಧರ್ಮಿಣ್ಯುವಾಚ :—

ಮಾನಸಾನ್ಯಪಿ ತೀರ್ಥಾನಿ ಯಾನ್ಯುಕ್ತಾನಿ ಮಹಾಮತೇ ।
ಕಾನಿ ಕಾನಿ ಚ ತಾನೀಹ ಹ್ಯೇತದಾಖ್ಯಾತುಮರ್ಹಸಿ ॥ ೨೮ ॥

ಅಗಸ್ತ್ಯ ಉವಾಚ :—

ಶೃಣು ತೀರ್ಥಾನಿ ಗದತೋ ಮಾನಸಾನಿ ಮಮಾಽನಘೇ ।
ಯೇಷು ಸಮ್ಯಙ್ನರಃ ಸ್ನಾತ್ವಾ ಪ್ರಯಾತಿ ಪರಮಾಂ ಗತಿಂ ॥ ೨೯ ॥

---

೨೨–೨೬. ನೈಮಿಷ, ಕುರುಕ್ಷೇತ್ರ, ಗಂಗಾದ್ವಾರ, ಅವಂತಿ, ಅಯೋಧ್ಯೆ, ಮಥುರೆ, ದ್ವಾರಕಾ, ಅಮರಾವತಿ. ಸರಸ್ವತೀಸಾಗರಸಂಗಮ, ಗಂಗಾಸಾಗರ ಸಂಗಮ, ಕಾಂತಿ, ತ್ರ್ಯಂಬಕ, ಸಪ್ತಗೋದಾವರೀತೀರ, ಕಾಲಂಜರಪ್ರಭಾಸ, ಅಂತೆಯೆ ಬದರಿಕಾಶ್ರಮ, ಮಹಾಲಯ, ಓಂಕಾರಕ್ಷೇತ್ರ, ಪುರುಷೋತ್ತಮ ಕ್ಷೇತ್ರಗಳು, ಗೋಕರ್ಣ, ಭೃಗುಕಚ್ಛ, ಭೃಗುತುಂಗ, ಪುಷ್ಕರ, ಶ್ರೀಪರ್ವತ, ಧಾರಾತೀರ್ಥ ಮೊದಲಾದ ತೀರ್ಥಗಳು ಸತ್ಯವೇ ಮೊದಲಾದ ಮಾನಸತೀರ್ಥ ಗಳು–ಇವುಗಳೆಲ್ಲವೂ ಮುಕ್ತಿಪ್ರದಗಳೆಂಬ ವಿಷಯದಲ್ಲಿ ವಿಚಾರಮಾಡಬೇಕಾಗಿಲ್ಲ.

೨೭. ಪಿತೃಪಿತಾಮಹರನ್ನೂ ಅವರ ಸಂತತಿಯವರನ್ನೂ ಋಣದಿಂದ ಪಾರುಮಾಡತಕ್ಕದ್ದು ಗಯಾತೀರ್ಥವೆಂದು ಹೇಳಲಾಗಿದೆ.

೨೮. ಲೋಪಾಮುದ್ರೆಯು ಕೇಳುತ್ತಾಳೆ.—ಎಲೈ ಮಹಾಮತಿಯೆ, ನೀನು ಹೇಳಿದ ಆ ಮಾನಸತೀರ್ಥಗಳನ್ನೂ ಅವು ಯಾವಯಾವವುಗಳೆಂಬುದನ್ನೂ ಅಪ್ಪಣೆಕೊಡಿಸಬೇಕು.

೨೯. ಅಗಸ್ತ್ಯನು ಹೇಳುತ್ತಾನೆ.—ಎಲೌ ಅನಘಳೆ, ಯಾವುಗಳಲ್ಲಿ

ಸತ್ಯಂ ತೀರ್ಥಂ ಕ್ಷಮಾತೀರ್ಥಂ ತೀರ್ಥಮಿಂದ್ರಿಯನಿಗ್ರಹಃ ।
ಸರ್ವಭೂತದಯಾತೀರ್ಥಂ ತೀರ್ಥಮಾರ್ಜವಮೇವ ಚ ॥ ೩೦ ॥
ದಾನಂ ತೀರ್ಥಂ ದಮಸ್ತೀರ್ಥಂ ಸಂತೋಷಸ್ತೀರ್ಥಮುಚ್ಯತೇ ।
ಬ್ರಹ್ಮಚರ್ಯಂ ಪರಂ ತೀರ್ಥಂ ತೀರ್ಥಂ ಚ ಪ್ರಿಯವಾದಿತಾ ॥ ೩೧ ॥
ಜ್ಞಾನಂ ತೀರ್ಥಂ ಧೃತಿಸ್ತೀರ್ಥಂ ತಪಸ್ತೀರ್ಥಮುದಾಹೃತಂ ।
ತೀರ್ಥಾನಾಮಪಿ ತತ್ತೀರ್ಥಂ ವಿಶುದ್ಧಿರ್ಮನಸಃ ಪರಾ ॥ ೩೨ ॥
ನ ಜಲಾಪ್ಲುತದೇಹಸ್ಯ ಸ್ನಾನಮಿತ್ಯಭಿಧೀಯತೇ ।
ಸ ಸ್ನಾತೋ ಯೋ ದಮಸ್ನಾತಃ ಶುಚಿಃ ಶುದ್ಧಮನೋಽಮಲಃ ॥ ೩೩ ॥
ಯೋ ಲುಬ್ಧಃ ಪಿಶುನಃ ಕ್ರೂರೋ ದಾಂಭಿಕೋ ವಿಷಯಾತ್ಮಕಃ ।
ಸರ್ವತೀರ್ಥೇಷ್ವಪಿ ಸ್ನಾತಃ ಪಾಪೋ ಮಲಿನ ಏವ ಸಃ ॥ ೩೪ ॥
ನ ಶರೀರಮಲತ್ಯಾಗಾನ್ನರೋ ಭವತಿ ನಿರ್ಮಲಃ ।
ಮಾನಸೇತು ಮಲೇ ತ್ಯಕ್ತೇ ಭವತ್ಯಂತಃ ಸುನಿರ್ಮಲಃ ॥ ೩೫ ॥
ಜಾಯಂತೇ ಚ ಮ್ರಿಯಂತೇ ಚ ಜಲೇಷ್ವೇವ ಜಲೌಕಸಃ ।
ನ ಚ ಗಚ್ಛಂತಿ ತೇ ಸ್ವರ್ಗಮವಿಶುದ್ಧಮನೋಽಮಲಾಃ ॥ ೩೬ ॥

---

ಸ್ನಾನಮಾಡುವುದರಿಂದ ಮಾನವನು ಪರಮಪದವನ್ನು ಸೇರುವನೊ ಆ ಮಾನಸ ತೀರ್ಥಗಳನ್ನು ಹೇಳುತ್ತೇನೆ, ಕೇಳು.

೩೦–೩೨. ಸತ್ಯ, ಕ್ಷಮಾ, ಇಂದ್ರಿಯನಿಗ್ರಹ, ಸರ್ವಭೂತದಯೆ, ಆರ್ಜವ, ದಾನ, ದಮ, ಸಂತೋಷ, ಬ್ರಹ್ಮಚರ್ಯೆ, ಪ್ರಿಯವಾದಿತ್ವ, ಜ್ಞಾನ, ಧೃತಿ, ತಪಸ್ಸು, ಮನಶ್ಶುದ್ಧಿ–ಇವುಗಳೆಲ್ಲವೂ ತೀರ್ಥಗಳೆಂದು ಪ್ರಸಿದ್ಧಗಳಾಗಿವೆ. ಇವುಗಳಲ್ಲೆಲ್ಲ ಮನಶ್ಶುದ್ಧಿಯೆಂಬ ತೀರ್ಥವೆ ಉತ್ತಮೋತ್ತಮವಾದುದು.

೩೩. ಸುಮ್ಮನೆ ನೀರಿನಲ್ಲಿ ದೇಹವನ್ನು ಮುಳುಗಿಸುವುದೇ ಸ್ನಾನವೆನಿಸುವುದಿಲ್ಲ. ದಮವೆಂಬ ತೀರ್ಥದಲ್ಲಿ ಮಿಂದು ಶುದ್ಧನೂ, ಮನಸ್ಸಿನ ಮಲವನ್ನು ಕಳೆದವನೂ ಆದಲ್ಲಿ ಆ ಮಾನವನೇ ಸ್ನಾನಮಾಡಿದವನೆಂದು ಹೇಳಬೇಕು.

೩೪. ಲೋಭಿಯೂ ಪಿಶುನನೂ ಕ್ರೂರಿಯೂ ದಾಂಭಿಕನೂ ರಾಗಾದಿ ವಿಷಯಗಳಲ್ಲಿ ತೊಡಗಿದ ಮನಸ್ಸುಳ್ಳವನೂ ಆದ ಮಾನವನು ಸಮಸ್ತ ತೀರ್ಥಗಳಲ್ಲಿಯೂ ಸ್ನಾನಮಾಡಿದರೂ ಶುದ್ಧನಾಗುವುದಿಲ್ಲ. ಆ ಪಾಪಿಷ್ಠನು ಅಶುದ್ಧನೇ ಸರಿ

೩೫. ನೀರಿನಲ್ಲಿ ಸ್ನಾನಮಾಡಿ ಮೈಕೊಳೆಯನ್ನು ಕಳೆದ ಮಾತ್ರದಿಂದಲೇ ನರನು ನಿರ್ಮಲನಾಗುವುದಿಲ್ಲ. ಮನಸ್ಸಿನ ಕೊಳೆಯನ್ನು ಕಳೆದರೆಯೇ ಅವನು ನಿರ್ಮಲನೆನಿಸುತ್ತಾನೆ.

೩೬. ಜಲಚರಗಳು ನೀರಿನಲ್ಲಿಯೇ ಹುಟ್ಟುತ್ತವೆ, ಸಾಯುತ್ತವೆ.

ವಿಷಯೇಷ್ವಪಿ ಸಂರಾಗೋ ಮಾನಸೋ ಮಲ ಉಚ್ಯತೇ ।
ತೇಷ್ವೇವ ಹಿ ವಿರಾಗೋಽಸ್ಯ ನೈರ್ಮಲ್ಯಂ ಸಮುದಾಹೃತಂ ॥ ೩೭ ॥
ಚಿತ್ತಮಂತರ್ಗತಂ ದುಷ್ಟಂ ತೀರ್ಥಸ್ನಾನಾನ್ನ ಶುಧ್ಯತಿ ।
ಶತಶೋಽಥ ಜಲೈರ್ಧೌತಂ ಸುರಾಭಾಂಡಮಿವಾಽಶುಚಿ ॥ ೩೮ ॥
ದಾನಮಿಜ್ಯಾ ತಪಃ ಶೌಚಂ ತೀರ್ಥಸೇವಾ ಶ್ರುತಂ ತಥಾ ।
ಸರ್ವಾಣ್ಯೇತಾನ್ಯತೀರ್ಥಾನಿ ಯದಿ ಭಾವೋ ನ ನಿರ್ಮಲಃ ॥ ೩೯ ॥
ನಿಗೃಹೀತೇಂದ್ರಿಯಗ್ರಾಮೋ ಯತ್ರೈವ ಚ ವಸೇನ್ನರಃ ।
ತತ್ರ ತಸ್ಯ ಕುರುಕ್ಷೇತ್ರಂ ನೈಮಿಷಂ ಪುಷ್ಕರಾಣಿ ಚ ॥ ೪೦ ॥
ಜ್ಞಾನಪೂತೇ ಜ್ಞಾನಜಲೇ ರಾಗದ್ವೇಷಮಲಾಽಪಹೇ ।
ಯಃ ಸ್ನಾತಿ ಮಾನಸೇ ತೀರ್ಥೇ ಸ ಯಾತಿ ಪರಮಾಂ ಗತಿಂ ॥ ೪೧ ॥
ಏತತ್ತೇ ಕಥಿತಂ ದೇವಿ ಮಾನಸಂ ತೀರ್ಥಲಕ್ಷಣಂ ।
ಭೌಮಾನಾಮಪಿ ತೀರ್ಥಾನಾಂ ಪುಣ್ಯತ್ವೇ ಕಾರಣಂ ಶೃಣು ॥ ೪೨ ॥

---

ಮನಸ್ಸಿನ ಮಾಲಿನ್ಯವನ್ನು ಕಳೆದುಕೊಳ್ಳದ ಆ ಜಂತುಗಳು ಸ್ವರ್ಗಕ್ಕೆಂದಿಗೂ ಹೋಗುವುದಿಲ್ಲ.

೩೭. ವಿಷಯೋಪಭೋಗಗಳಲ್ಲಿ ಅತಿಯಾದ ಅಭಿಲಾಷೆಯೇ ಮನಸ್ಸಿನ ಮಲವೆಂದು ಹೇಳಲಾಗಿದೆ. ಅವುಗಳಲ್ಲಿಯ ವಿರಾಗವೇ ಮನೋನೈರ್ಮಲ್ಯ ವೆಂದು ಉದಾಹೃತವಾಗಿದೆ.

೩೮ ಒಳಗೇ ಅಡಗಿರುವ ದೌಷ್ಟ್ಯವುಳ್ಳ ಚಿತ್ತವು ತೀರ್ಥಸ್ನಾನದಿಂದ ಶುದ್ಧವಾದೀತೆ? ಹೆಂಡದ ಗಡಿಗೆ ಸಾವಿರ ಬಾರಿ ನೀರಿನಿಂದ ತೊಳೆದರೂ ಹೇಗೆ ಅಶುದ್ಧವೇ ಆಗಿರುತ್ತದೆಯೊ ಹಾಗೆ ಚಿತ್ತವೂ ಶುದ್ಧವಾಗುವುದಿಲ್ಲ.

೩೯. ದಾನ ಯಾಗ ತಪಸ್ಸು ಶೌಚ ತೀರ್ಥಸೇವೆ ಪುರಾಣಾದಿಗಳ ಶ್ರವಣ– ಇವುಗಳೆಲ್ಲವೂ ಚಿತ್ತವೊಂದು ನಿರ್ಮಲವಾಗಿದ್ದರೆ ತೀರ್ಥಗಳೆನಿಸುತ್ತವೆ

೪೦. ಇಂದ್ರಿಯ ಗ್ರಾಮಗಳನ್ನೆಲ್ಲ ಗೆದ್ದವನು ಎಲ್ಲಿ ನೆಲಸಿದ್ದರಲ್ಲೇ ಕುರುಕ್ಷೇತ್ರ ನೈಮಿಷ ಪುಷ್ಕರ ಮೊದಲಾದ ಕ್ಷೇತ್ರಗಳು ಇರುತ್ತವೆ.

೪೧. ರಾಗದ್ವೇಷಗಳೆಂಬ ಮಲವನ್ನು ಕಳೆಯುವ, ಜ್ಞಾನದಿಂದ ಪವಿತ್ರ ವಾದ, ಜ್ಞಾನವೆಂಬ ಜಲವುಳ್ಳ ಮನಸ್ಸೆಂಬ ತೀರ್ಥದಲ್ಲಿ ಸ್ನಾನಮಾಡಿದವನು ಪರಮಪದವನ್ನು ಪಡೆಯುತ್ತಾನೆ.

೪೨. ದೇವಿ, ಹೀಗೆ ನಿನಗೆ ಮಾನಸತೀರ್ಥಗಳ ಲಕ್ಷಣವನ್ನು ಹೇಳಿ ಯಾಯಿತು. ಇನ್ನು ಭೌಮಗಳೆನಿಸಿದ ತೀರ್ಥಗಳು ಹೇಗೆ ಪುಣ್ಯಪ್ರದಗಳೆಂಬ ವಿಷಯವನ್ನು ವಿವರಿಸುತ್ತೇನೆ, ಕೇಳು.

ಯಥಾ ಶರೀರಸ್ಯೋದ್ದೇಶಾಃ ಕೇಚಿನ್ಮೇಧ್ಯತಮಾಃ ಸ್ಮೃತಾಃ ।
ತಥಾ ಪೃಥಿವ್ಯಾಮುದ್ದೇಶಾಃ ಕೇಚಿತ್ಪುಣ್ಯತಮಾಃ ಸ್ಮೃತಾಃ ॥ ೪೩ ॥
ಪ್ರಭಾವಾದದ್ಭುತಾದ್ಭೂಮೇಃ ಸಲಿಲಸ್ಯ ಚ ತೇಜಸಃ ।
ಪರಿಗ್ರಹಾನ್ಮುನೀನಾಂ ಚ ತೀರ್ಥಾನಾಂ ಪುಣ್ಯತಾ ಸ್ಮೃತಾ ॥ ೪೪ ॥
ತಸ್ಮಾದ್ಭೌಮೇಷು ತೀರ್ಥೇಷು ಮಾನಸೇಷು ಚ ನಿತ್ಯಶಃ ।
ಉಭಯೇಷ್ವಪಿ ಯಃ ಸ್ನಾತಿ ಸ ಯಾತಿ ಪರಮಾಂ ಗತಿಂ ॥ ೪೫ ॥
ಅನುಪೋಷ್ಯ ತ್ರಿರಾತ್ರಾಣಿ ತೀರ್ಥಾನ್ಯನಭಿಗಮ್ಯ ಚ ।
ಅದತ್ವಾ ಕಾಂಚನಂ ಗಾಶ್ಚ ದರಿದ್ರೋ ನಾಮ ಜಾಯತೇ ॥ ೪೬ ॥
ಅಗ್ನಿಷ್ಟೋಮಾದಿಭಿರ್ಯಜ್ಞೈರಿಷ್ಟ್ವಾ ವಿಪುಲದಕ್ಷಿಣೈಃ ।
ನ ತತ್ಫಲಮವಾಪ್ನೋತಿ ತೀರ್ಥಾಽಭಿಗಮನೇನ ಯತ್ ॥ ೪೭ ॥
ಯಸ್ಯ ಹಸ್ತೌ ಚ ಪಾದೌ ಚ ಮನಶ್ಚೈವ ಸುಸಂಯುತಂ ।
ವಿದ್ಯಾ ತಪಶ್ಚ ಕೀರ್ತಿಶ್ಚ ಸ ತೀರ್ಥಫಲಮಶ್ನುತೇ ॥ ೪೮ ॥

---

೪೩. ಮಾನವನ ಶರೀರದಲ್ಲಿ ಕೆಲವು ಸ್ಥಳಗಳು ಪವಿತ್ರಗಳೆಂದು ಸಂಭಾವಿತವಾಗಿರುವಂತೆಯೆ, ಭೂಮಿಯಲ್ಲಿಯೂ ಕೆಲಕೆಲವು ಪ್ರದೇಶಗಳು ಪುಣ್ಯತಮಗಳೆಂದು ತಿಳಿಯಲ್ಪಟ್ಟವೆ.

೪೪. ಭೂಮಿಯ ಪ್ರಭಾವದಿಂದಲೂ, ಆಯಾಯ ಕ್ಷೇತ್ರದ ನೀರಿನ ಪ್ರಭಾವದಿಂದಲೂ, ಮನನಶೀಲರಾದ ಮಹರ್ಷಿಗಳು ಪರಿಗ್ರಹಿಸಿ ನೆಲಸಿರುವುದರಿಂದಲೂ ತೀರ್ಥಗಳಿಗೆ ಪುಣ್ಯತೆಯುಂಟಾಗಿದೆಯೆಂದು ತಿಳಿಯಲಾಗಿದೆ.

೪೫. ಆದುದರಿಂದ, ಭೌಮ ಮಾನಸಗಳೆಂಬ ಎರಡೂ ತೀರ್ಥಗಳಲ್ಲಿ ಯಾವನು ಸ್ನಾನಮಾಡುತ್ತಾನೆಯೊ ಅವನು ಮುಕ್ತನಾಗುತ್ತಾನೆ.

೪೬. ಮೂರು ದಿನಗಳ ಉಪವಾಸವನ್ನಾಚರಿಸದೆಯೂ, ತೀರ್ಥಕ್ಷೇತ್ರಗಳಿಗೆ ಯಾತ್ರೆ ಹೋಗದೆಯೂ, ಕಾಂಚನಗಳನ್ನೂ ಗೋವುಗಳನ್ನೂ ದಾನಮಾಡದೆಯೂ ಇರುವ ಮಾನವನು ದರಿದ್ರನಾಗಿ ಹುಟ್ಟುತ್ತಾನೆ.

೪೭. ತೀರ್ಥಯಾತ್ರೆಯಿಂದ ಯಾವ ಫಲವುಂಟಾಗುವುದೊ ಅದು ಬಹಳವಾದ ದಕ್ಷಿಣೆಯುಳ್ಳ ಅಗ್ನಿಷ್ಟೋಮಾದಿ ಯಾಗಗಳನ್ನು ಮಾಡುವುದರಿಂದಲೂ ಉಂಟಾಗುವುದಿಲ್ಲ

೪೮. ಯಾವನಿಗೆ ಕೈಕಾಲುಗಳೂ ಮನಸ್ಸೂ ಸ್ಥಿರವಾಗಿರುವುವೊ, ವಿದ್ಯೆ ತಪಸ್ಸು ಕೀರ್ತಿಗಳಿರುತ್ತವೆಯೊ ಅವನೇ ತೀರ್ಥಯಾತ್ರೆಯ ಫಲವನ್ನು ಪಡೆಯುತ್ತಾನೆ.

ಪ್ರತಿಗ್ರಹಾದುಪಾವೃತ್ತಃ ಸಂತುಷ್ಟೋ ಯೇನ ಕೇನಚಿತ್ ।
ಅಹಂಕಾರವಿಮುಕ್ತಶ್ಚ ಸತೀರ್ಥಫಲಮಶ್ನುತೇ ॥ ೪೯ ॥
ಅದಂಭಕೋ ನಿರಾರಂಭೋ ಲಘ್ವಾಹಾರೋ ಜಿತೇಂದ್ರಿಯಃ ।
ವಿಮುಕ್ತಃ ಸರ್ವಸಂಗೈರ್ಯಃ ಸ ತೀರ್ಥಫಲಮಶ್ನುತೇ ॥ ೫೦ ॥
ಅಕೋಪನೋಽಮಲಮತಿಃ ಸತ್ಯವಾದೀ ದೃಢವ್ರತಃ ।
ಆತ್ಮೋಪಮಶ್ಚ ಭೂತೇಷು ಸ ತೀರ್ಥಫಲಮಶ್ನುತೇ ॥ ೫೧ ॥
ತೀರ್ಥಾನ್ಯನುಸರನ್ಧೀರಃ ಶ್ರದ್ದಧಾನಃ ಸಮಾಹಿತಃ ।
ಕೃತಪಾಪೋ ವಿಶುಧ್ಯೇತ ಕಿಂ ಪುನಃ ಶುದ್ಧಕರ್ಮಕೃತ್ ॥ ೫೨ ॥
ತಿರ್ಯಗ್ಯೋನಿಂ ನ ವೈ ಗಚ್ಛೇತ್ಕುದೇಶೇ ನೈವ ಜಾಯತೇ ।
ನ ದುಃಖೀ ಸ್ಯಾತ್ಸ್ವರ್ಗಭಾಕ್ ಚ ಮೋಕ್ಷೋಪಾಯಂ ಚ ವಿಂದತಿ ॥೫೩॥
ಅಶ್ರದ್ಧಧಾನಃ ಪಾಪಾತ್ಮಾ ನಾಸ್ತಿಕೋಽಚ್ಛಿನ್ನ ಸಂಶಯಃ ।
ಹೇತುನಿಷ್ಠಶ್ಚ ಪಂಚೈತೇ ನ ತೀರ್ಥಫಲಭಾಗಿನಃ ॥ ೫೪ ॥

---

೪೯. ಪ್ರತಿಗ್ರಹಪರಾಙ್ಮುಖನಾಗಿ (ದಾನವನ್ನು ತೆಗೆದುಕೊಳ್ಳದೆ), ದೊರಕಿದಷ್ಟರಿಂದಲೆ ಸಂತುಷ್ಟನಾಗಿ, ಅಹಂಕಾರವಿಲ್ಲದೆ ಶಾಂತನಾಗಿರುವ ಮಾನವನು ಮಾತ್ರ ತೀರ್ಥಯಾತ್ರೆಯ ಫಲವನ್ನು ಪಡೆಯುತ್ತಾನೆ

೫೦. ದಂಭವಿಲ್ಲದವನೂ ಸ್ವಾರ್ಥಕ್ಕಾಗಿ ಪ್ರಯತ್ನಪಡದವನೂ ಹಿತಮಿತವಾದ ಆಹಾರವನ್ನು ತೆಗೆದುಕೊಳ್ಳುವವನೂ ಇಂದ್ರಿಯಗಳನ್ನು ಗೆದ್ದವನೂ ಸರ್ವಸಂಗವರ್ಜಿತನೂ ಆದ ಮಾನವನೇ ತೀರ್ಥಯಾತ್ರೆಯ ಫಲವನ್ನು ಪಡೆಯುತ್ತಾನೆ.

೫೧. ಕೋಪವಿಲ್ಲದವನೂ ಅಮಲಮತಿಯೂ ಸತ್ಯವಾದಿತ್ವವೂ ದೃಢವೃತ್ತಿಯೂ, ಸಮಸ್ತ ಭೂತಗಳನ್ನೂ ತನ್ನಂತೆಯೆ ಕಾಣುವಿಕೆಯೂ ಇರುವ ಮಾನವನೇ ತೀರ್ಥಯಾತ್ರೆಯ ಫಲವನ್ನು ಪಡೆಯುತ್ತಾನೆ.

೫೨. ಧೈರ್ಯಶಾಲಿಯಾಗಿ ಶ್ರದ್ಧೆವಹಿಸಿ ಸ್ಥಿರಮನಸ್ಕನಾಗಿ ತೀರ್ಥಯಾತ್ರೆಯನ್ನು ಮಾಡುವವನು ಪಾಪಿಷ್ಠನಾಗಿದ್ದರೂ ಪರಿಶುದ್ಧನಾಗುತ್ತಾನೆ. ಎಂದ ಮೇಲೆ, ಪರಿಶುದ್ಧನಾದ ಮುತ್ತು ಸತ್ಕರ್ಮಾನುಷ್ಠಾನತತ್ಪರನಾದ ಮಾನವನ ವಿಷಯದಲ್ಲಿ ಹೇಳತಕ್ಕದ್ದೇನು?

೫೩. ಅಂಥವನು ತಿರ್ಯಗ್ಯೋನಿಗಳಲ್ಲಿ ಜನ್ಮವನ್ನೆತ್ತುವುದಿಲ್ಲ. ಪಾಪಭೂಯಿಷ್ಠವಾದ ದೇಶಗಳಲ್ಲಿ ಹುಟ್ಟುವುದಿಲ್ಲ. ಎಂದಿಗೂ ದುಃಖವನ್ನನುಭವಿಸುವುದಿಲ್ಲ. ಅವನು ಸ್ವರ್ಗಕ್ಕೆ ಭಾಗಿಯಾಗುವುದೇ ಅಲ್ಲದೆ ಮೋಕ್ಷೋಪಾಯವನ್ನೂ ಪಡೆಯುತ್ತಾನೆ.

೫೪. ತೀರ್ಥಯಾತ್ರೆಗಳಲ್ಲಿ ನಂಬುಗೆಯಿಡದವನೂ, ಪಾಪಿಷ್ಠನೂ, ನಾಸ್ತಿ

ತೀರ್ಥಾನಿ ಚ ಯಥೋಕ್ತೇನ ವಿಧಿನಾ ಸಂಚರಂತಿ ಯೇ ।
ಸರ್ವದ್ವಂದ್ವಸಹಾ ಧೀರಾಸ್ತೇ ನರಾಃ ಸ್ವರ್ಗಭಾಗಿನಃ ॥ ೫೫ ॥
ತೀರ್ಥಯಾತ್ರಾಂ ಚಿಕೀರ್ಷುಃ ಪ್ರಾಗ್ವಿಧಾಯೋಪೋಷಣಂ ಗೃಹೇ ।
ಗಣೇಶಂ ಚ ಪಿತೄನ್ವಿಪ್ರಾನ್ಸಾಧೂಂಛಕ್ತ್ಯಾ ಪ್ರಪೂಜ್ಯ ಚ ॥ ೫೬ ॥
ಕೃತಪಾರಣಕೋ ಹೃಷ್ಟೋ ಗಚ್ಛೇನ್ನಿಯಮಧೃಕ್ಪುನಃ ।
ಆಗತ್ಯಾಭ್ಯರ್ಚ್ಯ ಚ ಪಿತೄನ್ ಯಥೋಕ್ತಫಲಭಾಗ್ಭವೇತ್ ॥ ೫೭ ॥
ನ ಪರೀಕ್ಷ್ಯೋ ದ್ವಿಜಸ್ತೀರ್ಥೇಷ್ವನ್ನಾರ್ಥೀ ಭೋಜ್ಯ ಏವ ಚ ।
ಸಕ್ತುಭಿಃ ಪಿಂಡದಾನಂ ಚ ಚರುಣಾ ಪಾಯಸೇನ ಚ ॥ ೫೮ ॥
ಕರ್ತವ್ಯಮೃಷಿಭಿರ್ದೃಷ್ಟಂ ಪಿಣ್ಯಾಕೇನ ಗುಡೇನ ಚ ।
ಶ್ರಾದ್ಧಂ ತತ್ರ ಪ್ರಕರ್ತವ್ಯಮರ್ಘ್ಯಾವಾಹನವರ್ಜಿತಂ ॥ ೫೯ ॥
ಅಕಾಲೇಽಪ್ಯಥವಾ ಕಾಲೇ ತೀರ್ಥೇ ಶ್ರಾದ್ಧಂ ಚ ತರ್ಪಣಂ ।
ಅವಿಲಂಬೇನ ಕರ್ತವ್ಯಂ ನೈವ ವಿಘ್ನಂ ಸಮಾಚರೇತ್ ॥ ೬೦ ॥

---

ಕನೂ, ಸಂಶಯಾತ್ಮನೂ, ಹೇತುವಾದಗಳನ್ನುಮಾಡುವವನೂ, ಎಂಬ ಈ ಐವರೂ ತೀರ್ಥಯಾತ್ರೆಯ ಫಲಕ್ಕೆ ಭಾಗಿಗಳಲ್ಲ.

೫೫. ಸಮಸ್ತದ್ವಂದ್ವಗಳಿಗೂ ದೂರನಾಗಿ ಧೀರನಾಗಿ, ಹಿಂದೆ ಹೇಳಿದ ತೀರ್ಥ ಕ್ಷೇತ್ರಗಳನ್ನೆಲ್ಲ ವಿಧ್ಯುಕ್ತವಾಗಿ ಸಂಚಾರ ಮಾಡುವ ಮಾನವರು ಸ್ವರ್ಗ ಭಾಗಿಗಳು.

೫೬–೫೭. ತೀರ್ಥಯಾತ್ರೆಯನ್ನು ಮಾಡಬಯಸುವವನು ಮೊದಲು ಸ್ವಗೃಹದಲ್ಲಿ ಉಪವಾಸವನ್ನುಮಾಡಿ, ಗಣೇಶನನ್ನರ್ಚಿಸಿ, ಪಿತೃದೇವತೆಗಳನ್ನೂ ವಿಪ್ರರನ್ನೂ ಸಾಧುಸಂತರನ್ನೂ ಶಕ್ತ್ಯನುಸಾರ ಸತ್ಕರಿಸಿ, ಮಾರನೆಯ ದಿನ ಪಾರಣೆಯನ್ನೆಸಗಿ ನಿಯಮನಿಷ್ಠೆಗಳಿಂದ ಉದ್ದಿಷ್ಟವಾದ ತೀರ್ಥವನ್ನು ಕುರಿತು ಯಾತ್ರೆ ಹೋಗತಕ್ಕದ್ದು. ಯಾತ್ರೆಯಿಂದ ಹಿಂತಿರುಗಿದ ಮೇಲೆ ಅವನು ಪಿತೃದೇವತೆಗಳನ್ನು ಅರ್ಚಿಸತಕ್ಕದ್ದು. ಹೀಗೆ ಮಾಡಿದುದಾದರೆ ತೀರ್ಥ ಯಾತ್ರೆಯ ಫಲಕ್ಕೆ ಭಾಗಿಯಾಗುತ್ತಾನೆ

೫೮ ತೀರ್ಥಕ್ಷೇತ್ರಗಳಲ್ಲಿ ಬ್ರಾಹ್ಮಣರನ್ನು ಪರೀಕ್ಷೆಮಾಡಕೂಡದು. ಅಲ್ಲಿ ಅನ್ನಾರ್ಥಿಯಾದವನನ್ನು ಭೋಜನಾದಿಗಳಿಂದ ಸತ್ಕರಿಸಲೇಬೇಕು. ಹಿಟ್ಟಿ ನಿಂದಲೂ ಚರು ಪಾಯಸಗಳಿಂದಲೂ ಪಿಂಡದಾನವನ್ನು ಮಾಡತಕ್ಕದ್ದು.

೫೯. ಅಥವಾ ಋಷಿಗಳು ಮಾಡುವಂತೆ, ತಿಲಪಿಷ್ಟದಿಂದಲೂ ಬೆಲ್ಲ ದಿಂದಲೂ ಅರ್ಘ್ಯ ಆವಾಹನಗಳಿಂದ ವರ್ಜಿತವಾದ ಶ್ರಾದ್ಧವನ್ನು ತೀರ್ಥ ಕ್ಷೇತ್ರಗಳಲ್ಲಿ ನಿರ್ವಹಿಸತಕ್ಕದ್ದು.

೬೦. ಅಕಾಲದಲ್ಲಿಯೊ ಸಕಾಲದಲ್ಲಿಯೊ ಯಾವಾಗಲಾದರೂ ತೀರ್ಥ

**ತೀರ್ಥಂ ಪ್ರಾಪ್ಯ ಪ್ರಸಂಗೇನ ಸ್ನಾನಂ ತೀರ್ಥೇ ಸಮಾಚರೇತ್ ।**
**ಸ್ನಾನಜಂ ಫಲಮಾಪ್ನೋತಿ ತೀರ್ಥಯಾತ್ರಾಶ್ರಿತಂ ನ ಚ** ॥ ೬೧ ॥
**ನೃಣಾಂ ಪಾಪಕೃತಾಂ ತೀರ್ಥೇ ಪಾಪಸ್ಯ ಶಮನಂ ಭವೇತ್ ।**
**ಯಥೋಕ್ತಫಲದಂ ತೀರ್ಥಂ ಭವೇಚ್ಛ್ರದ್ಧಾತ್ಮನಾಂ ನೃಣಾಂ** ॥ ೬೨ ॥
**ಷೋಡಶಾಂಶಂ ಸ ಲಭತೇ ಯಃ ಪರಾರ್ಥಂ ಚ ಗಚ್ಛತಿ ।**
**ಅರ್ಧಂ ತೀರ್ಥಫಲಂ ತಸ್ಯ ಯಃ ಪ್ರಸಂಗೇನ ಗಚ್ಛತಿ** ॥ ೬೩ ॥
**ಕುಶಪ್ರತಿಕೃತಿಂ ಕೃತ್ವಾ ತೀರ್ಥವಾರಿಣಿ ಮಜ್ಜಯೇತ್ ।**
**ಮಜ್ಜಯೇಚ್ಚ ಯಮುದ್ದಿಶ್ಯ ಸೋಽಷ್ಟಮಾಂಶಂ ಲಭೇತ ವೈ** ॥ ೬೪ ॥
**ತೀರ್ಥೋಪವಾಸಃ ಕರ್ತವ್ಯಃ ಶಿರಸೋ ಮುಂಡನಂ ತಥಾ ।**
**ಶಿರೋಗತಾನಿ ಪಾಪಾನಿ ಯಾಂತಿ ಮುಂಡನತೋಯತಃ** ॥ ೬೫ ॥

---

ಕ್ಷೇತ್ರಗಳಲ್ಲಿ ಶ್ರಾದ್ಧವನ್ನೂ ತರ್ಪಣವನ್ನೂ ಮಾಡಬೇಕು ವಿಳಂಬಮಾಡ ಕೂಡದು. ಅದಕ್ಕೆ ಯಾವ ವಿಘ್ನವನ್ನೂ ಒಡ್ಡಕೂಡದು.

೬೧ ತೀರ್ಥಯಾತ್ರೆಗೆಂದೇ ಅಲ್ಲದೆ ಪ್ರಾಸಂಗಿಕವಾಗಿಯಾದರೂ ತೀರ್ಥಕ್ಷೇತ್ರಗಳಿಗೆ ಹೋದರೆ, ಅಲ್ಲಿ ವಿಧ್ಯುಕ್ತವಾಗಿ ಸ್ನಾನವನ್ನು ಆಚರಿಸ ತಕ್ಕದ್ದು ಅದರಿಂದ ತೀರ್ಥಸ್ನಾನಫಲವು ದೊರೆಯುತ್ತದೆ. ಯಾತ್ರಾ ಫಲವಲ್ಲ

೬೨. ಪಾಪಗಳನ್ನು ಮಾಡಿರುವ ಮಾನವರಿಗೆ ತೀರ್ಥಯಾತ್ರೆಯಿಂದ ಆ ಪಾಪಗಳು ಶಮನವಾಗುತ್ತವೆ ಆದರೆ, ಶ್ರದ್ಧಾವಂತರಾದ ಮಾನವರಿಗೆ ಮಾತ್ರ ಆ ತೀರ್ಥವು ಯಥೋಕ್ತಫಲಪ್ರದಗಳೆಂಬುದರಲ್ಲಿ ಸಂದೇಹವಿಲ್ಲ

೬೩. ಇತರರಿಗೋಸ್ಕರ ತೀರ್ಥಯಾತ್ರೆಯನ್ನು ಮಾಡಿದರೆ, ಆ ಫಲದಲ್ಲಿ ಯಾತ್ರೆಮಾಡಿದವನಿಗೆ ಹದಿನಾರನೆಯ ಒಂದು ಅಂಶದ ಫಲವು ಮಾತ್ರಲಭಿಸು ತ್ತದೆ ಕಾರ್ಯಾಂತರದಿಂದ ತೀರ್ಥಕ್ಷೇತ್ರಗಳಿಗೆ ಹೋದರೂ ಯಾತ್ರಾಫಲ ದಲ್ಲಿ ಅರ್ಧಭಾಗವು ಲಭಿಸುತ್ತದೆ.

೬೪. ಯಾರನ್ನಾದರೂ ಉದ್ದೇಶಿಸಿ ಸ್ನಾನಮಾಡಬೇಕಾದರೆ ದರ್ಭೆಯನ್ನು ಪ್ರತಿನಿಧಿಯನ್ನಾಗಿಟ್ಟು ಸ್ನಾನಮಾಡತಕ್ಕದ್ದು. ಯಾರನ್ನುದ್ದೇಶಿಸಿ ಸ್ನಾನ ಮಾಡುವನೊ ಅವನು ಆ ಸ್ನಾನಫಲದಲ್ಲಿ ಎಂಟನೆಯ ಒಂದು ಭಾಗದ ಫಲವನ್ನು ಪಡೆಯುತ್ತಾನೆ.

೬೫. ತೀರ್ಥಕ್ಷೇತ್ರಗಳಿಗೆ ಹೋದಂದು ತೀರ್ಥೋಪವಾಸವನ್ನು ಮಾಡ ಬೇಕಲ್ಲದೆ ತಲೆಗೆ ಕ್ಷೌರವನ್ನೂ ಮಾಡಿಸಿಕೊಳ್ಳಬೇಕು. ಕ್ಷೌರಮಾಡಿಸಿಕೊಂಡು ಸ್ನಾನಮಾಡಿದಲ್ಲಿ ಸಮಸ್ತಪಾಪಗಳೂ ಆ ನೀರಿನೊಡನೆಯೆ ಕಳೆದು ಹೋಗುತ್ತದೆ.

ಯದಹ್ನಿ ತೀರ್ಥಪ್ರಾಪ್ತಿಃ ಸ್ಯಾತ್ತತ್ಪೂರ್ವೇಽಹ್ನಃ ಪೂರ್ವವಾಸರೇ ।
ಉಪವಾಸಸ್ತು ಕರ್ತವ್ಯಃ ಪ್ರಾಪ್ತಾಽಹ್ನಿ ಶ್ರಾದ್ಧದೋ ಭವೇತ್ ॥ ೬೬ ॥
ತೀರ್ಥಪ್ರಸಂಗಾತ್ತೀರ್ಥಾಂಗಮುಪ್ಯುಕ್ತಂ ತ್ವತ್ಪುರೋ ಮಯಾ ।
ಸ್ವರ್ಗಸಾಧನಮೇವೈತನ್ಮೋಕ್ಷೋಪಾಯಶ್ಚ ವೈ ಭವೇತ್ ॥ ೬೭ ॥
ಕಾಶೀ ಕಾಂಚೀ ಚ ಮಾಯಾಖ್ಯಾ ತ್ವಯೋಧ್ಯಾ ದ್ವಾರವತ್ಯಪಿ ।
ಮಥುರಾಽವಂತಿಕಾ ಚೈತಾಃ ಸಪ್ತಪುರ್ಯೋಽತ್ರ ಮೋಕ್ಷದಾಃ ॥ ೬೮ ॥
ಶ್ರೀಶೈಲೋ ಮೋಕ್ಷದಃ ಸರ್ವಃ ಕೇದಾರೋಽಪಿ ತತೋಽಧಿಕಃ ।
ಶ್ರೀಶೈಲಾಚ್ಚಾಽಪಿ ಕೇದಾರಾತ್ಪ್ರಯಾಗಂ ಮೋಕ್ಷದಂ ಪರಂ ॥ ೬೯ ॥
ಪ್ರಯಾಗದಪಿ ತೀರ್ಥಾಗ್ರ್ಯಾದವಿಮುಕ್ತಂ ವಿಶಿಷ್ಯತೇ ।
ಯಥಾವಿಮುಕ್ತೇ ನಿರ್ವಾಣಂ ನ ತಥಾ ಕ್ವಾಽಪ್ಯಸಂಶಯಂ ॥ ೭೦ ॥
ಅನ್ಯಾನಿ ಮುಕ್ತಿಕ್ಷೇತ್ರಾಣಿ ಕಾಶೀಪ್ರಾಪ್ತಿಕರಾಣಿ ಚ ।
ಕಾಶೀಂ ಪ್ರಾಪ್ಯಾಽಪಿ ಮುಚ್ಯೇತ ನಾಽನ್ಯಥಾ ತೀರ್ಥಕೋಟಿಭಿಃ ॥ ೭೧ ॥

---

೬೬. ಯಾವದಿನ ತೀರ್ಥಕ್ಷೇತ್ರವನ್ನು ಸೇರುವನೊ ಆ ದಿನದ ಹಿಂದಿನ ದಿನ ಉಪವಾಸವನ್ನು ಮಾಡಬೇಕು. ಕ್ಷೇತ್ರವನ್ನು ಸೇರಿದಂದು ಶಾದ್ಧವನ್ನು ಮಾಡತಕ್ಕದ್ದು.

೬೭ ಎಲೌ ಲೋಪಾಮುದ್ರೆಯು, ಪ್ರಸಂಗವಶದಿಂದ ನಿನಗೆ ಈ ತೀರ್ಥ ಯಾತ್ರಾ ವಿಷಯವನ್ನು ಹೇಳಿದ್ದಾಯಿತು. ಇದರಿಂದ ಸ್ವರ್ಗಸಾಧನೆಯಾಗುವುದು ಮೋಕ್ಷೋಪಾಯವೂ ದೊರೆಯುವುದು.

೬೮. ಕಾಶೀ ಕಾಂತೀ ಮಾಯಾ ಅಯೋಧ್ಯಾ ದ್ವಾರವತೀ ಮಧುರಾ ಅವಂತೀ—ಈ ಏಳೂ ಮೋಕ್ಷಪ್ರದಗಳಾದ ಪುರಿಗಳೆಂದು ಪ್ರಸಿದ್ಧವಾಗಿವೆ

೬೯. ಈ ಶ್ರೀಶೈಲಕ್ಷೇತ್ರವು ಸಮಸ್ತರಿಗೂ ಮೋಕ್ಷವನ್ನು ದೊರಕಿಸ ತಕ್ಕದ್ದು. ಇದಕ್ಕಿಂತಲೂ ಕೇದಾರಕ್ಷೇತ್ರವೂ, ಶ್ರೀಶೈಲ ಕೇದಾರ ಕ್ಷೇತ್ರಗಳಿಗಿಂತಲೂ ಪ್ರಯಾಗಕ್ಷೇತ್ರವೂ ಯಾತ್ರಿಕರಿಗೆ ಮೋಕ್ಷವನ್ನು ದೊರಕಿಸುವುದರಲ್ಲಿ ಶ್ರೇಷ್ಠವಾದವುಗಳು

೭೦ ಪ್ರಯಾಗಕ್ಷೇತ್ರಕ್ಕಿಂತಲೂ ಅವಿಮುಕ್ತವೆನಿಸಿದ ಕಾಶೀಕ್ಷೇತ್ರವು ಅತ್ಯಂತ ಶ್ರೇಷ್ಠವಾದದ್ದು. ಈ ಕ್ಷೇತ್ರದಲ್ಲಿ ಮುಕ್ತಿಯು ದೊರಕುವಂತೆ ಮತ್ತಾವ ಕ್ಷೇತ್ರದಲ್ಲಿಯೂ ದೊರಕುವುದಿಲ್ಲ

೭೧. ಉಳಿದ ಎಲ್ಲ ಮುಕ್ತಿಕ್ಷೇತ್ರಗಳೂ ಕಾಶೀಪ್ರಾಪ್ತಿಫಲವನ್ನು ಕೊಡುತ್ತವೆ. ಕಾಶೀಕ್ಷೇತ್ರವನ್ನು ಸೇರಿದ ಮಾನವನು ಪಡೆಯುವ ಮುಕ್ತಿಯನ್ನು ತೀರ್ಥಕೋಟಿಗಳಿಂದಲೂ ಪಡೆಯಲಾಗುವುದಿಲ್ಲ.

ಅತ್ರಾರ್ಥೇ ಕಥಯಿಷ್ಯೇಽಹಮಿತಿಹಾಸಂ ಪುರಾತನಂ ।
ಯಥಾ ವಿಷ್ಣುಗಣೈರುಕ್ತಂ ದ್ವಿಜಾಯ ಶಿವಶರ್ಮಣೇ ॥ ೭೨ ॥
ತೀರ್ಥಾಽಧ್ಯಾಯಮಿಮಂ ಶ್ರುತ್ವಾ ನರೋ ನಿಯತಮಾನಸಃ ।
ಶ್ರಾವಯಿತ್ವಾ ದ್ವಿಜಾಂಶ್ಚಾಽಪಿ ಶ್ರದ್ಧಾಭಕ್ತಿಸಮನ್ವಿತಾನ್ ॥ ೭೩ ॥
ಕ್ಷತ್ರಿಯಾನ್ಧರ್ಮನಿರತಾನ್ವೈಶ್ಯಾನ್ಸನ್ಮಾರ್ಗವರ್ತಿನಃ ।
ಶೂದ್ರಾನ್ದ್ವಿಜೇಷು ಭಕ್ತಾಂಶ್ಚ ನಿಷ್ಪಾಪೋ ಜಾಯತೇ ದ್ವಿಜಃ ॥ ೭೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಭಾಗೇ "ತೀರ್ಥಾಽಧ್ಯಾಯ ವರ್ಣನಂ" ನಾಮ ಷಷ್ಠೋಽಧ್ಯಾಯಃ

---

೭೨. ಎಲೌ ಲೋಪಾಮುದ್ರೆಯೆ, ಈ ವಿಷಯದಲ್ಲಿ ವಿಷ್ಣುಗಣಗಳು ಶಿವಶರ್ಮನೆಂಬ ಬ್ರಾಹ್ಮಣನಿಗೆ ಹೇಳಿದ ಪುರಾತನವಾದ ಇತಿಹಾಸವೊಂದನ್ನು ನಿನಗೆ ಹೇಳುತ್ತೇನೆ.

೭೩–೭೪. ಬ್ರಾಹ್ಮಣನಾದವನು ನಿಯತಮಾನಸನಾಗಿ ತೀರ್ಥಕ್ಷೇತ್ರಗಳ ವಿಷಯವನ್ನು ನಿರೂಪಿಸಿರುವ ಈ ಅಧ್ಯಾಯವನ್ನು ಕೇಳಿದರೂ, ಶ್ರದ್ಧಾಳುಗಳೂ ಭಕ್ತಿಸಂಪನ್ನರೂ ಆದ ಕ್ಷತ್ರಿಯರಿಗೂ ಸ್ವಧರ್ಮನಿರತರಾದ ವೈಶ್ಯರಿಗೂ ಸನ್ಮಾರ್ಗವರ್ತಿಗಳಾಗಿ ಬ್ರಾಹ್ಮಣರಲ್ಲಿ ಭಕ್ತಿಯಿರುವ ಶೂದ್ರರಿಗೂ ಕೇಳಿಸಿದರೂ ಪಾಪರಹಿತನಾಗುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ತೀರ್ಥಯಾತ್ರಾಧ್ಯಾಯ ವರ್ಣನ"ವೆಂಬ ಆರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಸಪ್ತಮೋಽಧ್ಯಾಯಃ

## ಸಪ್ತಪುರೀವರ್ಣನಂ

**ಅಗಸ್ತಿರುವಾಚ :—**

**ಮಥುರಾಯಾಂ ದ್ವಿಜಃ ಕಶ್ಚಿದಭೂದ್ಭೂದೇವಸತ್ತಮಃ ।**
**ತಸ್ಯ ಪುತ್ರೋ ಮಹಾತೇಜಾಃ ಶಿವಶರ್ಮೇತಿ ವಿಶ್ರುತಃ ॥ ೧ ॥**
**ಅಧೀತ್ಯ ವೇದಾನ್ವಿಧಿವದರ್ಥಂ ವಿಜ್ಞಾಯ ತತ್ತ್ವತಃ ।**
**ಪಠಿತ್ವಾ ಧರ್ಮಶಾಸ್ತ್ರಾಣಿ ಪುರಾಣಾನ್ಯಧಿಗಮ್ಯ ಚ ॥ ೨ ॥**
**ಅಂಗಾನ್ಯಭ್ಯಸ್ಯ ತರ್ಕಾಂಶ್ಚ ಪರಿಲೋಡ್ಯ ಸಮಂತತಃ ।**
**ಮೀಮಾಂಸಾದ್ವಯಮಾಲೋಕ್ಯ ಧನುರ್ವೇದಂ ವಿಗಾಹ್ಯ ಚ ॥ ೩ ॥**
**ಆಯುರ್ವೇದಂ ವಿಚಾರ್ಯಾಽಪಿ ನಾಟ್ಯವೇದೇ ಕೃತಶ್ರಮಃ ।**
**ಅರ್ಥಶಾಸ್ತ್ರಾಣ್ಯನೇಕಾನಿ ಪ್ರಾಪ್ಯಾಽಶ್ವಗಜಚೇಷ್ಟಿತಂ ॥ ೪ ॥**
**ಕಲಾಸು ಚ ಕೃತಾಽಭ್ಯಾಸೋ ಮಂತ್ರಶಾಸ್ತ್ರವಿಚಕ್ಷಣಃ ।**
**ಭಾಷಾಶ್ಚ ನಾನಾದೇಶಾನಾಂ ಲಿಪೀರ್ಜ್ಞಾತ್ವಾ ವಿದೇಶಜಾಃ ॥ ೫ ॥**

---

## ಕನ್ನಡದ ಅನುವಾದ

### ಸಪ್ತಪುರೀವರ್ಣನ

೧. ಅಗಸ್ತ್ಯಮುನಿಯು ಹೇಳುತ್ತಾನೆ —ಎಲೌ ಲೋಪಾಮುದ್ರೆಯೆ, ಮಥುರಾಪಟ್ಟಣದಲ್ಲಿ ಭೂದೇವಸತ್ತಮನೆಂಬ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ಮಹಾ ತೇಜಸ್ವಿಯಾದ ಶಿವಶರ್ಮನೆಂಬ ಮಗನಿದ್ದನು.

೨–೫ ಈ ಶಿವಶರ್ಮನು ಚತುರ್ವೇದಗಳನ್ನೂ ವಿಧಿವತ್ತಾಗಿ ಅಧ್ಯಯನ ಮಾಡಿ, ಅವುಗಳ ಅರ್ಥವನ್ನು ಯಥಾವತ್ತಾಗಿ ಅರಿತುಕೊಂಡು, ಧರ್ಮಶಾಸ್ತ್ರ ಪುರಾಣಾದಿಗಳನ್ನು ಓದಿ ತಿಳಿದು, ಶಿಕ್ಷಾ ವ್ಯಾಕಾರಣಾದಿ ಷಡಂಗಗಳನ್ನು ವ್ಯಾಸಂಗಮಾಡಿ, ತರ್ಕಶಾಸ್ತ್ರವನ್ನೆಲ್ಲ ಆಲೋಡನೆಮಾಡಿಕೊಂಡು, ಪೂರ್ವೋತ್ತರ ಮೀಮಾಂಸಾಶಾಸ್ತ್ರಗಳನ್ನು ಅರಿತು, ಧನುರ್ವೇದದಲ್ಲಿಯೂ ಪರಿಶ್ರಮವನ್ನೂ ಪಡೆದು, ಆಯುರ್ವೇದವನ್ನು ಪರಿಶೀಲಿಸಿ ನಾಟ್ಯವೇದವನ್ನೂ ಅಭ್ಯಾಸಮಾಡಿ, ಅನೇಕ ಪ್ರಕಾರವಾದ ಅರ್ಥಶಾಸ್ತ್ರಗಳ ಜ್ಞಾನವನ್ನು ಸಂಪಾದಿಸಿ, ಅಶ್ವಗಜ ಶಾಸ್ತ್ರಗಳಲ್ಲಿ ನಿಷ್ಠಿತನಾಗಿ, ಅರುವತ್ತ ನಾಲ್ಕು ಕಲೆಗಳಲ್ಲಿಯೂ ಮಂತ್ರಶಾಸ್ತ್ರ ದಲ್ಲಿಯೂ ವಿಚಕ್ಷಣನಾಗಿದ್ದನಲ್ಲದೆ, ಹಲವು ದೇಶಗಳ ಭಾಷೆ ಮತ್ತು ಲಿಪಿ ಗಳನ್ನೂ ಬಲ್ಲವನಾಗಿದ್ದನು.

ಅರ್ಥಾನುಪಾರ್ಜ್ಯ ಧರ್ಮೇಣ ಭುಕ್ತ್ವಾ ಭೋಗಾನ್ಯದೃಚ್ಛಯಾ ।
ಉತ್ಪಾದ್ಯ ಪುತ್ರಾನ್ಸುಗುಣಾಂಸ್ತೇಭ್ಯೋಽಹ್ಯರ್ಥಂ ವಿಭಜ್ಯ ಚ ॥ ೬ ॥
ಯೌವನಂ ಗತ್ವರಂ ಜ್ಞಾತ್ವಾ ಜರಾಂ ದೃಷ್ಟ್ವಾಶ್ರಿತಾಂ ಶ್ರುತಿಂ ।
ಚಿಂತಾಮವಾಪ ಮಹತೀಂ ಶಿವಶರ್ಮಾ ದ್ವಿಜೋತ್ತಮಃ ॥ ೭ ॥
ಪಠತೋ ಮೇ ಗತಃ ಕಾಲಸ್ತಥೋಪಾರ್ಜಯತೋ ಧನಂ ।
ನಾರಾಧಿತೋ ಮಹೇಶಾನಃ ಕರ್ಮನಿರ್ಮೂಲನಕ್ಷಮಃ ॥ ೮ ॥
ನ ಮಯಾ ತೋಷಿತೋ ವಿಷ್ಣುಃ ಸರ್ವಪಾಪಹರೋ ಹರಿಃ ।
ಸರ್ವಕಾಮಪ್ರದೋ ನೄಣಾಂ ಗಣೇಶೋ ನಾಽರ್ಚಿತೋ ಮಯಾ ॥ ೯ ॥
ತಮಸ್ತೋಮಹರಃ ಸೂರ್ಯೋ ನಾಽರ್ಚಿತೋ ವೈ ಮಯಾ ಕ್ವಚಿತ್ ।
ಮಹಾಮಾಯಾ ಜಗದ್ಧಾತ್ರೀ ನ ಧ್ಯಾತಾ ಭವಬಂಧಹೃತ್ ॥ ೧೦ ॥
ನ ಪ್ರೀಣಿತಾ ಮಯಾ ದೇವಾ ಯಜ್ಞೈಃ ಸರ್ವೈಃ ಸಮೃದ್ಧಿದಾಃ ।
ತುಲಸೀವನಶುಶ್ರೂಷಾ ನ ಕೃತಾ ಪಾಪಶಾಂತಯೇ ॥ ೧೧ ॥

---

೬–೭. ಇವನು ಧರ್ಮದಿಂದಲೆ ಧನವನ್ನಾರ್ಜಿಸಿ, ಉತ್ತಮಭೋಗಗಳನ್ನು ಭೋಗಿಸಿ, ಸತ್ಪುತ್ರರನ್ನು ಪಡೆದು, ಸದ್ಗುಣವಂತರಾದ ಅವರಿಗೆ ತನ್ನ ಆಸ್ತಿಯನ್ನೆಲ್ಲ ಹಂಚಿಕೊಟ್ಟು, ಆ ತರುವಾಯ ತನ್ನಲ್ಲಿನ ಯೌವನವು ಕಳೆದು ಮುಪ್ಪು ಬಂದುದನ್ನು ಕಂಡು, ಅದರಿಂದ ಆಗುವ ಪರಿಣಾಮವನ್ನು ಅರಿತು ಬಹಳವಾದ ಚಿಂತೆಗೀಡಾದನು.

೮. "ಆಹ, ವ್ಯಾಸಂಗಮಾಡುತ್ತಿರುವಂತೆಯೆ ನನ್ನ ಆಯುಸ್ಸಿನ ಕೆಲವು ಕಾಲ ಕಳೆದುಹೋಯಿತು. ಇದಾದ ಬಳಿಕ ದ್ರವ್ಯಾರ್ಜನೆಯಲ್ಲಿ ಬಹಳಕಾಲ ಕಳೆಯಿತು. ನಾನು ಕರ್ಮವನ್ನೇ ನಿರ್ಮೂಲಗೊಳಿಸುವುದರಲ್ಲಿ ದಕ್ಷನೆನಿಸಿದ ಮಹೇಶ್ವರನನ್ನು ಆರಾಧಿಸಲಿಲ್ಲ.

೯. ಸಮಸ್ತಪಾಪಗಳನ್ನೂ ಪರಿಹರಿಸುವ ಶ್ರೀಹರಿಯನ್ನು ನಾನು ಪೂಜಾದಿಗಳಿಂದ ತೃಪ್ತಿಗೊಳಿಸಲಿಲ್ಲ. ಸಮಸ್ತ ಅಭೀಷ್ಟಗಳನ್ನೂ ದಯಪಾಲಿಸುವ ಗಣೇಶನನ್ನೂ ನಾನು ಅರ್ಚಿಸಲಿಲ್ಲ.

೧೦. ಒಳಗಿನ ಹೊರಗಿನ ಅಂಧಕಾರವೆಲ್ಲವನ್ನೂ ತೊಲಗಿಸುವ ಸೂರ್ಯ ಭಗವಂತನನ್ನು ನಾನಾವಾಗಲೂ ಪೂಜಿಸಲಿಲ್ಲ. ಭವಬಂಧವನ್ನು ಸಡಲಿಸುವ ಜಗದ್ಧಾತ್ರಿಯಾದ ಮಹಾಮಾಯೆಯನ್ನು ನಾನು ಧ್ಯಾನಿಸಲೇ ಇಲ್ಲ.

೧೧. ನಾನು ಐಶ್ವರ್ಯಪ್ರದರಾದ ದೇವತೆಗಳನ್ನು ವಾಜಪೇಯಾದಿ ಯಜ್ಞಗಳಿಂದ ಸಂತೋಷಗೊಳಿಸಲಿಲ್ಲ. ಪಾಪಶಾಂತಿಗಾಗಿ ತುಳಸಿಯ ತೋಟವನ್ನುಮಾಡಿ ಪೋಷಿಸಲಿಲ್ಲ.

ನ ಮಯಾ ತರ್ಪಿತಾ ವಿಪ್ರಾ ಮೃಷ್ಟಾನ್ನೈರ್ಮಧುರೈ ರಸೈಃ ।
ಇಹಾಽಪಿ ಚ ಪರತ್ರಾಽಪಿ ವಿಪದಾಮನುತಾರಕಾಃ ॥ ೧೨ ॥
ಬಹುಪುಷ್ಪಫಲೋಪೇತಾಃ ಸುಚ್ಛಾಯಾಃ ಸ್ನಿಗ್ಧಪಲ್ಲವಾಃ ।
ಪಥಿ ನಾರೋಪಿತಾ ವೃಕ್ಷಾ ಇಹಾಽಮುತ್ರ ಫಲಪ್ರದಾಃ ॥ ೧೩ ॥
ದುಕೂಲೈಃ ಸ್ವಾನುಕೂಲೈಶ್ಚ ಚೋಲೈಃ ಪ್ರತ್ಯಂಗಭೂಷಣೈಃ ।
ನಾಽಲಂಕೃತಾಃ ಸುವಾಸಿನ್ಯ ಇಹಾಽಮುತ್ರ ಸುವಾಸದಾಃ ॥ ೧೪ ॥
ದ್ವಿಜಾಯ ನೋರ್ವರಾ ದತ್ತಾ ಯಮಲೋಕನಿವಾರಿಣೀ ।
ಸುವರ್ಣಂ ನ ಸುವರ್ಣಾಯ ದತ್ತಂ ದುರಿತಹೃತ್ಪರಂ ॥ ೧೫ ॥
ನಾಽಲಂಕೃತಾ ಸವತ್ಸಾ ಗೌಃ ಪಾತ್ರಾಯ ಪ್ರತಿಪಾದಿತಾ ।
ಇಹ ಪಾಪಾಪಹಂತ್ರ್ಯಾಶು ಸಪ್ತಜನ್ಮಸುಖಾವಹಾ ॥ ೧೬ ॥
ಋಣಾಽಪನುತ್ತಯೇ ಮಾತುಃ ಕಾರಿತೋ ನ ಜಲಾಶಯಃ ।
ನಾಽತಿಥಿಸ್ತೋಷಿತಃ ಕ್ವಾಽಪಿ ಸ್ವರ್ಗಮಾರ್ಗಪ್ರದರ್ಶಕಃ ॥ ೧೭ ॥

---

೧೨. ಮಧುರವೂ ಷಡ್ರಸಭರಿತವೂ ಆದ ಮೃಷ್ಟಾನ್ನಗಳಿಂದ ಬ್ರಾಹ್ಮಣರಿಗೆ ಭೋಜನಮಾಡಿಸಿ ಅವರನ್ನು ತೃಪ್ತಿಪಡಿಸಲಿಲ್ಲ. ಆ ಬ್ರಾಹ್ಮಣರಾದರೊ ಈ ಲೋಕ ಪರಲೋಕಗಳಲ್ಲಿ ಬಂದೊದಗುವ ವಿಪತ್ತುಗಳನ್ನು ಕಳೆಯುವ ಸಾಮರ್ಥ್ಯವುಳ್ಳವರು.

೧೩–೧೪ ಇಹಪರಗಳಲ್ಲಿ ಶುಭಫಲವನ್ನು ದೊರಕಿಸುವ, ಬಹುಪುಷ್ಪಫಲ ಭರಿತಗಳಾಗಿ ತಣ್ಣನೆಯ ನೆಳಲನ್ನು ಕೊಡುವ ನಾಲುಮರಗಳನ್ನು ದಾರಿಯಲ್ಲಿ ನೆಟ್ಟು ಬೆಳಸಲಿಲ್ಲ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಸುಖವಾಸವನ್ನು ದೊರಕಿಸುವ ಸುವಾಸಿನಿಯರಿಗೆ ನಾನು ಅನುಕೂಲವಾದ ದುಕೂಲಗಳನ್ನಾಗಲಿ ಕುಪ್ಪಸದ ಕಣಗಳನ್ನಾಗಲಿ ಅಂಗಭೂಷಣಗಳನ್ನಾಗಲಿ ದಾನಮಾಡಿ ಸತ್ಕರಿಸಿರುವುದಿಲ್ಲ.

೧೫ ಬ್ರಾಹ್ಮಣನಿಗೆ ಯಮಲೋಕನಿವಾರಕವಾದ ಭೂದಾನವನ್ನು ಮಾಡಿರುವುದಿಲ್ಲ. ಪಾಪಗಳನ್ನು ನಿರ್ಮೂಲಗೊಳಿಸುವುದರಲ್ಲಿ ಉತ್ತಮವೆನಿಸಿದ ಸುವರ್ಣದಾನವನ್ನೂ ಮಾಡಿರುವುದಿಲ್ಲ.

೧೬. ಈ ಲೋಕದಲ್ಲಿ ಮಾನವನ ಸಮಸ್ತಪಾಪಗಳನ್ನೂ ಕಳೆದು ಮುಂದಿನ ಏಳು ಜನ್ಮಗಳಲ್ಲಿ ಸುಖ ಸಂತೋಷಗಳನ್ನು ದೊರಕಿಸುವ ಎಳೆಕರುವಿನಿಂದ ಕೂಡಿದ ಗೋವನ್ನು ಸತ್ಪಾತ್ರನಿಗೆ ದಾನಮಾಡಿರುವುದಿಲ್ಲ.

೧೭. ಮಾತೃಋಣವನ್ನು ಕಳೆಯುವುಕ್ಕಾಗಿ ನಾನು ಜಲಾಶಯವನ್ನೂ ನಿರ್ಮಾಣಮಾಡಿಸಿರುವುದಿಲ್ಲ, ಅಂತೆಯೆ ಸ್ವರ್ಗಕ್ಕೆ ಹಾದಿಯನ್ನು ತೋರುವ ಅತಿಥಿಯನ್ನೂ ಸಂತೋಷಗೊಳಿಸಿರುವುದಿಲ್ಲ.

ಛತ್ರೋಪಾನತ್ಕುಂಡಿಕಾಶ್ಚ ನಾಽಧ್ವಗಾಯ ಸಮರ್ಪಿತಾಃ ।
ಯಾಸ್ಯತಃ ಸಂಯಮಿನ್ಯಾಂ ಹಿ ಸ್ವರ್ಗಮಾರ್ಗಸುಖಪ್ರದಾಃ ॥ ೧೮ ॥
ನ ಚ ಕನ್ಯಾವಿವಾಹಾರ್ಥಂ ವಸು ಕ್ವಾಽಪಿ ಮಯಾಽರ್ಪಿತಂ ।
ಇಹ ಸೌಖ್ಯಸಮೃದ್ಧ್ಯರ್ಥಂ ದಿವ್ಯಕನ್ಯಾಽರ್ಪಕಂ ದಿವಿ ॥ ೧೯ ॥
ನ ವಾಜಪೇಯಾಽವಭೃಥೇ ಸ್ನಾತೋ ಲೋಭವಶಾದಹಂ ।
ಇಹ ಜನ್ಮನಿ ಚಾಽನ್ಯಸ್ಮಿನ್ಬಹುಮೃಷ್ಟಾನ್ನಪಾನದೇ ॥ ೨೦ ॥
ನ ಮಯಾ ಸ್ಥಾಪಿತಂ ಲಿಂಗಂ ಕೃತ್ವಾ ದೇವಾಲಯಂ ಶುಭಂ ।
ಯಸ್ಮಿನ್ಸಂಸ್ಥಾಪಿತೇ ಲಿಂಗೇ ವಿಶ್ವಂ ಸಂಸ್ಥಾಪಿತಂ ಭವೇತ್ ॥ ೨೧ ॥
ವಿಷ್ಣೋರಾಯತನಂ ನೈವ ಕೃತಂ ಸರ್ವ ಸಮೃದ್ಧಿದಂ ।
ನ ಚ ಸೂರ್ಯಗಣೇಶಾನಾಂ ಪ್ರತಿಮಾಃ ಕಾರಿತಾ ಮಯಾ ॥ ೨೨ ॥
ನ ಗೌರೀ ನ ಮಹಾಲಕ್ಷ್ಮೀಶ್ಚಿತ್ರೇಽಪಿ ಪರಿಲೇಖಿತೇ ।
ಪ್ರತಿಮಾಕರಣೇ ಚೈಷಾಂ ನ ಕುರೂಪೋ ನ ದುರ್ಭಗಃ ॥ ೨೩ ॥

---

೧೮. ದೇಹಾವಸಾನವಾದ ಮೇಲೆ ಯಮಲೋಕಕ್ಕೆ ಪ್ರಯಾಣಮಾಡುವಾಗ, ಸ್ವರ್ಗಕ್ಕೆ ಹಾದಿಯನ್ನು ತೋರಿಸುವ ಕೊಡೆ ಚಪ್ಪಲಿ ಮೊದಲಾದುವುಗಳನ್ನು ಪಾಂಥರಿಗೆ ಸಮರ್ಪಿಸಲಿಲ್ಲ.

೧೯. ಕನ್ಯಾವಿವಾಹಾರ್ಥವಾಗಿ ಯಾವಾಗಲೂ ನಾನು ದ್ರವ್ಯವನ್ನು ದಾನಮಾಡಲಿಲ್ಲ. ಕನ್ಯಾವಿವಾಹಕ್ಕಾಗಿ ಮಾಡುವ ದ್ರವ್ಯದಾನವು ಇಹಲೋಕದಲ್ಲಿ ಸೌಖ್ಯಸಮೃದ್ಧಿಯನ್ನು ಕೊಟ್ಟು, ಸ್ವರ್ಗಲೋಕದಲ್ಲಿ ಅಪ್ಸರಾಂಗನೆಯರನ್ನು ಸಮರ್ಪಿಸುತ್ತದೆಯಲ್ಲವೆ ?

೨೦. ಲೋಭಕ್ಕೆ ಒಳಗಾದ ನಾನು ಈ ಲೋಕದಲ್ಲಿಯೂ, ಆ ಲೋಕದಲ್ಲಿಯೂ ಬಹು ಮೃಷ್ಟಾನ್ನಪಾನಗಳನ್ನು ಕೊಡುವುದಾದ ವಾಜಪೇಯಯಾಗವನ್ನು ಮಾಡಿ ಅವಭೃತಸ್ನಾನವನ್ನು ಮಾಡಿರುವುದಿಲ್ಲ.

೨೧. ಯಾವುದನ್ನು ಪ್ರತಿಷ್ಠೆಮಾಡುವುದರಿಂದ ಪ್ರಪಂಚವೇ ಪ್ರತಿಷ್ಠಿತವಾದಂತಾಗುವುದೊ ಅಂಥ ಶಿವಲಿಂಗವನ್ನು ಪ್ರತಿಷ್ಠಾಪಿಸಿ ಮಂಗಳಕರವಾದ ದೇವಾಲಯವನ್ನು ರಚಿಸಿರುವುದಿಲ್ಲ

೨೨. ಸಮಸ್ತ ಸಂಪಸ್ಸಮೃದ್ಧಿಯನ್ನೂ ಒದಗಿಸುವ ವಿಷ್ಣುದೇವಾಲಯವನ್ನಾಗಲಿ ಸೂರ್ಯ ಗಣೇಶರ ಪ್ರತಿಮೆಗಳನ್ನಾಗಲಿ ನಾನು ಮಾಡಿಸಿರುವುದಿಲ್ಲ.

೨೩. ಯಾವುದನ್ನು ಮಾಡಿಸುವುದರಿಂದ ಕುರೂಪಿಯೂ ದುರ್ಭಗನೂ ಆಗಿ ಹುಟ್ಟುವುದಿಲ್ಲವೊ ಅಂಥ ಗೌರೀ ಮಹಾಲಕ್ಷ್ಮಿಯರ ಪ್ರತಿಮೆಗಳನ್ನು ಮಾಡಿಸಿರುವುದಿಲ್ಲ, ಕಡೆಗೆ ಆ ದೇವಿಯರನ್ನು ಚಿತ್ರಫಲಕಗಳಲ್ಲಿಯೂ ಬರೆಯಿಸಿರುವುದಿಲ್ಲ.

ಸುಸೂಕ್ಷ್ಮಾಣಿ ವಿಚಿತ್ರಾಣಿ ಸೋಜ್ಜ್ವಲಾನ್ಯಂಬರಾಣ್ಯಪಿ ।
ಸಮರ್ಪಿತಾನಿ ವಿಪ್ರೇಭ್ಯೋ ದಿವ್ಯಾಂಬರಸಮೃದ್ಧಯೇ ॥ ೨೪ ॥
ನ ತಿಲಾಶ್ಚ ಘೃತೇನಾಕ್ತಾಃ ಸುಸಮಿದ್ಧೇ ಹುತಾಶನೇ ।
ಹುತಾ ವೈ ಮಂತ್ರಪೂತಾಶ್ಚ ಸರ್ವಪಾಪಾಪನುತ್ತಯೇ ॥ ೨೫ ॥
ಶ್ರೀಸೂಕ್ತಂ ಪಾವಮಾನೀ ಚ ಬ್ರಾಹ್ಮಣೋ ಮಂಡಲಾನಿ ಚ ।
ಜಪ್ತಂ ಪುರುಷಸೂಕ್ತಂ ನ ಪಾಪಾರಿ ಶತರುದ್ರಿಯಂ ॥ ೨೬ ॥
ಅಶ್ವತ್ಥಸೇವಾ ನ ಕೃತಾ ತ್ಯಕ್ತ್ವಾ ಚಾರ್ಕಂ ತ್ರಯೋದಶೀಂ ।
ಸದ್ಯಃ ಪಾಪಹರಾ ಸಾಹಿ ನ ರಾತ್ರೌ ನ ಭೃಗೋರ್ದಿನೇ ॥ ೨೭ ॥
ಶಯನೀಯಂ ನ ಚೋತ್ಸೃಷ್ಟಂ ಮೃದುಲಾ ಚ ಪ್ರತೂಲಿಕಾ ।
ದೀಪೀ ದರ್ಪಣಸಂಯುಕ್ತಂ ಸರ್ವಭೋಗಸಮೃದ್ಧಿದಂ ॥ ೨೮ ॥
ಅಜಾಽಶ್ವಮಹಿಷೀ ಮೇಷೀ ದಾಸೀ ಕೃಷ್ಣಾಜಿನಂ ತಿಲಾಃ ।
ಸಕರಂಭಾಸ್ತೋಯಕುಂಭಾ ನಾಸನಂ ಮೃದುಪಾದುಕೇ ॥ ೨೯ ॥

---

೨೪. ಸ್ವರ್ಗಲೋಕದಲ್ಲಿ ಬೇಕುಬೇಕಾದಹಾಗೆ ಪೀತಾಂಬರಗಳನ್ನು ಒದಗಿಸುವ ಸೂಕ್ಷ್ಮಗಳೂ, ವಿಚಿತ್ರಗಳೂ, ಉಜ್ಜ್ವಲಗಳೂ ಆದ ಪೀತಾಂಬರಗಳನ್ನು ನಾನು ಈ ವರೆಗೂ ದಾನಮಾಡಿರುವುದಿಲ್ಲ

೨೫. ಸಮಸ್ತ ಪಾಪನಿವಾರಣೆಗಾಗಿ ಮಂತ್ರಪೂತಗಳೂ, ಘೃತಸಮನ್ವಿತಗಳೂ ಆದ ತಿಲಗಳನ್ನು ಸಂಪತ್ಕಾಮನಾಗಿ ಯಜ್ಞೇಶ್ವರನಲ್ಲಿ ಹೋಮಮಾಡಿರುವುದಿಲ್ಲ.

೨೬. ಪಾಪಗಳನ್ನು ಕಳೆಯುವವುಗಳಾದ ಶ್ರೀಸೂಕ್ತ ಪವಮಾನಸೂಕ್ತ ಐತರೇಯಾದಿ ಬ್ರಾಹ್ಮಣಗಳು, ಋಗ್ವೇದದಲ್ಲಿ ಪ್ರಸಿದ್ಧಗಳಾದ ದಶಮಂಡಲಗಳು, ಪುರುಷಸೂಕ್ತ ಶತರುದ್ರಿಯ ಮೊದಲಾದವುಗಳನ್ನು, ಪಾರಾಯಣಮಾಡಿರುವುದಿಲ್ಲ.

೨೭. ಭಾನುವಾರ, ತ್ರಯೋದಶಿ, ರಾತ್ರಿಯ ಕಾಲಗಳು ಶುಕ್ರವಾರ— ಈ ಸಮಯಗಳನ್ನು ಬಿಟ್ಟು ಇತರ ದಿನಗಳಲ್ಲಿ ಅಶ್ವತ್ಥವೃಕ್ಷದ ಪೂಜಾ ಪ್ರದಕ್ಷಿಣಾದಿಗಳನ್ನು ನಾನೆಸಗಿರುವುದಿಲ್ಲ.

೨೮. ಸಮಸ್ತ ಭೋಗಸಮೃದ್ಧಿಯನ್ನೂ ದೊರಕಿಸುವ ಬಹು ಸೊಗಸಾದ ಮೆತ್ತನೆಯ ಹತ್ತಿಯಿಂದ ಹೊಲೆದು ಮಾಡಿದ ಹಾಸಿಗೆಯನ್ನು ಪ್ರಕಾಶಮಾನವಾದ ಕನ್ನಡಿಯೊಡನೆಯೂ ದೀಪದೊಡನೆಯೂ ದಾನಮಾಡಿರುವುದಿಲ್ಲ.

೨೯–೩೦. ಆಡು ಕುದುರೆ ಎಮ್ಮೆ ಕುರಿ ದಾಸಿ ಕೃಷ್ಣಾಜಿನ ತಿಲಸತ್ತು ಪೂರ್ಣಕುಂಭಗಳು, ಮೆತ್ತನೆಯ ಆಸನ, ಮೃದುವಾದ ಪಾದುಕೆಗಳು,

ಪಾದಾಭ್ಯಂಗಂ ದೀಪದಾನಂ ಪ್ರಪಾದಾನಂ ವಿಶೇಷತಃ ।
ವ್ಯಜನಂ ವಸ್ತ್ರತಾಂಬೂಲಂ ತಥಾಽನ್ಯನ್ಮುಖವಾಸಕೃತ್ ॥ ೩೦ ॥
ನಿತ್ಯಶ್ರಾದ್ಧಂ ಭೂತಬಲಿಂ ತಥಾಽತಿಥಿಸಮರ್ಚನಂ ।
ವಿಶಂತ್ಯನ್ಯಾನಿ ದತ್ವಾ ಚ ಪ್ರಶಸ್ಯಾನಿಯಮಾಲಯೇ ॥ ೩೧ ॥
ನ ಯಮಂ ಯಮದೂತಾಂಶ್ಚ ನ ಯಾಮೀಾರಪಿ ಯಾತನಾಃ ।
ಪಶ್ಯಂತಿ ತೇ ಪುಣ್ಯಭಾಜೋ ನೈತಚ್ಚಾಽಪಿ ಕೃತಂ ಮಯಾ ॥ ೩೨ ॥
ಕೃಚ್ಛ್ರಚಾಂದ್ರಾಯಣಾದೀನಿ ತಥಾ ನಕ್ತವ್ರತಾನಿ ಚ ।
ಶರೀರಶುದ್ಧಿಕಾರೀಣಿ ನ ಕೃತಾನಿ ಕ್ವಚಿನ್ಮಯಾ ॥ ೩೩ ॥
ಗವಾಹ್ನಿಕಂ ಚ ನೋ ದತ್ತಂ ಗೋಕಂಡೂತಿರ್ನ ವೈ ಕೃತಾ ।
ನೋದ್ಧೃತಾ ಪಂಕಮಗ್ನಾ ಗೌರ್ಗೋಲೋಕಸುಖದಾಯಿನೀ ॥ ೩೪ ॥
ನಾಽರ್ಥಿನಃ ಪ್ರಾರ್ಥಿತೈರರ್ಥೈಃ ಕೃತಾರ್ಥಾ ಹಿ ಮಯಾ ಕೃತಾಃ ।
ದೇಹಿ ದೇಹೀತಿ ಜಲ್ಪಾಕೋ ಭವಿಷ್ಯಾಮ್ಯನ್ಯ ಜನ್ಮನಿ ॥ ೩೫ ॥

---

ಪಾದಾಭ್ಯಂಗ ದೀಪ ಅರವಟ್ಟಿಗೆ ವ್ಯಂಜನ ವಸ್ತ್ರ ತಾಂಬೂಲ ಮೊದಲಾದುವುಗಳನ್ನು ದಾನಮಾಡಿರುವುದಿಲ್ಲ

೩೧. ಯಾವವುಗಳನ್ನು ಮಾಡಿದರೆ ಯಮಾಲಯದಲ್ಲಿ ಪ್ರಶಸ್ತಗಳಾಗಿ ಭವ್ಯ ಭವನಗಳ ವಾಸವು ಲಭಿಸುತ್ತದೆಯೊ ಅಂಥ ನಿತ್ಯಶ್ರಾದ್ಧ ಭೂತಬಲಿ ಮತ್ತು ಅತಿಥಿಪೂಜೆಗಳನ್ನೂ ಮಾಡಿರುವುದಿಲ್ಲ

೩೨. ಈ ಎಲ್ಲ ದಾನಗಳನ್ನೂ ಮಾಡಿದ್ದರೆ ಯಮನನ್ನಾಗಲಿ ಯಮದೂತರನ್ನಾಗಲಿ ನೋಡುವುದೂ, ಯಮಲೋಕದ ಯಾತನೆಗಳನ್ನು ಅನುಭವಿಸುವುದೂ ತಪ್ಪಿ ಪುಣ್ಯಭಾಗಿಯಾಗುತ್ತಿದ್ದೆ. ಆದರೆ, ಇವುಗಳಲ್ಲಿ ಏನನ್ನೂ ನಾನು ಮಾಡಿಲ್ಲ.

೩೩–೩೪. ಶರೀರಶುದ್ಧಿಯನ್ನುಂಟುಮಾಡುವ ಕೃಚ್ಛ್ರ ಚಾಂದ್ರಾಯಣ ನಕ್ತವೇ ಮೊದಲಾದ ವ್ರತಗಳನ್ನು ಒಂದು ಬಾರಿಯೂ ಮಾಡಿರುವುದಿಲ್ಲ. ಪ್ರತಿದಿನವೂ ಗೋವುಗಳಿಗೆ ಗ್ರಾಸವನ್ನು ಕೊಟ್ಟು ಅವುಗಳ ಮೈಯನ್ನು ಕೆರೆದು ನೀವಿ ಸೇವೆಮಾಡಿರುವುದಿಲ್ಲ, ಅಲ್ಲದೆ ಗೋಲೋಕದಲ್ಲಿ ಸುಖವನ್ನು ದೊರಕಿಸುವ ಕಾರ್ಯವೆನಿಸಿರುವ ಕೆಸರಿನಲ್ಲಿ ಸಿಕ್ಕಿ ಬಿದ್ದ ಗೋವುಗಳನ್ನೂ ಉದ್ಧರಿಸಿರುವುದಿಲ್ಲ.

೩೫. ಯಾಚಕರಾಗಿ ಬಂದು ಬೇಡಿದವರಿಗೆ ಬೇಕಾದಷ್ಟು ಹಣವನ್ನು ಕೊಟ್ಟು ಅವರನ್ನು ಕೃತಾರ್ಥರನ್ನಾಗಿ ಮಾಡಲಿಲ್ಲ. ಇದರಿಂದ ಮುಂದಣ ಜನ್ಮದಲ್ಲಿ ನಾನು, "ದೇಹಿ ದೇಹಿ" ಎಂದು ಕೂಗಿ ಬೇಡಿಹೋಕನಾಗಿ ಹುಟ್ಟುತ್ತೇನೆ.

ನ ವೇದಾ ನ ಚ ಶಾಸ್ತ್ರಾಣಿ ನಾರ್ಥೋ ದಾರಾ ನ ನೋ ಸುತಃ ।
ನ ಕ್ಷೇತ್ರಂ ನ ಚ ಹರ್ಮ್ಯಾದಿರಾಯಾಂತಮನುಯಾಸ್ಯತಿ ॥ ೩೬ ॥
ಶಿವಶರ್ಮೇತಿ ಸಂಚಿಂತ್ಯ ಬುದ್ಧಿಂ ಸಂಧಾಯ ಸರ್ವತಃ ।
ನಿಶ್ಚಿಕಾಯ ಮನಸ್ಯೇವಂ ಭವೇತ್ಶ್ರೇಯಸ್ತರಂ ಮಮ ॥ ೩೭ ॥
ಯಾವತ್ಸ್ವಸ್ಥೋಽಸ್ತಿ ಮೇ ದೇಹೋ ಯಾವನ್ನೇಂದ್ರಿಯವಿಕ್ಲವಃ ।
ತಾವತ್ಸ್ವಶ್ರೇಯಸಾಂ ಹೇತುಂ ತೀರ್ಥಯಾತ್ರಾಂ ಕರೋಮ್ಯಹಂ ॥ ೩೮ ॥
ದಿನಾನಿ ಪಂಚಷಾಣ್ಯೇವಮತಿವಾಹ್ಯ ಗೃಹೇ ದ್ವಿಜಃ ।
ಶುಭೇ ತಿಥೌ ಶುಭೇ ವಾರೇ ಶುಭಲಗ್ನಬಲೇ ದ್ವಿಜಃ ॥ ೩೯ ॥
ಉಪೋಷ್ಯ ರಜನೀಮೇಕಾಂ ಪ್ರಾತಃ ಶ್ರಾದ್ಧಂ ವಿಧಾಯ ಚ ।
ಗಣೇಶಾನ್ಬ್ರಾಹ್ಮಣಾನ್ನತ್ವಾ ಭುಕ್ತ್ವಾ ಪ್ರಸ್ಥಿತವಾನ್ಸುಧೀಃ ॥ ೪೦ ॥
ಇತಿ ನಿಶ್ಚಿತ್ಯ ನಿರ್ವಾಣಪದನಿಃಶ್ರೇಣಿಕಾಂ ಪರಾಂ ।
ಸರ್ವೇಷಾಮೇವ ಜಂತೂನಾಂ ತತ್ರ ಸಂಸ್ಥಿತಿಕಾರಿಣಾಂ ॥ ೪೧ ॥
ಅಥ ಪಂಥಾನಮಾಕ್ರಮ್ಯ ಕಿಯಂತಮಪಿ ಸ ದ್ವಿಜಃ ।
ಮುಹೂರ್ತಂ ಪಥಿ ವಿಶ್ರಮ್ಯಾಚಿಂತಯತ್ಕ್ವಯಾಮ್ಯಹಂ ॥ ೪೨ ॥

---

೩೬. ಹೊಲ ಮನೆ ಹಣ ಹೆಂಡತಿ ಮಕ್ಕಳು ವೇದ ಶಾಸ್ತ್ರ ಮೊದಲಾದುವುಗಳಾವುವೂ ಈ ಲೋಕಕ್ಕೆ ಬರುವಾಗ ಮಾನವನನ್ನು ಹಿಂಬಾಲಿಸಿ ಬರಲಿಲ್ಲ."

೩೭ ಎಲೈ ಸೂತಪುರಾಣಿಕನೆ, ಆ ಶಿವಶರ್ಮನು ಈ ರೀತಿ ಎಲ್ಲ ವಿಷಯಗಳನ್ನೂ ವಿಚಾರಮಾಡಿ, ಎಲ್ಲ ಬಗೆಯಲ್ಲಿಯೂ ಯಾವುದು ತನಗೆ ಒಳ್ಳೆಯದೆಂಬುದನ್ನು ಯೋಚಿಸಿ ಒಂದು ನಿಶ್ಚಯಕ್ಕೆ ಬಂದನು.

೩೮. "ನನ್ನ ದೇಹವು ಸ್ವಸ್ಥವಾಗಿರುವುದರೊಳಗಾಗಿ, ಇಂದ್ರಿಯ ಪಟುತ್ವವು ಕುಗ್ಗದಿರುವಷ್ಟರಲ್ಲಿಯೆ ಶ್ರೇಯಸ್ಸಾಧನವಾದ ತೀರ್ಥಯಾತ್ರೆಯನ್ನು ಮಾಡುತ್ತೇನೆ"

೩೯–೪೦. ಆ ಬ್ರಾಹ್ಮಣನು ಈ ರೀತಿ ನಿರ್ಣಯಿಸಿಕೊಂಡು, ಐದಾರು ದಿನಗಳು ಕಳೆದ ತರುವಾಯ, ಶುಭಕರವಾದ ತಿಥಿ ವಾರ ಲಗ್ನಬಲಗಳುಳ್ಳ ದಿನದಲ್ಲಿ, ಒಂದು ರಾತ್ರಿ ಉಪವಾಸವಿದ್ದು ಮಾರನೆಯ ಬೆಳಗ್ಗೆ ಶ್ರಾದ್ಧವನ್ನು ಮಾಡಿ, ಗಣೇಶಪೂಜೆಯನ್ನೆಸಗಿ ಬ್ರಾಹ್ಮಣರನ್ನರ್ಚಿಸಿ ಪಾರಣೆಮಾಡಿಕೊಂಡು ತೀರ್ಥಯಾತ್ರೆಗೆ ಹೊರಟನು.

೪೧–೪೨. ಹೀಗೆ ತೀರ್ಥಪರ್ಯಟನವೇ ಸಮಸ್ತ ಜಂತುಗಳಿಗೂ ಶಾಶ್ವತವೂ, ಉತ್ಕೃಷ್ಟವೂ ಆದ ಕೈವಲ್ಯಪದಕ್ಕೆ ಸೋಪಾನಮಾರ್ಗವನ್ನು ಕಲ್ಪಿಸಿ ಕೊಡತಕ್ಕದ್ದೆಂದು ನಿಶ್ಚಯಿಸಿ, ಮಹಾ ಬುದ್ಧಿಶಾಲಿಯಾದ ಆ ಶಿವಶರ್ಮನು

**ಭುವಿ ತೀರ್ಥಾನ್ಯನೇಕಾನಿ ಲೋಲಮಾಯುಶ್ಚಲಂ ಮನಃ ।**
**ತತಃ ಸಪ್ತಪುರೀರ್ಯಾಯಾಂ ಸರ್ವತೀರ್ಥಾನಿ ತತ್ರ ಯತ್ ॥ ೪೩ ॥**
**ಅಯೋಧ್ಯಾಂ ಚ ಪುರೀಂ ಗತ್ವಾ ಸರಯೂಮವಗಾಹ್ಯ ಚ ।**
**ತತ್ರತ್ರೀರ್ಥೇಷು ಸಂತರ್ಪ್ಯ ಪಿತೄನ್ಪಿಂಡಪ್ರದಾನತಃ ॥ ೪೪ ॥**
**ಪಂಚರಾತ್ರಮುಷಿತ್ವಾತು ಬ್ರಾಹ್ಮಣಾನ್ಪರಿಭೋಜ್ಯ ಚ ।**
**ಪ್ರಯಾಗಮಗಮದ್ವಿಪ್ರಸ್ತೀರ್ಥರಾಜಂ ಸುಹೃಷ್ಟವತ್ ॥ ೪೫ ॥**
**ಸಿತಾಽಸಿತೇ ಸರಿಚ್ಛ್ರೇಷ್ಠೇ ಯತ್ರಾಸ್ತಾಂ ಸುರದುರ್ಲಭೇ ।**
**ಯತ್ರಾಪ್ಲುತೋ ನರಃ ಪಾಪಃ ಪರಂ ಬ್ರಹ್ಮಾಽಧಿಗಚ್ಛತಿ ॥ ೪೬ ॥**
**ಕ್ಷೇತ್ರಂ ಪ್ರಜಾಪತೇಃ ಪುಣ್ಯಂ ಸರ್ವೇಷಾಮೇವ ದುರ್ಲಭಂ ।**
**ಲಭ್ಯತೇ ಪುಣ್ಯಸಂಭಾರೈರ್ನಾಽನ್ಯಥಾಽರ್ಥಸ್ಯ ರಾಶಿಭಿಃ ॥ ೪೭ ॥**

---

ಸ್ವಲ್ಪ ದೂರ ನಡೆದು, ಒಂದು ಮುಹೂರ್ತಕಾಲ ವಿಶ್ರಮಿಸಿಕೊಂಡು "ಮೊದಲು ಯಾವ ಕ್ಷೇತ್ರಕ್ಕೆ ಹೋಗಲಿ" ಎಂದು ಯೋಚಿಸತೊಡಗಿದನು

೪೩. "ಈ ಭೂಲೋಕದಲ್ಲಿ ತೀರ್ಥಗಳು ಅಸಂಖ್ಯಾತಗಳಾಗಿವೆ. ನನಗಿರುವ ಆಯುಸ್ಸು ಅತ್ಯಲ್ಪ. ಮನಸ್ಸು ಬಹಳ ಚಂಚಲ. ಆದುದರಿಂದ ಎಲ್ಲ ತೀರ್ಥಗಳನ್ನೂ ಸುತ್ತಿ ಬರುವುದಕ್ಕೆ ಸಾಧ್ಯವಾಗುವುದಿಲ್ಲ. ಹೀಗಿರುವುದರಿಂದ ಅಯೋಧ್ಯಾ ಮಧುರಾ ಮಾಯಾ ಕಾಶೀ ಕಾಂತೀ ಅವಂತೀ ಪುರೀ ದ್ವಾರವತೀ ಎಂಬ ಈ ಸಪ್ತಪುರಿಗಳ ಯಾತ್ರೆಯನ್ನು ಮಾಡುತ್ತೇನೆ. ಅವುಗಳಲ್ಲಿರುವ ಸಮಸ್ತ ತೀರ್ಥಗಳನ್ನೂ ಸಂದರ್ಶಿಸುತ್ತೇನೆ.

೪೪–೪೫. ಅಯೋಧ್ಯಾಕ್ಷೇತ್ರಕ್ಕೆ ಹೋಗಿ ಸರಯೂ ನದಿಯಲ್ಲಿ ಸ್ನಾನ ಮಾಡಿ, ಅಲ್ಲಲ್ಲಿರುವ ತೀರ್ಥಗಳಲ್ಲೆಲ್ಲ ಪಿತೃಗಳಿಗೆ ತರ್ಪಣವನ್ನಿತ್ತು, ಪಾರ್ವಣ ಶ್ರಾದ್ಧಗಳನ್ನು ಮಾಡುತ್ತೇನೆ." ಹೀಗೆ ಯೋಚಿಸಿದ ಬಳಿಕ ಆ ಶಿವಶರ್ಮನು ಅಯೋಧ್ಯೆಗೆ ಬಂದು, ಅಲ್ಲಿ ಐದು ರಾತ್ರಿಗಳಿದ್ದು ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ, ಬಹು ಸಂತೋಷದಿಂದ ತೀರ್ಥರಾಜವೆನಿಸಿದ ಪ್ರಯಾಗ ಕ್ಷೇತ್ರಕ್ಕೆ ಬಂದನು.

೪೬. ಈ ಪ್ರಯಾಗಕ್ಷೇತ್ರವು ನದಿಗಳಲ್ಲೆಲ್ಲ ಶ್ರೇಷ್ಠಗಳೆನಿಸಿದ ಗಂಗಾ ಯಮುನಾ ನದಿಗಳಿರುವ ಪುಣ್ಯಕ್ಷೇತ್ರವು. ಇದು ದೇವತೆಗಳಿಗೂ ದುರ್ಲಭವಾದುದು ಇಲ್ಲಿ ಸ್ನಾನಮಾಡಿದ ನರನು ತನ್ನ ಪಾಪಗಳೆಲ್ಲವನ್ನೂ ಕಳೆದುಕೊಂಡು ಪರಬ್ರಹ್ಮನನ್ನು ಸೇರುತ್ತಾನೆ.

೪೭. ಈ ಕ್ಷೇತ್ರವು ಬ್ರಹ್ಮನ ಪುಣ್ಯಕ್ಷೇತ್ರವೆನಿಸಿ, ಸಮಸ್ತರಿಗೂ ದುರ್ಲಭವಾದುದೆನಿಸಿದೆ. ಈ ಕ್ಷೇತ್ರಸಂದರ್ಶನವು ಪುಣ್ಯಸಂಭಾರಗಳಿಂದಲೇ ಲಭಿಸತಕ್ಕುದಲ್ಲದೆ, ಅಪರಿಮಿತವಾದ ದ್ರವ್ಯವಿದ್ದರೂ ಲಭಿಸುವುದಿಲ್ಲ.

ಶಮಯಂತೀಂ ಕಲಿಂ ಕಾಲಂ ಕಲಿಂದತನಯಾಂ ಶುಭಾಂ ।
ಆಗತ್ಯ ಮಿಲಿತಾ ಯತ್ರ ಪುಣ್ಯಾ ಸ್ವರ್ಗತರಂಗಿಣೀ ॥ ೪೮ ॥
ಪ್ರಕೃಷ್ಟಂ ಸರ್ವಯಾಗೇಭ್ಯಃ ಪ್ರಯಾಗಮಿತಿ ಗೀಯತೇ ।
ಯಜ್ವನಾಂ ಪುನರಾವೃತ್ತಿರ್ನ ಪ್ರಯಾಗಾದ್ರ್ರವಷ್ಮ್ರಣಾಂ ॥ ೪೯ ॥
ಯತ್ರ ಸ್ಥಿತಃ ಸ್ವಯಂ ಸಾಕ್ಷಾಚ್ಛೂಲಟಂಕೋ ಮಹೇಶ್ವರಃ ।
ತತ್ರಾಪ್ಲುತಾನಾಂ ಜಂತೂನಾಂ ಮೋಕ್ಷವರ್ತ್ಮೋಪದೇಶಕಃ ॥ ೫೦ ॥
ತತ್ರಾಽಕ್ಷಯ್ಯ ವಟೋಽಪ್ಯಸ್ತಿ ಸಪ್ತಪಾತಾಲಮೂಲವಾನ್ ।
ಪ್ರಲಯೇಽಪಿ ಯಮಾರುಹ್ಯ ಮೃಕಂಡುತನಯೋಽವಸತ್ ॥ ೫೧ ॥
ಹಿರಣ್ಯಗರ್ಭೋ ವಿಜ್ಞೇಯಃ ಸ ಸಾಕ್ಷಾದ್ವಟರೂಪಧೃಕ್ ।
ತತ್ಸಮೀಪೇ ದ್ವಿಜಾನ್ಭಕ್ತ್ಯಾ ಸಂಭೋಜ್ಯಾಽಕ್ಷಯ್ಯ ಪುಣ್ಯಭಾಕ್ ॥ ೫೨ ॥
ಯತ್ರ ಲಕ್ಷ್ಮೀಪತಿಃ ಸಾಕ್ಷಾದ್ವೈಕುಂಠಾದೇತ್ಯ ಮಾನವಾನ್ ।
ಶ್ರೀಮಾಧವಸ್ವರೂಪೇಣ ನಯೇದ್ವಿಷ್ಣೋಃ ಪರಂ ಪದಂ ॥ ೫೩ ॥

---

೪೮. ಈ ಕ್ಷೇತ್ರದಲ್ಲಿಯೆ ಪುಣ್ಯಕರವೂ ಸ್ವರ್ಗತರಂಗಿಣಿಯೂ ಆದ ಗಂಗಾ ನದಿಯು ಶಮಯಂತೀ ಕಲಿ ಕಾಲ ಕಾಲಿಂದೀ ನದಿಗಳನ್ನು ಒಡಗೂಡಿರುವುದು.

೪೯. ಸಮಸ್ತ ಯಾಗಗಳಿಗಿಂತಲೂ ಸರ್ವೋತ್ತಮವಾಗಿರುವುದರಿಂದ ಈ ಕ್ಷೇತ್ರಕ್ಕೆ ಪ್ರಯಾಗವೆಂದು ಹೆಸರಾಗಿದೆ. ಪ್ರಯಾಗದ ವೇಣೀಜಲದಲ್ಲಿ ಅವಭೃತಸ್ನಾನವನ್ನೆಸಗಿದ ಸೋಮಯಾಜಿಗಳಿಗೆ ಪುನರ್ಜನ್ಮವಿರುವುದಿಲ್ಲ.

೫೦. ಶೂಲಟಂಕನೆಂದು ಪ್ರಸಿದ್ಧನಾದ ಮಹೇಶ್ವರನೇ ಸಾಕ್ಷಾತ್ತಾಗಿ ನೆಲಸಿರುವ ಈ ವೇಣೀಜಲದಲ್ಲಿ ಮುಳುಗಿ ಸ್ನಾನಮಾಡಿದ ಜಂತುಗಳಿಗೆಲ್ಲ ಆ ಪರಮೇಶ್ವರನೇ ಮೋಕ್ಷಮಾರ್ಗವನ್ನು ಉಪದೇಶಮಾಡುತ್ತಾನೆ.

೫೧. ಈ ಪ್ರಯಾಗಕ್ಷೇತ್ರದಲ್ಲಿಯೆ ಸಪ್ತಪಾತಾಲಗಳವರೆಗೂ ಬೇರು ಬಿಟ್ಟಿರುವ ಮಹತ್ತರವಾದ ವಟವೃಕ್ಷವು ನೆಲಸಿರುತ್ತದೆ. ಪೂರ್ವದ ಪ್ರಳಯ ಕಾಲದಲ್ಲಿ ಮೃಕಂಡುತನಯನಾದ ಮಾರ್ಕಂಡೇಯನು ಈ ವಟವೃಕ್ಷವನ್ನೇರಿ ಅಲ್ಲಿಯೇ ವಾಸಮಾಡಿಕೊಂಡಿದ್ದನು.

೫೨. ಸಾಕ್ಷಾತ್ ಹಿರಣ್ಯಗರ್ಭನೇ ಈ ವಟವೃಕ್ಷದ ರೂಪವನ್ನು ತಳೆದು ವಿರಾಜಿಸುತ್ತಿರುವನೆಂದು ತಿಳಿಯತಕ್ಕುದು. ಈ ವಟವೃಕ್ಷದ ಸಮೀಪದಲ್ಲಿ ಭಕ್ತಿಯಿಂದ ಬ್ರಾಹ್ಮಣರಿಗೆ ಭೋಜನಮಾಡಿಸಿದ ಮಾನವನು ಪುಣ್ಯಭಾಗಿ ಯಾಗುತ್ತಾನೆ.

೫೩. ಇಲ್ಲಿ ಲಕ್ಷ್ಮೀಪತಿಯಾದ ಸಾಕ್ಷಾತ್ ನಾರಾಯಣನು ವೈಕುಂಠ ಲೋಕದಿಂದ ಐತಂದು, ಮಾಧವರೂಪದಿಂದ ನೆಲಸಿ, ಮಾನವರನ್ನು ವಿಷ್ಣುವಿನ ಪರಮಪದವಿಗೆ ಒಯ್ಯುತ್ತಾನೆ.

ಶ್ರುತಿಭಿಃ ಪರಿಪಠ್ಯೇತೇ ಸಿತಾಽಸಿತಸರಿದ್ವರೇ ।
ತತ್ರಾಪ್ಲುತಾಂಗಾ ಹ್ಯಮೃತಂ ಭವಂತೀತಿ ವಿನಿಶ್ಚಿತಂ ॥ ೫೪ ॥
ಶಿವಲೋಕಾದ್ಬ್ರಹ್ಮಲೋಕಾದುಮಾಲೋಕವರಾತ್ಪುನಃ ।
ಕುಮಾರಲೋಕಾದ್ವೈಕುಂಠಾತ್ಸತ್ಯಲೋಕಾತ್ತಮಂತತಃ ॥ ೫೫ ॥
ತಪೋಜನಮಹರ್ಭ್ಯಶ್ಚ ಸರ್ವೇ ಸ್ವರ್ಲೋಕವಾಸಿನಃ ।
ಭುವೋಲೋಕಾಶ್ಚ ಭೂರ್ಲೋಕಾನ್ನಾಗಲೋಕಾತ್ತಥಾಽಖಿಲಾತ್ ॥೫೬॥
ಅಚಲಾ ಹಿಮವನ್ಮುಖ್ಯಾಃ ಕಲ್ಪವೃಕ್ಷಾದಯೋ ನಗಾಃ ।
ಸ್ನಾತುಂ ಮಾಘೇ ಸಮಾಯಾಂತಿ ಪ್ರಯಾಗಮರುಣೋದಯೇ ॥ ೫೭ ॥
ದಿಗಂಗನಾಃ ಪ್ರಾರ್ಥಯಂತಿ ಯತ್ಪ್ರಯಾಗಾನಿಲಾನಪಿ ।
ತೇಽಪಿ ನಃ ಪಾವಯಿಷ್ಯಂತಿ ಕಿಂ ಕುರ್ಮಃ ಪಂಗವೋ ವಯಂ ॥ ೫೮ ॥
ಅಶ್ವಮೇಧಾದಿ ಯಾಗಾಶ್ಚ ಪ್ರಯಾಗಸ್ಯ ರಜಃ ಪುನಃ ।
ತುಲಿತಂ ಬ್ರಹ್ಮಣಾ ಪೂರ್ವಂ ನ ತೇ ತದ್ರಜಸಾ ಸಮಾಃ ॥ ೫೯ ॥
ಮಜ್ಜಾಗತಾನಿ ಪಾಪಾನಿ ಬಹುಜನ್ಮಾರ್ಜಿತಾನ್ಯಪಿ ।
ಪ್ರಯಾಗ ನಾಮಶ್ರವಣಾತ್ಕಿನ್ನೇಯಂತೇಽತೀವ ವಿಹ್ವಲಂ ॥ ೬೦ ॥

---

೫೪. ಸರಿದ್ವರಗಳೆನಿಸಿದ ಗಂಗಾ ಯಮುನಾ ನದಿಗಳು ವೇದಗಳಲ್ಲಿ ವರ್ಣಿತಗಳಾಗಿರುತ್ತವೆ. ಈ ಗಂಗಾ ಯಮುನಾ ಸಂಗಮದಲ್ಲಿ ಸ್ನಾನಮಾಡಿದವರು ಮುಕ್ತರಾಗುತ್ತಾರೆಂಬುದು ನಿಶ್ಚಯವು

೫೫–೫೭. ಶಿವಲೋಕ, ಬ್ರಹ್ಮಲೋಕ, ಉತ್ತಮವಾದ ಉಮಾಲೋಕ, ಕೌಮಾರ ವೈಕುಂಠ ಸತ್ಯಲೋಕಗಳು, ತಪೋಲೋಕ, ಜನೋಲೋಕ ಮಹರ್ಲೋಕಗಳು, ಸ್ವರ್ಗಲೋಕ, ಭುವರ್ಲೋಕ, ಭೂಲೋಕ, ನಾಗಲೋಕಗಳು ಮೊದಲಾದುವುಗಳೆಲ್ಲವುಗಳಿಂದಲೂ ಸಮಸ್ತರೂ ಅಲ್ಲದೆ, ಹಿಮವದಾದಿ ಸಮಸ್ತ ಪರ್ವತಗಳಿಂದ ಕಲ್ಪವೃಕ್ಷಗಳೇ ಮೊದಲಾದ ಸಮಸ್ತ ವೃಕ್ಷಗಳೂ, ಮಾಘ ಮಾಸದ ಅರುಣೋದಯದ ಸಮಯದಲ್ಲಿ ಸ್ನಾನಮಾಡಲೋಸುಗ ಪ್ರಯಾಗ ಕ್ಷೇತ್ರಕ್ಕೆ ಬರುತ್ತವೆ.

೫೮. ದಿಗಂಗನೆಯರು, "ಆಹ! ಪ್ರಯಾಗದಿಂದ ಸುಳಿದು ಬರುವ ಗಾಳಿಗಳೂ ಸಹ ನಮ್ಮನ್ನು ಪಾವನಗೊಳಿಸುತ್ತವೆ. ಅಲ್ಲಿಗೆ ಹೋಗೋಣವೆಂದರೆ, ನಾವು ಕಾಲಿಲ್ಲದವರಾಗಿದ್ದೇವೆ ಮಾಡುವುದೇನು?" ಎಂದು ಪ್ರಾರ್ಥಿಸುತ್ತಾರೆ.

೫೯. ಪೂರ್ವದಲ್ಲಿ ಬ್ರಹ್ಮದೇವನು ಅಶ್ವಮೇಧಾದಿ ಸಮಸ್ತ ಯಾಗಗಳನ್ನೂ, ಪ್ರಯಾಗಕ್ಷೇತ್ರದ ದೂಳನ್ನೂ ತಕ್ಕಡಿಗೆ ಹಾಕಿ ತೂಗಿದನು. ಆದರೆ ಅವು ಆ ದೂಳಿಗೆ ಸಮವಾಗಲಿಲ್ಲ.

೬೦. ಮಜ್ಜೆಯಲ್ಲಿ ಸೇರಿಹೋಗಿ, ಅನೇಕ ಜನ್ಮಗಳಿಂದಲೂ ಸಂಪಾದಿಸಿದ

ಧರ್ಮತೀರ್ಥಮಿದಂ ಸಮ್ಯಗರ್ಥತೀರ್ಥಮಿದಂ ಪರಂ ।
ಕಾಮಿಕಂ ತೀರ್ಥಮೇತಚ್ಚ ಮೋಕ್ಷತೀರ್ಥಮಿದಂ ಧ್ರುವಂ ॥ ೬೧ ॥
ಬ್ರಹ್ಮಹತ್ಯಾದಿ ಪಾಪಾನಿ ತಾವದ್ಗರ್ಜಂತಿ ದೇಹಿಷು ।
ಯಾವನ್ಮಜ್ಜಂತಿ ನೋ ಮಾಘೇ ಪ್ರಯಾಗೇ ಪಾಪಹಾರಿಣಿ ॥ ೬೨ ॥
ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ।
ಏತದ್ವ್ಯಕ್ತಪ್ರತ್ಯತೇ ವೇದೇ ತತ್ಪ್ರಯಾಗಂ ಪುನಃ ಪುನಃ ॥ ೬೩ ॥
ಸರಸ್ವತೀ ರಜೋರೂಪಾ ತಮೋರೂಪಾ ಕಲಿಂದಜಾ ।
ಸತ್ತ್ವರೂಪಾ ಚ ಗಂಗಾಽತ್ರ ನಯಂತಿ ಬ್ರಹ್ಮ ನಿರ್ಗುಣಂ ॥ ೬೪ ॥
ಇಯಂ ವೇಣೀ ಹಿ ನಿಃಶ್ರೇಣೀ ಬ್ರಹ್ಮಣೋ ವರ್ತ್ಮ ಯಾಸ್ಯತಃ ।
ಜಂತೋರ್ವಿಶುದ್ಧದೇಹಸ್ಯ ಶ್ರದ್ಧಾಽಶ್ರದ್ಧಾಪ್ಲುತಸ್ಯ ಚ ॥ ೬೫ ॥
ಕಾಶೀತಿ ಕಾಚಿದಬಲಾ ಭುವನೇಷು ರೂಢಾ
ಲೋಲಾರ್ಕಕೇಶವ ವಿಲೋಲ ವಿಲೋಚನಾ ಚ ।
ತದ್ದೋರ್ಯುಗಂ ಚ ವರಣಾಸಿರಿಯಂ ತದೀಯಾ
ವೇಣೀತಿ ಯಾಽತ್ರ ಗದಿತಾಽಕ್ಷಯಶರ್ಮಭೂಮಿಃ ॥ ೬೬ ॥

---

ಪಾಪಗಳೆಲ್ಲವೂ ಪ್ರಯಾಗವೆಂಬ ಹೆಸರನ್ನು ಕೇಳಿದೊಡನೆಯೆ ಬಹಳವಾದ ತಳಮಳಕ್ಕೆ ತುತ್ತಾಗಿ ಕ್ಷಯಿಸಿಹೋಗುತ್ತವೆ.

೬೧. ಈ ಪ್ರಯಾಗತೀರ್ಥವೇ ಧರ್ಮಾರ್ಥ ಕಾಮಮೋಕ್ಷಗಳನ್ನು ದೊರಕಿಸಿಕೊಡುವ ಉತ್ತಮ ತೀರ್ಥವೆಂಬುದರಲ್ಲಿ ಸಂದೇಹವೇ ಇಲ್ಲ

೬೨–೬೩. ಪಾಪಪರಿಹಾರಕವಾದ ಈ ಪ್ರಯಾಗ ತೀರ್ಥದಲ್ಲಿ ಮುಳುಗಿ ಸ್ನಾನಮಾಡುವವರೆಗೂ ಮಾನವನ ದೇಹದಲ್ಲಡಗಿರುವ ಬ್ರಹ್ಮಹತ್ಯಾದಿ ಘೋರ ಪಾಪಗಳೆಲ್ಲವೂ ಸಿಂಹಗರ್ಜನೆ ಮಾಡುತ್ತಿರುತ್ತವೆ. ಮುಳುಗಿದ ಮೇಲೆ ಅವುಗಳ ಸೊಲ್ಲೇ ಅಡಗಿಹೋಗುತ್ತವೆ. —"ತದ್ವಿಷ್ಣೋಃ ಪರಮಂ ಪದಂ । ಸದಾ ಪಶ್ಯಂತಿ ಸೂರಯಃ ॥–ಯೋಗಿಗಳು ಸತತವೂ ಯಾವುದನ್ನು ಜ್ಞಾನದೃಷ್ಟಿಯಿಂದ ನೋಡುತ್ತಿರುವರೊ ಅದೇ ವಿಷ್ಣುವಿನ ಪರಮಪದವು"—ಎಂದು ವೇದದಲ್ಲಿ ಅಡಿಗಡಿಗೂ ಹೇಳಲ್ಪಡುವುದೇ ಈ ಪ್ರಯಾಗಕ್ಷೇತ್ರವು.

೬೪. ಈ ಪ್ರಯಾಗಕ್ಷೇತ್ರದಲ್ಲಿ ರಜೋರೂಪದಿಂದ ಪ್ರವಹಿಸುತ್ತಿರುವ ಯಮುನಾನದಿಯೂ, ಸತ್ತ್ವರೂಪದಿಂದ ಪ್ರವಹಿಸುತ್ತಿರುವ ಗಂಗಾನದಿಯೂ ತಮ್ಮಲ್ಲಿ ಮಿಂದ ಮಾನವನನ್ನು ನಿರ್ಗುಣಬ್ರಹ್ಮನಲ್ಲಿಗೆ ಕರೆದೊಯ್ಯುವುವು.

೬೫. ಶ್ರದ್ಧೆಯಿಂದಾಗಲಿ ಅಶ್ರದ್ಧೆಯಿಂದಾಗಲಿ ಸ್ನಾನಮಾಡಿ ಪವಿತ್ರ ದೇಹವುಳ್ಳವರಾದ ಮಾನವರಿಗೆ ಈ ಕ್ಷೇತ್ರದಲ್ಲಿರುವ ವೇಣೀಸೋಪಾನ ಪರಂಪರೆಯು ಬ್ರಹ್ಮಲೋಕಕ್ಕೆ ದಾರಿಯಾಗಿ ಏರ್ಪಟ್ಟಿರುವುದು.

೬೬. ಲೋಲಾರ್ಕ ಕೇಶವರೆಂಬ ಸುಂದರವಾದ ಚಂಚಲವಾದ ನಯನ

ಅಗಸ್ತಿರುವಾಚ :—

ಸುಧರ್ಮಿಣಿ ಗುಣಾಂಸ್ತಸ್ಯ ಕೋಽತ್ರ ವರ್ಣಯಿತುಂ ಕ್ಷಮಃ ।
ತೀರ್ಥರಾಜಪ್ರಯಾಗಸ್ಯ ತೀರ್ಥೈಃ ಸಂಸೇವಿತಸ್ಯ ಚ ॥ ೬೭ ॥
ಪಾಪಿನಾಂ ಯಾನಿ ಪಾಪಾನಿ ಪ್ರಸಹ್ಯ ಕ್ಷಾಲಿತಾನ್ಯಹೋ ।
ತಚ್ಛುದ್ಧ್ಯೈ ಸೇವ್ಯತೇ ತೀರ್ಥೈಃ ಪ್ರಯಾಗಮಧಿಕಂ ತತಃ ॥ ೬೮ ॥
ಪ್ರಯಾಗಸ್ಯ ಗುಣಾನ್ ಜ್ಞಾತ್ವಾ ಶಿವಶರ್ಮಾ ದ್ವಿಜಃ ಸುಧೀಃ ।
ತತ್ರ ಮಾಘಮುಷಿತ್ವಾಽಥ ಪ್ರಾಪ ವಾರಾಣಸೀಂ ಪುರೀಂ ॥ ೬೯ ॥
ಪ್ರವೇಶ ಏವ ಸಂವೀಕ್ಷ್ಯ ಸ ದೇಹಲಿವಿನಾಯಕಂ ।
ಅಸ್ನಪಯತ್ತತೋ ಭಕ್ತ್ಯಾ ಸಾಜ್ಯಸಿಂದೂರಕರ್ದಮೈಃ ॥ ೭೦ ॥
ನಿವೇದ್ಯ ಮೋದಕಾನ್ಪಂಚ ವಂಚಯಂತಂ ನಿಜಂ ಜನಂ ।
ಮಹೋಪಸರ್ಗವರ್ಗೇಭ್ಯಸ್ತತೋಽಂತಃ ಕ್ಷೇತ್ರಮಾವಿಶತ್ ॥ ೭೧ ॥

---

ದ್ವಂದ್ವಗಳುಳ್ಳವಳೂ, ವರಣ ಅಸಿ ಎಂಬ ಬಾಹುಯುಗಳವುಳ್ಳವಳೂ, ಇಲ್ಲಿನ ವೇಣಿಯೆಂಬ ಕೇಶರಾಶಿಯುಳ್ಳವಳೂ, ಶಾಶ್ವತವಾದ ಶಾಂತಿಗೂ ಮೋಕ್ಷಕ್ಕೂ ನೆಲೆಯಾದವಳೂ ಆದ ಕಾಶೀ ಎಂಬ ಅಬಲೆಯು ಚತುರ್ದಶ ಭುವನಗಳಲ್ಲಿಯೂ ಪ್ರಖ್ಯಾತಿಗೊಂಡಿರುತ್ತಾಳೆ.

೬೭–೬೮. ಅಗಸ್ತ್ಯನು ಹೇಳುತ್ತಾನೆ :—ಎಲೌ ಸಹಧರ್ಮಿಣಿಯೆ, ಸಮಸ್ತ ತೀರ್ಥಗಳಿಂದಲೂ ಸಂಸೇವಿತವಾದ, ತೀರ್ಥರಾಜವೆನಿಸಿದ ಆ ಪ್ರಯಾಗದ ಸದ್ಗುಣಗಳನ್ನು ವರ್ಣಿಸಲು ಯಾರಿಗೆತಾನೆ ಸಾಧ್ಯ? ಇಲ್ಲಿ ಸ್ನಾನಮಾಡಿ ದೊಡನೆಯೆ ಪಾಪಿಷ್ಠರ ಪಾಪಗಳೆಲ್ಲವೂ ತೊಳೆದುಹೋಗುತ್ತವೆ ಆದುದರಿಂದ ಮಾನವರೆಲ್ಲರೂ ಅಲ್ಲದೆ ಸಮಸ್ತ ತೀರ್ಥಗಳೂ ಪಾಪಪರಿಹಾರಕ್ಕಾಗಿ ಪ್ರಯಾಗ ಕ್ಷೇತ್ರವನ್ನು ವಿಶೇಷವಾಗಿ ಸೇವಿಸುತ್ತವೆ.

೬೯. ಮಹಾಬುದ್ಧಿಶಾಲಿಯಾದ ಆ ಶಿವಶರ್ಮಬ್ರಾಹ್ಮಣನಾದರೊ ಇಂಥ ಪ್ರಯಾಗಕ್ಷೇತ್ರದ ಮಾಹಾತ್ಮ್ಯಗುಣಗಳನ್ನರಿತು, ಮಾಘಮಾಸವೆಲ್ಲ ಅಲ್ಲಿಯೆ ಇದ್ದು, ಆ ಮೇಲೆ ವಾರಾಣಸೀಕ್ಷೇತ್ರಕ್ಕೆ ಬಂದನು.

೭೦–೭೧. ಅಲ್ಲಿಗೆ ಬಂದೊಡನೆಯೆ ಆ ವಿಪ್ರನು ದೇಹಲಿವಿನಾಯಕ ನನ್ನು ಸಂದರ್ಶಿಸಿ, ತುಪ್ಪ ಅರಿಸಿನಗಳಿಂದ ಆ ಮೂರ್ತಿಗೆ ಲೇಪನಮಾಡಿ, ತನ್ನ ಭಕ್ತರ ಸಮಸ್ತವಿಘ್ನಪರಂಪರೆಯನ್ನೂ ನಿವಾರಣೆಮಾಡುವ ಆತನಿಗೆ ಐದು ಕಡುಬುಗಳನ್ನು ನಿವೇದಿಸಿದ ಬಳಿಕ ಕ್ಷೇತ್ರವನ್ನು ಪ್ರವೇಶಿ ಸಿದನು.

ಆಗತ್ಯ ದೃಷ್ಟ್ವಾ ಮಣಿಕರ್ಣಿಕಾಯಾ
ಮುದಗ್ವಹಾಂ ಸ್ವರ್ಗತರಂಗಿಣೀಂ ಸಃ ।
ಸಂಕ್ಷೀಣಪುಣ್ಯೇತರಪುಣ್ಯಕರ್ಮಣಾಂ
ನೃಣಾಂ ಗಣೈಃ ಸ್ಥಾಣುಗಣೈರಿವಾವೃತಾಂ ॥ ೭೨ ॥
ಸ ಚೈಲಮಾಪ್ಲುತ್ಯ ಜಲೇಽಮಲೇಽಮಲೇ
ವಿಲಂಬಮಾಲಂಬಿತಶುದ್ಧಬುದ್ಧಿಃ ।
ಸಂತರ್ಪ್ಯ ದೇವರ್ಷಿಮನುಷ್ಯದಿವ್ಯ
ಪಿತೄನ್ಪಿತೄನ್ಸ್ವಾನ್ಸಹಿ ಕರ್ಮಕಾಂಡವಿತ್ ॥ ೭೩ ॥
ವಿಧಾಯ ಚ ದ್ರಾಕ್ಸಹಿ ಪಂಚತೀರ್ಥಿಕಾಂ
ವಿಶ್ವೇಶಮಾರಾಧ್ಯ ತತೋ ಯಥಾ ಸ್ವಂ ।
ಪುನಃ ಪುನರ್ವೀಕ್ಷ್ಯ ಪುರೀಂ ಪುರಾರೇ
ರಿದಂ ಮಯಾಽಲೋಕಿ ನವೇತಿ ವಿಸ್ಮಿತಃ ॥ ೭೪ ॥
ನ ಸ್ವಃಪುರೀ ಸಾ ತ್ವನಯಾ ಪುರಾ ಸಮಂ
ಸಮಂಜಸಾಪಿ ಪ್ರತಿಸಾಮ್ಯಮಾವಹೇತ್ ।
ಪ್ರಬಂಧ ಭೇದಾದ್ವ್ಯತಿರಿಕ್ತಪುಸ್ತಕ
ಪ್ರತಿರ್ಯಥಾ ಸಲ್ಲಿಪಿಭೇದಭಂಗತಃ ॥ ೭೫ ॥

---

೭೨. ಆತನು ಹೀಗೆ ಕ್ಷೇತ್ರಪ್ರವೇಶಮಾಡಿದ ತರುವಾಯ, ಉತ್ತರ ದಿಕ್ಕಿಗೆ ಹರಿಯುತ್ತಿರುವುದಾಗಿ, ಕ್ಷೀಣಪಾಪರೂ, ಪುಣ್ಯಕರ್ಮಿಗಳೂ ಆದ ಮಾನವರ ಗುಂಪುಗಳಿಂದ ಶಿವಗಣಗಳಿಂದಲೊ ಎಂಬಂತೆ ಸುತ್ತಮುತ್ತಲ್ಪಟ್ಟ ಮಣಿ ಕರ್ಣಿಕೆಯೆಂದು ಪ್ರಸಿದ್ಧವಾದ ಸ್ವರ್ಗತರಂಗಿಣಿ ಗಂಗಾ ನದಿಯನ್ನು ಕಂಡನು.

೭೩. ಕರ್ಮಕಾಂಡವನ್ನು ಚೆನ್ನಾಗಿ ಬಲ್ಲ ಆ ಶಿವಶರ್ಮಬ್ರಾಹ್ಮಣನು ಶುದ್ಧವಾದ ಆ ಮಣಿಕರ್ಣಿಕಾಜಲದಲ್ಲಿ. ಏನೊಂದೂ ವಿಳಂಬಮಾಡದೆ ಶುದ್ಧಾಂತಃಕರಣಪೂರ್ವಕವಾಗಿ ಸಚೇಲಸ್ನಾನವನ್ನಾಚರಿಸಿ, ದೇವ ಋಷಿ ಮನುಷ್ಯ ದೇವ ಪಿತೃ–ಸ್ವಪಿತೃ ತರ್ಪಣಗಳನ್ನು ಮಾಡಿದನು.

೭೪. ಇದಾದ ತರುವಾಯ ಅವನು, ವರಣ ಅಸಿ ಸಂಗಮ, ಪಂಚನದ, ಮಣಿಕರ್ಣಿಕಾ, ದಶಾಶ್ವಮೇಧಗಳೆಂಬ ತೀರ್ಥಗಳಲ್ಲಿ ಸ್ನಾನಮಾಡಿ, ವಿಶ್ವನಾಥ ನನ್ನು ಶಕ್ತ್ಯನುಸಾರ ಆರಾಧಿಸಿ ಮತ್ತೆ ಮತ್ತೆ ಆ ವಾರಾಣಸೀಪಟ್ಟಣವನ್ನು ನೋಡಿ ನೋಡಿ, "ನಾನು ನೋಡುತ್ತಿರುವುದು ಅವಿಮುಕ್ತ ಪಟ್ಟಣವು ಹೌದೇ ಅಲ್ಲವೆ" ಎಂದು ವಿಸ್ಮಯಗೊಂಡನು.

೭೫. ಆಹ! ನಾನು ಕಾಣುತ್ತಿರುವುದು ಕಾಶೀಪಟ್ಟಣವೆಂಬುದರಲ್ಲಿ ಸಂದೇಹವಿಲ್ಲ. ಹೇಗೆ ನೋಡಿದರೂ ಈ ಪಟ್ಟಣಕ್ಕೆ ಸ್ವರ್ಗಲೋಕದ ಅಮರಾವತೀ

ಪಯೋಽಪಿ ಯತ್ರತ್ಯಮಚಿಂತ್ಯವೈಭವಂ
ದಿವಿ ಸ್ಥಿತಾ ಸಾಧು ಸುಧಾಽಪ್ಯತೋ ಮುಧಾ ।
ತಥಾ ಪ್ರಸೂತೇಸ್ತು ಪಯೋಧರೇ ಪಯೋ
ನ ಪೀಯತೇ ಪೀತಮಿದಂ ಯದಿ ಕ್ವಚಿತ್ ॥ ೭೬ ॥
ಅನಾಮಯಾಶ್ಚಿಂತನಯಾ ಸಯೇಶಿತು
ರ್ಜನಾ ಮನಾಗ್ಯತ್ರ ವಿನಾ ಪಿನಾಕಿನಾ ।
ನ ಕರ್ಮ ಸತ್ಕರ್ಮಕೃತೋಽಪಿ ಕುರ್ವತೇ
ನುಕುರ್ವತೇ ಶರ್ವಗಣಾಂಶ್ಚ ಸರ್ವತಃ ॥ ೭೭ ॥
ನ ವರ್ಣ್ಯತೇ ಕೈಃ ಕಿಲ ಕಾಶಿಕೇಯಂ
ಜಂತೋಃ ಸ್ಥಿತಸ್ಯಾಽತ್ರ ಯತೋಽಂತಕಾಲೇ ।
ಪಚೇಲಿಮೈಃ ಪ್ರಾಕ್ಕೃತಪುಣ್ಯಭಾರೈ
ರೋಂಕಾರಮೋಂಕಾರಯತೀಂದುಮೌಲಿಃ ॥ ೭೮ ॥

---

ಪಟ್ಟಣವು ಸಾಟಿಯೆನಿಸುವುದಿಲ್ಲ. ಲಿಪಿಯು ಬೇರೆಯಾದುದರಿಂದ ಬೇರೆಯೆ ಆದ ಪ್ರಬಂಧವನ್ನೊಳಗೊಂಡಿರುವುದರಿಂದ ಬೇರೆ ಬೇರೆ ಪುಸ್ತಕಗಳಂತೆ ಈ ಪಟ್ಟಣವೂ ಅಮರಾವತೀಪಟ್ಟಣವೂ ಸಾಮ್ಯವನ್ನೊಳಗೊಂಡಿದ್ದರೂ ಬೇರೆ ಬೇರೆಯಾಗಿಯೆ ತೋರುತ್ತದೆ.

೭೬. ಈ ಕಾಶೀಕ್ಷೇತ್ರದಲ್ಲಿ ಸ್ಥಲವೊಂದೇ ಅಲ್ಲದೆ ಜಲವೂ ಊಹಿಸಲಸದಳವಾದ ವೈಭವವನ್ನೊಳಗೊಂಡಿದೆ. ಈ ಎರಡೂ ಸಮಸ್ತ ಮಾನವರಿಗೂ ಮುಕ್ತಿಯನ್ನು ದೊರಕಿಸುವಂಥವು. ಇಲ್ಲಿನ ಜಲವಿರುವಲ್ಲಿ ಸ್ವರ್ಗಲೋಕದ ಅಮೃತದ ಅಪೇಕ್ಷೆಯು ವ್ಯರ್ಥವಾದುದೇ ಸರಿ. ಅಮೃತಪಾನಮಾಡಿದವರಾದ ದೇವತೆಗಳೂ ಪುಣ್ಯವು ಕ್ಷೀಣವಾದ ಮೇಲೆ ಪುನಃ ಭೂಲೋಕದಲ್ಲಿ ಜನಿಸಿ ತಾಯ ಸ್ತನ್ಯವನ್ನು ಪಾನಮಾಡಬೇಕಾಗುತ್ತದೆ. ಇಲ್ಲಿನ ಗಂಗೋದಕವನ್ನು ಒಮ್ಮೆಯಾದರೂ ಪಾನಮಾಡಿದವರು ಆ ರೀತಿ ಪುನಃ ಮಾತೃಸ್ತನ್ಯದ ರುಚಿ ನೋಡುವುದಿಲ್ಲ.

೭೭. ಈ ಕಾಶೀಕ್ಷೇತ್ರದ ನಿವಾಸಿಗಳೆಲ್ಲರೂ ಶ್ರುತಿಸ್ಮೃತ್ಯುಕ್ತಗಳಾದ ಸತ್ಕರ್ಮಗಳೆಲ್ಲವನ್ನೂ ಈಶ್ವರಾರ್ಪಣಬುದ್ಧಿಯಿಂದಲೆ ಮಾಡುವರಲ್ಲದೆ ಯಾವ ಬಗೆಯ ಕಾಮನೆಯಿಂದಲೂ ಮಾಡುವುದಿಲ್ಲ. ಆದುದರಿಂದಲೆ ಇವರೆಲ್ಲರೂ ಸಾಕ್ಷಾತ್ ಪರಮೇಶ್ವರನ ಕಿಂಕರರಾದ ನಂದಿ ಭೃಂಗಿ ಮೊದಲಾದವರನ್ನು ಮೀರಿಸಿ, ಸುಖ ಸಂತೋಷಗಳನ್ನನುಭವಿಸುತ್ತಿರುತ್ತಾರೆ.

೭೮. ಆಹ! ಇಲ್ಲಿ ನೆಲೆಗೊಂಡಿರುವ ಜಂತುವಿಗೆ ಅಂತ್ಯಕಾಲದಲ್ಲಿ ಸಾಕ್ಷಾತ್ ಚಂದ್ರಮೌಳಿಯು ಪೂರ್ವಪುಣ್ಯದ ಪರಿಪಾಕದ ಸಲುವಾಗಿ ಮುಕ್ತಿ

ಸಂಸಾರಿಚಿಂತಾಮಣಿರತ್ರ ಯಸ್ಮಾ
ತ್ತಂ ತಾರಕಂ ಸಜ್ಜನ ಕರ್ಣಿಕಾಯಾಂ ।
ಶಿವೋಽಭಿಧತ್ತೇ ಸಹಸಾಽಂತಕಾಲೇ
ತದ್ಗೀಯತೇಽಸೌ ಮಣಿಕರ್ಣಿಕೇತಿ ॥ ೭೯ ॥
ಮುಕ್ತಿಲಕ್ಷ್ಮೀಮಹಾಪೀಠಮಣಿಸ್ತಚ್ಚರಣಾಬ್ಜಯೋಃ ।
ಕರ್ಣಿಕೇಯಂ ತತಃ ಪ್ರಾಹುರ್ಯಾಂ ಜನಾ ಮಣಿಕರ್ಣಿಕಾಂ ॥ ೮೦ ॥
ಜರಾಯುಜಾಂಡಜೋದ್ಭಿಜ್ಜಾಃ ಸ್ವೇದಜಾ ಹ್ಯತ್ರ ವಾಸಿನಃ ।
ನ ಸಮಾ ಮೋಕ್ಷಭಾಜಸ್ತೇ ತ್ರಿದಶೈರ್ಮುಕ್ತಿದುರ್ದಶೈಃ ॥ ೮೧ ॥
ಮಮ ಜನ್ಮ ವೃಥಾ ಜಾತಂ ದುರ್ವೃತ್ತಸ್ಯ ಜಡಾತ್ಮನಃ ।
ನಾಽದ್ಯ ಯಾವನ್ಮಯೈಕ್ಷಿಷ್ಟ ಕಾಶಿಕಾ ಮುಕ್ತಿಕಾಶಿಕಾ ॥ ೮೨ ॥
ಪುನಃ ಪುನಶ್ಚ ತತ್ಕ್ಷೇತ್ರಮತಿಥೀಕೃತ್ಯ ನೇತ್ರಯೋಃ ।
ವಿಚಿತ್ರಂ ಚ ಪವಿತ್ರಂ ಚ ತೃಪ್ತಿಂ ನಾಽಧಿಜಗಾಮಹ ॥ ೮೩ ॥

---

ಪ್ರಾಪಕವಾದ ಪ್ರಣವಾಕ್ಷರವನ್ನು ಉಪದೇಶಿಸುವ ಈ ಕಾಶೀಪಟ್ಟಣವನ್ನು ಯಾರು ತಾನೇ ವರ್ಣಿಸುವುದಿಲ್ಲ ?

೭೯. ಸಂಸಾರಿಗಳಿಗೆ ಚಿಂತಾಮಣಿಯಂತೆ ಇರುವ ಇದರ ತೀರದಲ್ಲಿ ಪರಮೇಶ್ವರನು ಅಂತ್ಯಕಾಲದಲ್ಲಿ ಸಜ್ಜೀವಿಯ ಕರ್ಣದಲ್ಲಿ ತಾರಕಮಂತ್ರೋಪದೇಶವನ್ನು ಮಾಡುವುದರಿಂದ ಇದು ಮಣಿಕರ್ಣಿಕೆಯೆಂದೇ ಪ್ರಸಿದ್ಧವಾಗಿದೆ.

೮೦. ಇಷ್ಟೇ ಅಲ್ಲದೆ, ಮುಕ್ತಿಲಕ್ಷ್ಮಿಯ ಮಹಾಪೀಠಗಳಾದ ಸಪ್ತಪುರಿಗಳಲ್ಲಿ ಇದು ಮಣಿಯಂತೆ ಕಂಗೊಳಿಸಿ, ಆ ದೇವಿಯ ಚರಣಕಮಲಗಳ ಕರ್ಣಿಕೆಯೋಪಾದಿಯಲ್ಲಿ ವಿರಾಜಿಸುತ್ತಿರುವುದರಿಂದಲೂ ಇದು ಮಣಿಕರ್ಣಿಕೆಯೆಂದು ಪ್ರಸಿದ್ಧವಾಗಿದೆ.

೮೧ ಈ ಕಾಶೀಕ್ಷೇತ್ರದಲ್ಲಿ ವಾಸಮಾಡುತ್ತಿರುವ ಅಂಡಜ ಸ್ವೇದಜ ಉದ್ಭಿಜ್ಜ ಜರಾಯುಜಗಳೆಂಬ ಚತುರ್ವಿಧ ಜೀವರಾಶಿಗಳು ಮೋಕ್ಷಕ್ಕೆ ಭಾಗಿಗಳಾಗಿರುವುದರಿಂದ, ಮುಕ್ತಿಗೆಂದಿಗೂ ಅರ್ಹರಲ್ಲದ ದೇವತೆಗಳೊಡನೆ ಸಮವೆನಿಸಲಾರರು. ಅವರಿಗಿಂತಲೂ ಇವರೇ ಶ್ರೇಷ್ಠವೆಂಬುದರಲ್ಲಿ ಸಂದೇಹವಿಲ್ಲ.

೮೨. ಅಕ್ಕಟಾ! ಈವರೆಗೂ ಮುಕ್ತಿಮಾರ್ಗವನ್ನು ತೋರುವ ಈ ಕಾಶೀಕ್ಷೇತ್ರವನ್ನು ನೋಡದಿರುವ ಮೂಢಬುದ್ಧಿಯವನಾದ ನನ್ನ ಜನ್ಮವು ವ್ಯರ್ಥವಾಯಿತು.''

೮೩. ಎಲೌ ಲೋಪಾಮುದ್ರೆಯೆ, ಆ ಶಿವಶರ್ಮನು ಹೀಗೆ ಕಾಶೀಪಟ್ಟಣವನ್ನು ವರ್ಣಿಸಿಕೊಂಡು, ವಿಚಿತ್ರವೂ ಪವಿತ್ರವೂ ಆದ ಆ ಪಟ್ಟಣವನ್ನೇ ಪುನಃ ಪುನಃ ನೋಡಿ ನಲಿಯುತ್ತ ತೃಪ್ತಿಯನ್ನೇ ಪಡೆಯಲಿಲ್ಲವು.

ಸಪ್ತಾನಾಂ ಚ ಪುರೀಣಾಂ ಹಿ ಧುರೀಣಾಮವಯಾಮ್ಯಹಂ ।
ವಾರಾಣಸೀಂ ಸುನಿರ್ವಾಣವಿಶ್ರಾಣನವಿಚಕ್ಷಣಾಂ ॥ ೮೪ ॥
ತಥಾಽಪಿ ನ ಚತಸ್ರೋಽನ್ಯಾ ಮಯಾ ದೃಗ್ಗೋಚರೀಕೃತಾಃ ।
ತಾಸಾಂ ಪ್ರಭಾವಂ ವಿಜ್ಞಾಯಾಽಸ್ಯಾಗಮಿಷ್ಯಾಮ್ಯಹಂ ಪುನಃ ॥ ೮೫ ॥
ತೀರ್ಥಯಾತ್ರಾಂ ಪ್ರತಿದಿನಂ ಕುರ್ವನ್ನೂನಂ ಸಂವತ್ಸರಂ ।
ನ ಪ್ರಾಪ ಸರ್ವತೀರ್ಥಾನಿ ತೀರ್ಥಂ ಕಾಶ್ಯಾಂ ತಿಲೇ ತಿಲೇ ॥ ೮೬ ॥

ಅಗಸ್ತಿರುವಾಚ :—

ಜಾನನ್ನಪಿ ಗುಣಾನ್ದೇವಿ ಕ್ಷೇತ್ರಸ್ಯಾಽಸ್ಯ ಪರಾನ್ದ್ವಿಜಃ ।
ನಾನಾಪ್ರಮಾಣೈಃ ಪ್ರವಣೋ ನಿರಗಾತ್ಸ ತಥಾಽಪ್ಯಹೋ ॥ ೮೭ ॥
ಕಿಂ ಕುರ್ವಂತಿ ಹಿ ಶಾಸ್ತ್ರಾಣಿ ಸ ಪ್ರಮಾಣಾನಿ ಸುಂದರಿ ।
ಮಹಾಮಾಯಾಂ ಭವಿತ್ರೀಂ ತಾಂ ಕೋ ನಿವಾರಯಿತುಂ ಕ್ಷಮಃ ॥ ೮೮ ॥
ಕಃ ಸಮುಚ್ಚಲಿತಂ ಚೇತಸ್ತ್ವೀಯಂ ವಾ ಸಂಪ್ರತೀಪಯೇತ್ ।
ಪ್ರೋಚ್ಚಸ್ಥಾನಸ್ಥಿತಮಪಿ ಸ್ವಭಾವೋ ಯಚ್ಚಲಸ್ತಯೋಃ ॥ ೮೯ ॥

---

೮೪. "ಈ ಕಾಶೀಪಟ್ಟಣವು ಸಪ್ತಪುರಿಗಳಲ್ಲಿಯೂ ಪ್ರಮುಖವಾದುದೆಂದು ತಿಳಿಯುತ್ತೇನೆ. ಈ ವಾರಾಣಸೀಕ್ಷೇತ್ರವು ಅತ್ಯುತ್ತಮವಾದ ಮುಕ್ತಿಯನ್ನು ದೊರಕಿಸುವುದರಲ್ಲಿ ವಿಚಕ್ಷಣವಾದುದೇ ಸರಿ.

೮೫. ಆದರೂ ಉಳಿದ ನಾಲ್ಕು ಪುಣ್ಯಕ್ಷೇತ್ರಗಳನ್ನು ನಾನು ನೋಡಿರುವುದಿಲ್ಲ. ಅವುಗಳ ಪ್ರಭಾವವನ್ನರಿತುಕೊಂಡು ಮತ್ತೆ ನಾನು ಈ ವಾರಾಣಸೀ ಕ್ಷೇತ್ರಕ್ಕೆ ಬರುತ್ತೇನೆ."

೮೬. ಹೀಗೆ ಯೋಚಿಸಿಕೊಂಡು ಆ ಶಿವಶರ್ಮನು ಪ್ರತಿದಿನವೂ ಒಂದು ಸಂವತ್ಸರ ಕಾಲ ತೀರ್ಥಯಾತ್ರೆಗಳನ್ನು ಮಾಡುತ್ತ, ಆ ಕಾಶೀಕ್ಷೇತ್ರದಲ್ಲಿಯೆ ಸ್ವಲ್ಪ ಸ್ವಲ್ಪ ದೂರಕ್ಕೂ ಇರುವ ತೀರ್ಥಗಳಲ್ಲಿ ಯಾತ್ರೆಮಾಡುತ್ತ ಅಲ್ಲಿರುವ ಸಮಸ್ತ ತೀರ್ಥಗಳನ್ನೂ ಹೊಂದದೆ ಹೋದನು

೮೭. ಅಗಸ್ತ್ಯನು ಹೇಳುತ್ತಾನೆ —ಓ ದೇವಿ, ಆ ಬ್ರಾಹ್ಮಣನು ಕಾಶೀ ಕ್ಷೇತ್ರದ ಉತ್ತಮೋತ್ತಮವಾದ ಮಾಹಾತ್ಮ್ಯವನ್ನೂ ಸದ್ಗುಣಗಳನ್ನೂ ಅರಿತರೂ, ಅನೇಕ ಪ್ರಮಾಣಗಳಿಂದ ಅವು ಯಥಾರ್ಥಗಳೆಂದು ನಂಬಿದರೂ, ಅಲ್ಲಿಂದ ಮುಂದಕ್ಕೆ ಹೊರಟನು.

೮೮. ಅಯ್ಯೋ ಪಾಪ, ಎಲೆ ಸುಂದರಿ! ಶಾಸ್ತ್ರಜ್ಞಾನವೆಷ್ಟಿದ್ದರೇನು? ಪ್ರಮಾಣಗಳನ್ನು ಸಂಪೂರ್ಣವಾಗಿ ತಿಳಿದಿದ್ದರೇನು? ಇವು ಏನುಮಾಡಬಲ್ಲವು? ಮುಂದೆ ಸಂಭವಿಸುವ ಮಹಾ ಮಾಯೆಯನ್ನು (ವಿಧಿಯನ್ನು) ನಿವಾರಿಸಲು ಯಾರುತಾನೆ ಸಮರ್ಥರಾದರು?

೮೯. ಜಾರಿ ಹರಿಯುತ್ತಿರುವ ನೀರನ್ನಾಗಲಿ, ಚಲಿಸಿ ಹೋಗಿರುವ

ಶಿವಶರ್ಮಾ ವ್ರಜನ್ನೇಥ ದೇಶಾದ್ದೇಶಾಂತರಂ ಕ್ರಮಾತ್ ।
ಮಹಾಕಾಲಪುರೀಂ ಪ್ರಾಪ ಕಲಿಕಾಲವಿವರ್ಜಿತಾಂ ॥ ೯೦ ॥
ಕಲ್ಪೇ ಕಲ್ಪೇಽಖಿಲಂ ವಿಶ್ವಂ ಕಾಲಯೇದ್ಯಃ ಸ್ವಲೀಲಯಾ ।
ತಂ ಕಾಲಂ ಕಲಯಿತ್ವಾ ಯೋ ಮಹಾಕಾಲೋಽಭವತ್ಕಿಲ ॥ ೯೧ ॥
ಪಾಪಾದವಂತೀ ಸಾ ವಿಶ್ವಮವಂತೀತಿ ನಿಗದ್ಯತೇ ।
ಯುಗೇ ಯುಗೇಽನ್ಯನಾಮ್ನಾ ಸಾ ಕಲಾವುಜ್ಜಯಿನೀತಿ ಚ ॥ ೯೨ ॥
ವಿಪನ್ನೋ ಯತ್ರ ವೈ ಜಂತುಃ ಪ್ರಾಪ್ಯಾಽಪಿ ಶವತಾಂ ಸ್ಫುಟಂ ।
ನ ಪೂತಿಗಂಧಮಾಪ್ನೋತಿ ಸಮುಚ್ಛ್ರಯತಿ ನ ಕ್ವಚಿತ್ ॥ ೯೩ ॥
ಯಮದೂತಾ ನ ಯಸ್ಯಾಂ ಹಿ ಪ್ರವಿಶಂತಿ ಕದಾಚನ ।
ಪರಃ ಕೋಟೀನಿ ಲಿಂಗಾನಿ ತಸ್ಯಾಂ ಸಂತಿ ಪದೇ ಪದೇ ॥ ೯೪ ॥
ಹಾಟಕೇಶೋ ಮಹಾಕಾಲಸ್ತಾರಕೇಶಸ್ತಥೈವ ಚ ।
ಏಕಂ ಲಿಂಗಂ ತ್ರಿಧಾ ಭೂತ್ವಾ ತ್ರಿಲೋಕೀಂ ವ್ಯಾಪ್ಯ ಸಂಸ್ಥಿತಂ ॥ ೯೫ ॥

---

ಮನಸ್ಸನ್ನಾಗಲಿ ಹಿಂತಿರುಗಿಸಲು ಯಾರುತಾನೆ ಸಮರ್ಥರಾದಾರು? ಎಷ್ಟೇ ಮೇಲ್ಮಟ್ಟದಲ್ಲಿದ್ದರೂ ಅಲ್ಲಿಂದ ಜಾರುವುದೇ ಇವೆರಡರ ಸ್ವಭಾವ.

೯೦. ಅಂತೆಯೆ, ಆ ಶಿವಶರ್ಮನು ಕಾಶೀಕ್ಷೇತ್ರವನ್ನು ಬಿಟ್ಟು ಮುಂದುವರಿಯುತ್ತ, ಕ್ರಮವಾಗಿ ದೇಶದಿಂದ ದೇಶಕ್ಕೆ ಹೋಗಿ, ಕಲಿಕಾಲವಿವರ್ಜಿತವಾದ ಮಹಾಕಾಲಪಟ್ಟಣವನ್ನು ಸೇರಿದನು.

೯೧. ಇಲ್ಲಿ ನೆಲಸಿರುವ ಪರಮೇಶ್ವರನು ಪ್ರತಿಕಲ್ಪಾಂತದಲ್ಲಿಯೂ ಸಮಸ್ತಪ್ರಪಂಚವನ್ನೂ ತನ್ನ ಲೀಲೆಯಿಂದಲೆ ಭಕ್ಷಿಸುವ ಕಾಲನನ್ನು ಭಕ್ಷಿಸಿ ಮಹಾಕಾಲೇಶ್ವರನೆಂದು ಪ್ರಸಿದ್ಧನಾಗಿರುವನು.

೯೨. ಪ್ರಪಂಚವನ್ನೇ ಪಾಪಗಳಿಂದ ಬಿಡಿಸಿ ಸಲಹುವುದಾದುದರಿಂದ ಈ ಪಟ್ಟಣಕ್ಕೆ ಅವಂತಿಯೆಂದು ಮತ್ತೊಂದು ಹೆಸರುಂಟು. ಇದಕ್ಕೆ ಯುಗಯುಗದಲ್ಲಿಯೂ ಬೇರೆ ಬೇರೆ ಹೆಸರುಗಳು. ಕಲಿಯುಗದಲ್ಲಿ ಇದಕ್ಕೆ ಉಜ್ಜಯಿನಿ ಎಂದು ಹೆಸರು.

೯೩–೯೫. ಈ ಪಟ್ಟಣದಲ್ಲಿ ಜೀವಿಗಳು ಮಡಿದು ಶವವಾದರೂ ದುರ್ಗಂಧವನ್ನು ಪಡೆಯದೆಯೂ, ಸೆಟೆದುಕೊಳ್ಳದೆಯೂ ಇರುತ್ತವೆ. ಯಮದೂತರು ಈ ಪಟ್ಟಣವನ್ನೆಂದಿಗೂ ಪ್ರವೇಶಿಸುವುದಿಲ್ಲ. ಇಲ್ಲಿ ಅಡಿಗಡಿಗೂ ಕೋಟ್ಯಂತರ ಲಿಂಗಗಳು ಪ್ರತಿಷ್ಠಿತಗಳಾಗಿರುತ್ತವೆ. ಇಲ್ಲಿರುವ ಒಂದೇ ಲಿಂಗವೆ ಹಾಟಕೇಶ್ವರ ಮಹಾಕಾಳೇಶ್ವರ ತಾರಕೇಶ್ವರ ಎಂಬುದಾಗಿ ಮೂರು ಬಗೆಯಿಂದ ಮೂರು ಲೋಕಗಳನ್ನೂ ವ್ಯಾಪಿಸಿ ಪ್ರಸಿದ್ಧವಾಗಿರುತ್ತದೆ.

ಜ್ಯೋತಿಃ ಸಿದ್ಧವಟೇ ಜ್ಯೋತಿಸ್ತೇ ಪಶ್ಯಂತೀಹ ಯೇ ದ್ವಿಜಾಃ ।
ಅಥವಾ ಶ್ರೀಮಹಾಕಾಲದ್ರಷ್ಟಾರಃ ಪುಣ್ಯರಾಶಯಃ ॥ ೯೬ ॥
ಮಹಾಕಾಲಸ್ಯ ತಲ್ಲಿಂಗಂ ಯೈ ರ್ದೃಷ್ಟಂ ಕಶ್ಚಿಭಿಃ ಕ್ವಚಿತ್ ।
ನ ಸ್ಪೃಷ್ಟಾಸ್ತೇ ಮಹಾಪಾಪೈರ್ನದೃಷ್ಟಾಸ್ತೇ ಯಮೋದ್ಭಟೈಃ ॥ ೯೭ ॥
ಮಹಾಕಾಲಪತಾಕಾಗ್ರೈಃ ಸ್ಪೃಷ್ಟಸ್ಪೃಷ್ಟಾಸ್ತುರಂಗಮಾಃ ।
ಅರುಣಸ್ಯ ಕಶಾಘಾತಂ ಕ್ಷಣಂ ವಿಶ್ರಾಮಯಂತಿ ಖೇ ॥ ೯೮ ॥
ಮಹಾಕಾಲ ಮಹಾಕಾಲ ಮಹಾಕಾಲೇತಿ ಸಂತತಂ ।
ಸ್ಮರತಃ ಸ್ಮರತೋ ನಿತ್ಯಂ ಸ್ಮರಕರ್ತೃಸ್ಮರಾಂತಕೌ ॥ ೯೯ ॥
ಏವಮಾರಾಧ್ಯ ಭೂತೇಶಂ ಮಹಾಕಾಲಂ ತತೋ ದ್ವಿಜಃ ।
ಜಗಾಮ ನಗರೀಂ ಕಾಂತೀಂ ಕಾಂತಾಂ ತ್ರಿಭುವನಾದಪಿ ॥ ೧೦೦ ॥
ಲಕ್ಷ್ಮೀಕಾಂತಃ ಸ್ವಯಂ ಸಾಕ್ಷಾಜ್ಜಂತೂಸ್ತತ್ರ ನಿವಾಸಿನಃ ।
ಶ್ರೀಕಾಂತಾನೇವ ಕುರುತೇ ಪರತ್ರೇಹ ಚ ನಿಶ್ಚಿತಂ ॥ ೧೦೧ ॥

---

೯೬. ಈ ಅವಂತೀಕ್ಷೇತ್ರದಲ್ಲಿ ವಾಸಮಾಡುವ ಬ್ರಹ್ಮ ಕ್ಷತ್ರಿಯ ವೈಶ್ಯರೆಲ್ಲರೂ ಸಿದ್ಧವಟದಲ್ಲಿ ಜ್ಯೋತಿರ್ಲಿಂಗವನ್ನೊ, ಇಲ್ಲವೆ ಶ್ರೀಮಹಾಕಾಲೇಶ್ವರನನ್ನೊ ಸಂದರ್ಶನಮಾಡಿದ ಪುಣ್ಯವಂತರಾಗಿರುತ್ತಾರೆ.

೯೭. ಸಂಸಾರದಲ್ಲಿ ಸಿಕ್ಕಿ ಕಷ್ಟಪಡುತ್ತಿರುವ ಮಾನವರು ಒಮ್ಮೆಯಾದರೂ ಮಹಾಕಾಲ ಲಿಂಗವನ್ನು ಸಂದರ್ಶಿಸಿದ್ದಾದರೆ, ಮಹಾಪಾಪಗಳೂ ಅವರನ್ನು ಸೋಕುವುದಿಲ್ಲವಲ್ಲದೆ ಭಯಂಕರರಾದ ಯಮಭಟರೂ ಅವರ ಕಣ್ಣಿಗೆ ಬೀಳುವುದಿಲ್ಲ.

೯೮. ಮಹಾಕಾಲಮಂದಿರದ ಪತಾಕೆಯ ಛಾಯೆಯನ್ನುನೆಮ್ಮಿ ಸೂರ್ಯನ ಕುದುರೆಗಳು ಒಂದು ಕ್ಷಣಕಾಲ ಅರುಣನ ಕಶಾಘಾತದ ಆಯಾಸವನ್ನು ಕಳೆದುಕೊಂಡು ಮುಂದೆ ಹೋಗುತ್ತವೆ.

೯೯. 'ಮಹಾಕಾಲ ಮಹಾಕಾಲ' ಎಂದು ಸಂತತವೂ ಭಕ್ತಿಯಿಂದ ಸ್ಮರಿಸಿ ಜಪಿಸುತ್ತಿರುವ ಮಾನವರಿಗೆ ಮದನಜನಕನಾದ ಮಾಧವನೂ, ಮದನಾರಿಯಾದ ಮಹೇಶ್ವರನೂ ಪ್ರಸನ್ನರಾಗುತ್ತಾರೆ.

೧೦೦. ಹೀಗೆ ಆ ಶಿವಶರ್ಮನು ಸುಪ್ರಸಿದ್ಧವಾದ ಅವಂತೀಕ್ಷೇತ್ರವನ್ನು ಸೇರಿ, ಅಲ್ಲಿರುವ ಮಹಾಕಾಳೇಶ್ವರನನ್ನು ಆರಾಧಿಸಿದ ಬಳಿಕ ಮೂರು ಲೋಕಗಳಿಗಿಂತಲೂ ಅತ್ಯಂತ ಮನೋಹರವೆನಿಸಿದ ಕಾಂತೀಪಟ್ಟಣಕ್ಕೆ ಹೋದನು.

೧೦೧. ಇಲ್ಲಿ ವಿರಾಜಿಸುತ್ತಿರುವ ಲಕ್ಷ್ಮೀಕಾಂತನು ಈ ಪಟ್ಟಣವಾಸಿಗಳಾದ ಜನರೆಲ್ಲರನ್ನೂ ಈ ಲೋಕದಲ್ಲಿ ಐಶ್ವರ್ಯಲಕ್ಷ್ಮೀಪತಿಗಳನ್ನಾಗಿಯೂ ಪರಲೋಕದಲ್ಲಿ ಮುಕ್ತಿಶ್ರೀಕಾಂತರನ್ನಾಗಿಯೂ ಮಾಡುತ್ತಾನೆಂಬುದರಲ್ಲಿ ಸಂದೇಹವಿಲ್ಲ.

ದೃಷ್ಟ್ವಾ ಕಾಂತೀಂ ಕಾಂತಿಮತೀಂ ಕಾಂತಿಮದ್ಭಿರ್ನಿಷೇವಿತಾಂ ।
ಕಾಂತಿಮಾನಭವತ್ಸೋಽಪಿ ನಾಽಕಾಂತಿಸ್ತತ್ರ ಕಸ್ಯಚಿತ್ ॥ ೧೦೨ ॥
ತತ್ರ ಕೃತ್ಯಂ ಚ ಯತ್ಕೃತ್ಯಂ ತತ್ಕೃತ್ವಾ ಸರ್ವಕೃತ್ಯವಿತ್ ।
ಸಪ್ತರಾತ್ರಮುಷಿತ್ವಾ ತು ಯಯೌ ದ್ವಾರವತೀಂ ಪುರೀಂ ॥ ೧೦೩ ॥
ಚತುರ್ಣಾಮಪಿ ವರ್ಗಾಣಾಂ ಯತ್ರ ದ್ವಾರಾಣಿ ಸರ್ವತಃ ।
ಅತೋ ದ್ವಾರವತೀತ್ಯುಕ್ತಾ ವಿದ್ವದ್ಭಿಸ್ತತ್ವವೇದಿಭಿಃ ॥ ೧೦೪ ॥
ಅಸ್ಥೀನ್ಯಪಿ ಚ ಜಂತೂನಾಂ ಯತ್ರ ಚಕ್ರಾಂಕಿತಾನ್ಯಹೋ ।
ಕಿಂ ಚಿತ್ರಂ ತತ್ರ ಯತ್ರ ಸ್ಯುಃ ಶಂಖಚಕ್ರಾಂಕಿತೈಃ ಕರೈಃ ॥ ೧೦೫ ॥
ಅಂತಕಃ ಶಿಕ್ಷಯತ್ಯೇವಂ ನಿಜದೂತಾನ್ಮುಹುರ್ಮುಹುಃ ।
ತೇ ತ್ಯಾಜ್ಯಾ ಯೈರ್ದ್ವಾರವತ್ಯಾ ನಾಮಾಽಪಿ ಪರಿಗೃಹ್ಯತೇ ॥ ೧೦೬ ॥
ಶ್ರೀಖಂಡೇ ಕ್ವಸ ಆಮೋದಃ ಸ್ವರ್ಣೇ ವರ್ಣಃ ಕ್ವ ತಾದೃಶಃ ।
ತತ್ಪಾವಿತ್ರ್ಯಂ ಕ್ವ ವೈ ತೀರ್ಥೇ ತದ್ಗೋಪೀಚಂದನೇ ಯಥಾ ॥ ೧೦೭ ॥
ದೂತಾಃ ಶೃಣ್ವಂತು ಯದ್ಭಾಲಂ ಗೋಪೀಚಂದನಲಾಂಛಿತಂ ।
ಜ್ವಲದಿಂಗಲವತ್ಸೋಽಪಿ ದೂರೇ ತ್ಯಾಜ್ಯಃ ಪ್ರಯತ್ನತಃ ॥ ೧೦೮ ॥

---

೧೦೨. ಆ ಬ್ರಾಹ್ಮಣನು ಅಪರಿಮಿತವಾದ ಕಾಂತಿಯಿಂದ ಕೂಡಿ ಕಾಂತಿಮಂತರಾದ ಜನರಿಂದಲೆ ತುಂಬಿ ತುಳುಕುತ್ತಿರುವ ಆ ಕಾಂತೀಪಟ್ಟಣವನ್ನು ಸೇರಿದ ತರುವಾಯ ತಾನೂ ಕಾಂತಿಮಂತನಾದನು ಅಲ್ಲಿರುವ ಯಾರೊಬ್ಬರೂ ಕಾಂತಿಹೀನರಾಗಿರುವುದೇ ಇಲ್ಲವು.

೧೦೩–೧೦೪ ಬಳಿಕ ಆ ಶಿವಶರ್ಮನು ಮಾಡಬೇಕಾದ ಸಮಸ್ತಕಾರ್ಯಗಳನ್ನೂ ಬಲ್ಲವನಾದುದರಿಂದ ಆ ಕ್ಷೇತ್ರದಲ್ಲಿ ಅನುಷ್ಠಿಸಬೇಕಾದ ಕರ್ಮಗಳೆಲ್ಲವನ್ನೂ ಸಾಂಗವಾಗಿ ನೆರವೇರಿಸಿ, ಅಲ್ಲಿಯೇ ಏಳು ರಾತ್ರಿಗಳಿದ್ದು ಆಮೇಲೆ ದ್ವಾರಕಾಪಟ್ಟಣಕ್ಕೆ ಬಂದನು. ಈ ಪಟ್ಟಣದ ಎಲ್ಲೆಡೆಗಳಲ್ಲಿಯೂ ಧರ್ಮಾದಿ ಚತುರ್ವರ್ಗಗಳ ದ್ವಾರಗಳೇ ಏರ್ಪಟ್ಟಿರುವುದರಿಂದ ಇದನ್ನು ತತ್ತ್ವಜ್ಞಾನಿಗಳಾದ ವಿದ್ವಾಂಸರು ದ್ವಾರವತೀ ಎನ್ನುತ್ತಾರೆ.

೧೦೫–೧೦೬. ಈ ಪಟ್ಟಣದಲ್ಲಿ ಸಮಸ್ತಜಂತುಗಳ ಎಲುಬುಗಳೂ ಚಕ್ರಾಂತಿಕಗಳಾಗಿರುತ್ತವೆ. ಇಲ್ಲಿರುವವರೆಲ್ಲರೂ ಶಂಖಚಕ್ರಾಂಕಿತವಾದ ಕರಗಳುಳ್ಳವರಾಗಿ ಸಾಕ್ಷಾತ್ ವಿಷ್ಣುಸ್ವರೂಪರೇ ಆಗಿರುವರೆಂದರೆ ಆಶ್ಚರ್ಯವೇನು? ಅಂತಕನೂ ಸಹ ತನ್ನ ದೂತರನ್ನು ಆಗಿಂದಾಗ್ಗೆ, "ಅಯ್ಯಾ, ದ್ವಾರವತೀಪಟ್ಟಣದ ಹೆಸರು ಹೇಳುವವರನ್ನೂ ಸಹ ನೀವು ಬಿಟ್ಟುಬಿಡತಕ್ಕದ್ದು" ಎಂದು ಹೇಳಿ ದಂಡಿಸುತ್ತಿರುತ್ತಾನೆ.

೧೦೭–೧೦೮. "ಈ ದ್ವಾರವತಿಯಲ್ಲಿನ ಗೋಪೀಚಂದನದಲ್ಲಿರುವಂತೆ, ಶ್ರೀಗಂಧದಲ್ಲಿ ಅಂಥ ಗಂಧವಾಗಲಿ, ಬಂಗಾರದಲ್ಲಿ ಅಂಥ ಬಣ್ಣವಾಗಲಿ,

ತುಲಸ್ಯಲಂಕೃತಾ ಯೇ ಯೇ ತುಲಸೀನಾಮಜಾಪಕಾಃ ।
ತುಲಸೀವನಪಾಲಾ ಯೇ ತೇ ತ್ಯಾಜ್ಯಾ ದೂರತೋ ಭಟಾಃ ॥ ೧೦೯ ॥
ಯುಗೇ ಯುಗೇ ದ್ವಾರವತ್ಯಾ ರತ್ನಾನಿ ಪರಿತೋ ಮುಷನ್ ।
ಅಬ್ಧೀ ರತ್ನಾಕರೋಽದ್ಯಾಽಪಿ ಲೋಕೇಷು ಪರಿಗೀಯತೇ ॥ ೧೧೦ ॥
ದ್ವಾರವತ್ಯಾಂ ಮ್ರಿಯಂತೇ ಯೇ ಜಂತವಃ ಕಾಲನೋದಿತಾಃ ।
ಚತುರ್ಭುಜಾಃ ಸ್ಯುರ್ವೈಕುಂಠೇ ತೇ ಪೀತಾಂಬರಧಾರಿಣಃ ॥ ೧೧೧ ॥
ತತ್ರಾಽಪಿ ಸಂತರ್ಪ್ಯ ಪಿತೄನ್ಸ ಸದೇವರ್ಷಿಮಾನವಾನ್ ।
ತತ್ರ ತೇಷು ಚ ತೀರ್ಥೇಷು ಸಸ್ನೌ ಸರ್ವೇಷ್ವತಂದ್ರಿತಃ ॥ ೧೧೨ ॥
ತತೋ ಮಾಯಾಪುರೀಂ ಪ್ರಾಪ್ತೋ ದುಷ್ಪ್ರಾಪಾಂ ಪಾಪಕಾರಿಭಿಃ ।
ಯತ್ರ ಸಾ ವೈಷ್ಣವೀ ಮಾಯಾ ಮಾಯಾಪಾಶೈರ್ನಪಾಶಯೇತ್॥ ೧೧೩ ॥
ಕೇಚಿದೂಚುರ್ಹರಿದ್ವಾರಂ ಮೋಕ್ಷದ್ವಾರಂ ತತಃ ಪರೇ ।
ಗಂಗಾದ್ವಾರಂ ಚ ಕೇಽಪ್ಯಾಹುಃ ಕೇಚಿನ್ಮಾಯಾಪುರಂ ಪುನಃ ॥ ೧೧೪ ॥

---

ತೀರ್ಥದಲ್ಲಿ ಪಾವಿತ್ರ್ಯವಾಗಲಿ ಇರುವುದಿಲ್ಲ. ಅಯ್ಯಾ ದೂತರೆ, ಕೇಳಿರಿ, ಯಾವನ ಹಣೆಯಲ್ಲಿ ಗೋಪೀಚಂದನದ ಲಾಂಛನವಿರುತ್ತದೆಯೊ ಅವನನ್ನು ಉರಿಯುತ್ತಿರುವ ಕೆಂಡವನ್ನೆಂತೋ ಅಂತು ಪ್ರಯತ್ನಪೂರ್ವಕವಾಗಿ ದೂರದಲ್ಲಿಯೇ ತೊರೆಯತಕ್ಕದ್ದು.

೧೦೯–೧೧೦. ತುಲಸೀಮಾಲೆಗಳನ್ನು ಅಲಂಕರಿಸಿಕೊಂಡವರನ್ನೂ, ತುಲಸೀ ನಾಮ ಜಪವನ್ನು ಮಾಡುವವರನ್ನೂ, ತುಲಸೀ ವನಗಳನ್ನು ಮಾಡಿ ಪೋಷಿಸುವ ವರನ್ನೂ ನೀವು ವರ್ಜಿಸಬೇಕು'' ಎಂದು ಯಮಧರ್ಮನು ದೂತರಿಗೆ ಉಪದೇಶ ಮಾಡಿದ್ದಾನೆ. ಯುಗಯುಗದಲ್ಲಿಯೂ ದ್ವಾರವತೀಪಟ್ಟಣದ ರತ್ನಗಳನ್ನು ಸುತ್ತಮುತ್ತ ಕಳವುಮಾಡಿಕೊಂಡಿರುವುದರಿಂದ ಸಮುದ್ರವು ಇಂದಿಗೂ ರತ್ನಾಕರವೆಂದು ಜನಗಳಿಂದ ಹೊಗಳಿಸಿಕೊಂಡಿರುತ್ತದೆ.

೧೧೧. ದ್ವಾರವತಿಯಲ್ಲಿ ಕಾಲಗತಿಗೊಳಪಟ್ಟು ಮಡಿಯುವ ಜಂತು ಗಳೆಲ್ಲವೂ ವೈಕುಂಠಲೋಕವನ್ನು ಸೇರಿ, ಚತುರ್ಭುಜಗಳುಳ್ಳವುಗಳಾಗಿ ಪೀತಾಂಬರಗಳನ್ನುಟ್ಟು ವಿಷ್ಣುಗಣಗಳಾಗಿ ಶೋಭಿಸುತ್ತವೆ.

೧೧೨. ಎಲೌ ಸಾಧ್ವಿಯೆ, ಶಿವಶರ್ಮನು ಆ ದ್ವಾರವತಿಯಲ್ಲಿಯೂ ಪಿತೃ ದೇವತೆಗಳನ್ನೂ ದೇವಋಷಿಗಳನ್ನೂ ತರ್ಪಣಾದಿಗಳಿಂದ ತೃಪ್ತಿಗೊಳಿಸಿ ಅಲ್ಲಿಯ ಆಯಾಯ ತೀರ್ಥಗಳಲ್ಲಿ ಸ್ಥಿರಚಿತ್ತನಾಗಿ ಮಿಂದನು.

೧೧೩. ಇದಾದ ಬಳಿಕ ಪಾಪಿಷ್ಠರಾರೂ ಪ್ರವೇಶಿಸಲಸದಳವಾಗಿ, ವಿಷ್ಣು ಮಾಯೆಯು ತನ್ನ ಪಾಶಗಳಿಂದ ಪ್ರವೇಶಿಸಿದ ಪುಣ್ಯಾತ್ಮನನ್ನು ಬಿಗಿದು ಕಟ್ಟಿ ನರಳಿಸದಿರುವ ಪುಣ್ಯಕ್ಷೇತ್ರವಾದ ಮಾಯಾಪುರಿಯನ್ನು ಸೇರಿದನು.

೧೧೪. ಕೆಲವರು ಇದನ್ನು ಹರಿದ್ವಾರವೆಂದೂ, ಮೋಕ್ಷದ್ವಾರವೆಂದೂ

ಯತೋ ವಿನಿರ್ಗತಾ ಗಂಗಾ ಖ್ಯಾತಾ ಭಾಗೀರಥೀ ಭುವಿ ।
ಯನ್ನಾಮೋಚ್ಚಾರಣಾತ್ಪುಂಸಾಂ ಪಾಪಂ ಯಾತಿ ಸಹಸ್ರಧಾ ॥ ೧೧೫ ॥
ವೈಕುಂಠಸ್ಯೈಕಸೋಪಾನಂ ಹರಿದ್ವಾರಂ ಜಗುರ್ಜನಾಃ ।
ಅತ್ರಾಪ್ಲುತಾ ನರಾ ಯಾಂತಿ ತದ್ವಿಷ್ಣೋಃ ಪರಮಂ ಪದಂ ॥ ೧೧೬ ॥
ತೀರ್ಥೋಪವಾಸಕಂ ಕೃತ್ವಾ ನಿಶಾಜಾಗರಣಂ ತಥಾ ।
ಪ್ರಾತಃ ಸ್ನಾತ್ವಾ ಚ ಗಂಗಾಯಾಂ ತರ್ಪ್ಯಾನ್ಸಂತರ್ಪ್ಯ ಸರ್ವತಃ ॥ ೧೧೭ ॥
ಯಾವತ್ಸ ಪಾರಣಂ ಕರ್ತುಮಿಯೇಷ ದ್ವಿಜಸತ್ತಮಃ ।
ತಾವಚ್ಛೀತಜ್ವರಾಕ್ರಾಂತಶ್ಚ ಕಂಪೇಽತ್ಯರ್ಥಮಾತುರಃ ॥ ೧೧೮ ॥
ವೈದೇಶಿಕಸ್ತ್ವೈಕಾಕೀ ತಥಾಽತಿಜ್ವರಪೀಡಿತಃ ।
ಚಿಂತಾಮವಾಪ ಮಹತೀಂ ಕಿಮೇತತ್ಸಮುಪಸ್ಥಿತಂ ॥ ೧೧೯ ॥
ಚಿಂತಾರ್ಣವೇ ನಿಮಗ್ನೋಽಭೂತ್ತ್ಯಕ್ತಾಶೋ ಜೀವಿತೇ ಧನೇ ।
ಸಾಂಯಾತ್ರಿಕ ಇವಾಽಗಾಧೇ ಭಿನ್ನಪೋತೋ ಮಹಾರ್ಣವೇ ॥ ೧೨೦ ॥

---

ಮತ್ತೆ ಕೆಲವರು ಗಂಗಾದ್ವಾರವೆಂದೂ, ಇನ್ನು ಕೆಲವರು ಮಾಯಾಪುರಿಯೆಂದೂ ಹೇಳುತ್ತಾರೆ.

೧೧೫. ಯಾವುದರ ನಾಮೋಚ್ಚಾರಣ ಮಾತ್ರದಿಂದ ಮಾನವರ ಪಾಪಗಳು ನುಚ್ಚುನುರಿಯಾಗಿ ಹೋಗುವುವೊ ಅಂಥ ಗಂಗಾ ನದಿಯು ಇಲ್ಲಿಂದಲೆ ಹೊರಟು ಈ ಭೂಲೋಕದಲ್ಲಿ ಭಾಗೀರಥಿಯೆಂದು ಪ್ರಸಿದ್ಧವಾಗಿದೆ.

೧೧೬. ಹರಿದ್ವಾರವು ವೈಕುಂಠಪಟ್ಟಣಕ್ಕೆ ಇರುವ ಒಂದೇ ಒಂದು ಸೋಪಾನಮಾರ್ಗವೆಂದು ಜನರು ಹೇಳುತ್ತಾರೆ. ಇಲ್ಲಿ ಸ್ನಾನಮಾಡಿದ ಜನರು ವಿಷ್ಣುವಿನ ಪರಂಧಾಮವನ್ನು ಪಡೆಯುತ್ತಾರೆ.

೧೧೭–೧೧೮. ಎಲೌ ಲೋಪಾಮುದ್ರೆಯೆ, ಇಂಥ ಪುಣ್ಯಪಟ್ಟಣದಲ್ಲಿ ಆ ಶಿವಶರ್ಮಬ್ರಾಹ್ಮಣನು ತೀರ್ಥೋಪವಾಸವನ್ನು ಮಾಡಿ, ರಾತ್ರಿ ಜಾಗರಣೆಯಿದ್ದು ಬೆಳಗ್ಗೆ ಗಂಗೆಯಲ್ಲಿ ಸ್ನಾನಮಾಡಿ ದೇವರ್ಷಿಪಿತೃತರ್ಪಣಗಳನ್ನು ತೀರಿಸಿಕೊಂಡು ಪಾರಣೆಮಾಡಬೇಕೆಂದಿರುವಷ್ಟರಲ್ಲಿಯೆ ಶೀತಜ್ವರಕ್ಕೆ ತುತ್ತಾಗಿ ಬಹಳವಾಗಿ ನರಳಿದನು.

೧೧೯. ದೂರದೇಶದವನೂ, ಏಕಾಕಿಯೂ ಆದ ಆ ಬ್ರಾಹ್ಮಣನು ಆ ರೀತಿ ಜ್ವರಪೀಡಿತನಾದೊಡನೆ, ಇದೇನು ಬಂದಿತೆಂದು ಚಿಂತೆಗೆ ಈಡಾದನು.

೧೨೦. ಈ ಚಿಂತಾಸಮುದ್ರದಲ್ಲಿ ಮುಳುಗಿ, ಅಗಾಧವಾದ ಮಹಾಸಾಗರದಲ್ಲಿ ಓಡೆಯೊಡೆದ ಸಮುದ್ರವರ್ತಕನಂತೆ ಅವನು ಬದುಕಿನಲ್ಲಿಯೂ ಧನದಲ್ಲಿಯೂ ಆಶೆಯನ್ನು ತೊರೆದನು.

ಕ್ವ ಕ್ಷೇತ್ರಂ ಕ್ವ ಕಲತ್ರಂ ಮೇ ಕ್ವ ಪುತ್ರಾಃ ಕ್ವ ಚ ತದ್ವಸು ।
ಕ್ವ ತದ್ವಿಚಿತ್ರಂ ವೈ ಹರ್ಮ್ಯಂ ಕ್ವ ಸಾ ಪುಸ್ತಕಸಂಭೃತಿಃ ॥ ೧೨೧ ॥
ಅದ್ಯಾಽಪಿ ನಾಽಽಯುಃ ಪರ್ಯಾಪ್ತಂ ಫಲಿತಂ ನ ತಥಾ ಮಯಿ ।
ಜ್ವರೋಽಯಂ ದಾರುಣಃ ಪ್ರಾಪ್ತಃ ಕಾಲಜ್ಞಶ್ಚಾಽತಿದಾರುಣಃ ॥ ೧೨೨ ॥
ಮೃತ್ಯುರ್ಮೂರ್ಧ್ನಿ ಕೃತಾವಾಸೋ ವಾಸೋ ದೂರೇ ವ್ಯವಸ್ಥಿತಃ ।
ಅಗ್ನೌ ಗೃಹೋಪರಿ ಪ್ರಾಪ್ತೇ ಕೂಪಂ ತು ಖನಯೇದಿಹ ॥ ೧೨೩ ॥
ಕಿಮೇಭಿಶ್ಚಿಂತನೈರ್ವ್ಯರ್ಥೈರರತಿತಾಪಕರೈರ್ಮನು ।
ಚಿಂತಯಾಮಿ ಹೃಷೀಕೇಶಂ ಶಿವದಂ ಶಿವಮೇವ ಚ ॥ ೧೨೪ ॥
ಅಥವಾ ಮುಕ್ತ್ಯುಪಾಯೋ ವೈ ಮಯ್ಯೈಕಃ ಸದನುಷ್ಠಿತಃ ।
ಮುಕ್ತಿಪುರ್ಯಸ್ತು ಸಪ್ತೈತಾಃ ಸ್ವನೇತ್ರವಿಷಯೀಕೃತಾಃ ॥ ೧೨೫ ॥
ಸ್ವರ್ಗಾಽಪವರ್ಗಯೋರೇಕಃ ಸಾಧ್ಯೋ ಹಿ ವಿದುಷಾ ಧ್ರುವಂ ।
ತಯೋರಸಾಧನೇ ಪಶ್ಚಾತ್ಸಂತಾಪೇನ ಚ ತಪ್ಯತೇ ॥ ೧೨೬ ॥

---

೧೨೧-೧೨೨. "ಇನ್ನು ನನಗೆ ಆ ಹೊಲಗದ್ದೆಗಳೆಲ್ಲಿ? ಅಂಥ ಹೆಂಡತಿಯೆಲ್ಲಿ, ಮಕ್ಕಳೆಲ್ಲಿ? ಆ ಐಶ್ವರ್ಯವೆಲ್ಲಿ? ಬಹುಸುಂದರವಾದ ಆ ಭವನವೆಲ್ಲಿ? ಸಂಗ್ರಹಿಸಿಟ್ಟಿರುವ ಪುಸ್ತಕಗಳೆಲ್ಲಿ? ಇನ್ನೂ ನನಗೆ ಆಯುಸ್ಸು ತುಂಬಿಬಂದಿಲ್ಲ. ಅಂಥ ಮುಪ್ಪೂ ನನ್ನಲ್ಲಿ ಕಂಡುಬರುವುದಿಲ್ಲ. ಆದರೂ ಭಯಂಕರವಾದ ಈ ಶೀತಜ್ವರವು ದಾರುಣವಾದ ಮೃತ್ಯುವಾಗಿ ನನ್ನನ್ನು ಅಮರಿದೆ.

೧೨೩-೧೨೪. ಮೃತ್ಯುವು ತಲೆಯ ಮೇಲೆ ಕುಳಿತಿರುವಾಗ ಮನೆಯು ಬಹುದೂರದಲ್ಲಿರುವಂದು ಮಾಡುವುದೇನು? ಮನೆಯ ಮೇಲೆ ಬೆಂಕಿ ಬಿದ್ದಿರುವಾಗ ಯಾರುತಾನೆ ಬಾವಿಯನ್ನು ತೋಡಿಯಾರು? ಇನ್ನು ಬಹಳ ಸಂಕಟವನ್ನುಂಟುಮಾಡುವ ಯೋಚನೆಗಳಿಂದ ನನಗೆ ಆಗಬೇಕಾದದ್ದೇನು? ಆದುದರಿಂದ ಪ್ರಕೃತದಲ್ಲಿ ನಾನು ಎಲ್ಲ ಬಗೆಯಲ್ಲಿಯೂ ಮಂಗಳವನ್ನುಂಟುಮಾಡುವ ಶಿವಕೇಶವರನ್ನು ಸ್ಮರಿಸುತ್ತೇನೆ.

೧೨೫-೧೨೬. ಅಥವಾ ನಾನು ಮುಕ್ತಿಯನ್ನು ದೊರಕಿಸುವ ಒಂದು ಉಪಾಯವನ್ನೇನೊ ಅನುಷ್ಠಿಸಿರುತ್ತೇನೆ. ಲೋಕದಲ್ಲಿ ಸಪ್ತಪುರಿಗಳು ಮುಕ್ತಿದಾಯಕಗಳೆಂದು ಪ್ರಸಿದ್ಧಗಳಾಗಿವೆ ಅವುಗಳೆಲ್ಲವನ್ನೂ ನಾನು ಸಂದರ್ಶನ ಮಾಡಿರುತ್ತೇನೆ. ಸ್ವರ್ಗವನ್ನಾಗಲಿ, ಮೋಕ್ಷವನ್ನಾಗಲಿ ಇವೆರಡರಲ್ಲಿ ಯಾವುದಾದರೊಂದನ್ನು ವಿದ್ವಾಂಸನಾದವನು ಖಂಡಿತವಾಗಿ ಸಾಧಿಸಬೇಕು. ಎರಡನ್ನೂ ಸಾಧಿಸದೆ ಇದ್ದರೆ ಅವನು ಆ ತರುವಾಯ ಸಂತಾಪಕ್ಕೊಳಗಾಗುತ್ತಾನೆ ನಾನು ಅವೆರಡರಲ್ಲಿ ಒಂದನ್ನಾದರೂ ಸಾಧಿಸಿರುವುದರಿಂದ ನನಗೆ ಯಾವ ಯೋಚನೆಯೂ ಇರುವುದಿಲ್ಲ.

ಅಥವಾ ಚಿಂತಯಾ ಕಿಂ ಮೇ ತ್ವನಯಾ ದುರವಸ್ಥಯಾ ।
ರಣೇ ವಾ ಮರಣಂ ಶ್ರೇಯಸ್ತೀರ್ಥೇ ವಾಽತ್ರ ಯಥಾ ಮಮ ॥ ೧೨೭ ॥
ಕಿಮಹಂ ಮಂದಭಾಗೀವ ರಥ್ಯಾಂ ಕ್ವಾಽಪಿ ಮ್ರಿಯೇಽಧುನಾ ।
ಭಾಗೀರಥ್ಯಾಂ ಮ್ರಿಯೇ ಚಾಽದ್ಯ ಕಾ ಚಿಂತಾ ಮಮ ಮೂಢವತ್ ॥೧೨೮॥
ಚರ್ಮಾಽಸ್ಥಿಸಂಚಯೇನಾಽಹಮನೇನ ವಪುಷಾ ಧ್ರುವಂ ।
ಪ್ರಾಪ್ಸ್ಯಾಮಿ ನಿಧನಾದತ್ರ ಸಿದ್ಧಿಂ ನೈಃಶ್ರೇಯಸೀಂ ಧ್ರುವಂ ॥ ೧೨೯ ॥
ಏವಂ ಚಿಂತಯತಸ್ತಸ್ಯ ಪೀಡಾಽಽಸೀದತಿದಾರುಣಾ ।
ಕೋಟಿವೃಶ್ಚಿಕದಷ್ಟಸ್ಯ ಯಾಽಽವಸ್ಥಾ ತಾಮವಾಪ ಸಃ ॥ ೧೩೦ ॥
ಸ್ಮರ್ತವ್ಯಂ ವಿಸ್ಮೃತಂ ಸರ್ವಂ ಕ್ವಾಽಹಂ ಕೋಽಹಂ ನವೇತ್ತಿ ಚ ।
ದಿನಾನಿ ಸಪ್ತಸಪ್ತೇತಿ ಸ್ಥಿತ್ವಾ ಪಂಚತ್ವಮಾಗತಃ ॥ ೧೩೧ ॥
ತಾವದ್ವೈಕುಂಠಭುವನಾದ್ವಿಮಾನಂ ಸಮುಪಸ್ಥಿತಂ ।
ತಾರ್ಕ್ಷ್ಯೇಪಲಕ್ಷಿತೋ ಯತ್ರ ಧ್ವಜಶ್ಚಾಽತಿಸಮುಚ್ಛ್ರಿತಃ ॥ ೧೩೨ ॥

---

೧೨೭. ಅಥವಾ ದುರವಸ್ಥೆಗೀಡುಮಾಡುವ ಈ ಚಿಂತೆಯು ತಾನೆ ನನಗೇತಕ್ಕೆ? ಮಾನವನಿಗೆ ರಣದಲ್ಲಿಯಾದರೂ ಸರಿಯೆ, ಅಥವಾ ನನಗಾಗುವ ಹಾಗೆ ತೀರ್ಥಕ್ಷೇತ್ರದಲ್ಲಿಯಾದರೂ ಸರಿಯೆ ಮರಣವು ಲಭಿಸುವುದು ಶ್ರೇಯಸ್ಕರ.

೧೨೮. ಪಾಪಿಷ್ಠನಂತೆ ನಾನು ಎಲ್ಲಿಯೊ ಬೀದಿಯಲ್ಲಿ ಹೀಗೆ ಸಾಯುತ್ತಿದ್ದೇನೆಯೆ? ಭಾಗೀರಥೀತೀರದಲ್ಲಿ ನನಗೆ ಮರಣವುಂಟಾಗುತ್ತಿದೆ. ಹೀಗಿರುವಲ್ಲಿ ಮೂಢನಂತೆ ನಾನೇಕೆ ಚಿಂತಿಸಲಿ?

೧೨೯. ಚರ್ಮದ ಹೊದಿಕೆಯನ್ನೊಳಗೊಂಡು ಎಲುಬುಗಳಿಂದ ತುಂಬಿರುವ ಈ ದೇಹದಿಂದಲೆ ಇಲ್ಲಿ ಮೃತಿಯೊಂದುವುದರಿಂದ ನಾನು ಅತ್ಯಂತ ಶ್ರೇಯಸ್ಕರವಾದ ಸಿದ್ಧಿಯನ್ನು ಪಡೆಯುವುದರಲ್ಲಿ ಸಂಶಯವಿಲ್ಲ,

೧೩೦–೧೩೧. ಎಲೌ ಲೋಪಾಮುದ್ರೆಯೆ, ಆ ಶಿವಶರ್ಮದ್ವಿಜನು ಹೀಗೆ ಯೋಚಿಸುತ್ತಿರುವಂತೆಯೆ ಬಹು ಭಯಂಕರವಾದ ಯಾತನೆಯು ಅವನನ್ನು ಪೀಡಿಸತೊಡಗಿತು. ಒಂದೇ ಬಾರಿಗೆ ಸಾವಿರ ಚೇಳುಗಳು ಕುಟುಕುವುದರಿಂದಾಗುವ ನೋವನ್ನು ಅವನು ಅನುಭವಿಸತೊಡಗಿ, ಅವರ್ಣನೀಯವಾದ ಸ್ಥಿತಿಗೆ ಬಂದನು. ಸ್ಮರಿಸಬೇಕಾದುದೆಲ್ಲ ಮರೆತುಹೋಯಿತು. 'ನಾನಾರು, ಎಲ್ಲಿದ್ದೇನೆ' ಎಂಬುದೇ ಅವನಿಗೆ ಅರಿವಾಗಲಿಲ್ಲ. ಹೀಗೆ ಹದಿನಾಲ್ಕು ದಿನಗಳ ಕಾಲ ಬದುಕಿದ್ದು ಆ ತರುವಾಯ ಅವನು ಇಹಲೋಕ ವ್ಯಾಪಾರವನ್ನು ತ್ಯಜಿಸಿದನು.

೧೩೨. ಎಲೌ ಸಾಧ್ವೀಮಣಿಯೆ, ಇದಾದ ತರುವಾಯ ವೈಕುಂಠ ಭವನದಿಂದ ಗರುಡಧ್ವಜಾಲಂಕೃತವಾದ ವಿಮಾನಶ್ರೇಷ್ಠವು ಅಲ್ಲಿಗೈತಂದಿತು

ಅಧಿಷ್ಠಿತಂ ಸುಕನ್ಯಾನಾಂ ಸ್ವರ್ಣಕೌಶೇಯವಾಸಸಾಂ ।
ಚಾಮರವ್ಯಗ್ರಹಸ್ತಾನಾಂ ಸಹಸ್ರೇಣಾಽತಿವಿಸ್ತೃತಂ ॥ ೧೩೩ ॥
ಪುಣ್ಯಶೀಲಸುಶೀಲಾಭ್ಯಾಂ ಗಣಾಭ್ಯಾಂ ಚ ವಿರಾಜಿತಂ ।
ಚತುರ್ಭುಜಾಭ್ಯಾಂ ಸ್ವಾಸ್ಯಾಭ್ಯಾಂ ಕಿಂಕಿಣೀಜಾಲಮಾಲಿತಂ ॥ ೧೩೪ ॥
ತದ್ವಿಮಾನಮಥಾರುಹ್ಯ ಪೀತವಾಸಾಶ್ಚತುರ್ಭುಜಃ ।
ಅಲಂಚಕ್ರೇ ನಭೋವರ್ತ್ಮ ಸ ದ್ವಿಜೋ ದಿವ್ಯಭೂಷಣಃ ॥ ೧೩೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಸಪ್ತಪುರೀವರ್ಣನಂ"
ನಾಮ ಸಪ್ತಮೋಽಧ್ಯಾಯಃ

---

೧೩೩. ಸ್ವರ್ಣಪೀತಾಂಬರಗಳನ್ನುಟ್ಟು ಚಾಮರಗಳನ್ನು ಹಿಡಿದು ಬಹು ಮನೋಹರವಾಗಿ ಕಂಗೊಳಿಸುತ್ತಿರುವ ಸಾವಿರ ಮಂದಿ ಕನ್ಯೆಯರು ಆ ವಿಮಾನ ದಲ್ಲಿದ್ದರು.

೧೩೪. ಕಿರುಗೆಜ್ಜೆಗಳ ಮಾಲೆಗಳಿಂದ ಬಹು ಶೃಂಗಾರವಾಗಿ ಶೋಭಿಸು ತ್ತಿದ್ದ ಆ ವಿಮಾನ ಶ್ರೇಷ್ಠದಲ್ಲಿ ಸುಪ್ರಸನ್ನವಾದ ಮುಖಮುದ್ರೆಯುಳ್ಳವರಾಗಿ, ಚತುರ್ಭುಜಗಳಿಂದೊಪ್ಪಿ ಮೆರೆಯುತ್ತಿದ್ದ ಪುಣ್ಯಶೀಲ ಸುಶೀಲರೆಂಬ ವಿಷ್ಣು ಪಾರ್ಷದರಿಂದ ಆ ವಿಮಾನಶ್ರೇಷ್ಠವು ಬಹು ಮನೋಹರವಾಗಿದ್ದಿತು.

೧೩೫. ದೇವಿ, ಆಗ ಬ್ರಾಹ್ಮಣೋತ್ತಮನಾದ ಆ ಶಿವಶರ್ಮನು ದಿವ್ಯ ಭೂಷಣಭೂಷಿತನಾಗಿ, ಪೀತಾಂಬರವನ್ನುಟ್ಟು ಚತುರ್ಭುಜಗಳಿಂದೊಪ್ಪಿ ಆ ವಿಮಾನಶ್ರೇಷ್ಠವನ್ನೇರಿ ಗಗನಮಾರ್ಗವನ್ನಲಂಕರಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಸಪ್ತಪುರೀವರ್ಣನ"ವೆಂಬ ಏಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಽಷ್ಟಮೋಽಧ್ಯಾಯಃ

## ಯಮಲೋಕವರ್ಣನಂ

ಲೋಪಾಮುದ್ರೋವಾಚ :—

ಜೀವಿತೇಶ ಕಥಾಮೇತಾಂ ಪುಣ್ಯಾಂ ಪುಣ್ಯಪುರೀಶ್ರಿತಾಂ ।
ನ ತೃಪ್ತಿಮಧಿಗಚ್ಛಾಮಿ ಶ್ರುತ್ವಾ ತ್ವಚ್ಛ್ರೀಮುಖೇರಿತಾಂ ॥ ೧ ॥
ಮಾಯಾಪುರ್ಯಾಂ ಮುಕ್ತಿಪುರ್ಯಾಂ ಶಿವಶರ್ಮಾ ದ್ವಿಜೋತ್ತಮಃ ।
ಮೃತೋಽಪಿ ನೋಕ್ಷಂ ನೈವಾಽಽಪ ಬ್ರೂಹಿ ತತ್ಕಾರಣಂ ವಿಭೋ ॥ ೨ ॥

ಅಗಸ್ತ್ಯ ಉವಾಚ :—

ಸಾಕ್ಷಾನ್ಮೋಕ್ಷೋ ನ ಚೈತಾಸು ಪುರೀಷು ಪ್ರಿಯಭಾಷಿಣಿ ।
ಪುರೋದ್ದಿಶ್ಯಾಽಮುಮೇವಾಽರ್ಥಮಿತಿಹಾಸೋ ಮಯಾ ಶ್ರುತಃ ॥ ೩ ॥
ಶೃಣು ಕಾಂತೇ ವಿಚಿತ್ರಾರ್ಥಾಂ ಕಥಾಂ ಪಾಪಪ್ರಣಾಶಿನೀಂ ।
ಪುಣ್ಯಶೀಲಸುಶೀಲಾಭ್ಯಾಂ ಕಥಿತಾಂ ಶಿವಶರ್ಮಣೇ ॥ ೪ ॥

---

## ಕನ್ನಡದ ಅನುವಾದ

### ಯಮಲೋಕವರ್ಣನ

೧. ಲೋಪಾಮುದ್ರಾದೇವಿಯು ಕೇಳುತ್ತಾಳೆ.—ಓ ಜೀವಿತೇಶ್ವರ, ಪುಣ್ಯ ಪಟ್ಟಣವಾದ ಆ ಅವಿಮುಕ್ತಕ್ಷೇತ್ರದ ವಿಷಯವನ್ನೊಳಗೊಂಡ ಈ ಪುಣ್ಯಕಥೆಯನ್ನು ನಿನ್ನ ಶ್ರೀಮುಖದಿಂದ ಕೇಳುತ್ತ ಕೇಳುತ್ತ ನನಗೆ ತೃಪ್ತಿಯೇ ಆಗುತ್ತಿಲ್ಲ.

೨. ಮುಕ್ತಿಪುರಿಯೆಂದು ಪ್ರಸಿದ್ಧವಾದ ಮಾಯಾಪುರಿಯಲ್ಲಿ ಮೃತಿಯೊಂದಿದರೂ ದ್ವಿಜೋತ್ತಮನಾದ ಆ ಶಿವಶರ್ಮನು ಮೋಕ್ಷವನ್ನು ಏಕೆ ಪಡೆಯಲಿಲ್ಲವೆಂಬುದು ನನಗೆ ತಿಳಿಯಲಿಲ್ಲ. ಇದಕ್ಕೆ ಕಾರಣವನ್ನು ಅಪ್ಪಣೆ ಕೊಡಿಸಬೇಕು.

೩. ಅಗಸ್ತ್ಯನು ಹೇಳುತ್ತಾನೆ —ಎಲೆ ಸುಭಾಷಿಣಿಯೆ, ಈ ಪಟ್ಟಣಗಳಲ್ಲೆಲ್ಲ ಸಾಕ್ಷಾತ್ ಮೋಕ್ಷವೆಂಬುದು ಲಭಿಸುವುದಿಲ್ಲ. ಪೂರ್ವದಿಂದಲೂ ಆರ್ಷವಾಗಿ ಈ ವಿಷಯದಲ್ಲಿ ನಡೆದುಬಂದಿರುವ ಒಂದು ಇತಿಹಾಸವನ್ನು ನಾನು ಕೇಳಿದ್ದೇನೆ.

೪. ಎಲೆ ಕಾಂತೆ, ಪುಣ್ಯಶೀಲ ಸುಶೀಲರೆಂಬ ವಿಷ್ಣು ಪಾರ್ಷದರು ಶಿವಶರ್ಮ ಬ್ರಾಹ್ಮಣನಿಗೆ ಹೇಳಿದುದಾಗಿ ಅತ್ಯಾಶ್ಚರ್ಯಕರವಾದ ಸಂದರ್ಭವನ್ನೊಳಗೊಂಡು ಪಾಪಪ್ರಣಾಶಕವೆನಿಸಿದ ಈ ಕಥೆಯನ್ನು ಆಲಿಸು.

**ಶಿವಶರ್ಮೋವಾಚ :—**

**ಅಯಿ ವಿಷ್ಣುಗಣೌ ಪುಣ್ಯೌ ಪುಂಡರೀಕದಲೇಕ್ಷಣೌ ।**
**ಕಿಂಚಿದ್ವಿಜ್ಞಪ್ತುಕಾಮೋಽಹಂ ಪ್ರಬದ್ಧಕರಸಂಪುಟಃ ॥ ೫ ॥**
**ನ ನಾಮ ಯುವಯೋರ್ವೇದ್ಮಿ ವೇದ್ಮ್ಯಾಕೃತ್ಯಾ ಚ ಕಿಂಚನ ।**
**ಪುಣ್ಯಶೀಲಸುಶೀಲಾಖ್ಯೌ ಯುವಾಂ ಭವಿತುಮರ್ಹತಃ ॥ ೬ ॥**

**ಗಣಾವೂಚತುಃ :—**

**ಭಗವದ್ಭಕ್ತಿಯುಕ್ತಾನಾಂ ಕಿಮಜ್ಞಾತಂ ಭವಾದೃಶಾಂ ।**
**ಏತದೇವ ಹಿ ನೌ ನಾಮ ಯದುಕ್ತಂ ಶ್ರೀಮತಾ ತ್ವಯಾ ॥ ೭ ॥**
**ಯದನ್ಯದಪಿ ತೇ ಚಿತ್ತೇ ಪ್ರಷ್ಟವ್ಯಂ ತದಶಂಕಿತಂ ।**
**ಸಂಪೃಚ್ಛಸ್ವ ಮಹಾಪ್ರಾಜ್ಞ ಪ್ರೀತ್ಯಾ ತತ್ಪ್ರಬ್ರವಾವಹೇ ॥ ೮ ॥**
**ಇತಿ ಶ್ರುತ್ವಾ ಸ ವಚನಂ ಭಗವದ್ಗಣಭಾಷಿತಂ ।**
**ಅತಿಪ್ರೀತಿಕರಂ ಹೃದ್ಯಂ ತತಸ್ತೌ ಪ್ರತ್ಯುವಾಚಹ ॥ ೯ ॥**

**ದಿವ್ಯದ್ವಿಜ ಉವಾಚ :—**

**ಕ ಏಷ ಲೋಕೋಽಲ್ಪಶ್ರೀಕಃ ಸ್ವಲ್ಪ ಪುಣ್ಯಜನಾಕೃತಿಃ ।**
**ಕ ಇಮೇ ವಿಕೃತಾಕಾರಾ ಬ್ರೂತ ಮೇ ತನ್ಮಮಾಽಗ್ರತಃ ॥ ೧೦ ॥**

---

೫. ಶಿವಶರ್ಮನು ಕೇಳುತ್ತಾನೆ.—ಕಮಲದ ಎಸಳಿನಂತೆ ಅಗಲವಾದ ಕಂಗಳಿಂದೊಪ್ಪಿ ಬೆಳಗುತ್ತಿರುವ, ಎಲೈ ವಿಷ್ಣುಪಾರ್ಷದರೆ, ಪುಣ್ಯಾತ್ಮರಾದ ನಿಮ್ಮಲ್ಲಿ ನಾನು ಕೈಜೋಡಿಸಿ ಅರಿಕೆಮಾಡಬೇಕಾದದ್ದು ಸ್ವಲ್ಪವಿದೆ.

೬. ನಾನು ನಿಮ್ಮಿಬ್ಬರ ಹೆಸರನ್ನು ಕೇಳಿರುವುದಿಲ್ಲ. ಆದರೂ ನಿಮ್ಮ ಆಕೃತಿವಿಶೇಷದಿಂದ ನೀವೇ ವಿಷ್ಣುಪಾರ್ಷದರಾದ ಪುಣ್ಯಶೀಲ ಸುಶೀಲರಾಗಿರಬೇಕೆಂದು ಊಹಿಸುತ್ತೇನೆ.

೭. ಗಣಗಳು ಹೇಳುತ್ತಾರೆ.—ಅಯ್ಯಾ ವಿಪ್ರೋತ್ತಮನೆ, ನಿನ್ನಂಥ ಭಗವದ್ಭಕ್ತರಿಗೆ ತಿಳಿಯದಿರುವುದು ಏನುತಾನೆ ಇದೆ? ಪುಣ್ಯಾತ್ಮನಾದ ನೀನು ಹೇಳಿದಂತೆ ನಮ್ಮಿಬ್ಬರ ಹೆಸರು ಪುಣ್ಯಶೀಲ ಸುಶೀಲರೆಂದು.

೮. ನೀನು ನಮ್ಮನ್ನು ಕುರಿತು ಯಾವ ವಿಷಯದಲ್ಲಿ ಪ್ರಶ್ನಿಸಬೇಕೆಂದಿರುವೆಯೊ ಅದನ್ನು ನಿಸ್ಸಂಶಯವಾಗಿ ಪ್ರಶ್ನಿಸು. ಅಯ್ಯಾ ಮಹಾ ಪ್ರಾಜ್ಞನೆ, ನೀನು ಕೇಳಿದ ಪ್ರಶ್ನೆಗೆ ಪ್ರೀತಿಯಿಂದ ಉತ್ತರ ಕೊಡುತ್ತೇವೆ

೯. ವಿಷ್ಣುಪಾರ್ಷದರ ಬಹು ಪ್ರಿಯವೂ ಮನೋಹರವೂ ಆದ ಈ ಮಾತನ್ನು ಕೇಳಿ ಶಿವಶರ್ಮನು ಅವರನ್ನು ಕುರಿತು ಹೀಗೆಂದನು.

೧೦. ದಿವ್ಯದ್ವಿಜನು ಕೇಳುತ್ತಾನೆ:—ಅಯ್ಯಾ, ಸ್ವಲ್ಪ ಮಾತ್ರವೆ ತೇಜಸ್ಸಿ

ಗಣಾವೂಚತುಃ :—

ಅಯಂ ಪಿಶಾಚಲೋಕೋಽತ್ರ ವಸಂತಿ ಪಿಶಿತಾಽಶನಾಃ ।
ದತ್ವಾಽನುತಾಪಭಾಜೋ ಯೇ ನೋ ನೋ ಕೃತ್ವಾ ದದತ್ಯಪಿ ॥ ೧೧ ॥
ಶಿವಂ ಪ್ರಸಂಗತೋಽಭ್ಯರ್ಚ್ಯ ಸಕೃತ್ತ್ವಶುಚಿಚೇತಸಃ ।
ಅಲ್ಪ ಪುಣ್ಯಾಽಲ್ಪಲಕ್ಷ್ಮೀಕಾಃ ಪಿಶಾಚಾಸ್ತ ಇಮೇ ಸಖೇ ॥ ೧೨ ॥
ತತೋ ಗಚ್ಛನ್ಸ ದದರ್ಶಾಽಗ್ರೇ ಹೃಷ್ಟಪುಷ್ಟಜನಾವೃತಂ ।
ಪಿಚಂಡಿಲೈಃ ಸ್ಥೂಲವಕ್ತ್ರೈರ್ಮೇಘಗಂಭೀರನಿಃಸ್ವನೈಃ ॥ ೧೩ ॥
ಲೋಕೈರಧ್ಯುಷಿತಂ ಲೋಕಂ ಶ್ಯಾಮಲಾಂಗೈಶ್ಚ ಲೋಮಶೈಃ ।
ಗಣೌ ಕಥಯತಾಂ ಕೇಽಮೀ ಕೋ ಲೋಕಃ ಪುಣ್ಯತಃ ಕುತಃ ॥ ೧೪ ॥

ಗಣಾವೂಚತುಃ :—

ಗುಹ್ಯಕಾನಾಮಯಂ ಲೋಕಸ್ತ್ವೇತೇ ವೈ ಗುಹ್ಯಕಾಃ ಸ್ಮೃತಾಃ ।
ನ್ಯಾಯೇನೋಪಾರ್ಜ್ಯ ವಿತ್ತಾನಿ ಗೂಹಯಂತಿ ಚ ಯೇ ಭುವಿ ॥ ೧೫ ॥

---

ನಿಂದ ಕೂಡಿ, ಅಲ್ಪಪುಣ್ಯರಾದ ಜನರಿಂದ ತುಂಬಿ ಈ ಮುಂದೆ ಕಾಣುತ್ತಿರುವ ಲೋಕವು ಯಾವುದು? ಬಹು ವಿಕಾರವಾಗಿ ಕಾಣುತ್ತಿರುವ ಇವರಾರು?

೧೧. ಗಣಗಳು ಹೇಳುತ್ತಾರೆ —ಇದೇ ಪಿಶಾಚಲೋಕವು. ಇಲ್ಲಿ ಮಾಂಸ ಭಕ್ಷಕರಾದ ಪಿಶಾಚರು ವಾಸಮಾಡುತ್ತಾರೆ. ಕೊಟ್ಟು ಪೇಚಾಡುವವರೂ ಇಲ್ಲವೆಂದು ಹೇಳಿ ಆಮೇಲೆ ದಾನಮಾಡುವವರೂ ಇಲ್ಲಿ ವಾಸಮಾಡುತ್ತಾರೆ.

೧೨. ಅಯ್ಯಾ ಗೆಳೆಯನೆ, ಅಪವಿತ್ರವಾದ ಮನಸ್ಸುಳ್ಳವರಾಗಿ ಪ್ರಸಂಗ ವಶದಿಂದ ಈಶ್ವರನನ್ನು ಪೂಜಿಸಿದ ಅಲ್ಪ ಪುಣ್ಯರೂ, ಅಲ್ಪ ತೇಜಸ್ವಿಗಳೂ ಆದ ಪಿಶಾಚರೇ ಇವರು.

೧೩–೧೪. ತರುವಾಯ ಹೀಗೆಯೇ ಮುಂದುವರಿಯುತ್ತ ಆ ಶಿವಶರ್ಮನು, ಹೃಷ್ಟಪುಷ್ಟರಾಗಿ ಡೊಳ್ಳುಹೊಟ್ಟೆ, ದಪ್ಪಮೋರೆಗಳಿಂದ ಕೂಡಿ, ಮುಗಿಲನಾದ ದಂತೆ ಗಂಭೀರವಾದ ನಾದವುಳ್ಳವರಾಗಿ ಶ್ಯಾಮಲವರ್ಣದವರೂ ಮೈತುಂಬ ಕೂದಲುಗಳುಳ್ಳವರೂ ಆದ ಜನರಿಂದ ತುಂಬಿದ ಲೋಕವನ್ನು ಕಂಡು, "ಅಯ್ಯಾ ಗಣಗಳಿರಾ! ಇದಾವಲೋಕ? ಯಾವ ಪುಣ್ಯದಿಂದ ಈ ಲೋಕವು ನಿರ್ಮಿತವಾಗಿದೆ?" ಎಂದು ಕೇಳಿದನು.

೧೫. ಗಣಗಳು ಹೇಳುತ್ತಾರೆ —"ಅಯ್ಯಾ, ಇದು ಗುಹ್ಯಕಲೋಕ. ಇಲ್ಲಿ ಕಾಣುತ್ತಿರುವವರೆಲ್ಲರೂ ಗುಹ್ಯಕರೆಂದು ಪ್ರಸಿದ್ಧರಾಗಿದ್ದಾರೆ. ನ್ಯಾಯವಾಗಿ ಸಂಪಾದಿಸಿದ ಧನವನ್ನು ಯಾರು ಸಂರಕ್ಷಿಸಿಕೊಂಡು, ಭೂಮಿಯಲ್ಲಿ ಬೈತಿಡು ತ್ತಾರೆಯೊ ಅವರು ಹೀಗೆ ಗುಹ್ಯಕಲೋಕವನ್ನು ಸೇರುತ್ತಾರೆ.

ಸ್ವಮಾರ್ಗಗಾ ಧನಾಢ್ಯಾಶ್ಚ ಶೂದ್ರಪ್ರಾಯಾಃ ಕುಟುಂಬಿನಃ ।
ಸಂವಿಭಜ್ಯ ಚ ಭೋಕ್ತಾರಃ ಕ್ರೋಧಾಽಸೂಯಾವಿವರ್ಜಿತಾಃ ॥ ೧೬ ॥
ನ ತಿಥಿಂ ನೈವ ವಾರಂ ಚ ಸಂಕ್ರಾಂತ್ಯಾದಿ ನ ಪರ್ವ ಚ ।
ನಾಽಧರ್ಮಂ ನ ಚ ಧರ್ಮಂ ಚ ವಿದಂತ್ಯೇತೇ ಸದಾ ಸುಖಾಃ ॥ ೧೭ ॥
ಏಕಮೇವ ಹಿ ಜಾನಂತಿ ಕುಲಪೂಜ್ಯೋ ಹಿ ಯೋ ದ್ವಿಜಃ ।
ತಸ್ಮೈ ಗಾಃ ಸಂಪ್ರಯಚ್ಛಂತಿ ಮನ್ಯಂತೇ ತದ್ವಚಃ ಸ್ಫುಟಂ ॥ ೧೮ ॥
ಸಮೃದ್ಧಿಭಾಜೋ ಹ್ಯತ್ರಾಽಪಿ ತೇನ ಪುಣ್ಯೇನ ಗುಹ್ಯಕಾಃ ।
ಭುಂಜತೇ ಸ್ವರ್ಗಸೌಖ್ಯಾನಿ ದೇವವಚ್ಚಾಽಕುತೋಭಯಾಃ ॥ ೧೯ ॥
ತತೋ ವಿಲೋಕಯಾಮಾಸ ಲೋಕಂ ಲೋಚನಶರ್ಮದಂ ।
ಕೇಽಮೀ ಜನಾಸ್ತ್ವಸೌ ಲೋಕಃ ಕಿಂ ನಾಮಾ ವದತಾಂ ಗಣೌ ॥ ೨೦ ॥

ಗಣಾವೂಚತುಃ :—

ಗಾಂಧರ್ವಸ್ತ್ವೇಷಲೋಕೋಽಮೀ ಗಂಧರ್ವಾಶ್ಚ ಶುಭವ್ರತಾಃ ।
ದೇವಾನಾಂ ಗಾಯನಾದ್ಯೇತೇ ಚಾರಣಾಃ ಸ್ತುತಿಪಾಠಕಾಃ ॥ ೨೧ ॥

---

೧೬. ಇವರೆಲ್ಲರೂ ಧರ್ಮಮಾರ್ಗದಲ್ಲಿಯೇ ನಡೆಯುವವರಾಗಿ ಬಹಳ ಹಣವಂತರೂ, ಶೂದ್ರಪ್ರಾಯರೂ, ಕುಟುಂಬಿಗಳೂ, ಸ್ವಧನವನ್ನು ನಿಯಮಾನುಸಾರವಾಗಿ ವಿಭಾಗಿಸಿಕೊಂಡು ಅನುಭವಿಸುವವರೂ, ಕೋಪ ಅಸೂಯೆಗಳನ್ನು ತೊರೆದವರೂ ಆಗಿದ್ದವರು.

೧೭–೧೮. ತಿಥಿ ವಾರನಕ್ಷತ್ರಗಳು, ಸಂಕ್ರಾಂತಿ ಮೊದಲಾದ ಪರ್ವಕಾಲಗಳು ಧರ್ಮಾಧರ್ಮಗಳು—ಇವಾವುವುಗಳನ್ನೂ ಅರಿಯದೆ ಇವರು ಯಾವಾಗಲೂ ಸುಖಿಗಳಾಗಿಯೇ ಇದ್ದು, ಕುಲದಿಂದ ಪೂಜ್ಯರೆನಿಸಿದ ಬ್ರಾಹ್ಮಣರನ್ನು ಗೌರವಿಸಿ ಪೂಜಿಸಿ, ಅವರಿಗೆ ಗೋವುಗಳನ್ನು ದಾನಮಾಡಿ ಅವರ ಮಾತನ್ನು ಸಂಪೂರ್ಣವಾಗಿ ನಂಬಿ ನಡೆಯುವುದೆಂಬ ಧರ್ಮವೊಂದನ್ನೇ ಇವರು ಬಲ್ಲರಾಗಲಿ ಮತ್ತಾವುದನ್ನೂ ನಂಬಿ ನಡಸಿದವರಲ್ಲ.

೧೯. ಈ ಒಂದು ಪುಣ್ಯದಿಂದಲೆ ಇವರು ಗುಹ್ಯಕರೆನಿಸಿ ಈ ಲೋಕವನ್ನು ಸೇರಿ, ಐಶ್ವರ್ಯವಂತರಾಗಿ ದೇವತೆಗಳಿಗೆ ಸಮ ಸಮವಾದ ಸ್ವರ್ಗಭೋಗಗಳನ್ನು ಅನುಭವಿಸುತ್ತ, ಯಾವ ಭಯವೂ ಇಲ್ಲದೆ ಈ ಲೋಕದಲ್ಲಿ ನೆಲಸಿರುತ್ತಾರೆ.''

೨೦. ಗಣಗಳು ಇಂತು ನುಡಿದ ತರುವಾಯ ಆ ಶಿವಶರ್ಮನು ಕಣ್ಣುಗಳಿಗೆ ತಂಪನ್ನೆರೆಯುವ ಬೇರೊಂದು ಲೋಕವನ್ನು ನೋಡಿ, ''ಅಯ್ಯಾ ಗಣಗಳಿರಾ! ಈ ಜನಗಳಾರು? ಈ ಲೋಕವಾವುದು? ಇದರ ಹೆಸರೇನು?'' ಎಂದು ಪ್ರಶ್ನಿಸಿದನು.

೨೧. ಗಣಗಳು ಹೇಳುತ್ತಾರೆ:—''ಅಯ್ಯಾ ಪುಣ್ಯಾತ್ಮನೆ, ಇದು ಗಂಧರ್ವ

ಗೀತಜ್ಞಾ ಅತಿಗೀತೇನ ತೋಷಯಂತಿ ನರಾಧಿಪಾನ್ ।
ಸ್ತುವಂತಿ ಚ ಧನಾಢ್ಯಾಂಶ್ಚ ಧನಲೋಭೇನ ಮೋಹಿತಾಃ ॥ ೨೨ ॥
ರಾಜ್ಞಾಂ ಪ್ರಸಾದಲಬ್ಧಾನಿ ಸುವಾಸಾಂಸಿ ಧನಾನ್ಯಪಿ ।
ದ್ರವ್ಯಾಣ್ಯಪಿ ಸುಗಂಧೀನಿ ಕರ್ಪೂರಾದೀನ್ಯನೇಕಶಃ ॥ ೨೩ ॥
ಬ್ರಾಹ್ಮಣೇಭ್ಯಃ ಪ್ರಯಚ್ಛಂತಿ ಗೀತಂ ಗಾಯಂತ್ಯಹರ್ನಿಶಂ ।
ಶ್ರುತಾವೇವ ಮನಸ್ತೇಷಾಂ ನಾಟ್ಯಶಾಸ್ತ್ರಕೃತಶ್ರಮಾಃ ॥ ೨೪ ॥
ತೇನ ಪುಣ್ಯೇನ ಗಾಂಧರ್ವೋ ಲೋಕಸ್ತೇಷಾಂ ವಿಶಿಷ್ಯತೇ ।
ಬ್ರಾಹ್ಮಣಾಸ್ತೋಷಿತಾ ಯದ್ವೈ ಗೀತವಿದ್ಯಾರ್ಜಿತೈರ್ಧನೈಃ ॥ ೨೫ ॥
ಗೀತವಿದ್ಯಾಪ್ರಭಾವೇಣ ದೇವರ್ಷಿರ್ನಾರದೋ ಮಹಾನ್ ।
ಮಾನ್ಯೋ ವೈಷ್ಣವಲೋಕೇ ವೈ ಶ್ರೀಶಂಭೋಶ್ಚಾತಿವಲ್ಲಭಃ ॥ ೨೬ ॥
ತುಂಬುರುರ್ನಾರದಶ್ಚೋಭೌ ದೇವಾನಾಮತಿದುರ್ಲಭೌ ।
ನಾದರೂಪೀ ಶಿವಃ ಸಾಕ್ಷಾನ್ನಾದತತ್ತ್ವವಿದೌ ಹಿ ತೌ ॥ ೨೭ ॥

---

ಲೋಕ. ಇಲ್ಲಿರುವವರು ಮಂಗಳವ್ರತಧಾರಿಗಳಾದ ಗಂಧರ್ವರು. ದೇವತೆಗಳ ಬಳಿ ಗಾನಮಾಡಿ ಅವರನ್ನು ಸಂತೋಷಪಡಿಸುವುದರಿಂದ ಇವರು ಸ್ತುತಿಪಾಠಕ ರೆನಿಸಿದ ಚಾರಣರೆಂದು ಪ್ರಸಿದ್ಧರಾಗಿದ್ದಾರೆ.

೨೨. ಸಂಗೀತವನ್ನು ಬಹು ಚೆನ್ನಾಗಿ ಬಲ್ಲ ಈ ಗಂಧರ್ವರು ಧನಲೋಭಕ್ಕೆ ಒಳಗಾಗಿ ಮಧುರವಾದ ಗೀತದಿಂದ ನರೇಶ್ವರರನ್ನೂ, ಧನಾಢ್ಯರನ್ನೂ ಸ್ತುತಿಸಿ ಸಂತೋಷಗೊಳಿಸುತ್ತಾರೆ.

೨೩-೨೪. ಆ ದೊರೆಗಳ ಅನುಗ್ರಹದಿಂದ ದೊರೆತ ಪೀತಾಂಬರಗಳನ್ನೂ, ಧನಗಳನ್ನೂ, ಕರ್ಪೂರ ಕುಂಕುಮ ಕೇಸರಿ ಮೊದಲಾದ ಸುಗಂಧ ದ್ರವ್ಯಗಳನ್ನೂ ಪಡೆದು, ಅವುಗಳನ್ನೇ ಬ್ರಾಹ್ಮಣರಿಗೂ ದಾನಮಾಡಿ ಹಗಲಿರುಳೂ ಗಾನ ಮಾಡುತ್ತ ಗಾಂಧರ್ವವೇದದಲ್ಲಿಯೂ, ನಾಟ್ಯಶಾಸ್ತ್ರದಲ್ಲಿಯೂ ಪರಿಶ್ರಮವನ್ನು ಮಾಡಿರುವವರು ಇವರು.

೨೫. ಬ್ರಾಹ್ಮಣರನ್ನು ಗೀತವಾದ್ಯಾದಿಗಳಿಂದ ಸಂಪಾದಿಸಿದ ಧನದ ಮೂಲಕ ತೃಪ್ತಿಗೊಳಿಸಿದ ಪುಣ್ಯದ ಸಲುವಾಗಿ ಇವರು ಈ ಗಂಧರ್ವಲೋಕ ವನ್ನು ಸೇರಿ ವಿಶೇಷವಾದ ಭೋಗಗಳನ್ನು ಅನುಭವಿಸುತ್ತಿದ್ದಾರೆ.

೨೬. ಎಲೈ ಶಿವಶರ್ಮನೆ, ಈ ಗೀತ ವಾದ್ಯ ಪ್ರಭಾವದಿಂದಲೆ ಮಹಾತ್ಮ ನಾದ ದೇವರ್ಷಿನಾರದನೂ ಸಹ ವಿಷ್ಣುಲೋಕದಲ್ಲಿ ಮಾನ್ಯನೆನಿಸಿ, ಕೈಲಾಸ ದಲ್ಲಿ ಶ್ರೀಶಂಭುಶಂಕರನಿಗೆ ವಲ್ಲಭನೆನಿಸಿರುತ್ತಾರೆ.

೨೭. ತುಂಬುರು ನಾರದರಿಬ್ಬರೂ ದೇವತೆಗಳಿಗೆ ಅತ್ಯಂತ ದುರ್ಲಭರಾದ

ಯದಿ ಗೀತಂ ಕ್ವಚಿದ್ಗೀತಂ ಶ್ರೀಮದ್ಧರಿಹರಾಽಂತಿಕೇ ।
ಮೋಕ್ಷಸ್ತು ತತ್ಫಲಂ ಪ್ರಾಹುಃ ಸಾನ್ನಿಧ್ಯಮಥವಾ ತಯೋಃ ॥ ೨೮ ॥
ಗೀತಜ್ಞೋ ಯದಿ ಗೀತೇನ ನಾಪ್ನೋತಿ ಪರಮಂ ಪದಂ ।
ರುದ್ರಸ್ಯಾಽನುಚರೋ ಭೂತ್ವಾ ತೇನೈವ ಸಹ ಮೋದತೇ ॥ ೨೯ ॥
ಅಸ್ಮಿಂಲ್ಲೋಕೇ ಸದಾಕಾಲಂ ಸ್ಮೃತಿರೇಷಾ ಪ್ರಗೀಯತೇ ।
ತದ್ಗೀತಮಾಲಯಾ ಪೂಜ್ಯೌ ದೇವೌ ಹರಿಹರೌ ಸದಾ ॥ ೩೦ ॥
ಇತಿ ಶೃಣ್ವನ್ಕ್ಷಣಾತ್ಪ್ರಾಪ ಪುನರನ್ಯನ್ಮನೋಹರಂ ।
ಶಿವಶರ್ಮಾಽಥ ಪಪ್ರಚ್ಛ ಕಿಂ ಸಂಜ್ಞಂ ನಗರಂ ತ್ವಿದಂ ॥ ೩೧ ॥

ಗಣಾವೂಚತುಃ :—

ಅಸೌ ವೈದ್ಯಾಧರೋ ಲೋಕೋ ನಾನಾವಿದ್ಯಾವಿಶಾರದಾಃ ।
ಏತೇ ವಿದ್ಯಾರ್ಥಿನಾಮನ್ನಮುಪಾನದ್ವಸ್ತ್ರಕಂಬಲಂ ॥ ೩೨ ॥
ಔಷಧಾನ್ಯಪಿ ಯಚ್ಛಂತಿ ತತ್ಪೀಡಾಶಮನಾನಿ ಹಿ ।
ನಾನಾಕಲಾಃ ಶಿಕ್ಷಯಂತಿ ವಿದ್ಯಾಗರ್ವವಿವರ್ಜಿತಾಃ ॥ ೩೩ ॥

---

ವರು. ಪರಮೇಶ್ವರನು ಸಾಕ್ಷಾತ್ ನಾದರೂಪನೇ ಆಗಿರುವನು. ಈ ತುಂಬುರು ನಾರದರಿಬ್ಬರೂ ಆ ನಾದತತ್ತ್ವವನ್ನು ಚೆನ್ನಾಗಿ ಬಲ್ಲವರು.

೨೮. ಹರಿಹರರ ಸಮೀಪದಲ್ಲಿ ಯಾವಾಗಲಾದರೂ ಮಧುರವಾದ ಗೀತಗಳನ್ನು ಗಾನಮಾಡಿದ್ದಾದರೆ ಅದರ ಫಲವಾಗಿ ಮೋಕ್ಷವೇ ದೊರಕುತ್ತದೆಯೆಂದು ಹೇಳುತ್ತಾರೆ. ಅಥವಾ ಹರಿಹರರ ಸಾನ್ನಿಧ್ಯವಂತೂ ತಪ್ಪುವುದಿಲ್ಲವೆಂದು ಬಲ್ಲವರ ಮತ.

೨೯. ಗೀತಜ್ಞನಾದವನು ತನ್ನ ಗಾಯಕಧರ್ಮವನ್ನೆಡೆಬಿಡದೆ ಅದರಿಂದಲೇ ಪರಮಪದವನ್ನು ಒಂದು ವೇಳೆ ಪಡೆಯದಿದ್ದರೂ ಕೈಲಾಸದಲ್ಲಿ ರುದ್ರನ ಅನುಚರನಾಗಿ ಅವನೊಡನೆ ಸಮಸಮವಾಗಿ ಸಂತೋಷಿಸುತ್ತಾನೆ.

೩೦. ಅಯ್ಯಾ, ಈ ಲೋಕದಲ್ಲಿ ಎಲ್ಲ ಕಾಲಗಳಲ್ಲಿಯೂ ಈ ಮೇಲಣ ಸ್ಮೃತಿಯೇ ವಿಶೇಷವಾಗಿ ಗಾನಮಾಡಲ್ಪಡುತ್ತಿರುತ್ತದೆ. ಇದೇ ಗೀತೆಗಳ ಮಾಲೆಯಿಂದ ಹರಿಹರ ಮೂರ್ತಿಗಳಿಬ್ಬರೂ ಈ ಲೋಕದಲ್ಲಿ ಪೂಜೆಗೊಳ್ಳುತ್ತಿರುತ್ತಾರೆ.''

೩೧. ಹೀಗೆ ಆ ಗಂಧರ್ವಲೋಕದ ವಿಷಯವನ್ನು ಕೇಳುತ್ತಲೆ ಮುಂದು ವರಿದು ಶಿವಶರ್ಮನು ಕ್ಷಣದಲ್ಲಿಯೆ ಮನೋಹರವಾದ ಮತ್ತೊಂದು ಲೋಕವನ್ನು ಕಂಡು, ಈ ದಿವ್ಯನಗರವಾವುದೆಂದು ಪ್ರಶ್ನಿಸಿದನು.

೩೨–೩೩. ಗಣಗಳು ಹೇಳುತ್ತಾರೆ —'' ಇದು ವಿದ್ಯಾಧರಲೋಕ. ಇಲ್ಲಿರುವವರೆಲ್ಲರೂ ಸಮಸ್ತವಿದ್ಯೆಗಳಲ್ಲಿಯೂ ವಿಶಾರದರೆನಿಸಿದವರು.

ಶಿಷ್ಯಂ ಪುತ್ರೇಣ ಪಶ್ಯಂತಿ ವಸ್ತ್ರತಾಂಬೂಲಭೋಜನೈಃ ।
ಅಲಂಕೃತಾಶ್ಚ ಸತ್ಕನ್ಯಾ ಧರ್ಮಾದುದ್ವಾಹಯಂತಿ ಚ ॥ ೩೪ ॥
ಅಭಿಲಾಷಧಿಯಾ ನಿತ್ಯಂ ಪೂಜಯಂತೀಷ್ಟದೇವತಾಃ ।
ಏತೇ ಪುಣ್ಯೈರ್ವಸಂತೀಹ ವಿದ್ಯಾಧರವರಾ ಇಮೇ ॥ ೩೫ ॥
ಯಾವದಿತ್ಥಂ ಕಥಾಂ ಚಕ್ರುಸ್ತಾವತ್ಸಂಯಮಿನೀಪತಿಃ ।
ಧರ್ಮರಾಜೋಽಭಿಸಂಪ್ರಾಪ್ತೋ ದೇವದುಂದುಭಿನಿಃಸ್ವನೈಃ ॥ ೩೬ ॥
ಸೌಮ್ಯಮೂರ್ತಿರ್ವಿಮಾನಸ್ಥೋ ಧರ್ಮಜ್ಞೈಃ ಪರಿವಾರಿತಃ ।
ಸೇವಾಕರ್ಮಸು ಚತುರೈರ್ಭೃತ್ಯೈಸ್ತ್ರಿಚತುರೈಃ ಸಹ ॥ ೩೭ ॥

ಧರ್ಮರಾಜ ಉವಾಚ:—

ಸಾಧು ಸಾಧು ಮಹಾಬುದ್ಧೇ ಶಿವಶರ್ಮನ್ದ್ವಿಜೋತ್ತಮ ।
ಕುಲೋಚಿತಂ ಬ್ರಾಹ್ಮಣಾನಾಂ ಭವತಾ ಪ್ರತಿಪಾದಿತಂ ॥ ೩೮ ॥
ವೇದಾಭ್ಯಾಸಃ ಕೃತಃ ಪೂರ್ವಂ ಗುರವಶ್ಚಾಽಪಿ ತೋಷಿತಾಃ ।
ಧರ್ಮಶಾಸ್ತ್ರಪುರಾಣೇಷು ದೃಷ್ಟೋ ಧರ್ಮಸ್ತ್ವಯಾಽಽದೃತಃ ॥ ೩೯ ॥

---

ಭೂಲೋಕದಲ್ಲಿ ವಿದ್ಯಾರ್ಥಿಗಳಿಗೆ ಅನ್ನ, ವಸ್ತ್ರ, ಕಂಬಳಿ, ಹಾವುಗೆ, ಔಷಧಗಳು ಮೊದಲಾದುವುಗಳನ್ನು ದಾನಮಾಡಿ ಅವರಿಗೆ ಸಂಭವಿಸುವ ಎಲ್ಲ ಬಗೆಯ ಕಷ್ಟಗಳನ್ನೂ ಪರಿಹರಿಸಿ ಗರ್ವವನ್ನುಳಿದು, ವಿದ್ಯೆಯನ್ನೂ ವಿವಿಧ ಕಲೆಗಳನ್ನೂ ಕಲಿಸಿ ಶಿಷ್ಯರಾದ ಅವರನ್ನು ಪುತ್ರರಂತೆಯೇ ಕಂಡು, ವಸ್ತ್ರ ತಾಂಬೂಲ ಭೋಜನಗಳಿಂದ ಅಲಂಕೃತೆಯರಾದ ಕನ್ಯೆಯರನ್ನು ಅವರಿಗಿತ್ತು ವಿಧ್ಯುಕ್ತವಾಗಿ ಮದುವೆ ಮಾಡಿಸಿ, ಮೋಕ್ಷದ ಅಭಿಲಾಷೆಯಿಂದಲೇ ಇಷ್ಟದೇವತೆಗಳನ್ನು ಪೂಜಿಸಿ ಸಂಪಾದಿಸಿದ ಪುಣ್ಯಗಳಿಂದಲೆ ಮಾನವರು ಈ ಲೋಕದಲ್ಲಿ ವಿದ್ಯಾಧರರೆನಿಸಿ ವಾಸಮಾಡುತ್ತಾರೆ."

೩೬–೩೭. ವಿಷ್ಣುಗಣಗಳೂ, ಶಿವಶರ್ಮನೂ ಈ ರೀತಿ ಮಾತನಾಡುತ್ತಿರುವಂತೆಯೆ ಸಂಯಮಿನೀಪಟ್ಟಣದ ಒಡೆಯನಾದ ಯಮಧರ್ಮರಾಜನು ಸೌಮ್ಯಮೂರ್ತಿಯಾಗಿ ವಿಮಾನದಲ್ಲಿ ಕುಳಿತು ಧರ್ಮಜ್ಞರಿಂದ ಪರಿವಾರಿತನಾಗಿ, ಸೇವೆಸಲ್ಲಿಸುವುದರಲ್ಲಿ ಚತುರರಾದ ಮೂರು ನಾಲ್ಕು ಮಂದಿ ಸೇವಕರೊಡಗೂಡಿ, ದೇವದುಂದುಭಿಗಳು ಮೊಳಗುತ್ತಿರಲು ಅಲ್ಲಿಗೈತಂದನು.

೩೮. ಧರ್ಮರಾಜನು ಹೇಳುತ್ತಾನೆ.—"ಎಲೈ ಮಹಾ ಬುದ್ಧಿಶಾಲಿಯಾದ ಶಿವಶರ್ಮದ್ವಿಜೋತ್ತಮನೆ, ಇದೀಗ ನನಗೆ ಸಂತೋಷವಾಯಿತು ಇದು ಬಹು ಒಳ್ಳೆತಾಯಿತು. ಬ್ರಾಹ್ಮಣ ಕುಲಕ್ಕೆ ಯೋಗ್ಯವಾದ ಪುಣ್ಯಗಳೆಲ್ಲವನ್ನೂ ನೀನು ಉಚಿತವಾದ ಸತ್ಕರ್ಮಾನುಷ್ಠಾನದಿಂದ ಸಂಪಾದಿಸಿದ್ದೀಯೆ.

೩೯. ಮೊದಲು ಉಪನೀತನಾದ ಮೇಲೆ ಬ್ರಹ್ಮಚರ್ಯವನ್ನು ಚರಿಸುತ್ತ

ಕ್ಷಾಲಿತಂ ಮುಕ್ತಿಪುರ್ಯಾದ್ಭಿರಾಶುಗಂತೃಶರೀರಕಂ ।
ಕೋವಿದೋಽಸ್ತಿ ಭವಾನೇವ ಜೀವಿತೇ ಜೀವಿತೇತರೇ ॥ ೪೦ ॥
ಕಲೇವರಂ ಪೂತಿಗಂಧಿ ಸದೈವಾಽಶುಚಿಭಾಜನಂ ।
ಸುತೀರ್ಥಪುಣ್ಯಪುಣ್ಯೇನ ಸಮ್ಯಗ್ನಿನಿಮಿತಂ ತ್ವಯಾ ॥ ೪೧ ॥
ಅತ ಏವ ಹಿ ಪಾಂಡಿತ್ಯಮಾದ್ರಿಯಂತೇ ವಿಚಕ್ಷಣಾಃ ।
ಅಹಃಕ್ಷೇಪಂ ನ ಕ್ಷಿಪಂತಿ ಕ್ಷಣಮೇಕಂ ಹಿ ತೇ ಬುಧಾಃ ॥ ೪೨ ॥
ನಿಮೇಷಾನ್ಪಂಚಷಾನ್ಮರ್ತ್ಯೇ ಪ್ರಾಣಂತಿ ಪ್ರಾಣಿನೋ ಧ್ರುವಂ ।
ತತ್ರಾಽಪಿ ನ ಪ್ರವರ್ತೇಯುರಘಕರ್ಮಣಿ ಗರ್ಹಿತೇ ॥ ೪೩ ॥
ಸ್ಥಿರಾಪಾಯಃ ಸದಾಕಾಯೋ ನ ಧನಂ ನಿಧನೇಽವತಿ ।
ತನ್ಮೂಢಃ ಪ್ರೌಢಕಾರ್ಯೇ ಕಿಂ ನ ಯತೇತ ಭವಾನಿವ ॥ ೪೪ ॥

---

ವೇದಾಭ್ಯಾಸವನ್ನು ಮಾಡಿ ಗುರುಗಳನ್ನು ಸಂತೋಷಗೊಳಿಸಿದ್ದೀಯೆ. ಧರ್ಮಶಾಸ್ತ್ರ ಪುರಾಣಾದಿಗಳಲ್ಲಿ ಕಂಡುಬಂದ ಧರ್ಮವನ್ನು ನೀನು ಬಹುಶ್ರದ್ಧೆಯಿಂದ ಆದರಿಸಿ ನಡೆದಿರುವೆ.

೪೦. ಮುಕ್ತಿಕ್ಷೇತ್ರವೆನಿಸಿದ ಕಾಶಿಯಲ್ಲಿ ನೀನು, ಬಹು ಬೇಗನೆ ನಾಶವಾಗುವ ಈ ಶರೀರವನ್ನು ಗಂಗಾಜಲದಲ್ಲಿ ಮಿಂದು ಶುದ್ಧಿಗೊಳಿಸಿದ್ದೀಯೆ. ನೀನೊಬ್ಬನೇ ಬಾಳಿನಲ್ಲಿಯೂ ಸಾವಿನಲ್ಲಿಯೂ ನೈಪುಣ್ಯವನ್ನು ತೋರಿದವನು.

೪೧. ಓ ಬ್ರಾಹ್ಮಣನೆ, ದುರ್ಗಂಧಭೂಯಿಷ್ಠವಾಗಿ ಸತತವೂ ಅಶುಚಿಗೆ ಭಾಜನವೆನಿಸಿರುವ ಈ ಕಳೇಬರವನ್ನು ತೀರ್ಥಯಾತ್ರಾದಿಗಳಿಂದ ಲಭಿಸುವ ಪುಣ್ಯದಿಂದ ತುಂಬಿ, ಮೊದಲು ಅದರಲ್ಲಿ ಅಡಕವಾಗಿದ್ದ ಪಾಪಗಳೆಲ್ಲವನ್ನೂ ಕಳೆದಿರುವೆ.

೪೨. ಪಂಡಿತರೆನಿಸಿದವರು ತಮಗಿರುವ ಸದಸದ್ವಿವೇಕಬುದ್ಧಿಯಿಂದ ಪುರುಷಾರ್ಥವನ್ನು ಸಾಧಿಸಿಕೊಳ್ಳುವುದಕ್ಕೆ ಸಾಧನವಾಗಿರುವ ದಿನವನ್ನು ಎಂದಿಗೂ ವ್ಯರ್ಥವಾಗಿ ಕಳೆಯುವುದಿಲ್ಲ. ಅದರಿಂದಲೆ ಬುದ್ಧಿಶಾಲಿಗಳು ಪಾಂಡಿತ್ಯವನ್ನು ಬಹುವಾಗಿ ಕೊಂಡಾಡುತ್ತಾರೆ.

೪೩. ಐದಾರು ಬಾರಿ ರೆಪ್ಪೆ ಹೊಡೆಯುವಷ್ಟುಕಾಲದಲ್ಲಿಯೆ ಉರುಳಿ ಹೋಗುವ ಈ ಶರೀರದಲ್ಲಿ ಪ್ರಾಣಿಗಳು ಚೇಷ್ಟೆಯನ್ನು ಮಾಡುತ್ತಿರುತ್ತವೆ. ಇದು ನಿಶ್ಚಯ. ಹೀಗಿರುವಲ್ಲಿ ಅತಿನಿಂದಿತವಾದ ಈ ಶರೀರದಲ್ಲಿ ನೆಲಸಿರುವ ಜೀವಿಯು ತನ್ನ ಪಾಪಗಳನ್ನು ತೊಲಗಿಸಿಕೊಳ್ಳುವುದಕ್ಕೆ ಬೇಕಾದ ಧರ್ಮಗಳಲ್ಲಿ ಪ್ರವೃತ್ತಿಯನ್ನು ಹೊಂದುವುದಿಲ್ಲ.

೪೪. ಶರೀರವೆಂಬುದು ಖಂಡಿತವಾಗಿಯೂ ಮಡಿಯುವುದೇ ಎಂಬುದು ಸಿದ್ಧವಾದುದು. ಧನವೆಂಬುದು ಜೀವವಿರುವವರೆಗೂ ಕಾಪಾಡುತ್ತದೆಯಾಗಲಿ

ಸತ್ವರಂ ಗತ್ವರಂ ಚಾಯುರ್ಲೋಕಃ ಶೋಕಸಮಾಕುಲಃ ।
ತಸ್ಮಾದ್ಧರ್ಮೇ ಮತಿಃ ಕಾರ್ಯಾ ಭವತೇವ ಸುಧಾರ್ಮಿಕೈಃ ॥ ೪೫ ॥
ಸತ್ಕರ್ಮಣೋ ವಿಪಾಕೋಽಯಂ ತವ ವಂದ್ಯೌ ಮಮಾಽಪ್ಯಹೋ ।
ಯದೇತೌ ಭಗವದ್ಭಕ್ತೌ ಸಖಿತ್ವಂ ಭವತೋ ಗತೌ ॥ ೪೬ ॥
ಮಮಾಜ್ಞಾ ದೀಯತಾಂ ತಸ್ಮಾತ್ಸಾಹಾಯ್ಯಂ ಕರವಾಣಿ ಕಿಂ ।
ಯತ್ಕರ್ತವ್ಯಂ ಮಾದೃಶೈಸ್ತೇ ತತ್ಕೃತಂ ಭವತೈವ ಹಿ ॥ ೪೭ ॥
ಅದ್ಯ ಧನ್ಯತರೋಽಸ್ಮೀಹ ಯದ್ದೃಷ್ಟೌ ಭಗವದ್ಗಣೌ ।
ಸೇವಾ ಸದೈವ ಮೇ ಜ್ಞಾಪ್ಯಾ ಶ್ರೀಮಚ್ಚರಣಸನ್ನಿಧೌ ॥ ೪೮ ॥
ತತಃ ಪ್ರಸ್ಥಾಪಿತಸ್ತಾಭ್ಯಾಂ ಪ್ರಾವಿಶತ್ಸ್ವಪುರೀಂ ಯಮಃ ।
ಅಪ್ರಾಕ್ಷೀಚ್ಚ ತತೋ ವಿಪ್ರಸ್ತೌ ಗಣೌ ಪ್ರಸ್ಥಿತೇ ಯಮೇ ॥ ೪೯ ॥

---

ಜೀವವು ಹೋಗಿ ದೇಹವು ಬಿದ್ದಮೇಲೆ ಎಂದಿಗೂ ರಕ್ಷೆಯನ್ನು ನೀಡುವುದಿಲ್ಲ. ಇದನ್ನರಿತಿದ್ದರೂ ಮಾನವನು ನಿನ್ನಂತೆ ಮೋಕ್ಷವನ್ನೇ ದೊರಕಿಸುವ ಮಹತ್ಕಾರ್ಯದಲ್ಲಿ ಅದೇಕೆ ತೊಡಗುವುದಿಲ್ಲವೊ ಕಾಣೆ.

೪೫. ಮಾನವನಿಗಿರುವ ಆಯುಸ್ಸು ಬಹು ಬೇಗನೆ ಕಳೆದುಹೋಗುವಂಥದು. ಲೋಕವಾದರೊ ಶೋಕಸಮಾಕುಲವಾದುದು. ಆದುದರಿಂದ ಧರ್ಮಿಷ್ಠರಾದವರು ನಿನ್ನಂತೆ ಮೋಕ್ಷವನ್ನು ದೊರಕಿಸುವ ಸತ್ಕಾರ್ಯಗಳಲ್ಲಿ ಬುದ್ಧಿಯನ್ನು ತೊಡಗಿಸಬೇಕು.

೪೬. ಅಯ್ಯಾ ಶಿವಶರ್ಮನೆ, ಈ ಸತ್ಕರ್ಮದ ಫಲವೇ ಈಗ ನೀನು ಅನುಭವಿಸುತ್ತಿರುವುದು. ನಿನಗೂ ನನಗೂ ನಮಸ್ಕಾರಕ್ಕೆ ಯೋಗ್ಯರಾಗಿರುವ ಭಗವದ್ಭಕ್ತರಾದ ಈ ವಿಷ್ಣುಪಾರ್ಷದರಿಬ್ಬರೂ ಆ ನಿನ್ನ ಪುಣ್ಯಪರಿಪಾಕದ ಸಲುವಾಗಿಯೇ ನಿನಗೆ ಗೆಳೆಯರಾಗಿ ದೊರಕಿದ್ದಾರೆ.

೪೭. ಈಗ ನನಗೆ ಅಪ್ಪಣೆಕೊಡು. ನಿನಗೆ ಯಾವ ಸಹಾಯವನ್ನು ಮಾಡಲಿ? ನನ್ನಂಥವರು ನಿನಗೆ ಯಾವ ಯಾವ ಸಹಾಯವನ್ನು ಮಾಡಬೇಕೊ ಅದೆಲ್ಲವನ್ನೂ ನೀನೇ ಮಾಡಿಕೊಂಡಿರುತ್ತೀಯೆ.''

೪೮. ಯಮಧರ್ಮನು ಶಿವಶರ್ಮಬ್ರಾಹ್ಮಣನಿಗೆ ಈ ರೀತಿ ಹೇಳಿ, ವಿಷ್ಣುಗಣಗಳನ್ನು ಕುರಿತು, ''ಎಲೈ ವಿಷ್ಣುಗಣಗಳೆ, ನಿಮ್ಮ ಸಂದರ್ಶನ ಭಾಗ್ಯವೊದಗಿದುದರಿಂದ ನಾನು ಅತ್ಯಂತ ಧನ್ಯನಾದೆನು. ಶ್ರೀಮನ್ನಾರಾಯಣನ ಚರಣಸನ್ನಿಧಾನದಲ್ಲಿ ಈ ಸೇವಕನ ಸೇವೆಯನ್ನು ಅರಿಕೆಮಾಡಬೇಕು'' ಎಂದು ನುಡಿದನು.

೪೯. ತರುವಾಯ ವಿಷ್ಣುಗಣಗಳು ಆದರಿಸಿ ಬೀಳ್ಕೊಡಲು ಆ ಯಮ

ಶಿವಶರ್ಮೋವಾಚ :—

ಸಾಕ್ಷಾದಯಂ ಧರ್ಮರಾಜೋ ನನು ಸೌಮ್ಯತರಾಕೃತಿಃ ।
ಧರ್ಮ್ಯಾಣ್ಯೇವ ವಚಾಂಸ್ಯಸ್ಯ ಮನಃಪ್ರೀತಿಕರಾಣಿ ಚ ॥ ೫೦ ॥
ಪುರೀ ಸಂಯಮನೀ ಸೇಯಮತೀವ ಶುಭಲಕ್ಷಣಾ ।
ಆಕರ್ಣ್ಯ ಯಸ್ಯ ನಾಮಾಽಪಿ ಪಾಪಿನೋಽತೀವ ಬಿಭ್ಯತಿ ॥ ೫೧ ॥
ಯಮರೂಪಂ ವರ್ಣಯಂತಿ ಮರ್ತ್ಯಲೋಕೇಽನ್ಯಥಾ ಜನಾಃ ।
ಅನ್ಯಥಾಽಯಂ ಮಯಾ ದೃಷ್ಟೋ ಬ್ರೂತಂ ತತ್ಕಾರಣಂ ಗಣೌ ॥ ೫೨ ॥
ಕೇನ ಪಶ್ಯಂತ್ಯಮುಂ ಲೋಕಂ ನಿವಸಂತಿ ತಥಾಽತ್ರ ಕೇ ।
ಇದಮೇವಾಽಸ್ಯ ಕಿಂ ರೂಪಂ ಕಿಂಚಾಽನ್ಯಚ್ಚ ನಿವೇದ್ಯತಾಂ ॥ ೫೩ ॥

ಗಣಾವೂಚತುಃ :—

ಶೃಣು ಸೌಮ್ಯ ಸುಸೌಮ್ಯೋಽಸೌ ದೃಶ್ಯತೇಽತ್ರ ಭವಾದೃಶೈಃ ।
ಧರ್ಮಮೂರ್ತಿಃ ಪ್ರಕೃತ್ಯೈವ ನಿಃಶಂಕೈಃ ಪುಣ್ಯರಾಶಿಭಿಃ ॥ ೫೪ ॥

---

ಧರ್ಮರಾಜನು ತನ್ನ ಪಟ್ಟಣವನ್ನು ಪ್ರವೇಶಿಸಿದನು. ಆತನತ್ತ ಹೊರಟು ಹೋಗುತ್ತಲೆ ಇತ್ತ ಶಿವಶರ್ಮನು ವಿಷ್ಣುಗಣಗಳನ್ನು ಈ ರೀತಿ ಪ್ರಶ್ನಿಸಿದನು.

೫೦–೫೧. ಶಿವಶರ್ಮನು ಹೇಳುತ್ತಾನೆ:—"ಎಲೈ ವಿಷ್ಣುಭಕ್ತರೆ, ಈಗ ಬಂದಿದ್ದಾತನು ಸಾಕ್ಷಾತ್ ಯಮಧರ್ಮರಾಜನೇ ಅಲ್ಲವೆ! ಈತನು ಬಹು ಸೌಮ್ಯವಾದ ಆಕಾರವುಳ್ಳವನಾಗಿದ್ದಾನೆ. ಈತನ ಮಾತುಗಳು ಬಹು ಧರ್ಮಿಷ್ಠವಾಗಿ ಮನಸ್ಸಿಗೆ ಹಿತವಾಗಿವೆ. ಇಲ್ಲಿ ಕಾಣುತ್ತಿರುವ ಶುಭಲಕ್ಷಣಲಕ್ಷಿತವಾದ ಪಟ್ಟಣವೆ ಸಂಯಮಿನೀಪಟ್ಟಣ ಈ ಪಟ್ಟಣದ ಹೆಸರನ್ನು ಕೇಳಿದೊಡನೆ ಪಾಪಿಗಳು ಬಹುವಾಗಿ ಭಯಗೊಳ್ಳುತ್ತಾರೆ

೫೨. ಎಲೈ ಪಾರ್ಷದರ, ಭೂಲೋಕದಲ್ಲಿ ಜನರು ಈ ಪಟ್ಟಣವನ್ನು ಭಯಂಕರವಾದ ಯಮಸ್ವರೂಪವುಳ್ಳದ್ದನಾಗಿಯೇ ವರ್ಣಿಸುತ್ತಾರೆ. ಆದರೆ, ನಾನು ಈ ಪಟ್ಟಣವನ್ನು ಸೌಮ್ಯರೂಪವುಳ್ಳದ್ದನ್ನಾಗಿಯೆ ಕಾಣುತ್ತಿದ್ದೇನೆ. ಇದಕ್ಕೆ ಕಾರಣವೇನು?

೫೩. ಈ ಲೋಕವನ್ನು ಯಾರು ನೋಡುವುದಿಲ್ಲ? ಇಲ್ಲಿ ನೆಲಸಿರುವವರು ಯಾರು? ಇದಕ್ಕಿರುವ ರೂಪವು ಇದೇಯೆ? ಅಥವಾ ಮತ್ತೊಂದು ರೂಪವುಂಟೆ? ಈ ವಿಷಯವನ್ನು ನನಗೆ ತಿಳಿಯಹೇಳಿರಿ."

೫೪. ಗಣಗಳು ಹೇಳುತ್ತಾರೆ —"ಅಯ್ಯಾ ಸೌಮ್ಯನೆ, ಕೇಳು. ನಿನ್ನಂಥ ಪುಣ್ಯಶಾಲಿಗಳು ಸ್ವಾಭಾವಿಕವಾಗಿ ಧರ್ಮಮೂರ್ತಿಯಾಗಿರುವ ಈ ಯಮನನ್ನು ಯಾವೊಂದು ಭಯವೂ ಇಲ್ಲದೆ ಸೌಮ್ಯಸ್ವರೂಪನನ್ನಾಗಿಯೇ ಕಾಣುತ್ತಾರೆ.

ಅಯಮೇವ ಹಿ ಪಿಂಗಾಕ್ಷಃ ಕ್ರೋಧರಕ್ತಾಂತಲೋಚನಃ ।
ದಂಷ್ಟ್ರಾಕರಾಲವದನೋ ವಿದ್ಯುಲ್ಲಲನಭೀಷಣಃ ॥ ೫೫ ॥
ಊರ್ಧ್ವಕೇಶೋಽತಿಕೃಷ್ಣಾಂಗಃ ಪ್ರಲಯಾಂಬುದನಿಃಸ್ವನಃ ।
ಕಾಲದಂಡೋದ್ಯತಕರೋ ಭ್ರುಕುಟೀಕುಟಿಲಾನನಃ ॥ ೫೬ ॥
ಆನಯೈನಂ ಪಾತಯೈನಂ ಬಧಾನಾಽಮುಂಚ ದುರ್ಜನಂ ।
ಘಾತಯೈನಂ ಸುದುರ್ವೃತ್ತಂ ಮೂರ್ಧ್ನಿ ತೀವ್ರಮಯೋಘನೈಃ ॥ ೫೭ ॥
ಆತಾಡಯೈನಂ ದುರ್ವೃತ್ತಂ ಧೃತ್ವಾ ಪಾದೌ ಶಿಲಾತಲೇ ।
ಉತ್ಪಾಟಯಾಽಸ್ಯ ನೇತ್ರೇ ತ್ವಂ ನಿಧಾಯ ಚರಣಂ ಗಲೇ ॥ ೫೮ ॥
ಏತಸ್ಯ ಗಲ್ಲಾವುತ್ಫುಲ್ಲೌ ಕ್ಷುರೇಣಾಶು ವಿಪಾಟಯ ।
ಪಾಶೇನ ಕಂಠಂ ಬದ್ಧ್ವಾಽಸ್ಯ ಸಮುಲ್ಲಂಬಯ ಭೂರುಹೇ ॥ ೫೯ ॥
ವಿದಾರಯಾಽಸ್ಯ ಮೂರ್ಧಾನಂ ಕರಪತ್ರೇಣ ದಾರುವತ್ ।
ಪಾರ್ಷ್ಣಿಘಾತೈರ್ಘ್ನತಾಸ್ಯಾಸ್ಯಂ ಸಮುಚ್ಚೂರ್ಣಯ ದಾರುಣೈಃ ॥ ೬೦ ॥
ಪರದಾರಪ್ರಸೃಮರಂ ಕರಂ ಛಿಂಧ್ಯಸ್ಯ ಪಾಪಿನಃ ।
ಪರದಾರಗೃಹಂ ಯಾತುಃ ಪಾದೌ ಚಾಽಸ್ಯ ವಿಖಂಡಯ ॥ ೬೧ ॥

---

೫೫–೯೦. ಪಾಪಿಷ್ಠರಾದವರಿಗೆ ಇದೇ ಯಮನೇ ಪಿಂಗಳವರ್ಣದ ಕಣ್ಣುಗಳುಳ್ಳವನೂ, ಕೋಪದಿಂದ ಕೆಂಪಡರಿದ ಕುಡಿಗಣ್ಣುಗಳುಳ್ಳವನೂ, ಕೋರೆಹಲ್ಲುಗಳಿಂದ ಭಯಂಕರವಾದ ಬಾಯುಳ್ಳವನೂ ಆಗಿ, ಮಿಂಚಿನಂತೆ ಅತಿಚಂಚಲವಾಗಿ ಅಲುಗಾಡುವ ನಾಲಿಗೆಯಿಂದ ಮತ್ತಷ್ಟು ಭೀಷಣನಾಗಿ, ಮೇಲಕ್ಕೆ ನಿಮಿರಿದ ತಲೆಗೂದಲುಗಳಿಂದೊಪ್ಪಿ ಕಪ್ಪನೆಯ ದೇಹವುಳ್ಳವನಾಗಿ, ಪ್ರಳಯಕಾಲದ ಸಮುದ್ರದ ಮೊರೆತಕ್ಕೆ ಎಣೆಯಾದ ಧ್ವನಿಯುಳ್ಳವನಾಗಿ, ಯಮದಂಡವನ್ನೆತ್ತಿ ಹಿಡಿದ ಕೈಗಳಿಂದ ಕೂಡಿ, ಗಂಟಿಕ್ಕಿದ ಹುಬ್ಬಿನಿಂದ ಕೊಂಕಾದ ಮುಖವುಳ್ಳವನಾಗಿ, "ಅವನನ್ನು ಎಳೆದು ತಾ, ಕೆಡವು, ಪಾಶಗಳಿಂದ ಕಟ್ಟು, ತಳ್ಳು, ಅದಮು; ಆ ಪಾಪಿಷ್ಠನ ತಲೆಯನ್ನು ಕಬ್ಬಿಣದ ಒನಕೆಯಿಂದ ಕುಟ್ಟು; ಈ ದುರ್ವೃತ್ತನ ಕಾಲುಗಳನ್ನು ಹಿಡಿದು ಬಂಡೆಯಮೇಲೆ ಅಪ್ಪಳಿಸಿಹೊಡೆ, ಅವನ ಕಾಲುಗಳನ್ನು ಗಂಟಲಿಗೆ ತುರುಕಿ ಕಣ್ಣುಗಳನ್ನು ಕಿತ್ತೊಗೆ; ಚೆನ್ನಾಗಿ ಉಬ್ಬಿರುವ ಈ ಪಾಪಿಷ್ಠನ ಕೆನ್ನೆಗಳೆರಡನ್ನೂ ಕಿರುಗತ್ತಿಯಿಂದ ಕತ್ತರಿಸಿ ಹಾಕು, ಇವನ ಕುತ್ತಿಗೆಗೆ ಹಗ್ಗವನ್ನು ಬಿಗಿಸಿ ಮರಕ್ಕೆ ನೇತುಹಾಕು. ಇವನ ತಲೆಯನ್ನು ಮರವನ್ನೆಂತೊ ಅಂತು ಕತ್ತಿಯಿಂದ ಕಡಿ. ಗರಗಸವನ್ನು ಹಿಡಿದು ಇವನ ಮುಖವನ್ನು ಪಾರ್ಷ್ಣಿಘಾತಕ್ರಮದಿಂದ ಕೊಯ್ಯಿ. ಪರಸ್ತ್ರೀಯರನ್ನು ತೊಡುಕಿದ ಈ ಪಾಪಿಷ್ಠನ ಕೈಯನ್ನು ಕತ್ತರಿಸು. ಪರಸ್ತ್ರೀಯ ಗೃಹವನ್ನು ಪ್ರವೇಶಿಸಿದ ಇವನ ಕಾಲನ್ನು ಕಡಿದುಹಾಕು. ಪರಸ್ತ್ರೀಯ ಶರೀರದಲ್ಲಿ ನಖಕ್ಷತ

ಸೂಚೀಭೀ ರೋಮಕೂಪೇಷು ತನುಂ ವ್ಯಥಿಹಿ ಸರ್ವತಃ ।
ದಾತುಃ ಪರಕಲತ್ರಾಂಗೇ ನಖಪಂಕ್ತೀರ್ದುರಾತ್ಮನಃ ॥ ೬೨ ॥
ಪರದಾರಮುಖಾಘ್ರಾತುರ್ಮುಖೇ ನಿಷ್ಠೀವಯಾಽಸ್ಯ ಹಿ ।
ವಕ್ತುಃ ಪರಾಽಪವಾದಸ್ಯ ಕೀಲಂ ತೀಕ್ಷ್ಣಂ ಮುಖೇ ಕ್ಷಿಪ ॥ ೬೩ ॥
ಭರ್ಜಯೈನಂ ಚಣಕವತ್ತಪ್ತವಾಲುಕಕರ್ಪರೈಃ ।
ಭ್ರಾಷ್ಟ್ರೇ ವಿಕಟವಕ್ತ್ರತ್ವಂ ಪರಸಂತಾಪಕಾರಿಣಂ ॥ ೬೪ ॥
ದೋಷಾರೋಪಂ ಸದಾ ಕರ್ತುರದೋಷೇ ಕ್ರೂರಲೋಚನ ।
ನಿಮಜ್ಜಯಾಽಸ್ಯ ವದನಂ ಪೂಯಶೋಣಿತಕರ್ದಮೇ ॥ ೬೫ ॥
ಅದತ್ತಪರವಸ್ತೂನಾಂ ಗೃಹ್ಣತಃ ಕರಪಲ್ಲವಂ ।
ಆಪ್ಲುತ್ಯಾಪ್ಲುತ್ಯ ತೈಲೇನ ತಪ್ತಾಂಗಾರೇ ಪಚೋತ್ಕಟ ॥ ೬೬ ॥
ಅಪವಾದಂ ಗುರೋರ್ವಕ್ತುರ್ನಿಂದಾಕರ್ತುಃ ಸುಪರ್ವಣಾಂ ।
ತಪ್ತಲೋಹಶಲಾಕಾಶ್ಚ ಮುಖೇ ಭೀಷಣ ನಿಕ್ಷಿಪ ॥ ೬೭ ॥
ಪರಮರ್ಮಸ್ಪೃಶಶ್ಚಾಽಸ್ಯ ಪರಚ್ಛಿದ್ರಪ್ರಕಾಶಿತುಃ ।
ಸುತಪ್ತಾಽಯೋಮಯಾಂಛಂಕೂನ್ಸರ್ವಸಂಧಿಷು ರೋಪಯ ॥ ೬೮ ॥

---

ಗಳನ್ನು ಮಾಡಿದ ಈ ದುರಾತ್ಮನ ರೋಮಕೂಪಗಳಿಗೆಲ್ಲ ಸೂಜಿಗಳನ್ನು ಚುಚ್ಚಿರಿ. ಪರಸ್ತ್ರೀಯರ ಮುಖವನ್ನು ಚುಂಬಿಸಿದ ಈ ಪಾಪಿಷ್ಠನ ಬಾಯಲ್ಲಿ ಶ್ಲೇಷ್ಮವನ್ನು ಉಗುಳಿರಿ. ಇತರರನ್ನು ಅಪವಾದಕ್ಕೀಡುಮಾಡಿದ ಇವನ ಬಾಯಿಗೆ ಮೊನಚಾದ ಗೂಟವನ್ನು ಬಡಿ. ಎಲಾ ವಿಕಟವಕ್ತ್ರ, ಬಾಣಲೆಯಲ್ಲಿ ಕಡಲೆಯನ್ನು ಹುರಿಯು ವಂತೆ, ಇತರರನ್ನು ಸಂಕಟಗೊಳಿಸಿದ ಈ ಪಾಪಿಯನ್ನು ಕಾಯುವ ಮಳಲಿನಲ್ಲಿ ಹಾಕಿ ಹುರಿಯಿರಿ. ಅಯ್ಯಾ ಕ್ರೂರಲೋಚನನೆ, ದೋಷವೇನೂ ಇಲ್ಲದವನಲ್ಲಿ ದೋಷಾರೋಪವನ್ನು ಮಾಡಿದ ಈ ಪಾಪಿಷ್ಠನ ಮುಖವನ್ನು ಕೀವು ರಕ್ತಗಳ ಕೆಸರಿನಲ್ಲಿ ಮುಳುಗಿಸು. ಎಲೈ ಉತ್ಕಟನೆ, ಕೈಯೆತ್ತಿ ದಾನ ಮಾಡದಿರುವ ಇತರರ ವಸ್ತುಗಳನ್ನು ಕಸಿದುಕೊಂಡ ಈ ಪಾಪಿಯ ಕೈಯನ್ನು ಎಣ್ಣೆಯಲ್ಲಿ ಅದ್ದಿ ತೆಗೆದು ಬೆಂಕಿಯಲ್ಲಿ ಬೇಯಿಸು. ಎಲಾ ಭೀಷಣನೇ, ಗುರುಹಿರಿಯರಮೇಲೆ ಅಪವಾದವನ್ನು ಹೊರಿಸಿ, ದೇವತೆಗಳನ್ನೂ ಒಳ್ಳೆಯ ಕೀರ್ತಿಯನ್ನು ಪಡೆದ ಸತ್ಪುರುಷರನ್ನೂ ನಿಂದಿಸಿದ ಈ ಪಾಪಿಷ್ಠನ ಮುಖದಲ್ಲಿ ಕಾದ ಕಬ್ಬಿಣದ ಶಲಾಕೆ ಗಳನ್ನು ಹಾಕು. ಇತರರ ಮರ್ಮವನ್ನು ಭೇದಿಸುವಂತೆ ಮಾತನಾಡುವ, ಇತರರ ಹುಳುಕುಗಳನ್ನು ಬಯಲಿಗೆ ತರುವ ಈ ಪಾಪಿಯ ಎಲ್ಲ ಕೀಲುಗಳಲ್ಲಿಯೂ ಕಾದ ಕಬ್ಬಿಣದ ಮುಳ್ಳುಗಳನ್ನು ಸಿಕ್ಕಿಸು. ಎಲೈ ದುರ್ಮುಖನೆ, ಇನ್ನೊಬ್ಬನು ತನ್ನ ದ್ರವ್ಯವನ್ನು ಸತ್ಪಾತ್ರನಾದವನಿಗೆ ದಾನಮಾಡುವಾಗ ಬೇಡವೆಂದು ತಡೆ ದವನೂ, ಇತರರ ವೃತ್ತಿಗಳನ್ನು ಕಳೆದವನೂ ಆದ ಈ ಪಾಪಿಯ ನಾಲಿಗೆಯನ್ನು

ಅನ್ಯೇನ ದೀಯಮಾನೇ ಸ್ವೇ ನಿಷೇದ್ಧುಃ ಪಾಪಕಾರಿಣಃ ।
ಆಚ್ಛೇತ್ತುಃ ಪರವೃತ್ತೀನಾಂ ಜಿಹ್ವಾಂ ಛಿಂಧ್ಯಸ್ಯ ದುರ್ಮುಖ ॥ ೬೯ ॥
ದೇವಸ್ವಭೋಕ್ತುಃ ಕ್ರೋಡಾಸ್ಯ ಬ್ರಾಹ್ಮಣಸ್ವಸ್ಯ ಭೋಜಿನಃ ।
ವಿದಾರ್ಯೋದರಮಸ್ಯಾಶು ವಿಟ್ಕೀಟೈಃ ಪರಿಪೂರಯ ॥ ೭೦ ॥
ನ ದೇವಾರ್ಥೇ ನ ವಿಪ್ರಾರ್ಥೇ ನಾಽತಿಥ್ಯರ್ಥೇ ಪಚೇತ್ಕ್ವಚಿತ್ ।
ತಮಮುಂ ಸ್ವಾರ್ಥಪಕ್ತಾರಂ ಕುಂಭೀಪಾಕೇ ಪಚಾಽಂಧಕ ॥ ೭೧ ॥
ಉಗ್ರಾಸ್ಯ ಶಿಶುಹಂತಾರಮಮುಂ ವಿಶ್ರಂಭಘಾತಿನಂ ।
ಕೃತಘ್ನಂ ನಯ ವೇಗೇನ ಮಹಾರೌರವರೌರವಂ ॥ ೭೨ ॥
ಬ್ರಹ್ಮಘ್ನಂ ಚಾಽಂಧತಾಮಿಸ್ರೇ ಸುರಾಪಂ ಪೂಯಶೋಣಿತೇ ।
ಕಾಲಸೂತ್ರೇ ಹೇಮಚೌರಮವೀಚೌ ಗುರುತಲ್ಪಗಂ ॥ ೭೩ ॥
ತತ್ಸಂಸರ್ಗಿಣಮಾವರ್ಷಮಸಿಪತ್ರವನೇ ತಥಾ ।
ಏತಾನ್ಮಹಾಪಾತಕಿನಸ್ತಪ್ತತೈಲಕಟಾಹಕೇ ॥ ೭೪ ॥
ಆಪ್ಲುತ್ಯಾಪ್ಲುತ್ಯದುರ್ದಂಷ್ಟ್ರ ಕಾಕೋಲೈರ್ಲೋಹತುಂಡಕೈಃ ।
ಸಂತೋದ್ಯಮಾನಾನ್ಪಾಪಿಷ್ಠಾನ್ನಿತ್ಯಂ ಕಲ್ಪಂ ನಿವಾಸಯ ॥ ೭೫ ॥

---

ಸೀಳು. ಎಲವೋ ಕ್ರೋಡಾಸ್ಯನೆ, ದೇವಸ್ವ ಬ್ರಾಹ್ಮಣಸ್ವಗಳನ್ನು ಅಪಹಾರ ಮಾಡಿ ಭುಜಿಸಿದ ಈ ಪಾಪಿಷ್ಠನ ಹೊಟ್ಟೆಯನ್ನು ಸೀಳಿ ಅಮೇಧ್ಯದ ಹುಳುಗಳಿಂದ ತುಂಬು. ಎಲೈ ಅಂಧಕನೆ, ದೇವತೆಗಳಿಗಾಗಲಿ, ಬ್ರಾಹ್ಮಣರಿಗಾಗಲಿ, ಅತಿಥಿಗಳಿಗಾಗಲಿ ಎಂದೂ ಅಡುಗೆಯನ್ನು ಮಾಡದೆ ಸ್ವಾರ್ಥಕ್ಕಾಗಿಯೇ ಬೇಯಿಸಿ ಉದರಂಭರಣ ಮಾಡಿಕೊಳ್ಳುತ್ತಿದ್ದ ಈ ಪಾಪಿಯನ್ನು ಕುಂಭೀಪಾಕದಲ್ಲಿ ಹಾಕಿ ಬೇಯಿಸು. ಅಯ್ಯಾ ಉಗ್ರಾಸ್ಯನೆ, ಮಕ್ಕಳನ್ನು ಕೊಲ್ಲುವವನೂ, ನಂಬಿಸಿ ಇತರರನ್ನು ಕೊಲ್ಲುವವನೂ, ಕೃತಘ್ನನೂ ಆದ ಈ ಪಾಪಿಯನ್ನು ಮಹಾ ರೌರವ ನರಕದಲ್ಲಿ ಜಾಗ್ರತೆಯಾಗಿ ತಳ್ಳು. ಈ ಬ್ರಹ್ಮಘಾತಕನನ್ನು ಅಂಧತಾಮಿಸ್ರದಲ್ಲಿಯೂ, ಮದ್ಯಪಾಯಿಯನ್ನು ಪೂಯಶೋಣಿತದಲ್ಲಿಯೂ, ಸ್ವರ್ಣಚೋರನನ್ನು ಕಾಲಸೂತ್ರದಲ್ಲಿಯೂ, ಗುರುತಲ್ಪಗಮನವನ್ನು ಮಾಡಿದ ಈ ಪಾಪಿಯನ್ನು ಅವೀಚಿಯಲ್ಲಿಯೂ, ಇವರ ಸಹವಾಸಮಾಡಿದ ಈ ಅಧಮನನ್ನು ಒಂದು ಸಂವತ್ಸರಕಾಲ ಅಸಿಪತ್ರವನದಲ್ಲಿಯೂ ಹಾಕತಕ್ಕದ್ದು. ಎಲೈ ದುರ್ದಂಷ್ಟ್ರನೇ, ಈ ಮಹಾಪಾತಕಿಗಳೆಲ್ಲರನ್ನೂ ಬೇಯುತ್ತಿರುವ ಎಣ್ಣೆಯ ಬಾಣಲಿಯಲ್ಲಿ ಅನೇಕಬಾರಿ ಅದ್ದಿ ತೆಗೆದು, ಕಬ್ಬಿಣದ ಕೊಕ್ಕುಗಳುಳ್ಳ ದ್ರೋಣ (ಕಾಗೆ)ಗಳಿಂದ ಕುಕ್ಕಿಸಿ ಒಂದು ಕಲ್ಪಕಾಲ ನರಕದಲ್ಲಿ ವಾಸಮಾಡಿಸು. ಸ್ತ್ರೀಹತ್ಯೆ, ಗೋಹತ್ಯೆ, ಮಿತ್ರವಧೆಗಳನ್ನು ಮಾಡಿದ ಈ ಪಾಪಿಷ್ಠರನ್ನು ಕೂಟಶಾಲ್ಮಲಿವೃಕ್ಷಕ್ಕೆ ತಲೆಕೆಳಗಾಗಿ ನೇತು ಹಾಕು. ಅವರು ಹಾಗೆಯೇ ಬಹುಕಾಲ ನರಳಲಿ. ಅಯ್ಯಾ ಮಹಾಭುಜನೆ,

ಸ್ತ್ರೀಘ್ನಂ ಗೋಘ್ನಂ ಚ ಮಿತ್ರಘ್ನಂ ಕೂಟಶಾಲ್ಮಲಿಪಾದಪೇ ।
ಉಲ್ಲಂಬಯ ಚಿರಂ ಕಾಲಮೂರ್ಧ್ವಪಾದಮಧೋಮುಖಂ ॥ ೭೬ ॥
ತ್ವಚಮಸ್ಯ ಚ ಸಂದಂಶೈಸ್ತ್ರೋಟಯ ತ್ವಂ ಮಹಾಭುಜ ।
ಆಶ್ಲೇಷಿತುರ್ನಿರ್ಗತ್ರಪತ್ನ್ಯಾ ಭುಜಾವುತ್ಪಾಟಯಾಶು ಚ ॥ ೭೭ ॥
ಜ್ವಾಲಾಕೀಲೇ ಮಹಾಘೋರೇ ನರಕೇಽಮುಂ ನಿಪಾತಯ ।
ಯೋ ವಹ್ನಿನಾ ದಾಹಯತಿ ಪರಕ್ಷೇತ್ರಂ ಪರಾಲಯಂ ॥ ೭೮ ॥
ಕಾಲಕೂಟೇ ಚ ಗರದಂ ಕೂಟಸಾಕ್ಷ್ಯಾಭಿವಾದಿನಂ ।
ಮಾನಕೂಟಂ ತುಲಾಕೂಟಂ ಕಂಠನೋಟೇ ನಿಪಾತಯ ॥ ೭೯ ॥
ಲಾಲಾಪಿಬೇ ಚ ದುಷ್ಪ್ರೇಕ್ಷ್ಯ ತಥಾಽಪ್ಸುಷ್ಠೀವನಂ ನಯ ।
ಆಮಪಾಕೇ ಚ ಗರ್ಭಘ್ನಂ ಶೂಲಪಾಕೇಽನ್ಯತಾಪಿನಂ ॥ ೮೦ ॥
ರಸವಿಕ್ರಯಿಣಂ ವಿಪ್ರಮಿಕ್ಷುಯಂತ್ರೇ ಪ್ರಪೀಡಯ ।
ಪ್ರಜಾಪೀಡಾಕರಂ ಭೂಪಮಂಧಕೂಪೇ ನಿಪಾತಯ ॥ ೮೧ ॥
ಗೋತಿಲಾಂಶ್ಚ ತುರಂಗಾಂಶ್ಚ ವಿಕ್ರೇತಾರಂ ದ್ವಿಜಾಽಧಮಂ ।
ಮಾತುಲಾನ್ಯಾಃ ಸುರಾಯಾಶ್ಚ ವಿಕ್ರೇತಾರಂ ಹಲಾಯುಧ ॥ ೮೨ ॥

---

ಸ್ನೇಹಿತನ ಹೆಂಡತಿಯನ್ನು ಆಲಿಂಗಿಸಿದ ಈ ಪಾಪಿಷ್ಠನ ತೋಳುಗಳನ್ನು ಕಿತ್ತು ಹಾಕಿ, ಶ್ರವಣಗಳಿಂದ ಇವನ ಚರ್ಮವನ್ನು ಸುಲಿದು ಹಾಕು. ಪರಕ್ಷೇತ್ರವನ್ನೂ ಪರಗೃಹವನ್ನೂ ಬೆಂಕಿಯಿಟ್ಟು ಉರಿಸಿದ ಈ ಪಾಪಿಯನ್ನು ಮಹಾಘೋರವಾದ ಜ್ವಾಲಾಕೀಲವೆಂಬ ನರಕದಲ್ಲಿ ಹಾಕು. ವಿಷವಿಟ್ಟವನನ್ನು ಕಾಲಕೂಪ ನರಕದಲ್ಲಿ ಹಾಕು. ಸುಳ್ಳುಸಾಕ್ಷಿಯನ್ನು ಹೇಳಿದವನನ್ನೂ, ಇತರರ ಮಾನವನ್ನು ಕಳೆದವನನ್ನೂ, ಇನ್ನೊಬ್ಬರ ಮಾನವನ್ನು ತೂಗಿತೂರಿದವನನ್ನೂ ವಿವಸ್ತ್ರರನ್ನಾಗಿಸಿ ಕತ್ತುಮುರಿ. ಎಲಾ ದುಷ್ಪ್ರೇಕ್ಷ್ಯನೆ, ತೀರ್ಥಗಳಲ್ಲಿ ಉಗುಳುವುದೇ ಮೊದಲಾದ ದುರ್ವ್ಯಾಪಾರವನ್ನು ಮಾಡಿದ ಈ ಪಾಪಿಯನ್ನು ಲಾಲಾಪಿಬವೆಂಬ ನರಕದಲ್ಲಿಯೂ, ಭ್ರೂಣಹತ್ಯೆಯನ್ನು ಮಾಡಿದ ಇವನನ್ನು ಆಮಪಾಕನರಕದಲ್ಲಿಯೂ, ಇತರರನ್ನು ಸಂತಾಪಗೊಳಿಸಿದ ಇವನನ್ನು ಶೂಲೀಪಾಕನರಕದಲ್ಲಿಯೂ ಹಾಕು. ರಸವಿಕ್ರಯವನ್ನು ಮಾಡಿದ ಈ ಬ್ರಾಹ್ಮಣನನ್ನು ಕಬ್ಬಿನ ಗಾಣಕ್ಕೆ ಕೊಟ್ಟು ಹಿಂಡಿ, ಪ್ರಜೆಗಳನ್ನು ಪೀಡಿಸಿದ ದುರುಳನಾದ ಈ ದೊರೆಯನ್ನು ಅಂಧಕೂಪದಲ್ಲಿ ಕೆಡವು. ಎಲಾ ಹಲಾಯುಧನೆ, ಗೋವು, ಎಳ್ಳು, ಕುದುರೆಗಳನ್ನು ಮಾರಾಟಮಾಡಿದ ಈ ದ್ವಿಜಾಧಮನನ್ನೂ, ಭಂಗಿ ಸೊಪ್ಪು, ಹೆಂಡಗಳನ್ನು ವಿಕ್ರಯಿಸಿದ ಈ ಬ್ರಾಹ್ಮಣನನ್ನೂ, ಒನಕೆ ಒರಳುಗಳನ್ನು ಮಾರಿದ ಈ ವೈಶ್ಯನನ್ನೂ, ಬ್ರಾಹ್ಮಣರನ್ನು ಅವಮಾನಮಾಡಿದ ಮತ್ತು ಬ್ರಾಹ್ಮಣರ ಮುಂಗಡೆ ಉಚ್ಚಾಸನದಲ್ಲಿ ಕುಳಿತು ಗರ್ವಿಸಿದ ಈ ಶೂದ್ರನನ್ನೂ ಮತ್ತೆ ಮತ್ತೆ

ಮುಸಲೋಲೂಖಲೇ ವೈಶ್ಯಂ ಕಂಡಯ್ಸೈನಂ ಪುನಃ ಪುನಃ ।
ಶೂದ್ರಂ ದ್ವಿಜಾಽವಮಂತಾರಂ ದ್ವಿಜಾಗ್ರೇ ಮಂಚಸೇವಿನಂ ॥ ೮೩ ॥
ಅಧೋಮುಖೇ ಚ ನರಕೇ ದೀರ್ಘಗ್ರೀವ ಪ್ರಪೀಡಯ ॥ ೮೪ ॥
ಶೂದ್ರಂ ಬ್ರಾಹ್ಮಣಜೇತಾರಂ ವೈಶ್ಯಂ ಬ್ರಾಹ್ಮಣಮಾನಿನಂ ।
ಕ್ಷತ್ರಿಯಂ ಯಾಜಕಂ ಚಾಽಪಿ ವಿಪ್ರಂ ವೇದವಿವರ್ಜಿತಂ ॥ ೮೫ ॥
ಲಾಕ್ಷಾಲವಣಮಾಂಸಾನಾಂ ಸತೈಲವಿಷಸರ್ಪಿಷಾಂ ।
ಆಯುಧೇಕ್ಷುವಿಕಾರಾಣಾಂ ವಿಕ್ರೇತಾರಂ ದ್ವಿಜಾಽಧಮಂ ॥ ೮೬ ॥
ಪಾಶಪಾಣೇ ಕಶಾಪಾಣೇ ಬದ್ಧ್ವಾತಾಂಶ್ಚರಣೇ ದೃಢಂ ।
ಘಾತಯಂತೌ ಕಶಾಘಾತೈರ್ನಯತಂ ತಪ್ತಕರ್ದಮೇ ॥ ೮೭ ॥
ಇಮಾಂ ಸ್ತ್ರಿಯಂ ಶ್ಲೇಷಯಾಶು ಪುಂಶ್ಚಲೀಂ ಕುಲಕಲ್ಮಷಾಂ ।
ತೇನೋಪಪತಿನಾ ಸಾರ್ಧಂ ತಪ್ತಾಯಸಮಯೇನ ಚ ॥ ೮೮ ॥
ಸ್ವಯಂ ಗೃಹೀತ್ವಾ ನಿಯಮಂ ಯಸ್ತ್ಯಜೇದಜಿತೇಂದ್ರಿಯಃ ।
ತಂ ಪ್ರಾಪಯ ದುರಾಧರ್ಷಂ ಬಹುಭ್ರಮರದಂಶಕೇ ॥ ೮೯ ॥
ಇತ್ಯಾದಿ ಜಲ್ಪನ್ದುರ್ವೃತ್ತೈಃ ಶ್ರೂಯತೇ ದೂರತೋ ಯಮಃ ।
ಸ್ವಕರ್ಮಶಂಕಿತೈಃ ಪಾಪೈರ್ದೃಶ್ಯತೇಽತಿಭಯಂಕರಃ ॥ ೯೦ ॥

---

ಕತ್ತರಿಸು ಎಲೈ ದೀರ್ಘಗ್ರೀವನೆ, ಬಾಹ್ಮಣನನ್ನು ಗೆದ್ದ ಶೂದ್ರನನ್ನೂ, ಬ್ರಾಹ್ಮಣನನ್ನು ಅವಮಾನಗೊಳಿಸಿದ ವೈಶ್ಯನನ್ನೂ, ಯಜ್ಞವನ್ನು ಮಾಡಿಸುವ ಕ್ಷತ್ರಿಯನನ್ನೂ, ವೇದವಿಹೀನನಾದ ಈ ವಿಪ್ರನನ್ನೂ ಅಧೋಮುಖವೆಂಬ ನರಕದಲ್ಲಿ ಹಾಕಿ ಪೀಡಿಸು. ಎಲೈ ಪಾಶಪಾಣಿ ಕಶಾಪಾಣಿಗಳೆ, ಅರಗು, ಉಪ್ಪು, ಮಾಂಸ, ಎಣ್ಣೆ, ವಿಷ, ತುಪ್ಪ, ಆಯುಧಗಳು, ಸಕ್ಕರೆ ಪದಾರ್ಥಗಳು ಮೊದಲಾದುವುಗಳನ್ನು ಮಾರಿದ ಈ ಬ್ರಾಹ್ಮಣಾಧಮನ ಕಾಲುಗಳನ್ನು ಬಿಗಿಸಿ ಚಾವಟಿಯಿಂದ ಬಲವಾಗಿ ಹೊಡೆದು, ಕುದಿಯುತ್ತಿರುವ ಕೆಸರಿನಲ್ಲಿ ಹಾಕಿ ತುಳಿಯಿರಿ. ಗಂಡಸರನ್ನು ಹುಡುಕಿಕೊಂಡು ಹೋಗುವ ಪುಂಶ್ಚಲಿಯಾಗಿ, ಕುಲಕ್ಕೆ ಕಲ್ಮಷಪ್ರಾಯಳಾದ ಈ ಪಾಪಿಷ್ಠೆಯನ್ನು ಕಾದ ಕಬ್ಬಿಣದ ಪ್ರತಿಮೆಯ ರೂಪದಿಂದಿರುವ ಆ ಜಾರನನ್ನೇ ಬಿಗಿದಪ್ಪುವಂತೆ ಮಾಡಿರಿ. ತಾನಾಗಿಯೇ ನಿಯಮವನ್ನು ಕೈಕೊಂಡು ಜಿತೇಂದ್ರಿಯನಾಗದೆ ಅದನ್ನು ತೊರೆಯುವ ಈ ಪಾಪಿಯನ್ನು ಸೊಳ್ಳೆಗಳೂ ದುಂಬಿಗಳೂ ತುಂಬಿರುವ ಸಹಿಸಲಸದಳವಾದ ಭ್ರಮರದಂಶಕನರಕದಲ್ಲಿ ಹಾಕತಕ್ಕದ್ದು.'' ಎಂಬಿವೇ ಮೊದಲಾದ ಆಜ್ಞೆಗಳನ್ನು ಗಟ್ಟಿಯಾಗಿ ಕೂಗಿ ಹೇಳುತ್ತಿರುವ ಆ ಯಮಧರ್ಮನನ್ನು ಪಾಪಿಷ್ಠರಾದವರು ದೂರದಿಂದಲೇ ಅರಿತುಕೊಂಡು ಭೀತಿಗೊಳ್ಳುತ್ತಾರೆ. ಅಲ್ಲದೆ ತಮ್ಮ ತಮ್ಮ ಕರ್ಮಗಳ ಸಲುವಾಗಿ ತಾವೇ ಸಂಶಯಗ್ರಸ್ತರಾಗುವ ಪಾಪಿಷ್ಠರಿಗೆ ಯಮನು ಅತಿ ಬಯಂಕರನಾಗಿ ಕಾಣುತ್ತಾನೆ.

ಯೇ ಪ್ರಜಾಃ ಪಾಲಯಂತೀಹ ಪುತ್ರಾನಿವ ನಿಜೌರಸಾನ್ ।
ದಂಡಯಂತಿ ಚ ಧರ್ಮೇಣ ಭೂಪಾಸ್ತೇಽಸ್ಯ ಸಭಾಸದಃ ॥ ೯೧ ॥
ವರ್ಣಾಶ್ರಮಾಶ್ಚ ಯದ್ರಾಷ್ಟ್ರೇಽನುತಿಷ್ಠಂತಿ ನಿಜಾಂ ಕ್ರಿಯಾಂ ।
ಕಾಲೇನಾಪನ್ನನಿಧನಾ ಭೂಪಾಸ್ತೇಽಸ್ಯ ಸಭಾಸದಃ ॥ ೯೨ ॥
ನೈವ ದೀನೋ ನ ದುರ್ವೃತ್ತೋ ನಾಪದ್ಗ್ರಸ್ತೋ ನ ಶೋಕಭಾಕ್ ।
ಯೇಷಾಂ ರಾಷ್ಟ್ರೇ ಪ್ರದೃಶ್ಯಂತೇ ಭೂಪಾಸ್ತೇಽಸ್ಯ ಸಭಾಸದಃ ॥ ೯೩ ॥
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಸ್ವಧರ್ಮನಿರತಾಃ ಸದಾ ।
ಅನ್ಯೇಽಪಿ ಯೇ ಸಂಯಮಿನಃ ಸಂಯಮಿನ್ಯಾಂ ವಸಂತಿ ತೇ ॥ ೯೪ ॥
ಉಶೀನರಃ ಸುಧನ್ವಾ ಚ ವೃಷಪರ್ವಾ ಜಯದ್ರಥಃ ।
ರಜಿಃ ಸಹಸ್ರಜಿತ್ಕುಕ್ಷಿರ್ದೃಢಧನ್ವಾ ರಿಪುಂಜಯಃ ॥ ೯೫ ॥
ಯುವನಾಶ್ವೋ ದಂತವಕ್ತ್ರೋ ನಾಭಾಗೋ ರಿಪುಮಂಗಲಃ ।
ಕರಂಧಮೋ ಧರ್ಮಸೇನಃ ಪರಮರ್ದಃ ಪರಾಂತಕಃ ॥ ೯೬ ॥
ಏತೇಚಾಽನ್ಯೇ ಚ ಬಹವೋ ರಾಜಾನೋ ನೀತಿವರ್ತಿನಃ ।
ಧರ್ಮಾಽಧರ್ಮವಿಚಾರಜ್ಞಾಃ ಸುಧರ್ಮಾಯಾಂ ಸಮಾಸತೇ ॥ ೯೭ ॥

---

೯೧. ಎಲೈ ಶಿವಶರ್ಮನೆ, ಪ್ರಜೆಗಳನ್ನು ತನ್ನ ಸ್ವಂತ ಮಕ್ಕಳಂತೆ ಕಂಡು ಸಂರಕ್ಷಿಸುತ್ತ, ದುಷ್ಟರನ್ನು ಧರ್ಮಶಾಸ್ತ್ರಾನುಸಾರವಾಗಿ ದಂಡಿಸುತ್ತ ರಾಜ್ಯ ಪರಿಪಾಲನೆಯನ್ನು ಮಾಡಿದ ದೊರೆಗಳು ಈ ಯಮಧರ್ಮರಾಜನ ಸಭಾಸದರಾಗಿರುತ್ತಾರೆ.

೯೨. ಯಾವ ದೊರೆಗಳು ತಮ್ಮ ತಮ್ಮ ನಿಯಮಕ್ಕನುಸಾರವಾಗಿ ನಡಸುತ್ತಿರುವರೋ ಆ ದೊರೆಗಳು ಕಾಲಾನುಕ್ರಮದಿಂದ ಮೃತಿಹೊಂದಿದವರಾಗಿ ಈ ಯಮಧರ್ಮನ ಸಭಾಸದರಾಗಿರುತ್ತಾರೆ.

೯೩. ದೀನರೂ, ದುರ್ವೃತ್ತರೂ, ಆಪತ್ತಿಗೆ ಸಿಕ್ಕಿದವರೂ, ದುಃಖಕ್ಕೊಳಗಾದವರೂ ಆದ ಪ್ರಜೆಗಳೇ ಯಾವ ರಾಷ್ಟ್ರಗಳಲ್ಲಿ ಕಾಣುವುದಿಲ್ಲವೋ ಆ ರಾಷ್ಟ್ರಗಳ ದೊರೆಗಳೆಲ್ಲರೂ ಈ ಯಮಧರ್ಮನ ಸಭಾಸದರಾಗಿರುತ್ತಾರೆ.

೯೪. ಎಲ್ಲ ಕಾಲಗಳಲ್ಲಿಯೂ ಸ್ವಧರ್ಮನಿರತರಾಗಿರುವ ಬ್ರಹ್ಮಕ್ಷತ್ರಿಯ ವೈಶ್ಯರೂ ಇತರ ಸಂಯಮಿಶ್ರೇಷ್ಠರೂ ಈ ಯಮಧರ್ಮನ ಸಂಯಮಿನೀ ಪಟ್ಟಣದಲ್ಲಿ ವಾಸಮಾಡುತ್ತಾರೆ.

೯೫–೯೭. ನೀತಿಮಾರ್ಗಾನುಸಾರಿಗಳೂ ಧರ್ಮಾಧರ್ಮವಿಚಾರಗಳನ್ನು ಬಲ್ಲವರೂ ಆದ ಉಶೀನರ, ಸುಧನ್ವ, ವೃಷಪರ್ವ, ಜಯದ್ರಥ, ರಜಿ, ಸಹಸ್ರಜಿತ್, ಕುಕ್ಷಿ, ದೃಢಧನ್ವ, ರಿಪುಂಜಯ, ಯುವನಾಶ್ವ, ದಂತವಕ್ತ್ರ, ನಾಭಾಗ, ರಿಪುಮಂಗಲ, ಕರಂದಮ, ಧರ್ಮಸೇನ, ಪರಮರ್ದ, ಪರಾಂತಕ—

ಅನ್ಯಚ್ಚ ತೇ ಪ್ರವಕ್ಷ್ಯಾಮ್ಯಹೋ ಯೇ ನ ಪಶ್ಯಂತಿ ಭಾಸ್ಕರಿಂ ।
ದಂಡಪಾಶೋದ್ಯತಕರಾನೂರ್ಧ್ವತಾನುಗ್ರಾನನಾನ್ಕ್ವಚಿತ್ ॥ ೯೮ ॥
ಗೋವಿಂದ ಮಾಧವ ಮುಕುಂದ ಹರೇ ಮುರಾರೇ
ಶಂಭೋ ಶಿವೇಶ ಶಶಿಶೇಖರ ಶೂಲಪಾಣೇ ।
ದಾಮೋದರಾಽಚ್ಯುತ ಜನಾರ್ದನ ವಾಸುದೇವ
ತ್ಯಾಜ್ಯಾ ಭಟಾ ಯ ಇತಿ ಸಂತತಮಾಮನಂತಿ ॥ ೯೯ ॥
ಗಂಗಾಧರಾಽಂಧಕರಿಪೋ ಹರ ನೀಲಕಂಠ
ವೈಕುಂಠ ಕೈಟಭರಿಪೋ ಕಮಠಾಬ್ಜಪಾಣೇ ।
ಭೂತೇಶ ಖಂಡಪರಶೋ ಮೃಡ ಚಂಡಿಕೇಶ
ತ್ಯಾಜ್ಯಾ ಭಟಾ ಯ ಇತಿ ಸಂತತಮಾಮನಂತಿ ॥ ೧೦೦ ॥
ವಿಷ್ಣೋ ನೃಸಿಂಹ ಮಧುಸೂದನ ಚಕ್ರಪಾಣೇ
ಗೌರೀಪತೇ ಗಿರಿಶ ಶಂಕರ ಚಂದ್ರಚೂಡ ।
ನಾರಾಯಣಾಽಸುರನಿಬರ್ಹಣ ಶಾರ್ಙ್ಗಪಾಣೇ
ತ್ಯಾಜ್ಯಾ ಭಟಾ ಯ ಇತಿ ಸಂತತಮಾಮನಂತಿ ॥ ೧೦೧ ॥

---

ಇವರೇ ಮೊದಲಾದ ಬಹುಮಂದಿ ದೊರೆಗಳು ಈ ಯಮಧರ್ಮನ ಸುಧರ್ಮ ವೆಂದು ಪ್ರಸಿದ್ಧವಾದ ಸಭೆಯನ್ನು ಅಲಂಕರಿಸಿರುತ್ತಾರೆ.

೯೮. ಅಯ್ಯಾ ಶಿವಶರ್ಮನೆ, ದಂಡಪಾಶಗಳನ್ನು ಹಿಡಿದು ಭಯಂಕರ ನಾಗಿರುವ ಯಮನನ್ನಾಗಲಿ ಅವನ ದೂತರನ್ನಾಗಲಿ ಎಂದಿಗೂ ನೋಡದಿರುವವ ರಾರೆಂಬುದನ್ನು ನಿನಗೆ ಹೇಳುತ್ತೇನೆ ಕೇಳು

೯೯. ಗೋವಿಂದ ಮಾಧವ ಮುಕುಂದ ಹರಿ ಮುರಾರಿ ಶಂಭು ಶಿವ ಶಶಿಶೇಖರ ಶೂಲಪಾಣಿ ದಾಮೋದರ ಅಚ್ಯುತ ಜನಾರ್ದನ ವಾಸುದೇವ ಎಂದು ಯಾರು ಸಂತತವೂ ಭಗವನ್ನಾಮಗಳನ್ನು ಸ್ಮರಿಸುತ್ತಿರುತ್ತಾರೆಯೊ ಅವರು ಯಮನಿಗೂ, ಯಮದೂತರಿಗೂ ತ್ಯಾಜ್ಯರಾದವರು.

೧೦೦. ಗಂಗಾಧರ ಅಂಧಕರಿಪು ಹರ ನೀಲಕಂಠ ವೈಕುಂಠ ಕೈಟಭರಿಪು ಕಮಠ ಅಬ್ಜಪಾಣಿ ಭೂತೇಶ ಖಂಡಪರಶು ಮೃಡ ಚಂಡಿಕೇಶ ಎಂದು ಸಂತತವೂ ಹರಿಹರ ನಾಮಗಳನ್ನು ಜಪಿಸುವವರು ಯಮದೂತರಿಗೆ ತ್ಯಾಜ್ಯ ರೆನಿಸಿದವರು.

೧೦೧. ವಿಷ್ಣು ನೃಸಿಂಹ ಮಧುಸೂದನ ಚಕ್ರಪಾಣಿ ಗೌರೀಪತಿ ಗಿರಿಶ ಶಂಕರ ಚಂದ್ರಚೂಡ ನಾರಾಯಣ ಅಸುರಾರಿ ಶಾರ್ಙ್ಗಪಾಣಿ ಎಂದು ನಿರಂತ ರವೂ ಹರಿಶಿವನಾಮಗಳನ್ನು ಭಜಿಸುವವರು ಯಮಭಟರಿಗೆ ತ್ಯಾಜ್ಯರು.

ಮೃತ್ಯುಂಜಯೋಗ್ರವಿಷಮೇಕ್ಷಣ ಕಾಮಶತ್ರೋ
ಶ್ರೀಕಾಂತ ಪೀತವಸನಾಂಬುದನೀಲ ಶೌರೇ ।
ಈಶಾನ ಕೃತ್ತಿವಸನ ತ್ರಿದಶೈಕನಾಥ
ತ್ಯಾಜ್ಯಾ ಭಟಾ ಯ ಇತಿ ಸಂತತಮಾಮನಂತಿ ॥ ೧೦೨ ॥
ಲಕ್ಷ್ಮೀಪತೇ ಮಧುರಿಪೋ ಪುರುಷೋತ್ತಮಾದ್ಯ
ಶ್ರೀಕಂಠ ದಿಗ್ವಸನ ಶಾಂತ ಪಿನಾಕಪಾಣೇ ।
ಆನಂದಕಂದ ಧರಣೀಧರ ಪದ್ಮನಾಭ
ತ್ಯಾಜ್ಯಾ ಭಟಾ ಯ ಇತಿ ಸಂತತಮಾಮನಂತಿ ॥ ೧೦೩ ॥
ಸರ್ವೇಶ್ವರ ತ್ರಿಪುರಸೂದನ ದೇವದೇವ
ಬ್ರಹ್ಮಣ್ಯದೇವ ಗರುಡಧ್ವಜ ಶಂಖಪಾಣೇ ।
ತ್ರ್ಯಕ್ಷೋರಗಾಭರಣ ಬಾಲಮೃಗಾಂಕಮೌಲೇ
ತ್ಯಾಜ್ಯಾ ಭಟಾ ಯ ಇತಿ ಸಂತತಮಾಮನಂತಿ ॥ ೧೦೪ ॥
ಶ್ರೀರಾಮ ರಾಘವ ರಮೇಶ್ವರ ರಾವಣಾರೇ
ಭೂತೇಶ ಮನ್ಮಥರಿಪೋ ಪ್ರಮಥಾಧಿನಾಥ ।
ಚಾಣೂರಮರ್ದನ ಹೃಷೀಕಪತೇ ಮುರಾರೇ
ತ್ಯಾಜ್ಯಾ ಭಟಾ ಯ ಇತಿ ಸಂತತಮಾಮನಂತಿ ॥ ೧೦೫ ॥

---

೧೦೨. ಮೃತ್ಯುಂಜಯ ಉಗ್ರವಿಷಮೇಕ್ಷಣ (ತ್ರಿಣಯನ) ಕಾಮಾರಿ ಶ್ರೀಕಾಂತ ಪೀತಾಂಬರ ಮೇಘಶ್ಯಾಮಲ ಶೌರಿ ಈಶಾನ ಕೃತ್ತಿವಾಸ ತ್ರಿದಶೈಕ ನಾಥ (ದೇವಾಧಿದೇವ) ಎಂದು ಯಾವಾಗಲೂ ಸ್ಮರಿಸುವವರು ಯಮದೂತರಿಗೆ ತ್ಯಾಜ್ಯರು.

೧೦೩. ಲಕ್ಷ್ಮೀಪತಿ ಮಧುರಿಪು ಪುರುಷೋತ್ತಮ ಆದಿದೇವ ಶ್ರೀಕಂಠ ದಿಗಂಬರ ಶಾಂತ ಪಿನಾಕಪಾಣಿ ಆನಂದಕಂದ ಧರಣೀಧರ ಪದ್ಮನಾಭ, ಎಂದು ಹರನಾರಾಯಣ ನಾಮಗಳನ್ನು ಜಪಿಸುವವರು ಯಮಭಟರಿಗೆ ತ್ಯಾಜ್ಯರು.

೧೦೪. ಸರ್ವೇಶ್ವರ ತ್ರಿಪುರಸೂದನ ದೇವದೇವ ಬ್ರಹ್ಮಣ್ಯದೇವ ಗರುಡ ಧ್ವಜ ಶಂಖಪಾಣಿ ತ್ರಿಣಯನ ಉರಗಾಭರಣ ಬಾಲಮೃಗಾಂಕಮೌಲಿ ಎಂದು ಯಾವಾಗಲೂ ಜಪಿಸುವವರು ಯಮಭಟರಿಗೆ ತ್ಯಾಜ್ಯರು.

೧೦೫. ಶ್ರೀರಾಮ ರಾಘವ ರಮೇಶ್ವರ ರಾವಣಾರಿ ಭೂತೇಶ ಮನ್ಮಥರಿಪು ಪ್ರಮಥಾಧಿನಾಥ ಚಾಣೂರಮರ್ದನ ಹೃಷೀಕೇಶ ಮುರಾರಿ ಎಂದು ಜಪಿಸು ವವರು ಯಮಭಟರಿಗೆ ತ್ಯಾಜ್ಯರು.

ಶೂಲಿನ್ಗಿರೀಶ ರಜನೀಶ ಕಲಾವತಂಸ
ಕಂಸಪ್ರಣಾಶನ ಸನಾತನ ಕೇಶಿನಾಥ ।
ಭರ್ಗ ತ್ರಿಣೇತ್ರ ಭವಭೂತಪತೇ ಪುರಾರೇ
ತ್ಯಾಜ್ಯಾ ಭಟಾ ಯ ಇತಿ ಸಂತತಮಾಮನಂತಿ ॥ ೧೦೬ ॥
ಗೋಪೀಪತೇ ಯದುಪತೇ ವಸುದೇವಸೂನೋ
ಕರ್ಪೂರಗೌರ ವೃಷಭಧ್ವಜ ಭಾಲನೇತ್ರ ।
ಗೋವರ್ಧನೋದ್ಧರಣ ಧರ್ಮಧುರೀಣ ಗೋಪ
ತ್ಯಾಜ್ಯಾ ಭಟಾ ಯ ಇತಿ ಸಂತತಮಾಮನಂತಿ ॥ ೧೦೭ ॥
ಸ್ಥಾಣೋ ತ್ರಿಲೋಚನ ಪಿನಾಕಧರ ಸ್ಮರಾರೇ
ಕೃಷ್ಣಾಽನಿರುದ್ಧ ಕಮಲಾಕರ ಕಲ್ಮಷಾರೇ ।
ವಿಶ್ವೇಶ್ವರ ತ್ರಿಪಥಗಾರ್ದ್ರಜಟಾಕಲಾಪ
ತ್ಯಾಜ್ಯಾ ಭಟಾ ಯ ಇತಿ ಸಂತತಮಾಮನಂತಿ ॥ ೧೦೮ ॥
ಅಷ್ಟೋತ್ತರಾಽಧಿಕಶತೇನ ಸುಚಾರುನಾಮ್ನಾಂ
ಸಂದರ್ಭಿತಾಂ ಲಲಿತರತ್ನಕದಂಬಕೇನ ।
ಸನ್ನಾಯಕಾಂ ದೃಢಗುಣಾಂ ದ್ವಿಜಕಂಠಗಾಂ ಯಃ
ಕುರ್ಯಾದಿಮಾಂ ಸ್ರಜಮಹೋ ಸ ಯಮಂ ನ ಪಶ್ಯೇತ್ ॥

---

೧೦೬. ಶೂಲಿ ಗಿರೀಶ ರಜನೀಶಕಲಾವತಂಸ ಕಂಸಪ್ರಣಾಶನ ಸನಾತನ ಕೇಶಿನಾಶ ಭರ್ಗ ತ್ರಿಣೇತ್ರ ಭವಭೂತಪತಿ ಪುರಾರಿ ಎಂದು ಜಪಿಸುವವರು ಯಮಭಟರಿಗೆ ತ್ಯಾಜ್ಯರು.

೧೦೭. ಗೋಪೀಪತಿ ಯದುಪತಿ ವಾಸುದೇವ ಕರ್ಪೂರಗೌರ ವೃಷಭಧ್ವಜ ಭಾಲನೇತ್ರ ಗೋವರ್ಧನೋದ್ಧರಣ ಧರ್ಮಧುರೀಣ ಗೋಪ ಎಂದು ಸಂತತವೂ ಭಜಿಸುವವರು ಯಮಭಟರಿಗೆ ತ್ಯಾಜ್ಯರು.

೧೦೮. ಸ್ಥಾಣು ತ್ರಿಲೋಚನ ಪಿನಾಕಧರ ಸ್ಮರಾರಿ ಕೃಷ್ಣ ಅನಿರುದ್ಧ ಕಮಲಾಕರ ಕಲ್ಮಷಾರಿ ವಿಶ್ವೇಶ್ವರ ತ್ರಿಪಥಗಾರ್ದ್ರಜಟಾಕಲಾಪ ಎಂದು ಸಂತತವೂ ಹರಿಶಿವನಾಮಗಳನ್ನು ಸ್ಮರಿಸುವವರು ಯಮಭಟರಿಗೆ ತ್ಯಾಜ್ಯರು.

೧೦೯. ಎಲೈ ಶಿವಶರ್ಮನೇ, ಲಲಿತವಾದ ಪದಗಳೆಂಬ ರತ್ನಸಮೂಹಗಳಿಂದ ರಚಿತವಾಗಿ, ಹರಿಹರರೆಂಬ ನಾಯಕಮಣಿಗಳುಳ್ಳದಾಗಿ, ಭಗವದ್ಭಕ್ತಿಯೆಂಬ ಬಲವಾದ ದಾರವನ್ನೊಳಗೊಂಡು ಸತತವೂ ಮನೋಹರವಾದ ಅಷ್ಟೋತ್ತರ ಶತನಾಮಮಾಲಿಕೆಯನ್ನು ಯಾವನು ಕಂಠದಲ್ಲಿ ಅಲಂಕರಿಕೊಳ್ಳುವನೋ ಅವನು ಯಮನನ್ನು ಕಾಣುವುದಿಲ್ಲವು.

ಇತ್ಥಂ ದ್ವಿಜೇಂದ್ರ ನಿಜಭೃತ್ಯಗಣಾನ್ಸದೈವ
ಸಂಶಿಕ್ಷಯೇದವನಿಗಾನ್ ಸಹಿ ಧರ್ಮರಾಜಃ ।
ಅನ್ಯೇಽಪಿ ಯೇ ಹರಿಹರಾಂಕಧರಾ ಧರಾಯಾಂ
ತೇ ದೂರತಃ ಪುನರಹೋ ಪರಿವರ್ಜನೀಯಾಃ ॥ ೧೧೦ ॥

ಅಗಸ್ತಿರುವಾಚ :—

ಯೋ ಧರ್ಮರಾಜರಚಿತಾಂ ಲಲಿತಪ್ರಬಂಧಾಂ
ನಾಮಾವಲಿಂ ಸಕಲಕಲ್ಮಷಬೀಜಹಂತ್ರೀಂ ।
ಧೀರೋಽತ್ರ ಕೌಸ್ತುಭಭೃತಃ ಶಶಿಭೂಷಣಸ್ಯ
ನಿತ್ಯಂ ಜಪೇತ್ ಸ್ತನರಸಂ ಸ ಪಿಬೇನ್ನಮಾತುಃ ॥ ೧೧೧ ॥

ಇತಿ ಶೃಣ್ವನ್ಕಥಾಂ ರಮ್ಯಾಂ ಶಿವಶರ್ಮಾ ಪ್ರಿಯೇಽನಘಾಂ ।
ಪ್ರಹೃಷ್ಟವಕ್ತ್ರಃ ಪುರತೋ ದದರ್ಶಾಽಪ್ಸರಸಾಂ ಪುರೀಂ ॥ ೧೧೨ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಯಮಲೋಕವರ್ಣನಂ" ನಾಮಾಷ್ಟಮೋಽಧ್ಯಾಯಃ**

---

೧೧೦. ಅಯ್ಯಾ ದ್ವಿಜೇಂದ್ರನೆ, ಆ ಯಮಧರ್ಮರಾಜನು ಭೂಲೋಕದಲ್ಲಿ ಸಂಚರಿಸುವ ತನ್ನ ದೂತರಿಗೆ ಈ ರೀತಿ ಯಾವಾಗಲೂ ಅಪ್ಪಣೆಮಾಡುವನಲ್ಲದೆ ಹರಿಹರರ ಚಿಹ್ನೆಗಳನ್ನು ಧರಿಸಿರುವ ಪುಣ್ಯಾತ್ಮರನ್ನು ದೂರದಲ್ಲಿಯೇ ವರ್ಜಿಸತಕ್ಕದ್ದೆಂದೂ ಶಾಸನಮಾಡಿರುತ್ತಾನೆ.

೧೧೧. ಎಲೌ ಲೋಪಾಮುದ್ರೆಯೆ, ಯಾವನು, ಧರ್ಮರಾಜನು ರಚಿಸಿದ ಲಲಿತವಾದ ಪದಗುಂಫನವುಳ್ಳ, ಕಲಿಕಾಲದ ಸಮಸ್ತ ಪಾಪಬೀಜಗಳನ್ನೂ ಹುಟ್ಟಡಗಿಸುವ ಈ ಶಿವಕೇಶವರ ನಾಮಾವಳಿಯನ್ನು ಜಪಿಸುತ್ತಾನೆಯೋ ಆ ಧೀರನು ಮತ್ತೆ ಭೂಲೋಕದಲ್ಲಿ ಜನ್ಮವೆತ್ತಿ ಮಾತೃಸ್ತನ್ಯವನ್ನು ಪಾನ ಮಾಡುವುದಿಲ್ಲ.

೧೧೨. ಎಲೌ ಪ್ರಿಯಳೇ, ಈ ರೀತಿಯಾಗಿ ಆ ಶಿವಶರ್ಮಬ್ರಾಹ್ಮಣನು ಮನೋಹರವಾದುದೂ, ನಿಷ್ಕಲ್ಮಷವಾದುದೂ ಆದ ಪುಣ್ಯಕಥೆಯನ್ನು ಕೇಳುತ್ತ ಸಂತೋಷದಿಂದರಳಿದ ಮುಖವುಳ್ಳವನಾಗಿ ಮುಂದುವರಿದು ಅಪ್ಸರೋಲೋಕವನ್ನು ಕಂಡನು.

**ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಯಮಲೋಕವರ್ಣನ"ವೆಂಬ ಎಂಟನೆಯ ಅಧ್ಯಾಯವು ಮುಗಿದುದು**

॥ ಶ್ರೀಃ ॥

## ಅಥ ನವಮೋಽಧ್ಯಾಯಃ

### ಅಪ್ಸರಃ ಸೂರ್ಯಲೋಕವರ್ಣನಂ

ಶಿವಶರ್ಮೋವಾಚ :—

ಕಾ ಇಮಾ ರೂಪಲಾವಣ್ಯಸೌಭಾಗ್ಯನಿಧಯಃ ಸ್ತ್ರಿಯಃ ।
ದಿವ್ಯಾಲಂಕಾರಧಾರಿಣ್ಯೋ ದಿವ್ಯಭೋಗಸಮನ್ವಿತಾಃ ॥ ೧ ॥

ಗಣಾವೂಚತುಃ :—

ಏತಾ ವಾರವಿಲಾಸಿನ್ಯೋ ಯಜ್ಞಭಾಜಾಂ ಪ್ರಿಯಂಕರಾಃ ।
ಗೀತಜ್ಞಾ ನೃತ್ಯಕುಶಲಾ ವಾದ್ಯವಿದ್ಯಾವಿಚಕ್ಷಣಾಃ ॥ ೨ ॥
ಕಾಮಕೇಲಿಕಲಾಽಭಿಜ್ಞಾ ದ್ಯೂತವಿದ್ಯಾವಿಶಾರದಾಃ ।
ರಸಜ್ಞಾ ಭಾವವೇದಿನ್ಯಶ್ಚತುರಾಶ್ಚೋಚಿತೋಕ್ತಿಷು ॥ ೩ ॥
ನಾನಾದೇಶವಿಶೇಷಜ್ಞಾ ನಾನಾಭಾಷಾಸು ಕೋವಿದಾಃ ।
ಸಂಕೇತೋದಂತ ನಿಪುಣಾ ನೈಕಾಃ ಸ್ವೈರಚರಾ ಮುದಾ ॥ ೪ ॥

---

### ಕನ್ನಡದ ಅನುವಾದ

#### ಅಪ್ಸರೋಲೋಕ ಸೂರ್ಯಲೋಕವರ್ಣನ

೧ ಶಿವಶರ್ಮನು ಕೇಳುತ್ತಾನೆ :—ಎಲೈ ವಿಷ್ಣುಪಾರ್ಷದರೆ, ರೂಪ ಲಾವಣ್ಯ ಸೌಭಾಗ್ಯಗಳಿಗೆ ಖನಿಗಳೆನಿಸಿ, ದಿವ್ಯಾಲಂಕಾರಗಳನ್ನು ಧರಿಸಿ, ದಿವ್ಯ ಭೋಗಗಳಿಂದ ಕೂಡಿ ಕಂಗೊಳಿಸುತ್ತಿರುವ ಈ ಸುಂದರಸ್ತ್ರೀಯರಾರು ?

೨. ಗಣಗಳು ಹೇಳುತ್ತಾರೆ :—ಎಲೈ ಶಿವಶರ್ಮನೆ, ಇವರೆಲ್ಲರೂ ಭೂಲೋಕದಲ್ಲಿ ಯಜ್ಞಮಾಡಿ ಪುಣ್ಯವನ್ನು ಗಳಿಸಿದ ಸೋಮಯಾಜಿಗಳಿಗೆ ಪ್ರಿಯಂಕರರಾದ ವೇಶ್ಯಾಸ್ತ್ರೀಯರು. ಇವರು ಸಂಗೀತವನ್ನು ಚೆನ್ನಾಗಿ ಬಲ್ಲವರೂ, ನಾಟ್ಯದಲ್ಲಿ ಚದುರೆಯರೂ, ವಿವಿಧವಾದ್ಯಗಳಲ್ಲಿ ವಿಚಕ್ಷಣೆಯರೂ ಆಗಿರುತ್ತಾರೆ.

೩. ಕಾಮಕೇಳಿಕಲೆಯಲ್ಲಿ ಇವರಿಗೆ ಗೊತ್ತಿಲ್ಲದ ಸಂಗತಿಯಾವುದೂ ಇಲ್ಲ. ಜೂಜಾಡುವುದರಲ್ಲಂತೂ ಇವರು ವಿಶಾರದೆಯರು. ರಸಜ್ಞೆಯರಾಗಿ, ಇಂಗಿತ ವನ್ನು ಬಲ್ಲವರಾಗಿ ಆಯಾಯಾ ಸಮಯಗಳಿಗೆ ಆಯಾಯ ಜನಗಳಿಗೆ ತಕ್ಕಂತೆ ಮಾತನಾಡುವುದರಲ್ಲಿ ಚದುರೆಯರು.

೪. ಹಲವಾರು ದೇಶಗಳ ವೈಶಿಷ್ಟ್ಯವನ್ನು ಬಲ್ಲವರು. ಅನೇಕ ಭಾಷೆಗಳಲ್ಲಿ ಕೋವಿದೆಯರು. ರಹಸ್ಯವಾದ ಸಂಗತಿಗಳನ್ನೆಲ್ಲ ತಿಳಿದು ಬರುವುದರಲ್ಲಿ ಇವರಿಗೆ ಬಹಳ ನೈಪುಣ್ಯವುಂಟು. ಗುಂಪುಗಳನ್ನು ಕಟ್ಟಿಕೊಂಡು ಇವರು ಮನಬಂದೆಡೆ ಗಳಲ್ಲಿ ಸ್ವೇಚ್ಛೆಯಾಗಿ ಸಂಚರಿಸುತ್ತಿರುತ್ತಾರೆ.

ಲೀಲಾನರ್ಮಸು ಸಾಭಿಜ್ಞಾಃ ಸುಪ್ರಲೋಭೇಷು ಪಂಡಿತಾಃ ।
ಯೂನಾಂ ಮನಾಂಸಿ ಸತತಂ ಸ್ವೈರ್ಹಾವ್ಯೈ ರಮಯಂತ್ಯಮೂಃ ॥ ೫ ॥
ನಿರ್ಮಥ್ಯಮಾನಾತ್ಕ್ಷೀರೋದಾತ್ಪೂರ್ವಮಪ್ಸರಸಸ್ತ್ವಮೂಃ ।
ನಿಃಸೃತಾಸ್ತ್ರಿಜಗಜ್ಜೇತುರ್ಮೋಹನಾಽಸ್ತ್ರಂ ಮನೋಭುವಃ ॥ ೬ ॥
ಉರ್ವಶೀ ಮೇನಕಾ ರಂಭಾ ಚಂದ್ರಲೇಖಾ ತಿಲೋತ್ತಮಾ ।
ವಪುಷ್ಮತೀ ಕಾಂತಿಮತೀ ಲೀಲಾವತ್ಯುತ್ಪಲಾವತೀ ॥ ೭ ॥
ಅಲಂಬುಸಾ ಗುಣವತೀ ಸ್ಥೂಲಕೇಶೀ ಕಲಾವತೀ ।
ಕಲಾನಿಧಿರ್ಗುಣನಿಧಿಃ ಕರ್ಪೂರತಿಲಕೋರ್ವರಾ ॥ ೮ ॥
ಅನಂಗಲತಿಕಾ ಚಾಽಪಿ ತಥಾ ಮದನಮೋಹಿನೀ ।
ಚಕೋರಾಽಕ್ಷೀ ಚಂದ್ರಕಲಾ ತಥಾ ಮುನಿಮನೋಹರಾ ॥ ೯ ॥
ಗ್ರಾವದ್ರಾವಾ ತಪೋದ್ವೇಷ್ಟ್ರೀ ಚಾರುನಾಸಾ ಸುಕರ್ಣಿಕಾ ।
ದಾರುಸಂಜೀವಿನೀ ಸುಶ್ರೀಃ ಕ್ರತುಶುಲ್ಕಾ ಶುಭಾನನಾ ॥ ೧೦ ॥
ತಪಃಶುಲ್ಕಾ ತೀರ್ಥಶುಲ್ಕಾ ದಾನಶುಲ್ಕಾ ಹಿಮಾವತೀ ।
ಪಂಚಾಽಶ್ವಮೇಧಿಕಾ ಚೈವ ರಾಜಸೂಯಾರ್ಥಿನೀ ತಥಾ ॥ ೧೧ ॥
ಅಷ್ಟಾಽಗ್ನಿಹೋಮಿಕಾ ತದ್ವದ್ವಾಜಪೇಯಶತೋದ್ಭವಾ ।
ಇತ್ಯಾದ್ಯಪ್ಸರಸಾಂ ಶ್ರೇಷ್ಠಂ ಸಹಸ್ರಂ ಷಷ್ಟಿಸಮ್ಮಿತಂ ॥ ೧೨ ॥
ಏತಸ್ಮಿನ್ನಪ್ಸರೋಲೋಕೇ ವಸಂತ್ಯನ್ಯಾ ಅಪಿ ಸ್ತ್ರಿಯಃ ।
ಸದಾಽಸ್ಖಲಿತಲಾವಣ್ಯಾಃ ಸದಾಽಸ್ಖಲಿತಯೌವನಾಃ ॥ ೧೩ ॥

---

೫. ಹಾವಭಾವ ವಿಲಾಸ ವೈಖರಿಗಳಲ್ಲಿ ಇವರು ಸಂಪೂರ್ಣಪಾಂಡಿತ್ಯವನ್ನೊಳಗೊಂಡು, ಬೇಳುವೆಯ ಮಾತುಗಳನ್ನು ಹೇಳುವುದರಲ್ಲಿ ಚದುರೆಯರಾಗಿ ತಮ್ಮ ಶೃಂಗಾರಚೇಷ್ಟೆಗಳಿಂದಲೆ ಯುವಕರ ಮನಸ್ಸನ್ನು ಸತತವೂ ವಿನೋದಗೊಳಿಸುತ್ತಿರುತ್ತಾರೆ.

೬. ಮೂರು ಲೋಕಗಳನ್ನೂ ಗೆಲ್ಲುವವನಾದ ಮನ್ಮಥನ ಮೋಹನಾಸ್ತ್ರವೆನಿಸಿದ ಇವರೆಲ್ಲರೂ ಪೂರ್ವದಲ್ಲಿ ಸಮುದ್ರಮಥನ ಮಾಡಿದಂದು ಆವಿರ್ಭವಿಸಿದ ಅಪ್ಸರೆಯರು.

೭–೧೩. ಊರ್ವಶಿ ಮೇನಕೆ ರಂಭೆ ಚಂದ್ರಲೇಖೆ ತಿಲೋತ್ತಮೆ ವಪುಷ್ಮತಿ ಕಾಂತಿಮತಿ ಲೀಲಾವತಿ ಉಪಲಾವತಿ ಅಲಂಬುಸೆ ಗುಣವತಿ ಸ್ಥೂಲಕೇಶಿ ಕಲಾವತಿ ಕಲಾನಿಧಿ ಗುಣನಿಧಿ ಕರ್ಪೂರತಿಲಕೆ ಉರ್ವರೆ ಅನಂಗಲತಿಕೆ ಮದನಮೋಹಿನಿ ಚಕೋರಾಕ್ಷಿ ಚಂದ್ರಕಲೆ ಮುನಿಮನೋಹರೆ ಗ್ರಾವದ್ರಾವೆ ತಪೋದ್ವೇಷ್ಟಿ ಚಾರುನಾಸೆ ಸುಕರ್ಣಿಕೆ ದಾರುಸಂಜೀವಿನಿ ಸುಶ್ರೀ ಕ್ರತುಶುಲ್ಕೆ ಶುಭಾನನೆ ತಪಶ್ಶುಲ್ಕೆ ತೀರ್ಥಶುಲ್ಕೆ ದಾನಶುಲ್ಕೆ ಹಿಮಾವತಿ ಪಂಚಾಶ್ವಮೇಧಿಕೆ

ದಿವ್ಯಾಂಬರಾ ದಿವ್ಯಮಾಲ್ಯಾ ದಿವ್ಯಗಂಧಾನುಲೇಪನಾಃ ।
ದಿವ್ಯಭೋಗೈಃ ಸುಸಂಪನ್ನಾಃ ಸ್ವೇಚ್ಛಾವಿಧೃತವಿಗ್ರಹಾಃ ॥ ೧೪ ॥
ಕೃತ್ವಾ ಮಾಸೋಪವಾಸಾನಿ ಸ್ಖಲಂತಿ ಬ್ರಹ್ಮಚರ್ಯತಃ ।
ಸಕೃದೇವ ದ್ವಿಃಕೃತ್ವೋ ವಾ ತ್ರಿಃಕೃತ್ವೋ ದೈವಯೋಗತಃ ॥ ೧೫ ॥
ತಾ ಇಮಾ ದಿವ್ಯಭೋಗಿನ್ಯೋ ರೂಪಲಾವಣ್ಯಸಂಪದಃ ।
ನಿವಸಂತ್ಯಪ್ಸರೋಲೋಕೇ ಸರ್ವಕಾಮಸಮನ್ವಿತಾಃ ॥ ೧೬ ॥
ಕೃತ್ವಾ ವ್ರತಾನಿ ಸಾಂಗಾನಿ ಕಾಮಿಕಾನಿ ವಿಧಾನತಃ ।
ಭವಂತಿ ಸ್ವೈರಚಾರಿಣ್ಯೋ ದೇವಭೋಗ್ಯಾ ಇಹಾಽಽಗತಾಃ ॥ ೧೭ ॥
ಪತಿವ್ರತಧೃತಾ ನಾರ್ಯೋ ಬಲೇನ ಬಲಿನಾ ಧೃತಾಃ ।
ಭರ್ತೃಬುದ್ಧ್ಯಾ ರಮಂತೇ ತಂ ಕದಾಚಿತ್ತಾ ಇಮಾ ದ್ವಿಜ ॥ ೧೮ ॥

---

ರಾಜಸೂಯಾರ್ಧಿನಿ ಅಷ್ಟಾಗ್ನಿಹೋಮಿಕೆ ವಾಜಪೇಯುಶತೋದ್ಭವೆ ಎಂಬಿವರೇ ಮೊದಲಾದ ಅರುವತ್ತುಸಾವಿರ ಮಂದಿ ಅಪ್ಸರೋತ್ತಮೆಯರು ಎಂದಿಗೂ ಜಾರದಿರುವ ಸೌಂದರ್ಯ ಲಾವಣ್ಯ ಯೌವನಗಳುಳ್ಳವರಾಗಿ ಈ ಅಪ್ಸರೋಲೋಕದಲ್ಲಿ ವಾಸಮಾಡುತ್ತಿರುತ್ತಾರೆ.

೧೪. ದಿವ್ಯ ಪೀತಾಂಬರಗಳನ್ನುಟ್ಟು, ದಿವ್ಯ ಪುಷ್ಪಮಾಲೆಗಳನ್ನು ಧರಿಸಿ, ದಿವ್ಯ ಗಂಧಾನುಲೇಪನದಿಂದ ಸೊಗಸುಗೊಂಡು, ದಿವ್ಯಭೋಗಗಳ ಸಮೃದ್ಧಿಯನ್ನೊಳಗೊಂಡವರಾಗಿ, ತಮ್ಮ ಇಷ್ಟಾನುಸಾರವಾಗಿ ರೂಪಗಳನ್ನು ಧರಿಸುವ ಸಾಮರ್ಥ್ಯವನ್ನು ಹೊಂದಿ ಇವರೆಲ್ಲರೂ ಈ ಲೋಕದಲ್ಲಿ ನೆಲಸಿರುತ್ತಾರೆ.

೧೫–೧೬. ಮಾಸೋಪವಾಸಗಳನ್ನು ಮಾಡಿ ನಿರಂತರವೂ ಬ್ರಹ್ಮಚರ್ಯವ್ರತದಿಂದಿದ್ದು ದೈವಯೋಗದಿಂದ ಒಂದೆರಡು ಬಾರಿ ವ್ಯಭಿಚರಿಸಿದ ಸ್ತ್ರೀಯರು ರೂಪಲಾವಣ್ಯ ಸಂಪತ್ತಿನಿಂದ ಕೂಡಿದವರಾಗಿ, ದಿವ್ಯ ಭೋಗಗಳನ್ನು ಅನುಭವಿಸುವ ಅಪ್ಸರೆಯರಾಗಿ ಸರ್ವ ಕಾಮಸಮನ್ವಿತೆಯರೆನಿಸಿ ಈ ಅಪ್ಸರೋಲೋಕದಲ್ಲಿ ವಾಸಮಾಡುತ್ತಾರೆ.

೧೭ ಕಾಮಿಕಗಳಾದ ವ್ರತಗಳೆಲ್ಲವನ್ನೂ ವಿಧ್ಯುಕ್ತವಾಗಿ ಮಾಡಿ ಮುಗಿಸಿ, ಆಮೇಲೆ ಸ್ವೇಚ್ಛಾಚಾರಿಣಿಯರಾಗುವ ಸ್ತ್ರೀಯರು ದೇವತೆಗಳಿಗೆ ಭೋಗ್ಯರೆನಿಸಿ ಈ ಲೋಕಕ್ಕೆ ಬರುತ್ತಾರೆ.

೧೮. ಪಾತಿವ್ರತ್ಯವನ್ನು ಧರಿಸಿದ ನಾರಿಯರು ಬಲಿಷ್ಠನಾದವನು ತಮ್ಮನ್ನು ಬಲಾತ್ಕರಿಸಿ ಹಿಡಿದಂದು ನಿರ್ವಾಹವಿಲ್ಲದೆ ಅವನನ್ನೇ ಪತಿಬುದ್ಧಿಯಿಂದ ಭಾವಿಸಿ ಅವನೊಡನೆ ಕ್ರೀಡಿಸಿದ ಫಲವಾಗಿ ಈ ಅಪ್ಸರೆಯರಾಗಿ ಹುಟ್ಟುತ್ತಾರೆ.

ಭರ್ತರಿ ಪ್ರೋಷಿತೇ ಯಾಶ್ಚ ಬ್ರಹ್ಮಚರ್ಯವ್ರತಾಃ ಸದಾ ।
ವಿಪ್ಲವಂತೇ ಸಕೃದ್ದೈವಾತ್ತಾ ಏತಾ ವಾಮಲೋಚನಾಃ ॥ ೧೯ ॥
ಕುಸುಮಾನಿ ಸುಗಂಧೀನಿ ಸುವಾಸಂ ಚಂದನಂ ತಥಾ ।
ಸುಗೌರಂ ಚಾಽಪಿ ಕರ್ಪೂರಂ ಸುಸೂಕ್ಷ್ಮಾಣ್ಯಂಬರಾಣಿ ಚ ॥ ೨೦ ॥
ಪರ್ಣಾನಿ ಋಜುತಾರಾಣಿ ಜೀರ್ಣಾನಿ ಕಠಿನಾನಿ ಚ ।
ಸಾಗ್ರಾಣಿ ಸ್ವರ್ಣವರ್ಣಾನಿ ಸ್ಥೂಲನೀಲಶಿರಾಣಿ ಚ ॥ ೨೧ ॥
ಸುವಾಸೋಪಸ್ಕರಾಢ್ಯಾನಿ ನಾಗವಲ್ಯಾ ದ್ವಿಜೋತ್ತಮ ।
ಶಯ್ಯಾ ವಿಚಿತ್ರಾಽಽಭರಣಾ ರತಿಶಾಲೋಚಿತಾನಿ ಚ ॥ ೨೨ ॥
ಬಹುಕೌತುಕವಸ್ತೂನಿ ಸಮಭ್ಯರ್ಚ್ಯ ದ್ವಿಜದಂಪತೀ ।
ಭೋಗದಾನಮಿದಂ ಕಾಮ್ಯಂ ಪ್ರತಿಸಂಕ್ರಮಣಂ ರವೇಃ ॥ ೨೩ ॥
ಕಿಂ ವಾ ಪ್ರತಿವ್ಯತೀಪಾತಮೇಕಸಂವತ್ಸರಾಽವಧಿ ।
ಕೋದಾದಿತಿ ಚ ಮಂತ್ರೇಣ ಯಾ ದದ್ಯಾದ್ವರವರ್ಣಿನೀ ॥ ೨೪ ॥
ಕಾಮರೂಪಧರೋ ದೇವಃ ಪ್ರೀಯತಾಮಿತಿ ವಾದಿನೀ ।
ಸಾ ಶ್ರೇಷ್ಠಾಽಪ್ಸರಸಾಂ ಮಧ್ಯೇ ವಸೇತ್ಕಲ್ಪಮಿಹಾಽಂಗನಾ ॥ ೨೫ ॥

---

೧೯. ಗಂಡನು ದೇಶಾಂತರಕ್ಕೆ ಹೋಗಿರುವಾಗ ಯಾವಾಗಲೂ ಬ್ರಹ್ಮಚರ್ಯವ್ರತದಲ್ಲಿಯೇ ಇದ್ದುಕೊಂಡು, ದೈವಯೋಗದಿಂದ ಯಾವಾಗಲೊ ಒಮ್ಮೆ ಸದಾಚಾರದಿಂದ ಜಾರಿದ ಹೆಂಗಸರು ಈ ಲೋಕದಲ್ಲಿ ಅಪ್ಸರೆಯರಾಗುತ್ತಾರೆ.

೨೦–೨೫ ಮಗಮಗಿಸುವ ಹೂಗಳು, ತೆಳುವಾದ ಸೊಗಸಾದ ವಸ್ತ್ರಗಳು, ದಿವ್ಯಚಂದನ, ಬೆಳ್ಳನೆ ಬೆಳಗುವ ಕರ್ಪೂರ, ಬಹು ಸೂಕ್ಷ್ಮವಾದ ಚೀನಾಂಬರಗಳು, ಸಮವಾದ ಮತ್ತು ಉದ್ದನೆಯ ವೀಳೆಯದೆಲೆ, ಪಕ್ವವಾಗಿ ಕಠಿನವಾದ ಅಗ್ರಗಳುಳ್ಳವಾಗಿ ಬಂಗಾರದ ಬಣ್ಣಕ್ಕೆ ತಿರುಗಿ ದಪ್ಪವಾದ ಕಪ್ಪುಗಟ್ಟಿದ ನಾರುಳ್ಳದಾದ ವೀಳೆಯದೆಲೆ, ಸುಗಂಧ ದ್ರವ್ಯಗಳಿಂದ ಕೂಡಿದ ಅಡಕೆಯಪುಡಿ, ಮಲಗುವ ಮನೆಗೆ ತಕ್ಕುದಾದ ಅಲಂಕಾರಗಳು, ಅನೇಕ ಕೌತುಕ ವಸ್ತುಗಳು ಇವುಗಳನ್ನು ಕೊಡಲು ಯಾವ ನಾರಿಯು ದ್ವಿಜದಂಪತಿಗಳನ್ನು ರವಿಸಂಕ್ರಮಣ ಕಾಲದಲ್ಲಿ ಪೂಜಿಸಿಯೊ, ಪ್ರತಿ ಅಮಾವಾಸ್ಯೆಯ ದಿನದಲ್ಲಿಯೂ ಒಂದು ಸಂವತ್ಸರದವರೆಗೂ ಅರ್ಚಿಸಿಯೊ, "ಕೋದಾತ್ಕಸ್ಮಾ ಅದಾತ್ಕಾಮಾ ಯಾದಾತ್ ಕಾಮೋ ದಾತಾ ಕಾಮಃ ಪ್ರತಿಗ್ರಹೀತಾ ಕಾಮೈತತ್ತೇ" ಎಂಬ ಮಂತ್ರದಿಂದ ಕಾಮರೂಪಧರನಾದ ದೇವನು ತೃಪ್ತನಾಗಲಿ ಎಂದು ಹೇಳಿಕೊಂಡು, ಭೋಗದಾನವೆನಿಸಿದ ಈ ಶಯ್ಯಾದಾನವನ್ನು ಮಾಡುವಳೊ ಆ ಉತ್ತಮಳು ಒಂದು ಕಲ್ಪಕಾಲ ಈ ಅಪ್ಸರೋಲೋಕದಲ್ಲಿ ವಾಸಮಾಡುತ್ತಾಳೆ.

ಕನ್ಯಾರೂಪಧರಾ ಕಾಚಿದ್ಯಾ ಭುಕ್ತ್ವಾ ಕೇನಚಿತ್ಕ್ವಚಿತ್ ।
ದೇವರೂಪೇಣ ತಂ ಕಾಲಮಾರಭ್ಯ ಬ್ರಹ್ಮಚಾರಿಣೀ ॥ ೨೬ ॥
ತದೇವ ವೃತ್ತಂ ಧ್ಯಾಯಂತೀ ನಿಧನಂ ಯಾತಿ ಕಾಲತಃ ।
ದಿವ್ಯರೂಪಧರಾ ಸೇಹ ಜಾಯತೇ ದಿವ್ಯಭೋಗಭಾಕ್ ॥ ೨೭ ॥
ನಿದಾನಮಪ್ಸರೋ ಲೋಕಸ್ಯೇತಿ ಶೃಣ್ವನ್ದ್ವಿಜಾಗ್ರಣೀಃ
ಸೌರಂ ಲೋಕಮಥ ಪ್ರಾಪ್ಯ ಕ್ಷಣೇನ ಸ ವಿಮಾನಗಃ ॥ ೨೮ ॥
ಯಥಾ ಕದಂಬಕುಸುಮಂ ಕಿಂಜಲ್ಕೈಃ ಸರ್ವತೋ ವೃತಂ ।
ದೇದೀಪ್ಯಮಾನಂ ಹಿ ತಥಾ ಸಮಂತಾದ್ಭಾನುಭಾನುಭಿಃ ॥ ೨೯ ॥
ದೂರಾದ್ರವಿಂ ಸ ವಿಜ್ಞಾಯ ಧೃತತಾಮರಸದ್ವಯಂ ।
ನವಭಿರ್ಯೋಜನಾನಾಂ ಚ ಸಹಸ್ರೈಃ ಸಂಮಿತೇನ ಹ ॥ ೩೦ ॥
ವಿಚಿತ್ರೇಣೈಕಚಕ್ರೇಣ ಸಪ್ತಸಪ್ತಿಯುತೇನ ಚ ।
ಅನೂರುಣಾಽಧಿಷ್ಠಿತೇನ ಪುರತೋ ಧೃತರಶ್ಮಿನಾ ॥ ೩೧ ॥
ಅಪ್ಸರೋಮುನಿಗಂಧರ್ವಸರ್ವಗ್ರಾಮಣಿನೈರ್ಋತೈಃ ।
ಸ್ಯಂದನೇನಾಽತಿಜವಿನಾ ಪ್ರಣನಾಮ ಕೃತಾಂಜಲಿಃ ॥ ೩೨ ॥

---

೨೬–೨೭. ಕನ್ಯಾರೂಪವನ್ನು ಧರಿಸಿದ ಯಾವಳೊ ಒಬ್ಬ ಸ್ತ್ರೀಯು ದೇವತಾರೂಪಧರನಾದ ಯಾವನೋ ಒಬ್ಬನನ್ನು ಎಲ್ಲಿಯೊ ಒಂದು ಕಡೆ ಕೂಡಿ ಉಪಭೋಗಿಸಿ ಅಂದು ಮೊದಲುಗೊಂಡು ಆ ಮೇಳನವನ್ನೇ ಸ್ಮರಿಸುತ್ತ ಬ್ರಹ್ಮಚರ್ಯವನ್ನು ಆಚರಿಸಿ ಕಾಲಾನುಕ್ರಮದಲ್ಲಿ ನಿಧನಹೊಂದಿದುದಾದರೆ ಅವಳು ದಿವ್ಯರೂಪಧರೆಯಾಗಿ ದಿವ್ಯಭೋಗಗಳನ್ನೇ ಅನುಭವಿಸುವ ಅಪ್ಸರೆಯಾಗಿ ಈ ಲೋಕದಲ್ಲಿ ವಾಸಮಾಡುತ್ತಾಳೆ

೨೮ ಎಲೌ ಲೋಪಾಮುದ್ರೆಯೆ, ಈ ಪ್ರಕಾರವಾಗಿ ದ್ವಿಜಾಗ್ರಣಿಯಾದ ಆ ಶಿವಶರ್ಮನು ಅಪ್ಸರೋಲೋಕದ ವೃತ್ತಾಂತವನ್ನು ಕೇಳುತ್ತಲೆ ಮುಂದು ವರಿದು, ವಿಮಾನದಲ್ಲಿ ಕುಳಿತೇ ಸೂರ್ಯಲೋಕವನ್ನು ಕಂಡನು.

೨೯ ಎಲ್ಲೆಡೆಗಳಲ್ಲಿಯೂ ಕದಂಬಕುಸುಮಗಳ ಕೇಶರಗಳಿಂದ ಸುತ್ತು ವರಿಯಲ್ಪಟ್ಟದೆಯೊ ಎಂಬಂತೆ ಸೂರ್ಯನ ಕಿರಣಗಳಿಂದ ಎತ್ತೆತ್ತಲೂ ಬೆಳಗುತ್ತ ಆ ಲೋಕವು ಬಹು ಮನೋಹರವಾಗಿದ್ದಿತು.

೩೦–೩೨. ವಿಚಿತ್ರವಾದ ಒಂದೇ ಒಂದು ಗಾಲಿಯನ್ನೊಳಗೊಂಡು ಏಳು ಕುದುರೆಗಳು ಹೂಡಿ ಸಾರಥಿಯಾದ ಅರುಣನು ಆ ಕುದುರೆಗಳ ಹಗ್ಗವನ್ನು ಹಿಡಿದು ಕುಳಿತಿರಲು ಅಪ್ಸರೆಯರೂ ಮುನಿಗಳೂ ಗಂಧರ್ವರೂ ಸರ್ಪಗಳೂ ಯಕ್ಷರೂ ರಾಕ್ಷಸರೂ ಇವರೇ ಮೊದಲಾದವರಿಂದ ತುಂಬಿ, ಒಂಬತ್ತು ಸಾವಿರ ಯೋಜನಗಳ ವಿಸ್ತಾರವನ್ನೊಳಗೊಂಡ ರಥದಲ್ಲಿ ಎರಡು ಕೈಗಳಲ್ಲಿಯೂ ಕಮಲ

ತಸ್ಯ ಪ್ರಣಾಮಂ ದೇವೋಽಪಿ ಭ್ರೂಭಂಗೇನಾಽನುಮನ್ಯ ಚ ।
ಅತಿದೂರಂ ನಭೋವರ್ತ್ಮ ವ್ಯತಿಚಕ್ರಾಮ ಸ ಕ್ಷಣಾತ್ ॥ ೩೩ ॥
ಪ್ರಕ್ರಾಂತೇ ದ್ಯುಮಣೌ ದೂರಂ ಶಿವಶರ್ಮಾಽತಿಶರ್ಮವಾನ್ ।
ಪ್ರೋವಾಚ ಭಗವದ್ಭಕ್ತೌ ಕಥಂ ಲಭ್ಯಂ ರವೇಃ ಪದಂ ॥ ೩೪ ॥
ಏತದಿಚ್ಛಾಮ್ಯಹಂ ಶ್ರೋತುಮಾಚಕ್ಷಾಥಾಂ ಮಮಾಽಗ್ರತಃ ।
ಸತಾಂ ಸಾಪ್ತಪದೀ ಮೈತ್ರೀ ತನ್ಮೇ ಮೈತ್ರ್ಯಾ ಪ್ರಣೋದಿತೌ ॥ ೩೫ ॥

ಗಣಾವೂಚತುಃ :—

ಶೃಣು ದ್ವಿಜ ಮಹಾಪ್ರಾಜ್ಞ ತ್ವಯ್ಯಕಥ್ಯಂ ನ ಕಿಂಚನ ।
ಸತ್ಸಂಗಾದೇವ ಸಾಧೂನಾಂ ಸತ್ಕಥಾ ಸಂಪ್ರವರ್ತತೇ ॥ ೩೬ ॥
ನಿಯಂತಾ ಸರ್ವಭೂತಾನಾಂ ಯ ಏಕಃ ಕಾರಣಂ ಪರಂ ।
ಅನಾಮಾ ಗೋತ್ರರಹಿತೋ ರೂಪಾದಿಪರಿವರ್ಜಿತಃ ॥ ೩೭ ॥
ಆವಿರ್ಭಾವತಿರೋಭಾವೌ ಯದ್ಭ್ರೂನರ್ತನವರ್ತಿನೌ ।
ಸ ಏವಂ ವಕ್ತಿ ಸತತಂ ಸರ್ವಾತ್ಮಾ ವೇದಪೂರುಷಃ ॥ ೩೮ ॥

---

ಗಳನ್ನು ಹಿಡಿದು ಸುಖಾಸೀನನಾಗಿದ್ದ ಸೂರ್ಯಭಗವಂತನನ್ನು ಕಂಡು ಆ ಶಿವಶರ್ಮನು ದೂರದಿಂದಲೆ ಕೈಮುಗಿದನು.

೩೩. ಸೂರ್ಯಭಗವಂತನೂ ಸಹ ಆ ಬ್ರಾಹ್ಮಣನ ನಮಸ್ಕಾರವನ್ನು ಭ್ರೂಭಂಗದಿಂದಲೆ ಸ್ವೀಕರಿಸಿ ಅನುಮತಿಸಿದ ಬಳಿಕ, ಒಂದು ಕ್ಷಣಮಾತ್ರದಲ್ಲಿಯೆ ಬಹುದೂರದ ಗಗನ ಮಾರ್ಗವನ್ನು ಮುನ್ನಡೆದು ಹೋದನು.

೩೪. ಆ ದ್ಯುಮಣಿಯು ಬಹು ದೂರ ಹೊರಟುಹೋದ ಮೇಲೆ ತೃಪ್ತನಾದ ಆ ಶಿವಶರ್ಮನು ಭಗವದ್ಭಕ್ತರಾದ ವಿಷ್ಣುಗಣಗಳನ್ನು ಕುರಿತು, ಸೂರ್ಯಲೋಕವು ಲಭಿಸುವುದೆಂತೆಂದು ಪ್ರಶ್ನಿಸಿದನು.

೩೫. ಎಲೈ ಗಣಗಳಿರಾ, ಈ ಸೂರ್ಯಲೋಕವು ಲಭಿಸುವ ವಿಧಾನವೆಂತೆಂದು ಕೇಳಲು ಮನಸ್ಸಾಗುತ್ತಿದೆ. ನೀವು ದಯವಿಟ್ಟು ಹೇಳಬೇಕು. ಜೊತೆಜೊತೆಯಾಗಿ ಏಳು ಹೆಜ್ಜೆಗಳನ್ನು ನಡೆಯುವುದೇ ಕಳೆಯೆಂದು ಹೇಳುತ್ತಾರೆ. ಇದೀಗ ನನ್ನಲ್ಲಿ ನಿಮಗಿರುವ ಆ ಕೆಳೆಯಿಂದಲೆ ಪ್ರೇರಿತರಾಗಿ ಆ ವಿಚಾರವನ್ನು ನನಗೆ ಹೇಳಬೇಕು.

೩೬. ಗಣಗಳು ಹೇಳುತ್ತಾರೆ.—ಅಯ್ಯಾ ಬ್ರಾಹ್ಮಣನೆ, ಪ್ರಾಜ್ಞನಾದ ನಿನಗೆ ಹೇಳಬಾರದ್ದೇನೂ ಇರುವುದಿಲ್ಲ. ಇದರ ಮೇಲೆ, ಸಜ್ಜನರ ಸಹವಾಸದಿಂದಲೆ ಸತ್ಕಥಾಲಾಪವೆಂಬುದು ನಡೆಯುತ್ತದೆ.

೩೭–೩೮. ಸಮಸ್ತ ಭೂತಗಳಿಗೂ ನಿಯಂತೃವಾಗಿ, ಸಮಸ್ತಕ್ಕೂ ಒಂದೇ ಒಂದು ಉತ್ತಮೋತ್ತಮವಾದ ಕಾರಣಸ್ವರೂಪನಾಗಿ, ಹೆಸರು ಗೋತ್ರ ರೂಪ

ಯೋಽಸಾವಾದಿತ್ಯೇ ಪುರುಷಃ ಸೋಽಸಾವಹಮಿತಿ ಸ್ಫುಟಂ ।
ಅಂಧಂತಮಃ ಪ್ರವಿಶಂತಿ ಯೇ ಚೈವಾಽನ್ಯಮುಪಾಸತೇ ॥ ೩೯ ॥
ನಿಶ್ಚಿತಾರ್ಥಾಂ ಶ್ರುತಿಮಿಮಾಂ ಬ್ರಾಹ್ಮಣಾಸೋ ದ್ವಿಜೋತ್ತಮ ।
ತಮೇಕಮುಪತಿಷ್ಠಂತೇ ನಿಶ್ಚಿತ್ಯೇತಿ ಪುನಃ ಪುನಃ ॥ ೪೦ ॥
ಉಪಲಭ್ಯ ಚ ಸಾವಿತ್ರೀಂ ನೋಪತಿಷ್ಠೇತ ಯಃ ಪರಾಂ ।
ಕಾಲೇ ತ್ರಿಕಾಲಂ ಸಪ್ತಾಹಾತ್ಪತೇನ್ನಾಽತ್ರ ಸಂಶಯಃ ॥ ೪೧ ॥
ತಾವತ್ಪ್ರಾತರ್ಜಪಂಸ್ತಿಷ್ಠೇದ್ಯಾವದರ್ಧೋದಯೋ ರವೇಃ ।
ಆಸನಸ್ಥೋ ಜಪೇನ್ಮೌನೀ ಪ್ರತ್ಯಗಾತಾರಕೋದಯಾತ್ ॥ ೪೨ ॥
ಸಾದಿತ್ಯಾಂ ಮಧ್ಯಮಾಂ ಸಂಧ್ಯಾಂ ಜಪೇದಾದಿತ್ಯಸಂಮುಖಃ ।
ಕಾಲಲೋಪೋ ನ ಕರ್ತವ್ಯಸ್ತತಃ ಕಾಲಂ ಪ್ರತೀಕ್ಷಯೇತ್ ॥ ೪೩ ॥

---

ಮೊದಲಾದುವುಗಳಿಂದ ವರ್ಜಿತನಾಗಿ, ಕೇವಲ ಭ್ರೂಭಂಗಮಾತ್ರದಿಂದಲೆ ಜಗತ್ತಿನ ಆವಿರ್ಭಾವ ತಿರೋಭಾವಗಳನ್ನೆಸಗುತ್ತ ಸರ್ವಾತ್ಮನೆನಿಸಿದ ವೇದ ಪುರುಷನಾವನೊ ಅವನೇ ಸಂತತವೂ ಈ ರೀತಿ ಹೇಳುತ್ತಿರುತ್ತಾನೆ.

೩೯ "ಯಾವನು ಸೂರ್ಯಮಂಡಲಮಧ್ಯವರ್ತಿಯಾದ ಪರಮಪುರುಷನೊ ಅವನೇ ನಾನೆಂಬುದು ಸ್ಫುಟವು. ಯಾರು ಆ ಪುರುಷೋತ್ತಮನನ್ನುಳಿದು ಇತರ ದೈವಗಳನ್ನು ಉಪಾಸಿಸುತ್ತಾರೆಯೊ ಅವರು ಅಂಧಂತಮಸ್ಸನ್ನು ಹೊಗುತ್ತಾರ."

೪೦. ನಿಶ್ಚಿತವಾದ ಅರ್ಥವನ್ನೊಳಗೊಂಡ ಈ ಶ್ರುತಿಯನ್ನು ನಿಶ್ಚಿತಜ್ಞಾನ ದಿಂದಲೆ ಅರಿತವರಾದ ಬ್ರಾಹ್ಮಣರು, ಈ ಶ್ರುತ್ಯರ್ಥವನ್ನೇ ವಿಚಾರವಿನಿಮಯ ದಿಂದ ಸ್ಥಿರಗೊಳಿಸಿಕೊಂಡು, ಸೂರ್ಯಮಂಡಲಾಂತರ್ಗತನಾದ ಆ ಪುರುಷೋತ್ತಮನನ್ನೇ ಉಪಾಸಿಸುತ್ತಾರೆ.

೪೧ ಯಾವ ಬ್ರಾಹ್ಮಣನು ಸವಿತೃರೂಪದಿಂದ ಪ್ರಕಾಶಿಸುತ್ತಿರುವ ಪರದೇವತಾತ್ಮಕವಾದ ಮಂತ್ರವನ್ನು (ಸಾವಿತ್ರಿಯನ್ನು) ಪಡೆದೂ ಬೆಳಗ್ಗೆ ಮಧ್ಯಾಹ್ನ ಸಾಯಂಕಾಲಗಳಲ್ಲಿ ಉಪಾಸನೆಮಾಡುವುದಿಲ್ಲವೊ ಅವನು ಏಳು ದಿನಗಳಲ್ಲಿಯೆ ಪತಿತನಾಗುತ್ತಾನೆ.

೪೨–೪೩. ವಿಪ್ರನಾದವನು ಪ್ರಾತಃಕಾಲದಲ್ಲಿ ಸೂರ್ಯನು ಅರ್ಧಭಾಗ ಉದಯಿಸುವವರೆಗೂ, ಸಾಯಂಕಾಲದಲ್ಲಿ ಸೂರ್ಯನು ಮುಳುಗಿ ನಕ್ಷತ್ರಗಳು ಉದಿಸುವವರೆಗೂ, ಮಧ್ಯಾಹ್ನದಲ್ಲಿ ಸೂರ್ಯನಿಗೆ ಅಭಿಮುಖನಾಗಿಯೂ ಕುಳಿತು ಮೌನಿಯಾಗಿ ಸಾವಿತ್ರಿಯನ್ನು ಜಪಿಸತಕ್ಕದ್ದು. ಯಾವ ಸಂದರ್ಭದಲ್ಲಿಯೂ ಕಾಲಲೋಪವನ್ನು ಮಾಡತಕ್ಕದ್ದಲ್ಲ. ಆದುದರಿಂದ ಉಚಿತವಾದ ಕಾಲವನ್ನು ನಿರೀಕ್ಷಿಸಲೇಬೇಕು.

ಕಾಲೇ ಫಲಂತ್ಯೋಷಧಯಃ ಕಾಲೇ ಪುಷ್ಪಂತಿ ಪಾದಪಾಃ ।
ವರ್ಷಂತಿ ತೋಯದಾಃ ಕಾಲೇ ತಸ್ಮಾತ್ಕಾಲಂ ನ ಲಂಘಯೇತ್ ॥ ೪೪ ॥
ಮಂದೇಹದೇಹನಾಶಾರ್ಥಮುದಯಾಸ್ತಮಯೇ ರವಿಃ ।
ಸಮಾಹತೇ ದ್ವಿಜೋತ್ಸೃಷ್ಟಂ ಮಂತ್ರತೋಯಾಂಜಲಿತ್ರಯಂ ॥ ೪೫ ॥
ಗಾಯತ್ರೀಮಂತ್ರತೋಯಾಢ್ಯಂ ದತ್ತಂ ಯೇನಾಂಜಲಿತ್ರಯಂ ।
ಕಾಲೇ ಸವಿತ್ರೇ ಕಿಂ ನಸ್ಯಾತ್ತೇನ ದತ್ತಂ ಜಗತ್ತ್ರಯಂ ॥ ೪೬ ॥
ಕಿಂ ಕಿಂ ನ ಸವಿತಾ ಸೂತೇ ಕಾಲೇ ಸಮ್ಯಗುಪಾಸಿತಃ ।
ಆಯುರಾರೋಗ್ಯಮೈಶ್ವರ್ಯಂ ವಸೂನಿ ಚ ಪಶೂನಿ ಚ ॥ ೪೭ ॥
ಮಿತ್ರಪುತ್ರಕಲತ್ರಾಣಿ ಕ್ಷೇತ್ರಾಣಿ ವಿವಿಧಾನಿ ಚ ।
ಭೋಗಾನಷ್ಟವಿಧಾಂಶ್ಚಾಽಪಿ ಸ್ವರ್ಗಂ ಚಾಽಪ್ಯಪವರ್ಗಕಂ ॥ ೪೮ ॥
ಅಷ್ಟಾದಶಸು ವಿದ್ಯಾಸು ಮೀಮಾಂಸಾಽತಿಗರೀಯಸೀ ।
ತತೋಽಪಿ ತರ್ಕಶಾಸ್ತ್ರಾಣಿ ಪುರಾಣಂ ತೇಭ್ಯ ಏವ ಚ ॥ ೪೯ ॥
ತತೋಽಪಿ ಧರ್ಮಶಾಸ್ತ್ರಾಣಿ ತೇಭ್ಯೋ ಗುರ್ವೀ ಶ್ರುತಿರ್ದ್ವಿಜ ।
ತತೋಽಪ್ಯುಪನಿಷಚ್ಛ್ರೇಷ್ಠಾ ಗಾಯತ್ರೀ ಚ ತತೋಽಧಿಕಾ ॥ ೫೦ ॥

---

೪೪. ಅಯ್ಯಾ ಶಿವಶರ್ಮನೆ, ಉಚಿತವಾದ ಕಾಲದಲ್ಲಿಯೆ ಓಷಧಿಗಳೆಲ್ಲ ಫಲಿಸುತ್ತವೆ. ವೃಕ್ಷಗಳೆಲ್ಲ ಪುಷ್ಪಿಸುತ್ತವೆ ಮೇಘಗಳು ಮಳೆಗರೆಯುತ್ತವೆ. ಆದುದರಿಂದ ಕಾಲವನ್ನು ಮೀರಬಾರದು

೪೫. ಸೂರ್ಯನು ಉದಯಾಸ್ತಮಯಕಾಲಗಳಲ್ಲಿ ಮಂದೇಹ ರಾಕ್ಷಸರ ನಾಶಕ್ಕಾಗಿ ಬ್ರಾಹ್ಮಣರು ಕೊಡುವ ಮೂರು ಬೊಗಸೆ ಮಂತ್ರಜಲವನ್ನು ಬಯಸುತ್ತಿರುತ್ತಾನೆ.

೪೬. ಯಾವನು ಗಾಯತ್ರೀಮಂತ್ರದಿಂದ ಕೂಡಿದ ಮೂರು ಬೊಗಸೆಗಳ ನೀರನ್ನು ಸೂರ್ಯನನ್ನುದ್ದೇಶಿಸಿ ಅರ್ಘ್ಯಕೊಡುತ್ತಾನೆಯೊ ಅವನು ಮೂರು ಲೋಕಗಳನ್ನೇ ದಾನಮಾಡಿದವನಂತೆ ಎಣಿಸಲ್ಪಡುವನು.

೪೭–೪೮. ಸಕಾಲದಲ್ಲಿ ವಿಧ್ಯುಕ್ತವಾಗಿ ಉಪಾಸಿಸಲ್ಪಟ್ಟ ಸೂರ್ಯನು ಏನೇನನ್ನು ತಾನೆ ದಯಪಾಲಿಸುವುದಿಲ್ಲ ? ಆಯುಸ್ಸು ಆರೋಗ್ಯ ಐಶ್ವರ್ಯ ಧನ ಪಶುಗಳು ಮಿತ್ರ ಪುತ್ರ ಕಳತ್ರ ವಿವಿಧವಾದ ಕ್ಷೇತ್ರಗಳು ಎಂಟು ಬಗೆಯ ಭೋಗಗಳು (ಸೌಂಗಧ್ಯ ವನಿತಾ ವಸ್ತ್ರ ಗೀತ ತಾಂಬೂಲ ಭೋಜನ ವಾಹನ ಮಂದಿರ) ಸ್ವರ್ಗ ಕಡಗೆ ಮೋಕ್ಷ—ಇವುಗಳೆಲ್ಲವನ್ನೂ ಉಪಾಸನೆಯಿಂದ ಸಂತುಷ್ಟನಾದ ಸೂರ್ಯನು ಉಪಾಸಕನಿಗೆ ಅನುಗ್ರಹಿಸುತ್ತಾನೆ.

೪೯–೫೦. ಹದಿನೆಂಟು ವಿದ್ಯೆಗಳಲ್ಲಿಯೂ ಮೀಮಾಂಸಾ ಶಾಸ್ತ್ರವು ಬಹಳ ಶ್ರೇಷ್ಠವಾದುದು. ಅದಕ್ಕಿಂತಲೂ ತರ್ಕ ಶಾಸ್ತ್ರವೂ, ಅದಕ್ಕಿಂತಲೂ ಪುರಾಣ

ದುರ್ಲಭಾ ಸರ್ವಮಂತ್ರೇಷು ಗಾಯತ್ರೀ ಪ್ರಣವಾನ್ವಿತಾ ।
ನ ಗಾಯತ್ರ್ಯಾಽಧಿಕಂ ಕಿಂಚಿತ್ತ್ರಯೀಷು ಪರಿಗೀಯತೇ ॥ ೫೧ ॥
ನ ಗಾಯತ್ರೀಸಮೋ ಮಂತ್ರೋ ನ ಕಾಶೀಸದೃಶೀ ಪುರೀ ।
ನ ವಿಶ್ವೇಶಸಮಂ ಲಿಂಗಂ ಸತ್ಯಂ ಸತ್ಯಂ ಪುನಃ ಪುನಃ ॥ ೫೨ ॥
ಗಾಯತ್ರೀ ವೇದಜನನೀ ಗಾಯತ್ರೀ ಬ್ರಾಹ್ಮಣಪ್ರಸೂಃ ।
ಗಾತಾರಂ ತ್ರಾಯತೇ ಯಸ್ಮಾದ್ಗಾಯತ್ರೀ ತೇನ ಗೀಯತೇ ॥ ೫೩ ॥
ವಾಚ್ಯವಾಚಕಸಂಬಂಧೋ ಗಾಯತ್ರ್ಯಾಃ ಸವಿತುರ್ದ್ವಯೋಃ ।
ವಾಚ್ಯೋಽಸೌ ಸವಿತಾ ಸಾಕ್ಷಾದ್ಗಾಯತ್ರೀ ವಾಚಿಕಾ ಪರಾ ॥ ೫೪ ॥
ಪ್ರಭಾವೇಣೈವ ಗಾಯತ್ರ್ಯಾಃ ಕ್ಷತ್ರಿಯಃ ಕೌಶಿಕೋ ವಶೀ ।
ರಾಜರ್ಷಿತ್ವಂ ಪರಿತ್ಯಜ್ಯ ಬ್ರಹ್ಮರ್ಷಿಪದಮೇಯಿವಾನ್ ॥ ೫೫ ॥
ಸಾಮರ್ಥ್ಯಂ ಪ್ರಾಪ ಚಾಽತ್ಯುಚ್ಚೈರನ್ಯದ್ಭುವನಸರ್ಜನೇ ।
ಕಿಂ ಕಿಂ ನ ದದ್ಯಾದ್ಗಾಯತ್ರೀ ಸಮ್ಯಗೇವಮುಪಾಸಿತಾ ॥ ೫೬ ॥

---

ಗಳೂ ಅದಕ್ಕಿಂತಲೂ ಧರ್ಮಶಾಸ್ತ್ರಗಳೂ, ಅವುಗಳಿಗಿಂತಲೂ ವೇದಶ್ರುತಿಯೂ ಅದಕ್ಕಿಂತಲೂ ಉಪನಿಷತ್ತೂ ಅದಕ್ಕಿಂತಲೂ ಗಾಯತ್ರಿಯೂ ಶ್ರೇಷ್ಠವಾದುದು.

೫೧ ಸಮಸ್ತ ಮಂತ್ರಗಳಲ್ಲಿಯೂ ಪ್ರಣವಸಹಿತವಾದ ಗಾಯತ್ರೀ ಮಂತ್ರವು ದುರ್ಲಭವಾದುದು. ಗಾಯತ್ರೀಮಂತ್ರಕ್ಕಿಂತಲೂ ಮೇಲಾದ ಮಂತ್ರವು ವೇದಗಳಲ್ಲಿ ಯಾವುದೂ ಹೇಳಿರುವುದಿಲ್ಲ.

೫೨ ಅಯ್ಯಾ ಬ್ರಾಹ್ಮಣನೆ, ಗಾಯತ್ರಿಗೆ ಸಮಾನವಾದ ಮಂತ್ರವಿಲ್ಲ. ಕಾಶೀಪಟ್ಟಣಕ್ಕೆ ಸಮಾನವಾದ ಪಟ್ಟಣವಿಲ್ಲ. ವಿಶ್ವೇಶ್ವರನಿಗೆ ಸಮಾನವಾದ ಲಿಂಗವಿಲ್ಲ ಇದು ಮೂರು ಮೂರು ಬಾರಿಗೂ ಸತ್ಯವಾದುದು

೫೩. ಗಾಯತ್ರಿಯು ವೇದಗಳಿಗೆಲ್ಲ ತಾಯಿ ಬ್ರಾಹ್ಮಣರನ್ನು ಪಡೆದವಳು ಆ ತಾಯಿಯೆ ಹಾಡಿದವನನ್ನು ಕಾಪಾಡುವುದಾದುದರಿಂದ ಇದು ಗಾಯಿತ್ರಿ ಎಂದು ಹೇಳಲ್ಪಟ್ಟದೆ

೫೪. ಸೂರ್ಯನಿಗೂ ಗಾಯತ್ರೀಮಂತ್ರಕ್ಕೂ ವಾಚ್ಯವಾಚಕ ಸಂಬಂಧ ವಿರುತ್ತದೆ. ಸೂರ್ಯನು ವಾಚ್ಯನಾದರೆ ಗಾಯತ್ರೀ ಮಂತ್ರವು ವಾಚಿಕ ವಾದುದು.

೫೫. ಈ ಗಾಯತ್ರಿಯ ಪ್ರಭಾವದಿಂದಲೇ ಕ್ಷತ್ರಿಯನಾದ ಕೌಶಿಕನು ಸಂಯಮಿಯಾಗಿ ರಾಜರ್ಷಿತ್ವವನ್ನು ಬಿಟ್ಟು ಬ್ರಹ್ಮರ್ಷಿಪದವನ್ನು ಪಡೆದನು.

೫೬ ಅವನು ಈ ಗಾಯತ್ರಿಯ ಪ್ರಭಾವದಿಂದಲೆ ಇನ್ನೊಂದು ಸ್ವರ್ಗ ವನ್ನು ಸೃಜಿಸುವ ಸಾಮರ್ಥ್ಯವನ್ನು ಪಡೆದನು ಈ ವಿಶ್ವಾಮಿತ್ರನಂತೆಯೆ

ನ ಬ್ರಾಹ್ಮಣೋ ವೇದಪಾಠಾನ್ನಶಾಸ್ತ್ರಪಠನಾದಪಿ ।
ದೇವ್ಯಾಸ್ತ್ರಿಕಾಲಮಭ್ಯಾಸಾದ್ಬ್ರಾಹ್ಮಣಃ ಸ್ಯಾದ್ಧಿ ನಾಽನ್ಯಥಾ ॥ ೫೭ ॥
ಗಾಯತ್ರ್ಯೇವ ಪರಂ ವಿಷ್ಣುರ್ಗಾಯತ್ರ್ಯೇವ ಪರಃ ಶಿವಃ ।
ಗಾಯತ್ರ್ಯೇವ ಪರೋ ಬ್ರಹ್ಮಾ ಗಾಯತ್ರ್ಯೇವ ತ್ರಯೀ ತತಃ ॥ ೫೮ ॥
ದೇವತ್ರಯಂ ಸ ಭಗವಾನಂಶುಮಾಲೀ ದಿವಾಕರಃ ।
ಸರ್ವೇಷಾಂ ಮಹಸಾಂ ರಾಶಿಃ ಕಾಲಃ ಕಾಲಪ್ರವರ್ತಕಃ ॥ ೫೯ ॥
ಅರ್ಕಮುದ್ದಿಶ್ಯ ಸತತಮಸ್ಮಲ್ಲೋಕನಿವಾಸಿನಃ ।
ಶ್ರುತಿಂ ಹ್ಯುದಾಹರಂತೀಮಾಂ ಸಾರಾಽಸಾರವಿವೇಕಿನಃ ॥ ೬೦ ॥

ಏಷೋಹ ದೇವಃ ಪ್ರದಿಶೋಽನುಸರ್ವಾಃ
ಪೂರ್ವೋಹ ಜಾತಃ ಸ ಉ ಗರ್ಭೇ ಅಂತಃ ।
ಸ ಏವ ಜಾತಃ ಸ ಜನಿಷ್ಯಮಾಣಃ
ಪ್ರತ್ಯಙ್ಜನಾಸ್ತಿಷ್ಠತಿ ಸರ್ವತೋಮುಖಃ ॥ ೬೧ ॥

---

ಚೆನ್ನಾಗಿ ಉಪಾಸನೆ ಮಾಡಿದ್ದಾದರೆ ಗಾಯತ್ರಿಯು ಏನೇನನ್ನು ತಾನೆ ಅನುಗ್ರಹಿಸುವುದಿಲ್ಲ ?

೫೭. ವೇದಪಠನದಿಂದಾಗಲಿ ಶಾಸ್ತ್ರಾಭ್ಯಾಸಂಗದಿಂದಾಗಲಿ ಬ್ರಾಹ್ಮಣನು ಬ್ರಾಹ್ಮಣನೆನಿಸುವುದಿಲ್ಲ. ತ್ರಿಕಾಲಗಳಲ್ಲಿಯೂ ಗಾಯತ್ರಿಯನ್ನು ಉಪಾಸಿಸಿದರೇನೇ ಬ್ರಾಹ್ಮಣನೆನಿಸಿಕೊಳ್ಳುತ್ತಾನೆ.

೫೮. ಗಾಯತ್ರಿಯೇ ಸರ್ವೋತ್ತಮನಾದ ವಿಷ್ಣುವು. ಅದೇ ಪರಶಿವನೂ ಪರಬ್ರಹ್ಮನೂ ಆಗಿರುವುದು. ವೇದವೂ ಗಾಯತ್ರೀಸ್ವರೂಪವಾದುದೇ.

೫೯. ಸೂರ್ಯನು ಬ್ರಹ್ಮವಿಷ್ಣು ಮಹೇಶ್ವರಾತ್ಮಕನಾದವನು. ಸಮಸ್ತ ತೇಜಸ್ಸುಗಳ ರಾಶಿಯಾಗಿ ಕಾಲಸ್ವರೂಪನೂ ಕಾಲಪ್ರವರ್ತಕನೂ ಆಗಿರುವನು

೬೦ ನಮ್ಮ ವೈಕುಂಠಲೋಕದಲ್ಲಿ ವಾಸಿಸುತ್ತಿರುವ ಸಾರಾಸಾರ ವಿವೇಕಿಗಳಾದ ಮಹನೀಯರು ಸೂರ್ಯನನ್ನು ಕುರಿತು ನಿರಂತರವೂ ಈ ಶ್ರುತಿಯನ್ನು ಉದಾಹರಿಸುತ್ತಾರೆ.

೬೧ ಈ ಸೂರ್ಯದೇವನೇ ಪ್ರದಿಶೆಗಳನ್ನೂ ಸಮಸ್ತ ದಿಕ್ಕುಗಳನ್ನೂ ಅಡ್ಡಲಾಗಿಯೂ ಮೇಲಕ್ಕೂ ಕೆಳಕ್ಕೂ ವ್ಯಾಪಿಸಿ, ಅನಾದಿನಿಧನನಾಗಿರುವನು. ಆತನೇ ಮಾತೃಗರ್ಭದಲ್ಲಿ ನೆಲಸಿರತಕ್ಕವನು. ಅವನೇ ಹುಟ್ಟಿರುವವನೂ ಮುಂದಕ್ಕೆ ಹುಟ್ಟುವವನೂ ಆದವನು. ಪ್ರತಿಯೊಂದು ಪದಾರ್ಥವನ್ನೂ ಸಂಬಂಧಿಸಿ, ಕಣ್ಣು, ತಲೆ, ಕುತ್ತಿಗೆ, ಕೈಕಾಲುಗಳು ಎಲ್ಲವುಗಳಲ್ಲಿಯೂ ವ್ಯಾಪಿಸಿ ಸರ್ವಶಕ್ತಿಮಯನಾಗಿ ವಿರಾಜಿಸುತ್ತಿರುವನು.

ಸದೈವಮುಪದಿಷ್ಟೈರನ್ಯೈಃ ಸೂಕ್ತೈರತಂದ್ರಿತಾಃ ।
ಯೇ ನಮಂತ್ಯತ್ರ ತೇ ವಿಪ್ರಾ ವಿಪ್ರಾ ಭಾಸ್ಕರಸನ್ನಿಭಾಃ ॥ ೬೨ ॥
ಪುಷ್ಯಾಽರ್ಕೇಽಪ್ಯಥ ಹಸ್ತಾಽರ್ಕೇ ಮೂಲಾರ್ಕೇಽಪ್ಯಥವಾ ದ್ವಿಜ ।
ಉತ್ತರಾಽರ್ಕೇಽಥ ಯತ್ಕಾರ್ಯಂ ತತ್ಫಲತ್ಯೇವ ನಾಽನ್ಯಥಾ ॥ ೬೩ ॥
ಪೌಷೇ ಮಾಸ್ಯರ್ಕದಿವಸೇ ಯಃ ಸ್ನಾತ್ವಾ ಭಾಸ್ಕರೋದಯೇ ।
ದಾನಂ ಹೋಮಂ ಜಪಂ ಕುರ್ಯಾದರ್ಚಾಮರ್ಕಸ್ಯ ಸುವ್ರತಃ ॥ ೬೪ ॥
ಶ್ರದ್ಧಾವಾನೇಕಭಕ್ತಶ್ಚ ಕಾಮಕ್ರೋಧವಿವರ್ಜಿತಃ ।
ಸಹಾಽಪ್ಸರೋಭಿರ್ದ್ಯುತಿಮಾನ್ಸವಸೇದತ್ರ ಭೋಗವಾನ್ ॥ ೬೫ ॥
ಅಯನೇ ವಿಷುವೇ ಚಾಽಪಿ ಷಡಶೀತಿಮುಖೇಷು ವಾ ।
ವಿಷ್ಣುಪದ್ಯಾಂ ಚ ಯೇ ದದ್ಯುರ್ಮಹಾದಾನಾನಿ ಸುವ್ರತಾಃ ॥ ೬೬ ॥
ತಿಲಾನ್ ಜುಹ್ವತಿ ಸಾಜ್ಯಾಂಶ್ಚ ಬ್ರಾಹ್ಮಣಾನ್ಭೋಜಯಂತಿ ಚ ।
ಪಿತೄನುದ್ದಿಶ್ಯ ಚ ಶ್ರಾದ್ಧಂ ಯೇ ಕುರ್ವಂತಿ ವಿಪಶ್ಚಿತಃ ॥ ೬೭ ॥
ಮಹಾಪೂಜಾಂ ಚ ಯೇ ಕುರ್ಯುರ್ಮಹಾಮಂತ್ರಾನ್ ಜಪಂತಿ ಚ ।
ತೇಽತ್ರ ವೈಕರ್ತನೇ ಲೋಕೇ ವಿಕರ್ತನಸಮಪ್ರಭಾಃ ॥ ೬೮ ॥

---

೬೨. ಯಾರಾದರೆ "ಉದುತ್ಯಂ ಜಾತವೇದಸಂ ದೇವಂ ವಹಂತಿ ಕೇತವಃ । ದೃಶೇ ವಿಶ್ವಾಯ ಸೂರ್ಯಂ" ಇತ್ಯಾದಿ ಸೂರ್ಯ ದೇವತಾಕವಾದ ಸೂಕ್ತಗಳಿಂದ ಸೂರ್ಯಭಗವಂತನನ್ನು ಉಪಾಸಿಸುತ್ತಾರೆಯೋ ಅವರು ಸೂರ್ಯನಿಗೆ ಸಮಾನವಾದ ತೇಜಶ್ಶಾಲಿಗಳಾಗುತ್ತಾರೆ.

೬೩. ಪುಷ್ಯಮಾಸದ ಭಾನುವಾರಗಳಲ್ಲಿಯೂ, ಹಸ್ತಾನಕ್ಷತ್ರದೊಡಗೂಡಿದ ಭಾನುವಾರದಲ್ಲಿಯೂ ಮೂಲಾನಕ್ಷತ್ರಸಹಿತವಾದ ಭಾನುವಾರದಲ್ಲಿಯೂ ಉತ್ತರಾನಕ್ಷತ್ರಯುಕ್ತವಾದ ಭಾನುವಾರದಲ್ಲಿಯೂ ಯಾವ ಕಾರ್ಯವನ್ನು ಮಾಡಿದರೂ ಸಫಲವೆನಿಸುತ್ತದೆ

೬೪-೬೫ ಪುಷ್ಯಮಾಸದ ಭಾನುವಾರದ ದಿನ ಸೂರ್ಯೋದಯದಲ್ಲಿ ಸ್ನಾನ ಮಾಡಿ ದಾನ ಹೋಮ ಜಪಗಳನ್ನು ಮಾಡುವುದಲ್ಲದೆ ಸೂರ್ಯಾರ್ಚನೆಯನ್ನೂ ಮಾಡಿ, ಶ್ರದ್ಧೆಯಿಂದ ಒಪ್ಪೊತ್ತುಮಾತ್ರ ಊಟಮಾಡಿ ಕಾಮ ಕ್ರೋಧಗಳನ್ನು ದೂರಗೊಳಿಸಿದವನು ಅಪ್ಸರೆಯರೊಡನೆ ಈ ಸೂರ್ಯಲೋಕದಲ್ಲಿ ಮಹಾ ತೇಜಸ್ಸಂಪನ್ನನಾಗಿ ವಾಸಮಾಡುತ್ತಾನೆ

೬೬-೬೮. ಯಾರು ಮಕರ ಕರ್ಕಾಟಕ ಸಂಕ್ರಮಣಗಳಲ್ಲಿಯೂ, ತುಲಾ ಮೇಷ ಸಂಕ್ರಮಣಗಳಲ್ಲಿಯೂ, ಧನುಸ್ಸು ಮಿಥುನ ಕನ್ಯಾ ಮೀನ ಸಂಕ್ರಮಣಗಳಲ್ಲಿಯೂ, ವೃಷ ವೃಶ್ಚಿಕ ಸಿಂಹ ಕುಂಭ ಸಂಕ್ರಾಂತಿಗಳಲ್ಲಿಯೂ ಮಹಾದಾನಗಳನ್ನು ಮಾಡುವ ವ್ರತಿಗಳೋ, ಯಜ್ಞೇಶ್ವರನಲ್ಲಿ ತಿಲಮಿಶ್ರವಾದ ಆಜ್ಯವನ್ನು

ನ ದರಿದ್ರಾ ನ ದುಃಖಾರ್ತಾ ನ ವ್ಯಾಧಿಪರಿಪೀಡಿತಾಃ ।
ಸಂಕ್ರಮೇಷ್ವರ್ಕಭಕ್ತಾ ಯೇ ನ ವಿರೂಪಾ ನ ದುರ್ಭಗಾಃ ॥ ೬೯ ॥
ಸಂಕ್ರಮೇಷು ನ ಯೈರ್ದತ್ತಂ ನ ಸ್ನಾತಂ ತೀರ್ಥವಾರಿಷು ।
ವಿಶೇಷಹೋಮೋ ನ ಕೃತಃ ಕಪಿಲಾಜ್ಯಾಪ್ಲುತೈಸ್ತಿಲೈಃ ॥ ೭೦ ॥
ತೇ ದೃಶ್ಯಂತೇ ಪ್ರತಿದ್ವಾರಂ ವಿಹೀನನಯನಾನನಾಃ ।
ದೇಹಿ ದೇಹೀತಿ ಜಲ್ಪಂತೋ ದೇಹಿನಃ ಸ ಪಟಚ್ಚರಾಃ ॥ ೭೧ ॥
ಸಮಂ ಕೃಷ್ಣಲಕೇನಾಽಪಿ ಯೋ ದದ್ಯಾತ್ಕಾಂಚನಂ ಕೃತೀ ।
ಸೂರ್ಯಗ್ರಹೇ ಕುರುಕ್ಷೇತ್ರೇ ಸ ವಸೇದತ್ರ ಪುಣ್ಯಭಾಕ್ ॥ ೭೨ ॥
ಸರ್ವಂ ಗಂಗಾಮಯಂ ತೋಯಂ ಸರ್ವೇ ಬ್ರಹ್ಮಸಮಾ ದ್ವಿಜಾಃ ।
ಸರ್ವಂ ದೇಯಂ ಸ್ವರ್ಣಸಮಂ ರಾಹುಗ್ರಸ್ತೇ ದಿವಾಕರೇ ॥ ೭೩ ॥
ದತ್ತಂ ಜಪ್ತಂ ಹುತಂ ಸ್ನಾತಂ ಯತ್ಕಿಂಚಿತ್ಸದನುಷ್ಠಿತಂ ।
ಭಾನೂಪರಾಗೇ ಶ್ರಾದ್ಧಾದಿ ತದ್ಧೇತುರ್ಬ್ರಧ್ನಸನ್ನಿಧೇಃ ॥ ೭೪ ॥

---

ಹೋಮಮಾಡಿ ಬ್ರಾಹ್ಮಣರಿಗೆ ಭೋಜನಮಾಡಿಸಿ ಪಿತೃಗಳನ್ನುದ್ದೇಶಿಸಿ ಶ್ರಾದ್ಧವನ್ನು ಮಾಡುವ ಪಂಡಿತರೋ, ಮಹಾಪೂಜೆಗಳನ್ನು ಮಾಡಿ ಮಹಾಮಂತ್ರ ಜಪಗಳನ್ನು ಜಪಿಸುವವರೊ ಅವರು ಈ ಸೂರ್ಯಲೋಕದಲ್ಲಿ ಸೂರ್ಯನಿಗೆ ಸಮಾನವಾದ ತೇಜಸ್ಸನ್ನೊಳಗೊಂಡು ವಾಸಮಾಡುತ್ತಾರೆ

೬೯. ಸಂಕ್ರಮಣ ಕಾಲಗಳಲ್ಲಿ ಸೂರ್ಯನನ್ನು ಭಕ್ತಿಯಿಂದ ಆರಾಧಿಸಿದವರು ದರಿದ್ರರೂ ದುಃಖಕ್ಕೊಳಗಾದವರೂ ರೋಗಕ್ಕೆ ತುತ್ತಾಗಿ ನರಳುತ್ತಿರುವವರೂ ವಿರೂಪರೂ ದುರ್ಭಗರೂ ಆಗುವುದಿಲ್ಲ.

೭೦. ಸಂಕ್ರಮಣ ಕಾಲಗಳಲ್ಲಿ ದಾನಮಾಡದವರೂ ತೀರ್ಥಗಳಲ್ಲಿ ಸ್ನಾನ ಮಾಡದವರೂ ಕಪಿಲೆ ಗೋವುಗಳ ತುಪ್ಪದಲ್ಲಿ ನೆನೆಸಿದ ಎಳ್ಳನ್ನು ಹೋಮ ಮಾಡದವರೂ ಈ ಲೋಕದಲ್ಲಿ ವಾಸಮಾಡುವುದಿಲ್ಲ

೭೧. ಅವರು ಕಣ್ಣಿಲ್ಲದವರಾಗಿ ಹರಕುಬಟ್ಟೆಯನ್ನುಟ್ಟು ಮನೆಮನೆಯ ಬಾಗಿಲುಗಳಲ್ಲಿಯೂ ದೇಹಿ ದೇಹಿ ಎಂದು ಒರಲುವ ತಿರುಕರಾಗಿ ಹುಟ್ಟುತ್ತಾರೆ.

೭೨. ಕುರುಕ್ಷೇತ್ರದಲ್ಲಿ ಸೂರ್ಯಗ್ರಹಣಕಾಲದಲ್ಲಿ ಒಂದು ಗುಂಜಿ ಪ್ರಮಾಣದಷ್ಟಾದರೂ ಸುವರ್ಣವನ್ನು ದಾನಮಾಡಿದ ಪುಣ್ಯಶಾಲಿಯು ಈ ಸೂರ್ಯಲೋಕದಲ್ಲಿ ವಾಸಮಾಡುತ್ತಾನೆ

೭೩. ರಾಹುಗ್ರಸ್ತವಾದ ಸೂರ್ಯಗ್ರಹಣಕಾಲದಲ್ಲಿ ಸಮಸ್ತಜಲವೂ ಗಂಗಾಜಲಕ್ಕೆ ಸಮಾನವಾದದ್ದು. ಸಕಲಬ್ರಾಹ್ಮಣರೂ ಸಾಕ್ಷಾತ್‌ಬ್ರಹ್ಮನಿಗೆ ಸಮಾನರಾದವರೇ. ಕೊಡತಕ್ಕ ಸಮಸ್ತವೂ ಸ್ವರ್ಣಕ್ಕೆ ಸಮಾನವಾದುದೇ.

೭೪. ದಿನವೂ ಜಪ ಹೋಮ ಮತ್ತಾವುದಾದರೂ ಸತ್ಕರ್ಮಾನುಷ್ಠಾನ

**ರವಿವಾರೇ ಸಂಕ್ರಮಶ್ಚೇದುಪರಾಗೋಽಥವಾ ಭವೇತ್ ।**
**ತದಾ ಯದರ್ಜಿತಂ ತದಿಹಾಕ್ಷಯಮಾಪ್ಯತೇ ॥ ೭೫ ॥**
**ಭಾನುವಾರೋ ಯದಾ ಷಷ್ಠ್ಯಾಂ ಸಪ್ತಮ್ಯಾಮಥ ಜಾಯತೇ ।**
**ತದಾ ಯತ್ಸುಕೃತಂ ಕರ್ಮ ಕೃತಂ ತದಿಹ ಭುಜ್ಯತೇ ॥ ೭೬ ॥**
**ಹಂಸೋ ಭಾನುಃ ಸಹಸ್ರಾಂಶುಸ್ತಪನಸ್ತಾಪನೋ ರವಿಃ ।**
**ವಿಕರ್ತನೋ ವಿವಸ್ವಾಂಶ್ಚ ವಿಶ್ವಕರ್ಮಾ ವಿಭಾವಸುಃ ॥ ೭೭ ॥**
**ವಿಶ್ವರೂಪೋ ವಿಶ್ವಕರ್ತಾ ಮಾರ್ತಂಡೋ ಮಿಹಿರೋಽಂಶುಮಾನ್ ।**
**ಆದಿತ್ಯಶ್ಚೋಷ್ಣಗುಃ ಸೂರ್ಯೋಽರ್ಯಮಾ ಬ್ರಧ್ನೋ ದಿವಾಕರಃ ॥ ೭೮ ॥**
**ದ್ವಾದಶಾತ್ಮಾ ಸಪ್ತಹಯೋ ಭಾಸ್ಕರೋಽಹಸ್ಕರಃ ಖಗಃ ।**
**ಸೂರಃ ಪ್ರಭಾಕರಃ ಶ್ರೀಮಾಂಲ್ಲೋಕಚಕ್ಷುರ್ಗ್ರಹೇಶ್ವರಃ ॥ ೭೯ ॥**
**ತ್ರಿಲೋಕೇಶೋ ಲೋಕಸಾಕ್ಷೀ ತಮೋಽರಿಃ ಶಾಶ್ವತಃ ಶುಚಿಃ ।**
**ಗಭಸ್ತಿಹಸ್ತಸ್ತೀವ್ರಾಂಶುಸ್ತರಣಿಃ ಸುಮಹೋಽರಣಿಃ ॥ ೮೦ ॥**
**ದ್ಯುಮಣಿರ್ಹರಿದಶ್ವೋಽರ್ಕೋ ಭಾನುಮಾನ್ಭಯನಾಶನಃ ।**
**ಛಂದೋಽಶ್ವೋ ವೇದವೇದ್ಯಶ್ಚ ಭಾಸ್ವಾನ್ಪೂಷಾ ವೃಷಾಕಪಿಃ ॥ ೮೧ ॥**

---

ಶ್ರಾದ್ಧವೇ ಮೊದಲಾದವು — ಇವೆಲ್ಲವನ್ನೂ ಸೂರ್ಯಗ್ರಹಣಕಾಲದಲ್ಲಿ ಆಚರಿಸಿದ್ದೇ ಆದರೆ, ಸೂರ್ಯಸನ್ನಿಧಿಯನ್ನು ದೊರಕಿಸುವುದಕ್ಕೆ ಕಾರಣವಾಗುತ್ತವೆ

೭೫. ಭಾನುವಾರದ ದಿನ ಬರುವ ಸಂಕ್ರಮಣ ಅಥವಾ ಗ್ರಹಣಗಳಲ್ಲಿ ಯಾವ ಪುಣ್ಯವನ್ನು ಸಂಪಾದಿಸಲಾಗುವುದೊ ಆ ಪುಣ್ಯದ ಫಲವಾಗಿಯೆ ಅಕ್ಷಯವಾದ ಈ ಸೂರ್ಯಲೋಕವು ದೊರೆಯುತ್ತದೆ.

೭೬ ಷಷ್ಠೀಸಪ್ತಮಿಗಳಂದು ಭಾನುವಾರವು ಬಂದುದಾದರೆ ಅ ದಿನ ಆಚರಿಸುವ ಸತ್ಕರ್ಮದ ಫಲವನ್ನು ಈ ಸೂರ್ಯಲೋಕದಲ್ಲಿ ಅನುಭವಿಸಲಾಗುತ್ತದೆ.

೭೭–೮೮ ಹಂಸ, ಭಾನು, ಸಹಸ್ರಾಂಶು, ತಪನ, ತಾಪನ, ರವಿ, ವಿಕರ್ತನ, ವಿವಸ್ವಂತ, ವಿಶ್ವಕರ್ಮ, ವಿಭಾವಸು, ವಿಶ್ವರೂಪ, ವಿಶ್ವಕರ್ತ, ಮಾರ್ತಂಡ, ಮಿಹಿರ, ಅಂಶುಮಂತ, ಆದಿತ್ಯ, ಉಷ್ಣಗು, ಸೂರ್ಯ, ಅರ್ಯಮ, ಬ್ರಧ್ನ, ದಿವಾಕರ, ದ್ವಾದಶಾತ್ಮ, ಸಪ್ತಹಯ, ಭಾಸ್ಕರ, ಅಹಸ್ಕರ, ಖಗ, ಸೂರ, ಪ್ರಭಾಕರ, ಶ್ರೀಮಂತ, ಲೋಕಚಕ್ಷು, ಗ್ರಹೇಶ್ವರ, ತ್ರಿಲೋಕೇಶ, ಲೋಕಸಾಕ್ಷಿ, ತಮೋರಿ, ಶಾಶ್ವತ, ಶುಚಿ, ಗಭಸ್ತಿಹಸ್ತ, ತೀವ್ರಾಂಶು, ತರಣಿ, ಸುಮಹಾನ್, ಅರಣಿ, ದ್ಯುಮಣಿ, ಹರಿದಶ್ವ, ಅರ್ಕ, ಭಾನುಮಂತ, ಭಯನಾಶನ, ಛಂದೋಶ್ವ, ವೇದವೇದ್ಯ, ಭಾಸ್ವಾನ್, ಪೂಷ, ವೃಷಾಕಪಿ,

ಏಕಚಕ್ರರಥೋ ಮಿತ್ರೋ ಮಂದೇಹಾರಿಸ್ತಮಿಸ್ರಹಾ ।
ದೈತ್ಯಹಾ ಪಾಪಹರ್ತಾ ಚ ಧರ್ಮೋ ಧರ್ಮಪ್ರಕಾಶಕಃ ॥ ೮೨ ॥
ಹೇಲಿಕಶ್ಚಿತ್ರಭಾನುಶ್ಚ ಕಲಿಘ್ನಸ್ತಾರ್ಕ್ಷ್ಯವಾಹನಃ ।
ದಿಕ್ಪತಿಃ ಪದ್ಮಿನೀನಾಥಃ ಕುಶೇಶಯಕರೋ ಹರಿಃ ॥ ೮೩ ॥
ಘರ್ಮರಶ್ಮಿರ್ದುರ್ನಿರೀಕ್ಷ್ಯಶ್ಚಂಡಾಂಶುಃ ಕಶ್ಯಪಾತ್ಮಜಃ ।
ಏಭಿಃ ಸಪ್ತತಿಸಂಖ್ಯಾಕೈಃ ಪುಣ್ಯೈಃ ಸೂರ್ಯಸ್ಯ ನಾಮಭಿಃ ॥ ೮೪ ॥
ಪ್ರಣವಾದಿಚತುರ್ಥ್ಯಂತೈರ್ನಮಸ್ಕಾರಸಮನ್ವಿತೈಃ ।
ಪ್ರತ್ಯೇಕಮುಚ್ಚರನ್ನಾಮ ದೃಷ್ಟ್ವಾ ದೃಷ್ಟ್ವಾ ದಿವಾಕರಂ ॥ ೮೫ ॥
ವಿಗೃಹ್ಯ ಪಾಣಿಯುಗ್ಮೇನ ತಾಮ್ರಪಾತ್ರಂ ಸುನಿರ್ಮಲಂ ।
ಜಾನುಭ್ಯಾಮವನಿಂ ಗತ್ವಾ ಪರಿಪೂರ್ಯ ಜಲೇನ ಚ ॥ ೮೬ ॥
ಕರವೀರಾದಿಕುಸುಮೈ ರಕ್ತಚಂದನಮಿಶ್ರಿತೈಃ ।
ದೂರ್ವಾಂಕುರೈರಕ್ಷತೈಶ್ಚ ನಿಕ್ಷಿಪ್ತೈಃ ಪಾತ್ರಮಧ್ಯತಃ ॥ ೮೭ ॥
ದದ್ಯಾದರ್ಘ್ಯಮನರ್ಘ್ಯಾಯ ಸವಿತ್ರೇ ಧ್ಯಾನಪೂರ್ವಕಂ ।
ಉಪಮೌಲಿಸಮಾನೀಯ ತತ್ಪಾತ್ರಂ ನಾಽನ್ಯದೃಙ್ಮನಾಃ ॥ ೮೮ ॥
ಪ್ರತಿಮಂತ್ರಂ ನಮಸ್ಕುರ್ಯಾದುದಯಾಽಸ್ತಮಯೇ ರವಿಂ ।
ಅನಯಾ ನಾಮಸಪ್ತತ್ಯಾ ಮಹಾಮಂತ್ರರಹಸ್ಯಯಾ ॥ ೮೯ ॥

---

ಏಕಚಕ್ರರಥ, ಮಿತ್ರ, ಮಂದೇಹಾರಿ, ತಮಸ್ರಹ, ದೈತ್ಯಹಂತೃ, ಪಾಪಹರ್ತೃ ಧರ್ಮ, ಧರ್ಮಪ್ರಕಾಶಕ, ಹೇಲಿಕ, ಚಿತ್ರಭಾನು, ಕಲಿಘ್ನ, ತಾರ್ಕ್ಷ್ಯ ವಾಹನ, ದಿಕ್ಪತಿ, ಪದ್ಮಿನೀನಾಥ, ಕುಶೇಶಯಕರ, ಹರಿ, ಘರ್ಮರಶ್ಮಿ, ದುರ್ನಿರೀಕ್ಷ್ಯ, ಚಂಡಾಂಶು, ಕಶ್ಯಪಾತ್ಮಜ ಎಂಬ ಈ ಎಪ್ಪತ್ತು ಪುಣ್ಯಕರವಾದ ಸೂರ್ಯನಾಮಗಳಿಂದ ಮೊದಲು ಪ್ರಣವವನ್ನೂ ಆಮೇಲೆ ಚತುರ್ಥ್ಯಂತವನ್ನೂ ನಮಶ್ಶಬ್ದವನ್ನೂ ಉಚ್ಚರಿಸಿಕೊಂಡು, ದಿವಾಕರನನ್ನು ನೋಡುತ್ತ ಎರಡು ಕೈಗಳಲ್ಲಿಯೂ ನಿರ್ಮಲವಾದ ತಾಮ್ರಪಾತ್ರೆಯನ್ನು ಹಿಡಿದುಕೊಂಡು, ಜಾನುಗಳಿಂದ ಭೂಮಿಯಮೇಲೆ ಕುಳಿತು ಆ ಪಾತ್ರೆಯನ್ನು ನೀರಿನಿಂದ ತುಂಬಿ ಕರವೀರಾದಿ ಕುಸುಮಗಳನ್ನೂ ರಕ್ತಚಂದನಮಿಶ್ರಿತವಾದ ದೂರ್ವಾಂಕುರಗಳನ್ನೂ ಅಕ್ಷತೆಗಳನ್ನೂ ಅದರಲ್ಲಿ ಹಾಕಿ, ಧ್ಯಾನಪೂರ್ವಕವಾಗಿ ಆ ಪಾತ್ರೆಯನ್ನು ಕುತ್ತಿಗೆಯವರೆಗೂ ಎತ್ತಿಹಿಡಿದು ಅನನ್ಯ ದೃಷ್ಟಿಯೂ, ಮನಸ್ಸೂ ಉಳ್ಳವನಾಗಿ ಅನರ್ಘ್ಯನಾದ ಸೂರ್ಯಭಗವಂತನಿಗೆ ಅರ್ಘ್ಯವನ್ನು ಕೊಡಬೇಕು.

೮೯. ಮಹಾ ಮಂತ್ರರಹಸ್ಯವನ್ನೊಳಗೊಂಡ ಈ ಸೂರ್ಯನಾಮ ಸಪ್ತತಿಯಲ್ಲಿ ಸೂರ್ಯನ ಉದಯಾಸ್ತಮಯ ಕಾಲಗಳಲ್ಲಿ ಒಂದೊಂದು ನಾಮಮಂತ್ರವನ್ನೂ ಉಚ್ಚರಿಸಿಕೊಂಡು ನಮಸ್ಕಾರಮಾಡತಕ್ಕದ್ದು.

ಏವಂ ಕುರ್ವನ್ನರೋ ಜಾತು ನ ದರಿದ್ರೋ ನ ದುಃಖಭಾಕ್ ।
ವ್ಯಾಧಿಭಿರ್ಮುಚ್ಯತೇ ಘೋರೈರಪಿ ಜನ್ಮಾಂತರಾರ್ಜಿತೈಃ ॥ ೯೦ ॥
ವಿನೌಷಧೈರ್ವಿನಾ ವೈದ್ಯೈರ್ವಿನಾ ಪಥ್ಯಪರಿಗ್ರಹೈಃ ।
ಕಾಲೇನ ನಿಧನಂ ಪ್ರಾಪ್ತಃ ಸೂರ್ಯಲೋಕೇ ಮಹೀಯತೇ ॥ ೯೧ ॥
ಇತ್ಯೇಕದೇಶಃ ಕಥಿತೋ ಭಾನುಲೋಕಸ್ಯ ಸತ್ತಮ ।
ಮಹಾತೇಜೋನಿಧೇರಸ್ಯ ಕೋ ವಿಶೇಷಮವೈತ್ಯಹೋ ॥ ೯೨ ॥
ಸ್ವಕರ್ಣವಿಷಯೀ ಕುರ್ವನ್ನಿತಿ ಪುಣ್ಯಕಥಾಮಿಮಾಂ ।
ಕ್ಷಣಾದಾಲೋಕಯಾಂಚಕ್ರೇ ಮಹೇಂದ್ರಸ್ಯ ಮಹಾಪುರೀಂ ॥ ೯೩ ॥

ಅಗಸ್ತಿರುವಾಚ :—

ಶ್ರುತ್ವಾ ಸೌರೀಂ ಕಥಾಮೇತಾಮಪ್ಸರೋಲೋಕಸಂಯುತಾಂ ।
ನ ದರಿದ್ರೋ ಭವೇತ್ಕ್ವಾಽಪಿ ನಾಽಧರ್ಮೇಷು ಪ್ರವರ್ತತೇ ॥ ೯೪ ॥

---

೯೦ ಈ ಪ್ರಕಾರವಾಗಿ ಮಾಡುವ ಮಾನವನು ಎಂದಿಗೂ ದರಿದ್ರನಾಗುವುದಿಲ್ಲ. ದುಃಖಕ್ಕೊಳಪಡುವುದಿಲ್ಲ. ಜನ್ಮಾಂತರಗಳಿಂದ ಸಂಪಾದಿಸಿದ ಘೋರವಾದ ವ್ಯಾಧಿಗಳಿಂದಲೂ ವಿಮುಕ್ತನಾಗುತ್ತಾನೆ.

೯೧. ಔಷಧಗಳೇನೂ ಇಲ್ಲದೆಯೂ ವೈದ್ಯನ ಸಹಾಯವಿಲ್ಲದೆಯೂ ಯಾವ ಬಗೆಯ ಪಥ್ಯಗಳನ್ನೂ ಮಾಡದೆಯೂ ಇದ್ದು ಈ ಸೂರ್ಯನಾಮ ಸಪ್ತತಿಯ ಪುನಶ್ಚರಣೆಮಾಡಿಕೊಂಡೇ ಕಾಲವನ್ನು ಕಳೆಯುವ ಮಾನವನು ಉಚಿತವಾದ ಕಾಲದಲ್ಲಿ ಮರಣವನ್ನು ಪಡೆದು ಆ ತರುವಾಯ ಸೂರ್ಯಲೋಕದಲ್ಲಿ ಸುಖವಾಗಿರುತ್ತಾನೆ.

೯೨ ಅಯ್ಯಾ ಶಿವಶರ್ಮನೆ, ಹೀಗೆ ಸೂರ್ಯಲೋಕದ ವೃತ್ತಾಂತವನ್ನು ಸ್ವಲ್ಪಮಟ್ಟಿಗೆ ನಿನಗೆ ಹೇಳಿದ್ದೇನೆ. ಮಹಾತೇಜೋನಿಧಿಯಾದ ಈ ಸೂರ್ಯ ಭಗವಂತನ ವಿಶೇಷ ಮಹಾತ್ಮ್ಯವನ್ನು ಬಲ್ಲವರಾರು?

೯೩. ವಿಷ್ಣುಗಣಗಳು ಈ ಪ್ರಕಾರವಾಗಿ ಸೂರ್ಯಲೋಕವನ್ನು ವರ್ಣಿಸಿ ಹೇಳಲು ಆ ಶಿವಶರ್ಮನು ಆ ಪುಣ್ಯಕಥೆಯನ್ನು ಕೇಳುತ್ತಲೆ ಮುಂದುವರಿಯುತ್ತ ಕ್ಷಣಮಾತ್ರದಲ್ಲಿ ಮಹೇಂದ್ರನ ಮುಖ್ಯಪಟ್ಟಣವಾದ ಅಮರಾವತಿಯನ್ನು ಕಂಡನು.

೯೪. ಅಗಸ್ತ್ಯನು ಹೇಳುತ್ತಾನೆ —ಪ್ರಿಯಳೆ, ಅಪ್ಸರೋಲೋಕದೊಡಗೂಡಿದ ಈ ಸೂರ್ಯಲೋಕದ ಕಥೆಯನ್ನು ಕೇಳಿದವನು ಎಂದಿಗೂ ದರಿದ್ರನಾಗುವುದಿಲ್ಲವಲ್ಲದೆ, ಅಧರ್ಮಕಾರ್ಯಗಳಲ್ಲಿಯೂ ಪ್ರವರ್ತಿಸುವುದಿಲ್ಲ.

**ಬ್ರಾಹ್ಮಣೈಃ ಸತತಂ ಶ್ರಾವ್ಯಮಿದಮಾಖ್ಯಾನಮುತ್ತಮಂ ।**
**ವೇದಪಾಠೇನ ಯತ್ಪುಣ್ಯಂ ತತ್ಪುಣ್ಯಫಲದಾಯಕಂ ॥ ೯೫ ॥**
**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೃಣ್ವಂತೋಽಧ್ಯಾಯಮುತ್ತಮಂ ।**
**ಪಾತಕಾನಿ ವಿಸೃಜ್ಯೇಹ ಗತಿಂ ಯಾಸ್ಯಂತ್ಯನುತ್ತಮಾಂ ॥ ೯೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಅಪ್ಸರಃ ಸೂರ್ಯಲೋಕವರ್ಣನಂ" ನಾಮ ನವಮೋಽಧ್ಯಾಯಃ**

---

೯೫. ಬ್ರಾಹ್ಮಣರು ಉತ್ತಮವಾದ ಈ ಆಖ್ಯಾನವನ್ನು ಸತತವೂ ಶ್ರವಣ ಮಾಡಬೇಕು. ಇದು ವೇದಪಾಠದಿಂದ ಯಾವ ಪುಣ್ಯವು ದೊರೆಯುತ್ತದೆಯೊ ಅದೇ ಪುಣ್ಯವನ್ನೇ ದೊರಕಿಸುತ್ತದೆ

೯೬. ಬ್ರಾಹ್ಮಣರೂ ಕ್ಷತ್ರಿಯರೂ ವೈಶ್ಯರೂ ಉತ್ತಮವಾದ ಈ ಅಧ್ಯಾಯವನ್ನು ಕೇಳಿದುದಾದರೆ ತಂತಮ್ಮ ಪಾಪಗಳನ್ನು ಕಳೆದುಕೊಂಡು ಉತ್ತಮಗತಿಯನ್ನು ಪಡೆಯುತ್ತಾರೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಅಪ್ಸರಲೋಕ ಸೂರ್ಯಲೋಕವರ್ಣನ"ವೆಂಬ ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದಶಮೋಽಧ್ಯಾಯಃ

## ಇಂದ್ರಾಽಗ್ನಿಲೋಕವರ್ಣನಂ

**ಶಿವಶರ್ಮೋವಾಚ :—**

**ರಮಯಂತೀ ಮನೋಽತೀವ ಕೇಯಂ ಕಸ್ಯೇಯಮಿಾಶಿತುಃ ।**
**ನಯನಾನಂದಸಂದೋಹದಾಯಿನೀ ಪೂರನುತ್ತಮಾ ॥ ೧ ॥**

**ಗಣಾವೂಚತುಃ :—**

**ಶಿವಶರ್ಮನ್ ಮಹಾಭಾಗ ಸುತೀರ್ಥಫಲಿತದ್ರುಮ ।**
**ಲೋಕೋಽತ್ರ ರಮತೇ ವಿಪ್ರ ಸಹಸ್ರಾಕ್ಷಪುರೀ ತ್ವಿಯಂ ॥ ೨ ॥**
**ತಪೋಬಲೇನ ಮಹತಾ ವಿಹಿತಾ ವಿಶ್ವಕರ್ಮಣಾ ।**
**ದಿವಾಽಽಽಪಿ ಕೌಮುದೀ ಯಸ್ಯಾಃ ಸೌಧಶ್ರೇಣೀ ಶ್ರಿಯಂ ಶ್ರಯೇತ್॥ ೩ ॥**
**ಯದಾ ಕಲಾನಿಧಿಃ ಕ್ವಾಽಪಿ ದರ್ಶೇಽದೃಶ್ಯತ್ವಮಾವಹೇತ್ ।**
**ತದಾ ಸ್ವಪ್ರೇಯಸೀಂ ಜ್ಯೋತ್ಸ್ನಾಂ ಸೌಧೇಷ್ವೇಷು ನಿಗೂಹಯೇತ್॥ ೪ ॥**

---

## ಕನ್ನಡದ ಅನುವಾದ

### ಇಂದ್ರಾಗ್ನಿಲೋಕವರ್ಣನ

೧. ಶಿವಶರ್ಮನು ಕೇಳುತ್ತಾನೆ —ಎಲೈ ವಿಷ್ಣುಭಕ್ತರೆ, ಮನಸ್ಸನ್ನು ಬಹಳವಾಗಿ ಸಂತೋಷಗೊಳಿಸುತ್ತಿರುವ ಈ ಲೋಕವು ಯಾವುದು, ಯಾವ ಪ್ರಭುವಿನದು ? ಅನುತ್ತಮವಾದ ಈ ಪಟ್ಟಣವು ನಯನಾನಂದಕರವಾಗಿದೆ.

೨. ಗಣಗಳು ಹೇಳುತ್ತಾರೆ —ಅಯ್ಯಾ ಮಹಾ ಭಾಗ್ಯಶಾಲಿಯೂ, ತೀರ್ಥ ಯಾತ್ರೆಗಳನ್ನುಮಾಡಿ ಫಲಸ್ವರೂಪವಾಗಿ ಕಲ್ಪವೃಕ್ಷವನ್ನೇ ಪಡೆದಿರುವವನೂ ಆದ ಶಿವಶರ್ಮನೆ, ದೇವತೆಗಳೆಲ್ಲರಿಗೂ ಒಡೆಯನಾದ ಸಾಕ್ಷಾತ್ ಸಹಸ್ರಾಕ್ಷನು ಪ್ರಭುತ್ವವನ್ನು ನಡೆಯಿಸುತ್ತಾ ನೆಲಸಿರುವ ಸ್ವರ್ಗಲೋಕವೇ ಈ ಮುಂದೆ ಕಾಣುತ್ತಿರುವುದು.

೩–೪. ಈ ಅಮರಾವತೀಪಟ್ಟಣವನ್ನು ಮಹತ್ತರವಾದ ತಪೋಬಲದಿಂದ ದೇವಶಿಲ್ಪಿಯಾದ ವಿಶ್ವಕರ್ಮನು ನಿರ್ಮಿಸಿದ್ದಾನೆ. ಇಲ್ಲಿನ ಭವ್ಯಭವನಗಳಲ್ಲಿ ಹಗಲಿನಲ್ಲಿಯೂ ಬೆಳದಿಂಗಳು ಕಾಯುತ್ತಿರುತ್ತದೆ. ಅಮಾವಾಸ್ಯೆಯಲ್ಲಿ ಅದೃಶ್ಯ ನಾಗುವ ಚಂದ್ರನು ತನ್ನ ಪ್ರೇಯಸಿಯಾದ ಜ್ಯೋತ್ಸ್ನೆಯನ್ನು ಈ ಅಮರಾ ವತಿಯ ಸೌಧಗಳಲ್ಲಿ ಬೈತಿಡುವನೊ ಎಂಬಂತೆ ಅವು ರಮಣೀಯವಾಗಿ ಶೋಭಿಸುತ್ತಿರುತ್ತವೆ.

ಯದಚ್ಛಭಿತ್ತೌ ವೀಕ್ಷ್ಯ ಸ್ವಮನ್ಯಯೋಷಿದ್ವಿಶಂಕಿತಾ ।
ಮುಗ್ಧಾನಾಶು ವಿಶೇಚ್ಚಿತ್ರಮಪಿ ಸ್ವಾಂ ಚಿತ್ರಶಾಲಿಕಾಂ ॥ ೫ ॥
ಹರ್ಮ್ಯೇಷು ನೀಲಮಣಿಭಿರ್ನಿರ್ಮಿತೇಷ್ವತ್ರ ನಿರ್ಭಯಂ ।
ಸ್ವನೀಲಿಮಾನಮಾಧಾಯ ತಮೋಽಹಸ್ಸ್ವಪಿ ತಿಷ್ಠತಿ ॥ ೬ ॥
ಚಂದ್ರಕಾಂತಶಿಲಾಜಾಲಸ್ರುತಮಾತ್ರಾಽಮಲಂ ಜಲಂ ।
ತತ್ರ ಚಾದಾಯ ಕಲಶೈರ್ನೇಚ್ಛಂತ್ಯನ್ಯಜ್ಜಲಂ ಜನಾಃ ॥ ೭ ॥
ಕುವಿಂದಾ ನ ಚ ಸಂತ್ಯತ್ರ ನ ಚ ತೇ ಪಶ್ಯತೋ ಹರಾಃ ।
ಚೈಲಾನ್ಯಲಂಕೃತೀರತ್ರ ಯತಃ ಕಲ್ಪದ್ರುಮೋಽರ್ಪಯೇತ್ ॥ ೮ ॥
ಗಣಕಾ ನಾಽತ್ರ ವಿದ್ಯಂತೇ ಚಿಂತಾವಿದ್ಯಾವಿಶಾರದಾಃ ।
ಯತಶ್ಛಿನತ್ತೀತಿ ಸರ್ವೇಷಾಂ ಚಿಂತಾಂ ಚಿಂತಾಮಣಿರ್ದ್ರುತಂ ॥ ೯ ॥
ಸೂಪಕಾರಾ ನ ಸಂತ್ಯತ್ರ ರಸಕರ್ಮವಿಚಕ್ಷಣಾಃ ।
ದುಗ್ಧೇ ಸರ್ವರಸಾನೇಕಾ ಕಾಮಧೇನುರತೋ ಯತಃ ॥ ೧೦ ॥

---

೫ ಈ ಪಟ್ಟಣದ ಭವನಗಳ ನಿರ್ಮಲವಾದ ಗೋಡೆಗಳಲ್ಲಿ ತನ್ನ ಪ್ರತಿಬಿಂಬವನ್ನೇ ಕಂಡು ಮುಗ್ಧೆಯಾದ ದೇವಾಂಗನೆಯು ಬೇರೊಬ್ಬ ಸ್ತ್ರೀಯೇ ಅಲ್ಲಿಗೆ ಬಂದಿರುವಳೊ ಎಂದು ಶಂಕಿಸಿ ಆ ತನ್ನ ಚಿತ್ರಶಾಲಿಕೆಯನ್ನೇ ಪ್ರವೇಶಿಸಲು ಹಿಂಜರಿಯುವಳು.

೬ ನೀಲಮಣಿಗಳಿಂದ ನಿರ್ಮಿತವಾದ ಈ ಪುರಭವನಗಳಲ್ಲಿ ಕಗ್ಗತ್ತಲೆಯು ತನ್ನ ನೀಲಿಮೆಯನ್ನೆಲ್ಲಾ ಒಟ್ಟುಗೂಡಿಸಿಕೊಂಡು ಹಗಲಿನಲ್ಲಿಯೂ ಚಂದ್ರನೊಡಗೂಡಿದ ರಾತ್ರಿಗಳಲ್ಲಿಯೂ ನಿರ್ಭಯವಾಗಿ ವಾಸವಮಾಡುತ್ತಿರುವುದೊ ಎಂಬಂತೆ ತೋರುವುದು

೭ ಅಯ್ಯಾ ಬ್ರಾಹ್ಮಣನೆ, ಈ ಪಟ್ಟಣದ ಜನಗಳು ಇಲ್ಲಿಯ ಚಂದ್ರಕಾಂತ ಶಿಲೆಗಳಿಂದ ಜಿನುಗುವ ನಿರ್ಮಲವಾದ ನೀರಿನ ಜರಿತೆಗಳಲ್ಲಿ ಕಲಶಗಳಿಂದ ನೀರನ್ನು ತೆಗೆದುಕೊಂಡು ಉಪಯೋಗಿಸಿ ಬಳಕೆಯಾಗಿರುವುದರಿಂದ, ಇತರ ನದೀತಟಾಕಾದಿಗಳ ಜಲವನ್ನು ಅಪೇಕ್ಷಿಸುವುದೇ ಇಲ್ಲ

೮ ಈ ಪಟ್ಟಣದಲ್ಲಿ ನೆಯ್ಗೆಯವರಾಗಲಿ ಅಕ್ಕಸಾಲಿಗರಾಗಲಿ ಇರುವುದಿಲ್ಲ. ಇಲ್ಲಿರುವ ಕಲ್ಪವೃಕ್ಷವೇ ಚೀನಾಂಬರಗಳನ್ನೂ ವಿವಿಧಾಭರಣಗಳನ್ನೂ ಕೋರಿದಂತೆಲ್ಲ ಇಲ್ಲಿನವರಿಗೆ ಒದಗಿಸುತ್ತಿರುತ್ತದೆ.

೯. ಚಿಂತಾವಿದ್ಯೆಯಲ್ಲಿ (ಜ್ಯೋತಿಷದಲ್ಲಿ) ವಿಶಾರದರಾದ ಜ್ಯೋತಿಷರಾರೂ ಈ ಪಟ್ಟಣದಲ್ಲಿ ಕಾಣುವುದಿಲ್ಲ. ಏಕೆಂದರೆ, ಇಲ್ಲಿನ ಚಿಂತಾಮಣಿಯೇ ಎಲ್ಲರ ಚಿಂತೆಗಳನ್ನೂ ಬಗೆಹರಿಸಿ ಸುಖವನ್ನು ನೀಡುತ್ತಿರುತ್ತದೆ.

೧೦. ಷಡ್ರಸಸಹಿತವಾದ ಅಡುಗೆಯನ್ನು ಮಾಡುವುದರಲ್ಲಿ ವಿಚಕ್ಷಣರೆನಿಸಿದ ಅಡುಗೆಯವರೂ ಈ ಪಟ್ಟಣದಲ್ಲಿ ಇರುವುದಿಲ್ಲ. ಅವರ ಆವಶ್ಯಕತೆಯೂ

ಕೀರ್ತಿರುಚ್ಚೈಃಶ್ರವಾ ಯಸ್ಯ ಸರ್ವತೋ ವಾಜಿರಾಜಿಷು ।
ರತ್ನಮುಚ್ಚೈಃಶ್ರವಾಃ ಸೋಽತ್ರ ಹಯಾನಾಂ ಪೌರುಷಾಽಧಿಕಃ ॥ ೧೧ ॥
ಐರಾವತೋ ದಂತಿವರಶ್ಚತುರ್ದಂತೋಽತ್ರ ರಾಜತೇ ।
ದ್ವಿತೀಯ ಇವ ಕೈಲಾಸೋ ಜಂಗಮಸ್ಫಟಿಕೋಜ್ವಲಃ ॥ ೧೨ ॥
ತರುರತ್ನಂ ಪಾರಿಜಾತಃ ಸ್ತ್ರೀರತ್ನಂ ಸೋರ್ವಶೀತ್ವಿಹ ।
ನಂದನಂ ವನರತ್ನಂ ಚ ರತ್ನಂ ಮಂದಾಕಿನೀ ಹ್ಯಪಾಂ ॥ ೧೩ ॥
ತ್ರಯಸ್ತ್ರಿಂಶತ್ಸುರಾಣಾಂ ಯಾ ಕೋಟಿಃ ಶ್ರುತಿಸಮೀರಿತಾ ।
ಪ್ರತೀಕ್ಷತೇ ಸಾಽವಸರಂ ಸೇವಾಯೈ ಪ್ರತ್ಯಹಂ ತ್ವಿಹ ॥ ೧೪ ॥
ಸ್ವರ್ಗೇಽಸ್ಮಿಂದ್ರಪದಾದನ್ಯನ್ನ ವಿಶಿಷ್ಯೇತ ಕಿಂಚನ ।
ಯದ್ಯತ್ತ್ರಿಲೋಕ್ಯಾಮೈಶ್ವರ್ಯಂ ನ ತತ್ತುಲ್ಯಮನೇನ ಹಿ ॥ ೧೫ ॥
ಅಶ್ವಮೇಧಸಹಸ್ರಸ್ಯ ಲಭ್ಯಂ ವಿನಿಮಯೇನ ಯತ್ ।
ಕಿಂ ತೇನ ತುಲ್ಯಮನ್ಯತ್ ಸ್ಯಾತ್ಪವಿತ್ರಮಥವಾ ಮಹತ್ ॥ ೧೬ ॥

---

ಇಲ್ಲ. ಇಲ್ಲಿ ನೆಲಸಿರುವ ಕಾಮಧೇನುವೇ ಸರ್ವರಸಸಮನ್ವಿತವಾದ ಸಮಸ್ತ ಭೋಜ್ಯಗಳನ್ನೂ ಕರೆಯುತ್ತಿರುತ್ತದೆ.

೧೧. ಸಮಸ್ತ ಅಶ್ವಸಮೂಹಗಳಲ್ಲಿಯೂ ಮಹಾಪೌರುಷಸಮನ್ವಿತವಾಗಿ, ಅಶ್ವರತ್ನವೆಂದು ಅಪಾರವಾದ ಕೀರ್ತಿಯನ್ನು ಪಡೆದಿರುವ ಉಚ್ಚೈಶ್ರವವು ಈ ಪಟ್ಟಣದಲ್ಲಿಯೇ ಇರುವುದು.

೧೨. ನಾಲ್ಕು ದಂತಗಳಿಂದ ಕೂಡಿ ಆನೆಗಳೆಲ್ಲಕ್ಕೂ ಮಿಗಿಲೆನಿಸಿ, ಸ್ಫಟಿಕದಂತೆ ಮಹೋಜ್ಜ್ವಲವಾಗಿ ಬೆಳಗುತ್ತಿರುವ ಐರಾವತವು ಈ ಪಟ್ಟಣದಲ್ಲಿ ಎರಡನೆಯ ಕೈಲಾಸಗಿರಿಯೊ ಎಂಬಂತೆ ಶೋಭಿಸಿ ನೆಲಸಿರುತ್ತದೆ.

೧೩. ತರುರತ್ನವೆನಿಸಿದ ಪಾರಿಜಾತವೂ, ಸ್ತ್ರೀರತ್ನವೆನಿಸಿದ ಊರ್ವಶಿಯೂ, ವನರತ್ನವೆಂದು ಖ್ಯಾತಿಗೊಂಡ ನಂದನವನವೂ, ನದೀರತ್ನವೆಂದು ಹೆಸರಾದ ವಿಯದ್ಗಂಗೆಯೂ ಇಲ್ಲಿ ಕಂಗೊಳಿಸುತ್ತಿರುವುವು.

೧೪ ಶ್ರುತಿಗಳಲ್ಲಿ ಕೇಳಿಬರುವ ಮೂವತ್ತುಮೂರು ಕೋಟಿ ದೇವತೆಗಳು ಈ ಪಟ್ಟಣದಲ್ಲಿ ಸೇವೆಗೆ ಅವಕಾಶವನ್ನು ಕಲ್ಪಿಸಿಕೊಂಡು ವಾಸಮಾಡುತ್ತಿರುವರು.

೧೫. ಎಲೈ ಬ್ರಾಹ್ಮಣನೆ, ಈ ಸ್ವರ್ಗಲೋಕದಲ್ಲಿ ಇಂದ್ರಪದವಿಯನ್ನು ಮೀರಿಸಿದ ವೈಭವವಾವುದೂ ಇರುವುದಿಲ್ಲ. ಮೂರು ಲೋಕಗಳಲ್ಲಿ ಯಾವ ಐಶ್ವರ್ಯವಿರುವುದೊ ಅದು ಈ ಲೋಕದ ಐಶ್ವರ್ಯಕ್ಕೆ ಎಂದಿಗೂ ಸಮವಾಗಲಾರದು.

೧೬. ನೂರು ಅಶ್ವಮೇಧಯಾಗಗಳಿಂದ ಲಭ್ಯವಾಗುವ ಈ ಲೋಕದ

**ಅರ್ಚಿಷ್ಮತೀ ಸಂಯಮಿನೀ ಪುಣ್ಯಾವತ್ಯಮಲಾವತೀ ।**
**ಗಂಧವತ್ಯಲಕೇಶೀ ಚ ನೈತತ್ತುಲ್ಯಾ ಮಹರ್ಧಿಭಿಃ ॥ ೧೭ ॥**
**ಅಯಮೇವ ಸಹಸ್ರಾಕ್ಷಸ್ತ್ವಯಮೇವ ದಿವಸ್ಪತಿಃ ।**
**ಶತಮನ್ಯುರಯಂ ದೇವೋ ನಾಮಾನ್ಯೇತಾನಿ ನಾಮತಃ ॥ ೧೮ ॥**
**ಸಪ್ತಾಽಪಿ ಲೋಕಪಾಲಾ ಯೇ ತ ಏನಂ ಸಮುಪಾಸತೇ ।**
**ನಾರದಾದ್ಯೈರ್ಮುನಿವರ್ಯೈರಯಮಾಶೀರ್ಭಿರೀಡ್ಯತೇ ॥ ೧೯ ॥**
**ಏತತ್ ಸ್ಥೈರ್ಯೇಣ ಸರ್ವೇಷಾಂ ಲೋಕಾನಾಂ ಸ್ಥೈರ್ಯಮಿಷ್ಯತೇ ।**
**ಪರಾಜಯಾನ್ಮಹೇಂದ್ರಸ್ಯ ತ್ರೈಲೋಕ್ಯಂ ಸ್ಯಾತ್ಪರಾಜಿತಂ ॥ ೨೦ ॥**
**ದನುಜಾ ಮನುಜಾ ದೈತ್ಯಾಸ್ತಪಸ್ಯಂತ್ಯುಗ್ರಸಂಯಮಾಃ ।**
**ಗಂಧರ್ವಯಕ್ಷರಕ್ಷಾಂಸಿ ಮಹೇಂದ್ರಪದಲಿಪ್ಸವಃ ॥ ೨೧ ॥**
**ಸಗರಾದ್ಯಾ ಮಹೀಪಾಲಾ ವಾಜಿಮೇಧವಿಧಾಯಕಾಃ ।**
**ಕೃತವಂತೋ ಮಹಾಯತ್ನಂ ಶಕ್ರೈಶ್ವರ್ಯಜಿಘೃಕ್ಷವಃ ॥ ೨೨ ॥**

---

ಐಶ್ವರ್ಯಕ್ಕೆ ಯಾವುದು ತಾನೆ ಸಾಟಿಯಾದೀತು? ಇದಕ್ಕಿಂತಲೂ ಪವಿತ್ರವಾದುದೂ, ಮಹತ್ತರವಾದುದೂ ಯಾವುದೂ ಇರುವುದಿಲ್ಲ

೧೭. ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ, ಈಶಾನ ಎಂಬ ದೇವತೆಗಳ ಅರ್ಚಿಷ್ಮತಿ ಸಂಯಮಿನಿ ಪುಣ್ಯಾವತಿ ಅಮಲಾವತಿ ಗಂಧವತಿ ಅಲಕೆ ಈಶಿ ಎಂಬ ಸಪ್ತಲೋಕಗಳ ಐಶ್ವರ್ಯವನ್ನು ಒಟ್ಟುಗೂಡಿಸಿದರೂ ಈ ಮಹೇಂದ್ರಲೋಕದ ಐಶ್ವರ್ಯಕ್ಕೆ ಸಮಾನವಾಗಲಾರದು.

೧೮–೧೯. ಈ ಲೋಕದ ಒಡೆಯನೇ ಸಹಸ್ರಾಕ್ಷನು. ಇವನನ್ನೇ ದಿವಸ್ಪತಿ, ಶತಮನ್ಯು ಎಂಬ ಹೆಸರುಗಳಿಂದ ಕರೆಯುತ್ತಾರೆ. ಅಗ್ನಿಯೇ ಮೊದಲಾದ ಏಳು ಮಂದಿ ದಿಕ್ಪಾಲಕರು ಈ ಸ್ವರ್ಗಾಧಿಪನನ್ನು ಓಲೈಸಿ ಸೇವೆಸಲ್ಲಿಸುತ್ತಾರೆ. ನಾರದಾದಿ ಮುನಿಶ್ರೇಷ್ಠರು ಇವನನ್ನು ಆಶೀರ್ವಚನಗಳಿಂದ ಸ್ತುತಿಸುತ್ತಾರೆ

೨೦. ಈ ಮಹೇಂದ್ರನ ಸ್ಥೈರ್ಯವನ್ನೇ ಉಳಿದೆಲ್ಲ ಲೋಕಗಳ ಸ್ಥೈರ್ಯವು ಅವಲಂಬಿಸಿರುತ್ತದೆ. ಮಹೇಂದ್ರನೊಬ್ಬನು ಪರಾಜಿತನಾದಲ್ಲಿ ತ್ರೈಲೋಕ್ಯವೇ ಪರಾಜಿತವಾದಂತೆ ಪರಿಗಣಿಸಲಾಗುವುದು.

೨೧. ದನುಜರೂ, ಮನುಜರೂ, ದೈತ್ಯರೂ, ಗಂಧರ್ವರೂ, ಯಕ್ಷರಾಕ್ಷಸರೂ ಈ ಮಹೇಂದ್ರ ಪದವಿಯನ್ನು ಪಡೆಯಬಯಸಿಯೇ ಮಹಾ ಸಂಯಮಿಗಳಾಗಿ ತಪಸ್ಸನ್ನು ಮಾಡುತ್ತಾರೆ

೨೨. ಮಹೇಂದ್ರನ ಮಹೈಶ್ವರ್ಯವನ್ನು ಪಡೆಯಬಯಸಿ ಸಗರನೇ ಮೊದಲಾದ ಮಹೀಪಾಲಕರೂ ಅಶ್ವಮೇಧಾದಿ ಮಹಾ ಯಾಗಗಳನ್ನು ಮಾಡಿ ಮಹತ್ತರವಾದ ಪ್ರಯತ್ನವನ್ನೆಸಗಿದರು.

ನಿಷ್ಪ್ರತ್ಯೂಹಂ ಕ್ರತುಶತಂ ಯಃ ಕಶ್ಚಿತ್ಕುರುತೇಽವನೌ ।
ಜಿತೇಂದ್ರಿಯೋಽಮರಾವತ್ಯಾಂ ಸ ಪ್ರಾಪ್ನೋತಿ ಪುಲೋಮಜಾಂ ॥ ೨೩ ॥
ಅಸಮಾಪ್ತಕ್ರತುಶತಾ ವಸಂತ್ಯತ್ರ ಮಹೀಭುಜಃ ।
ಜ್ಯೋತಿಷ್ಟೋಮಾದಿಭಿರ್ಯಾಗೈರ್ಯೇ ಯಜಂತ್ಯಪಿ ತೇ ದ್ವಿಜಾಃ ॥ ೨೪ ॥
ತುಲಾಪುರುಷದಾನಾದಿಮಹಾದಾನಾನಿ ಷೋಡಶ ।
ಯೇ ಯಚ್ಛಂತ್ಯಮಲಾತ್ಮಾನಸ್ತೇ ಲಭಂತೇಽಮರಾವತೀಂ ॥ ೨೫ ॥
ಅಕ್ಲೀಬವಾದಿನೋ ಧೀರಾಃ ಸಂಗ್ರಾಮೇಷ್ವಪರಾಙ್ಮುಖಾಃ ।
ವಿಕ್ರಾಂತಾ ವೀರಶಯನೇ ತೇಽತ್ರ ತಿಷ್ಠಂತಿ ಭೂಭುಜಃ ॥ ೨೬ ॥
ಇತ್ಯುದ್ದೇಶಾತ್ಸಮಾಖ್ಯಾತಾ ಮಹೇಂದ್ರನಗರೀಸ್ಥಿತಿಃ ।
ಯಾಯಜೂಕಾ ವಸಂತ್ಯತ್ರ ಯಜ್ಞವಿದ್ಯಾವಿಶಾರದಾಃ ॥ ೨೭ ॥
ಇಮಾಮರ್ಚಿಷ್ಮತೀಂ ಪಶ್ಯ ವೀತಿಹೋತ್ರಪುರೀಂ ಶುಭಾಂ ।
ಜಾತವೇದಸಿ ಯೇ ಭಕ್ತಾಸ್ತೇ ವಸಂತ್ಯತ್ರ ಸುವ್ರತಾಃ ॥ ೨೮ ॥

---

೨೩ ಅಯ್ಯಾ ವಿಪ್ರನೆ, ಯಾವನು ಭೂಲೋಕದಲ್ಲಿ ಯಾವೊಂದು ವಿಘ್ನವೂ ಇಲ್ಲದೆ ಜಿತೇಂದ್ರಿಯನಾಗಿ ಶತಾಶ್ವಮೇಧಯಾಗಗಳನ್ನು ಮಾಡುವನೊ ಅವನು ಈ ಲೋಕದಲ್ಲಿ ಶಚೀದೇವಿಯನ್ನು ಹೆಂಡತಿಯನ್ನಾಗಿ ಪಡೆಯುತ್ತಾನೆ.

೨೪ ಶತಾಶ್ವಮೇಧಗಳನ್ನು ಸಂಪೂರ್ಣಗೊಳಿಸದಿರುವ ಮಹೀಭುಜರೂ ಜ್ಯೋತಿಷ್ಟೋಮಾದಿ ಯಾಗಗಳನ್ನು ಮಾಡಿ ದೇವತೆಗಳನ್ನು ಆರಾಧಿಸಿರುವ ವಿಪ್ರಶ್ರೇಷ್ಠರೂ ಇಲ್ಲಿ ವಾಸಮಾಡುತ್ತಿರುವರು.

೨೫ ತುಲಾಪುರುಷವೇ ಮೊದಲಾದ ದಾನಗಳನ್ನೂ, ಶೋಡಷಮಹಾ ದಾನಗಳನ್ನೂ ಮಾಡಿ ಪುಣ್ಯವನ್ನು ಗಳಿಸಿದ ಅಮಲಾತ್ಮರಾದ ಪುರುಷರು ಈ ಅಮರಾವತಿಯನ್ನು ಪಡೆಯುತ್ತಾರೆ.

೨೬ ಸತ್ಯವಾದಿಗಳೂ, ರಣಾಂಗಣದಲ್ಲಿ ಹಿಂತಿರುಗದ ಧೀರರೂ, ರಣದಲ್ಲಿ ವೀರಶಯನದಲ್ಲಿ ಪವಡಿಸಿದ ಶೂರರೂ ಆದ ರಾಜರು ಇಲ್ಲಿ ವಾಸಮಾಡುವರು.

೨೭–೨೮ ಎಲೈ ಶಿವಶರ್ಮನೆ, ಈ ಪ್ರಕಾರವಾಗಿ ಈ ಮಹೇಂದ್ರನಗರಿಯ ಸ್ಥಿತಿಗತಿಗಳನ್ನೂ ಇದನ್ನು ಪಡೆಯುವ ಬಗೆಯನ್ನೂ ಉದ್ದೇಶಪೂರ್ವಕವಾಗಿ ನಿನಗೆ ತಿಳಿಸಿದ್ದಾಯಿತು ಇನ್ನು ಯಜ್ಞವಿದ್ಯೆಯಲ್ಲಿ ವಿಶಾರದರೆನಿಸಿದ ಸೋಮ ಯಾಜಿಗಳು ವಾಸಮಾಡುತ್ತಿರುವ ವಿಷಯವನ್ನು ಕೇಳು ಇದೊ ಇಲ್ಲಿ ಕಾಣುತ್ತಿರುವುದೇ ಯಜ್ಞೇಶ್ವರನ ಶುಭಕರವಾದ ಅರ್ಚಿಷ್ಮತೀಪಟ್ಟಣ. ಜಾತವೇದಸನಲ್ಲಿ ಅತ್ಯಂತ ಭಕ್ತಿಯನ್ನು ತಳೆದಿರುವ ವ್ರತಿಗಳಾದ ಬ್ರಾಹ್ಮಣರು ಮತ್ತು ಇತರರು ಈ ಲೋಕದಲ್ಲಿ ವಾಸಮಾಡುವರು.

ಅಗ್ನಿಪ್ರವೇಶಂ ಯೇ ಕುರ್ಯುರ್ದೃಢಸತ್ವಾ ಜಿತೇಂದ್ರಿಯಾಃ ।
ಸ್ತ್ರಿಯೋ ವಾ ಸತ್ತ್ವಸಂಪನ್ನಾಸ್ತೇ ಸರ್ವೇ ಅಗ್ನಿತೇಜಸಃ ॥ ೨೯ ॥
ಅಗ್ನಿಹೋತ್ರರತಾ ವಿಪ್ರಾಸ್ತಥಾಽಗ್ನಿಬ್ರಹ್ಮಚಾರಿಣಃ ।
ಪಂಚಾಽಗ್ನಿವ್ರತಿನೋ ಯೇ ವೈ ತೇಽಗ್ನಿಲೋಕೇಽಗ್ನಿತೇಜಸಃ ॥ ೩೦ ॥
ಶೀತೇ ಶೀತಾಽಪನುತ್ಯೈ ಯಸ್ತ್ವಿಧ್ಮಭಾರಾನ್ಪ್ರಯಚ್ಛತಿ ।
ಕುರ್ಯಾದಗ್ನಿಷ್ಟಿಕಾಂ ವಾಽಥ ಸವಸೇದಗ್ನಿಸನ್ನಿಧೌ ॥ ೩೧ ॥
ಅನಾಥಸ್ಯಾಽಗ್ನಿಸಂಸ್ಕಾರಂ ಯಃ ಕುರ್ಯಾಚ್ಛ್ರದ್ಧಯಾನ್ವಿತಃ ।
ಅಶಕ್ತಃ ಪ್ರೇರಯೇದನ್ಯಂ ಸೋಽಗ್ನಿಲೋಕೇ ಮಹೀಯತೇ ॥ ೩೨ ॥
ಜಠರಾಗ್ನಿವಿವೃದ್ಧ್ಯೈ ಯೋ ದದ್ಯಾದಾಗ್ನೇಯಮೌಷಧಂ ।
ಮಂದಾಗ್ನಯೇ ಸ ಪುಣ್ಯಾತ್ಮಾ ವಹ್ನಿಲೋಕೇ ವಸೇಚ್ಚಿರಂ ॥ ೩೩ ॥
ಯಜ್ಞೋಪಸ್ಕರವಸ್ತೂನಿ ಯಜ್ಞಾರ್ಥಂ ದ್ರವಿಣಂ ತು ವಾ ।
ಯಥಾಶಕ್ತಿಪ್ರದದ್ಯಾದ್ಯೋ ಹ್ಯರ್ಚಿಷ್ಮತ್ಯಾಂ ವಸೇತ್ಸ ವೈ ॥ ೩೪ ॥

---

೨೯. ದೃಢವಾದ ಪರಾಕ್ರಮವುಳ್ಳವರೂ, ಜಿತೇಂದ್ರಿಯರೂ ಆದ ಮಾನವರೂ, ಸ್ವತಸಂಪನ್ನೆಯರಾದ ಸ್ತ್ರೀಯರೂ ತಂತಮ್ಮ ವ್ರತ ಪರಿಪಾಲನೆಗಾಗಿ ಅಗ್ನಿಪ್ರವೇಶವನ್ನು ಮಾಡಿದುದಾದರೆ, ಆ ಪುಣ್ಯದ ಪ್ರಭಾವದಿಂದ ಈ ಲೋಕವನ್ನು ಪಡೆದು ಅಗ್ನಿಗೆ ಸಮಾನವಾದ ತೇಜಸ್ಸುಳ್ಳವರಾಗುತ್ತಾರೆ

೩೦. ಅಗ್ನಿಹೋತ್ರದಲ್ಲಿ ನಿಷ್ಠಿತರಾದ ಬ್ರಾಹ್ಮಣರೂ, ಅಗ್ನಿಯನ್ನಿಟ್ಟುಕೊಂಡು ಬ್ರಹ್ಮಚರ್ಯವ್ರತವನ್ನು ಚರಿಸುವವರೂ, ಪಂಚಾಗ್ನಿತಪಸ್ಸನ್ನು ಮಾಡುವವರೂ ಈ ಅರ್ಚಿಷ್ಮತೀ ಪಟ್ಟಣವನ್ನು ಸೇರಿ ಅಗ್ನಿಸಮಾನತೇಜಸ್ವಿಗಳಾಗಿ ಸುಖವಾಗಿರುತ್ತಾರೆ.

೩೧ ಶೀತಕಾಲಗಳಲ್ಲಿ ಶೀತಬಾಧಾನಿವೃತ್ಯರ್ಥವಾಗಿ ಒಣಗಿದ ಕಟ್ಟಿಗೆಗಳ ಕಟ್ಟನ್ನು ಬ್ರಾಹ್ಮಣನಿಗೆ ದಾನಮಾಡುವವನೂ, ಅಗ್ಗಿಷ್ಟಿಕೆಯನ್ನು ಮಾಡಿಕೊಡುವವನೂ ಈ ಪಟ್ಟಣದಲ್ಲಿ ಯಜ್ಞೇಶ್ವರನ ಸನ್ನಿಧಿಯಲ್ಲಿಯೆ ವಾಸ ಮಾಡುತ್ತಾನೆ.

೩೨. ದಿಕ್ಕಿಲ್ಲದವನಿಗೆ ಯಾವನು ಅಗ್ನಿಸಂಸ್ಕಾರವನ್ನು ಮಾಡುತ್ತಾನೆಯೊ, ತನ್ನ ಕೈಯಲ್ಲಾಗದಿದ್ದರೆ ಹಾಗೆ ಮಾಡಲು ಇತರರನ್ನು ಪ್ರೇರಿಸುತ್ತಾನೆಯೊ ಅವನು ಅಗ್ನಿಲೋಕದಲ್ಲಿ ಭೋಗಭಾಗ್ಯಗಳನ್ನು ಅನುಭವಿಸುತ್ತಾನೆ.

೩೩. ಜಠರಾಗ್ನಿಯು ಚೆನ್ನಾಗಿ ವೃದ್ಧಿಯಾಗುವಂತೆ ಅಗ್ನಿವರ್ಧಕೌಷಧಿಗಳನ್ನು ಕೊಡುವ ಪುಣ್ಯಾತ್ಮನು ವಹ್ನಿಲೋಕದಲ್ಲಿ ಬಹಳ ಕಾಲ ವಾಸ ಮಾಡುತ್ತಾನೆ.

೩೪. ಯಜ್ಞಕ್ಕೆ ಬೇಕಾದ ವಸ್ತುಗಳನ್ನೂ, ಯಜ್ಞನಿರ್ವಹಣಕ್ಕೆ ಬೇಕಾದ

ಅಗ್ನಿರೇಕೋ ದ್ವಿಜಾತೀನಾಂ ನಿಃಶ್ರೇಯಸಕರಃ ಪರಃ ।
ಗುರುರ್ದೇವೋ ವ್ರತಂ ತೀರ್ಥಂ ಸರ್ವಮಗ್ನಿರ್ವಿನಿಶ್ಚಿತಂ ॥ ೩೫ ॥
ಅಪಾವನಾನಿ ಸರ್ವಾಣಿ ವಹ್ನಿಸಂಸರ್ಗತಃ ಕ್ಷಣಾತ್ ।
ಪಾವನಾನಿ ಭವಂತ್ಯೇವ ತಸ್ಮಾದ್ಯಃ ಪಾವಕಃ ಸ್ಮೃತಃ ॥ ೩೬ ॥
ಅಪಿ ವೇದಂ ವಿದಿತ್ವಾ ಯಸ್ತ್ಯಕ್ತ್ವಾ ವೈ ಜಾತವೇದಸಂ ।
ಅನ್ಯತ್ರ ಬಧ್ನಾತಿ ರತಿಂ ಬ್ರಾಹ್ಮಣೋ ನ ಸ ವೇದವಿತ್ ॥ ೩೭ ॥
ಅಂತರಾತ್ಮಾ ಹ್ಯಯಂ ಸಾಕ್ಷಾನ್ನಿಶ್ಚಿತೋಹ್ಯಾಶುಶುಕ್ಷಣಿಃ ।
ಮಾಂಸಗ್ರಾಸಾನ್ಪಚೇತ್ಕುಕ್ಷೌ ಸ್ತ್ರೀಣಾಂ ನೋ ಮಾಂಸಪೇಶಿಕಾಂ ॥ ೩೮ ॥
ತೈಜಸೀ ಶಾಂಭವೀ ಮೂರ್ತಿಃ ಪ್ರತ್ಯಕ್ಷಾ ದಹನಾತ್ಮಿಕಾ ।
ಕರ್ತ್ರೀ ಹರ್ತ್ರೀ ಪಾಲಯಿತ್ರೀ ವಿನೈನಾಂ ಕಿಂ ವಿಲೋಕ್ಯತೇ ॥ ೩೯ ॥
ಚಿತ್ರಭಾನುರಯಂ ಸಾಕ್ಷಾನ್ನೇತ್ರಂ ತ್ರಿಭುವನೇಶಿತುಃ ।
ಅಂಧಂತಮೋಮಯೇ ಲೋಕೇ ವಿನೈನಂ ಕಃ ಪ್ರಕಾಶಕಃ ॥ ೪೦ ॥

---

ಧನವನ್ನೂ ಯಥಾಶಕ್ತಿ ದಾನಮಾಡುವಾತನು ಈ ಅರ್ಚಿಷ್ಮತೀಪಟ್ಟಣದಲ್ಲಿ ವಾಸಮಾಡುತ್ತಾನೆ

೩೫. ಬ್ರಾಹ್ಮಣರಿಗೆ ಯಜ್ಞೇಶ್ವರನೊಬ್ಬನೇ ಉತ್ತಮೋತ್ತಮವಾದ ಶ್ರೇಯಸ್ಸನ್ನು ಸಾಧಿಸಿಕೊಡುವ ಪರದೇವತೆಯು, ಗುರುವೂ, ದೇವತೆಯೂ, ವ್ರತ, ತೀರ್ಥ ಎಲ್ಲವೂ ಯಜ್ಞೇಶ್ವರನೆಂದೇ ನಿಶ್ಚಿತವಾಗಿದೆ.

೩೬. ಅಪವಿತ್ರಗಳಾದ ಸಮಸ್ತಪದಾರ್ಥಗಳೂ ಅಗ್ನಿ ಸಂಸರ್ಗದಿಂದ ಒಂದು ಕ್ಷಣಮಾತ್ರದಲ್ಲಿಯೇ ಪವಿತ್ರಗಳಾಗುತ್ತವೆಯಾದದ್ದರಿಂದ ಅಗ್ನಿಗೆ ಪಾವಕನೆಂದು ಹೆಸರಾಗಿದೆ

೩೭. ವೇದವನ್ನರಿತೂ ಅಗ್ನಿಯನ್ನು ತೊರೆದು, ಇತರ ದೈವಗಳಲ್ಲಿ ಮನಸ್ಸನ್ನು ನೆಲೆಗೊಳಿಸುವ ಬ್ರಾಹ್ಮಣನು ವೇದಜ್ಞನೆನಿಸುವುದಿಲ್ಲ

೩೮. ಆಶುಶುಕ್ಷಣಿಯೆಂದು ಪ್ರಸಿದ್ಧನಾದ ಈ ಅಗ್ನಿಯು ಸರ್ವಭೂತ ಗಳಲ್ಲಿಯೂ ಸಾಕ್ಷಾತ್ ಅಂತರಾತ್ಮಸ್ವರೂಪನಾಗಿರುವವನು. ಈತನು ಉದರ ದಲ್ಲಿ ಬಿದ್ದ ಮಾಂಸಕವಳಗಳನ್ನೂ ಪಕ್ವಮಾಡಿಬಿಡುವನು. ಈತನೇ ಸ್ತ್ರೀಯ ಗರ್ಭಕೋಶದಲ್ಲಿ ಬಿದ್ದ ಪಿಂಡವನ್ನು ಪಚನಗೊಳಿಸದೆ ವೃದ್ಧಿಗೊಳಿಸುವನು.

೩೯. ಪ್ರಪಂಚವನ್ನು ನಿರ್ಮಾಣಮಾಡಿ ಪರಿಶೀಲಿಸುವ ಪರಮೇಶ್ವರನ ದಹನಾತ್ಮಕವಾದ ತೇಜಶ್ಶಕ್ತಿಯೇ ಈ ಅಗ್ನಿಮೂರ್ತಿಯು. ಇವನನ್ನುಳಿದು ಏನು ತಾನೆ ಸಾಧ್ಯವಾದೀತು?

೪೦. ಚಿತ್ರಭಾನುವೆಂದು ಪ್ರಸಿದ್ಧನಾದ ಈ ಯಜ್ಞೇಶ್ವರನು ತ್ರಿಭುವನೇ

ಧೂಪಪ್ರದೀಪನೈವೇದ್ಯಪಯೋದಧಿಘೃತೈಕ್ಷವಂ ।
ಏತದ್ಭುಕ್ತಂ ನಿಷೇವಂತೇ ಸರ್ವೇ ದಿವಿ ದಿವೌಕಸಃ ॥ ೪೧ ॥

ಶಿವಶರ್ಮೋವಾಚ :—

ಕೋಽಯಂ ಕೃಶಾನುಃ ಕಸ್ಯಾಽಯಂ ಸೂನುಃ ಕಥಮಿದಂ ಪದಂ ।
ಆಗ್ನೇಯಂ ಲಬ್ಧವಾನೇತೇನ ಬ್ರೂತಮೇತನ್ಮಮಾಽಗ್ರತಃ ॥ ೪೨ ॥

ಗಣಾವೂಚತುಃ :—

ಆಕರ್ಣಯ ಮಹಾಪ್ರಾಜ್ಞ ವರ್ಣಯಾವೋ ಯಥಾ ತಥಂ ।
ಯೋಽಯಂ ಯಸ್ಯ ಯಥಾಽನೇನ ಪ್ರಾಪಿ ಜ್ಯೋತಿಷ್ಮತೀ ಪುರೀ ॥ ೪೩ ॥
ನರ್ಮದಾಯಾಸ್ತಟೇ ರಮ್ಯೇ ಪುರೇ ನರ್ಮಪುರೇ ಪುರಾ ।
ಪುರಾರಿಭಕ್ತಃ ಪುಣ್ಯಾತ್ಮಾಽಭವದ್ವಿಶ್ವಾನರೋ ಮುನಿಃ ॥ ೪೪ ॥
ಬ್ರಹ್ಮಚರ್ಯಾಶ್ರಮೀ ನಿಷ್ಠೋ ಬ್ರಹ್ಮಯಜ್ಞರತಃ ಸದಾ ।
ಶಾಂಡಿಲ್ಯಗೋತ್ರಃ ಶುಚಿಮಾನ್ಬ್ರಹ್ಮತೇಜೋ ನಿಧಿರ್ವಶೀ ॥ ೪೫ ॥

---

ಶ್ವರನ ನೇತ್ರವೇ ಆಗಿರುವನು. ಇವನನ್ನುಳಿದು ತಮೋಮಯವಾದ ಈ ಲೋಕವನ್ನು ಬೆಳಗಿಸುವವನು ಯಾವನು ತಾನೆ ಇರುವನು ?

೪೧. ಸಮಸ್ತ ದೇವತೆಗಳೂ ಸ್ವರ್ಗಲೋಕದಲ್ಲಿದ್ದುಕೊಂಡೇ ಧೂಪ ದೀಪ ನೈವೇದ್ಯಗಳಿಂದಲೂ ಹಾಲು ಮೊಸರು ತುಪ್ಪ ಬೆಲ್ಲಗಳಿಂದಲೂ ಕೂಡಿದ ವೇದ ವಿಹಿತಗಳ ಪೂಜೆಯನ್ನು ಹವಿಸ್ಸಿನ ರೂಪದಿಂದ ಈ ಯಜ್ಞೇಶ್ವರನ ಮೂಲಕವಾಗಿ ಭುಜಿಸುತ್ತಾರೆ.

೪೨. ಶಿವಶರ್ಮನು ಕೇಳುತ್ತಾನೆ —ಎಲೈ ವಿಷ್ಣುಭಕ್ತರೆ, ಈ ಕೃಶಾನುವು ಯಾರು ? ಯಾರ ಮಗ ? ಇಂಥ ಅಗ್ನಿಪದವಿಯನ್ನು ಇವನು ಪಡೆದುದು ಹೇಗೆ ? ಈ ವಿಷಯವೆಲ್ಲವನ್ನೂ ನನಗೆ ತಿಳಿಸಬೇಕು

೪೩. ಗಣಗಳು ಹೇಳುತ್ತಾರೆ —ಅಯ್ಯಾ ಮಹಾಪ್ರಾಜ್ಞನೆ ಕೇಳು. ಈ ವಿಷಯವನ್ನು ಯಥಾರ್ಥವಾಗಿ ನಿನಗೆ ತಿಳಿಸುತ್ತೇವೆ. ಇವನು ಯಾರು, ಯಾರ ಮಗ, ಈ ಜ್ಯೋತೀಷ್ಮತೀಪಟ್ಟಣವನ್ನು ಇವನು ಹೊಂದಿದುದು ಹೇಗೆ ಎಂಬ ವಿಷಯುವನ್ನು ಹೇಳುತ್ತೇವೆ ಕೇಳು.

೪೪ ಪೂರ್ವದಲ್ಲಿ ನರ್ಮದಾತೀರದ ಮನೋಹರವಾದ ನರ್ಮಪುರದಲ್ಲಿ ಮಹಾಶಿವಭಕ್ತನೂ, ಪುಣ್ಯಾತ್ಮನೂ ಆದ ವಿಶ್ವಾನರನೆಂಬ ಮುನಿಯು ವಾಸವಾಗಿದ್ದನು.

೪೫. ಶಾಂಡಿಲ್ಯಗೋತ್ರೋದ್ಭವನೂ, ಶುಚಿಯೂ, ಬ್ರಹ್ಮತೇಜಸ್ಸಿಗೆ ನಿಧಿಯಂತಿರುವವನೂ, ಜಿತೇಂದ್ರಿಯನೂ ಆದ ಆ ವಿಶ್ವಾನರನು ಬ್ರಹ್ಮಚರ್ಯಾಶ್ರಮದಲ್ಲಿ ನಿಷ್ಠನಾಗಿಯೂ ಬ್ರಹ್ಮಯಜ್ಞನಿರತನಾಗಿಯೂ ಇದ್ದನು.

ವಿಜ್ಞಾತಾಽಖಿಲಶಾಸ್ತ್ರಾರ್ಥೋ ಲೌಕಿಕಾಚಾರಚಂಚುರಃ ।
ಕದಾಚಿಚ್ಚಿಂತಯಾಮಾಸ ಹೃದಿ ಧ್ಯಾತ್ವಾ ಮಹೇಶ್ವರಂ ॥ ೪೬ ॥
ಚತುರ್ಣಾಮಪ್ಯಾಶ್ರಮಾಣಾಂ ಕೋಽತೀವ ಶ್ರೇಯಸೇ ಸತಾಂ ।
ಯಸ್ಮಿನ್ನಾಪ್ನೋತಿ ಸಂಕೃಣ್ಣೋ ಪರತ್ರೇಹ ಚ ವಾ ಸುಖಂ ॥ ೪೭ ॥
ಇದಂ ಶ್ರೇಯಸ್ತ್ವಿದಂ ಶ್ರೇಯಸ್ತ್ವಿದಂ ತು ಸುಕರಂ ಭವೇತ್ ।
ಇತ್ಥಂ ಸರ್ವಂ ಸಮಾಲೋಚ್ಯ ಗಾರ್ಹಸ್ಥ್ಯಂ ಪ್ರಶಶಂಸ ಹ ॥ ೪೮ ॥
ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋಽಥ ಭಿಕ್ಷುಕಃ ।
ಏಷಾಮಾಧಾರಭೂತೋಽಸೌ ಗೃಹಸ್ಥೋ ನಾಽನ್ಯಥೇತಿ ಚ ॥ ೪೯ ॥
ದೇವೈರ್ಮನುಷ್ಯೈಃ ಪಿತೃಭಿಸ್ತಿರ್ಯಗ್ಭಿಶ್ಚೋಪಜೀವ್ಯತೇ ।
ಗೃಹಸ್ಥಃ ಪ್ರತ್ಯಹಂ ಯಸ್ಮಾತ್ತಸ್ಮಾಚ್ಛ್ರೇಷ್ಠೋ ಗೃಹಾಶ್ರಮೀ ॥ ೫೦ ॥
ಅಸ್ನಾತ್ವಾ ಚಾಽಪ್ಯಹುತ್ವಾ ವಾಽದತ್ವಾಽಶ್ನಾತಿ ಯೋ ಗೃಹೀ ।
ದೇವಾದೀನಾಮೃಣೀ ಭೂತ್ವಾ ನರಕಂ ಪ್ರತಿಪದ್ಯತೇ ॥ ೫೧ ॥

---

೪೬ ಆತನು ಸಕಲ ಶಾಸ್ತ್ರಗಳನ್ನೂ ಬಲ್ಲವನು. ಲೌಕಿಕವ್ಯವಹಾರಗಳಲ್ಲಿ ಮಹಾ ಚತುರನು. ಒಮ್ಮೆ ಆತನು ಮಹೇಶ್ವರನನ್ನು ಮನಸ್ಸಿನಲ್ಲಿಯೇ ಧ್ಯಾನಿಸುತ್ತ ಈ ರೀತಿ ಯೋಚಿಸಿದನು.

೪೭. "ಬ್ರಹ್ಮಚರ್ಯವೇ ಮೊದಲಾದ ನಾಲ್ಕು ಆಶ್ರಮಗಳಲ್ಲಿಯೂ ಸತ್ಪುರುಷರಿಗೆ ಅತ್ಯಂತಿಕವಾದ ಶ್ರೇಯಸ್ಸನ್ನು ದೊರಕಿಸುವ ಆಶ್ರಮವಾವುದು ? ಯಾವ ಆಶ್ರಮವನ್ನು ನೆಮ್ಮಿದರೆ ಇಹಪರಗಳಲ್ಲಿ ಸುಖವುಂಟಾಗುತ್ತದೆ ?

೪೮ ಇದು ಶ್ರೇಯಸ್ಕರವಾದೀತು, ಇದೇ ಶ್ರೇಯಸ್ಕರ, ಇದರಿಂದ ಒಳ್ಳಿತಾದೀತು, ಎಂದು ಎಲ್ಲ ಆಶ್ರಮಗಳ ವಿಚಾರವಾಗಿಯೂ ಚೆನ್ನಾಗಿ ವಿಮರ್ಶೆ ಮಾಡಿದ ತರುವಾಯ ಆ ಮುನಿಯು ಗೃಹಸ್ಥಾಶ್ರಮವನ್ನೇ ಬಹಳವಾಗಿ ಹೊಗಳಿದನು.

೪೯ ಬ್ರಹ್ಮಚಾರಿಯಾಗಲಿ ಗೃಹಸ್ಥನಾಗಲಿ ವಾನಪ್ರಸ್ಥಭಿಕ್ಷುಕರೇ ಆಗಲಿ-ಇವರೆಲ್ಲರಿಗೂ ಗೃಹಸ್ಥನೇ ಆಧಾರಭೂತನಾಗಿರುವನು

೫೦ ದೇವತೆಗಳೂ, ಮನುಷ್ಯರೂ, ಪಿತೃಗಳೂ ಕಡೆಗೆ ತಿರ್ಯಗ್ಜಂತುಗಳೂ ಪ್ರತಿದಿನವೂ ಗೃಹಸ್ಥಾಶ್ರಮಿಯನ್ನೇ ಅವಲಂಬಿಸಿ ಜೀವಿಸುತ್ತಾರೆಯಾದುದರಿಂದ, ಗೃಹಸ್ಥಾಶ್ರಮಿಯಾದವನೇ ಶ್ರೇಷ್ಠನೆನಿಸುತ್ತಾನೆ.

೫೧. ಯಾವ ಗೃಹಸ್ಥನು ಸ್ನಾನಮಾಡದೆಯೂ ಅಗ್ನಿಹೋತ್ರಾದಿ ಸತ್ಕರ್ಮಗಳನ್ನು ಅನುಷ್ಠಿಸದೆಯೂ ಅತಿಥಿ ಅಭ್ಯಾಗತರಿಗೆ ಅನ್ನವನು ನೀಡದೆಯೂ ಊಟಮಾಡುತ್ತಾನೆಯೊ ಅವನು ದೇವ ಋಷಿ ಪಿತೃಗಳಿ[illegible] ಋಣಿಯಾಗಿ ಮರಣಾನಂತರದಲ್ಲಿ ನರಕದಲ್ಲಿ ಬೀಳುತ್ತಾನೆ.

ಅಸ್ನಾತಾಽಶೀ ಮಲಂ ಭುಂಕ್ತೇ ತ್ವಜಪೀ ಪೂಯಶೋಣಿತಂ ।
ಅಹುತಾಽಶೀ ಕೃಮೀನ್ಭುಂಕ್ತೇಽಪ್ಯದತ್ವಾ ವಿಡ್ವಿಭೋಜನಃ ॥ ೫೨ ॥
ಬ್ರಹ್ಮಚರ್ಯಂ ಹಿ ಗಾರ್ಹಸ್ಥ್ಯೇ ಯಾದೃಕ್ಕಲ್ಪನಯೋಜ್ಝಿತಂ ।
ಸ್ವಭಾವಚಪಲೇ ಚಿತ್ತೇ ಕ್ವ ತಾದೃಗ್ಬ್ರಹ್ಮಚಾರಿಣಿ ॥ ೫೩ ॥
ಹಠಾದ್ವಾ ಲೋಕಭೀತ್ಯಾ ವಾ ಸ್ವಾರ್ಥಾದ್ವಾ ಬ್ರಹ್ಮಚರ್ಯಭಾಕ್ ।
ಸಂಕಲ್ಪಯತಿ ಚಿತ್ತೇ ಚೇತ್ಕೃತಮಪ್ಯಕೃತಂ ತದಾ ॥ ೫೪ ॥
ಪರದಾರಪರಿತ್ಯಾಗಾತ್ಸ್ವದಾರಪರಿತುಷ್ಟಿತಃ ।
ಋತುಕಾಲಾಽಭಿಗಾಮಿತ್ವಾದ್ಬ್ರಹ್ಮಚಾರೀ ಗೃಹೀರಿತಃ ॥ ೫೫ ॥
ವಿಮುಕ್ತರಾಗದ್ವೇಷೋ ಯಃ ಕಾಮಕ್ರೋಧವಿವರ್ಜಿತಃ ।
ಸಾಽಗ್ನಿಃ ಸದಾರಃ ಸಗೃಹೀ ವಾನಪ್ರಸ್ಥಾದ್ವಿಶಿಷ್ಯತೇ ॥ ೫೬ ॥

---

೫೨. ಗೃಹಸ್ಥನಾದವನು ಸ್ನಾನಮಾಡದೆ ಭುಜಿಸಿದಲ್ಲಿ ಮಲವನ್ನು ಭುಜಿಸಿದಂತಾಗುವುದು. ಜಪಮಾಡದೆ ಭುಜಿಸಿದಲ್ಲಿ ಕೀವು ರಕ್ತಗಳನ್ನು ಭುಜಿಸಿದಂತೆಯೆ ಅಗ್ನಿಹೋತ್ರಾದಿಗಳನ್ನು ಮಾಡದೆ ಭೋಜನಮಾಡುವ ಗೃಹಸ್ಥನು ಕ್ರಿಮಿಗಳನ್ನೇ ಭುಜಿಸುತ್ತಾನೆಯಲ್ಲದೆ ಅನ್ನವನ್ನಲ್ಲ ಅಂತೆಯೆ ಅತಿಥಿ ಅಭ್ಯಾಗತರಿಗೆ ಉಣಬಡಿಸದೆ ಊಟಮಾಡುವವನು ಅಮೇಧ್ಯಭೋಜಿಯೆನಿಸುವನು.

೫೩. ಗೃಹಸ್ಥಾಶ್ರಮದಲ್ಲಿ ಯಾವ ಬ್ರಹ್ಮಚರ್ಯವ್ರತವಿರುವುದೊ ಅದು ಚಪಲಚಿತ್ತವನ್ನೊಳಗೊಂಡ ಬ್ರಹ್ಮಚಾರಿಗೆ ಇರುವುದಿಲ್ಲ. ಏಕೆಂದರೆ, ಗೃಹಸ್ಥಾಶ್ರಮಿಯ ಬ್ರಹ್ಮಚರ್ಯವು ಸಂಕಲ್ಪದಿಂದ ಬಿಡುಗಡೆಯಾದುದು ಅದು ಅವನಿಗೆ ಸ್ವಾಭಾವಿಕವಾಗಿಯೇ ಇರುತ್ತದೆ

೫೪. ಹಟದಿಂದಲೊ ಲೋಕಭೀತಿಯಿಂದಲೊ ಸ್ವಾರ್ಥದಿಂದಲೊ ಬ್ರಹ್ಮಚರ್ಯವನ್ನು ಚರಿಸುವೆನೆಂದು ಮನಸ್ಸಿನಲ್ಲಿಯೆ ಸಂಕಲ್ಪಮಾಡಿಕೊಳ್ಳುವ ಗೃಹಸ್ಥಾಶ್ರಮಿಯು ಮಾಡಿದ ಸತ್ಕರ್ಮಗಳೆಲ್ಲವೂ ವ್ಯರ್ಥವೇ ಆಗುವುದು.

೫೫ ಪರಸ್ತ್ರೀಯರನ್ನು ತ್ಯಾಗಮಾಡುವುದರಿಂದಲೂ, ಕೈಹಿಡಿದ ಹೆಂಡತಿಯಿಂದಲೆ ತೃಪ್ತಿಪಡೆಯುವುದರಿಂದಲೂ, ಆಕೆಯನ್ನು ಕೂಡುವಾಗಲೂ ಋತುಕಾಲಗಳನ್ನು ಗಮನಿಸಿ ನಡೆಯುವ ಗೃಹಸ್ಥಾಶ್ರಮಿಯು ಬ್ರಹ್ಮಚಾರಿಯೆನಿಸುತ್ತಾನೆ.

೫೬. ರಾಗದ್ವೇಷಗಳನ್ನು ತೊರೆದು ಕಾಮಕ್ರೋಧವಿವರ್ಜಿತನಾಗಿ ಅಗ್ನಿಹೋತ್ರಿಯೂ, ಸಪತ್ನೀಕನೂ ಆದ ಗೃಹಸ್ಥನು ವಾನಪ್ರಸ್ಥಾಶ್ರಮಿಗಿಂತಲೂ ಶ್ರೇಷ್ಠನೆನಿಸುತ್ತಾನೆ.

ವೈರಾಗ್ಯಾದ್ಗೃಹಮುತ್ಸೃಜ್ಯ ಗೃಹಧರ್ಮಾನ್ ಹೃದಿ ಸ್ಮರೇತ್ ।
ಸಭವೇದುಭಯಭ್ರಷ್ಟೋ ವಾನಪ್ರಸ್ಥೋ ನ ವಾ ಗೃಹೀ ॥ ೫೭ ॥
ಅಯಾಚಿತೋಪಸ್ಥಿತಯಾ ಯೋ ವೃತ್ತ್ಯಾ ವರ್ತತೇ ಗೃಹೀ ।
ಯೇನ ಕೇನಾಽಪಿ ಸಂತುಷ್ಟೋ ಭಿಕ್ಷುಕಃ ಸ ವಿಶಿಷ್ಯತೇ ॥ ೫೮ ॥
ಪ್ರಾರ್ಥಯೇದ್ಯತ್ಕ್ವಚಿತ್ಕಿಂಚಿದ್ದುಷ್ಪ್ರಾಪಂ ವಾ ಭವಿಷ್ಯತಿ ।
ಅಶನೇಷು ನ ಸಂತುಷ್ಟಃ ಸ ಯತಿಃ ಪತಿತೋ ಭವೇತ್ ॥ ೫೯ ॥
ಗುಣಾಽಗುಣಂ ವಿಚಾರ್ಯೇತ್ಥಂ ಸವೈ ವಿಶ್ವಾನರೋ ದ್ವಿಜಃ ।
ಉದ್ವವಾಹ ವಿಧಾನೇನ ಸ್ವೋಚಿತಾಂ ಕುಲಕನ್ಯಕಾಂ ॥ ೬೦ ॥
ಅಗ್ನಿಶುಶ್ರೂಷಣರತಃ ಪಂಚಯಜ್ಞಪರಾಯಣಃ ।
ಷಟ್ಕರ್ಮನಿರತೋ ನಿತ್ಯಂ ದೇವಪಿತ್ರತಿಥಿಪ್ರಿಯಃ ॥ ೬೧ ॥
ಧರ್ಮಾರ್ಥಕಾಮಾನ್ಯುಕ್ತಾತ್ಮಾ ಸೋಽರ್ಜಯನ್ಸ್ವಸ್ವಕಾಲತಃ ।
ಪರಸ್ಪರಮಸಂಕೋಚಂ ದಂಪತ್ಯೋರಾನುಕೂಲ್ಯತಃ ॥ ೬೨ ॥

---

೫೭ ಕಾಲವಲ್ಲದ ಕಾಲದಲ್ಲಿ ವೈರಾಗ್ಯವನ್ನು ಕಾರಣಾಂತರಗಳಿಂದ ತಂದುಕೊಂಡು ಮನೆಯನ್ನು ಬಿಟ್ಟು ಕಾಡು ಸೇರಿ, ಮನಸ್ಸಿನಲ್ಲಿ ಯಾವಾಗಲೂ ಗೃಹಧರ್ಮಗಳನ್ನೇ ಸ್ಮರಿಸುತ್ತ ಕಾಲಕಳೆಯುವವನು ವಾನಪ್ರಸ್ಥನೂ ಆಗದೆ ಅವನ ಗೃಹಸ್ಥಧರ್ಮವೂ ಕೆಟ್ಟು ಉಭಯಭ್ರಷ್ಟನೆನಿಸುತ್ತಾನೆ

೫೮. ಬೇಡದೆ ತಾನಾಗಿಯೆ ಒದಗಿಬಂದ ದ್ರವ್ಯದಿಂದ ಜೀವನವನ್ನು ನಡಸುತ್ತ ಹೇಗೊ ತೃಪ್ತಿಯನ್ನು ಪಟ್ಟುಕೊಂಡು, ತ್ರಿಕರಣಶುದ್ಧವಾಗಿರುವ ಗೃಹಸ್ಥನು ಸಂನ್ಯಾಸಿಗಿಂತಲೂ ಶ್ರೇಷ್ಠನೆನಿನುತ್ತಾನೆ.

೫೯ ಯಾವ ಸಂನ್ಯಾಸಿಯು ಎಲ್ಲಿಯೊ ಕೇಳಬಾರದ ಎಡೆಯಲ್ಲಿ ದೊರಕದುದನ್ನು ಕೇಳಿ, ಅದು ದೊರಕದಿದ್ದರೆ ವ್ಯಸನಪಟ್ಟುಕೊಂಡು ರೇಗಿ ಮನಸ್ಸನ್ನು ಕೆಡಿಸಿಕೊಂಡು, ಭೋಜನದಲ್ಲಿಯೂ ಅಸಂತುಷ್ಟನಾಗುತ್ತಾನೆಯೊ ಅವನು ಪತಿತನೆನಿಸುತ್ತಾನೆ.''

೬೦. ಅಯ್ಯಾ ಶಿವಶರ್ಮನೆ, ಆ ವಿಶ್ವಾನರ ಮುನಿಯು ಈ ರೀತಿ ನಾಲ್ಕೂ ಆಶ್ರಮಗಳ ವಿಷಯದಲ್ಲಿ ವಿಮರ್ಶೆಮಾಡಿ, ಗೃಹಸ್ಥಾಶ್ರಮವೇ ಶ್ರೇಷ್ಠವೆಂದು ನಿರ್ಣಯಿಸಿ ತನಗೆ ಅನುರೂಪಳಾದ ಸತ್ಕುಲಪ್ರಸೂತೆಯಾದ ಕನ್ನಿಕೆಯೊರ್ವಳನ್ನು ವಿಧ್ಯುಕ್ತವಾಗಿ ವಿವಾಹವಾದನು.

೬೧. ವಿವಾಹವಾದಮೇಲೆ ಆ ವಿಪ್ರನು ಪ್ರತಿದಿನವೂ ಅಗ್ನಿಶುಶ್ರೂಷಣನಿರತನಾಗಿಯೂ ಪಂಚಯಜ್ಞಪರಾಯಣನಾಗಿಯೂ ಯಜನಾದಿ ಷಟ್ಕರ್ಮನಿಷ್ಠನಾಗಿಯೂ ದೇವ ಪಿತೃ ಅಥಿತಿಗಳಿಗೆ ಅತ್ಯಂತ ಪ್ರಿಯನಾಗಿಯೂ ಇದ್ದನು.

೬೨. ಮನಸ್ಸನ್ನು ಸ್ಥಿರಗೊಳಿಸಿಕೊಂಡು ಅವವುಗಳ ಕಾಲದಲ್ಲಿ ಧರ್ಮಾರ್ಥ

ಪೂರ್ವಾಹ್ನೇ ದೈವಿಕಂ ಕರ್ಮ ಸೋಽಕರೋತ್ಕರ್ಮಕಾಂಡವಿತ್ ।
ಮಧ್ಯಂ ದಿನೇ ಮನುಷ್ಯಾಣಾಂ ಪಿತ್ರ್ಯಾಣಾಮಪರಾಹ್ಣಕೇ ॥ ೬೩ ॥
ಏವಂ ಬಹುತಿಥೇ ಕಾಲೇ ಗತೇ ತಸ್ಯಾಗ್ರಜನ್ಮನಃ ।
ಭಾರ್ಯಾ ಶುಚಿಷ್ಮತೀ ನಾಮ ಕಾಮಪತ್ನೀವ ಸುವ್ರತಾ ॥ ೬೪ ॥
ಅಪಶ್ಯಂತ್ಯಂಕುರಮಪಿ ಸಂತತೇಃ ಸ್ವರ್ಗಸಾಧನಂ ।
ವಿಜ್ಞಾಯ ಶಂಕರಂ ಕಾಂತಂ ಪ್ರಣಿಪತ್ಯ ವ್ಯಜಿಜ್ಞಪತ್ ॥ ೬೫ ॥

ಶುಚಿಷ್ಮತ್ಯುವಾಚ :—

ಆರ್ಯಪುತ್ರಾರ್ಯಧಿಷಣ ಪ್ರಾಣನಾಥ ಪ್ರಿಯವ್ರತ ।
ನ ದುರ್ಲಭಂ ಮಮಾಸ್ತೀಹ ಕಿಂಚಿತ್ತ್ವಚ್ಚರಣಾರ್ಚನಾತ್ ॥ ೬೬ ॥
ಯೇ ವೈ ಭೋಗಾಃ ಸಮುಚಿತಾಃ ಸ್ತ್ರೀಣಾಂ ತೇ ತ್ವತ್ಪ್ರಸಾದತಃ ।
ಅಲಂಕೃತ್ಯ ಮಯಾಭುಕ್ತಾಃ ಪ್ರಸಂಗಾದ್ವಚ್ಮಿ ತಾನ್ಯಪಿ ॥ ೬೭ ॥

---

ಕಾಮಗಳನ್ನು ಸಂಪಾದಿಸುತ್ತಿದ್ದನು ಅನುಕೂಲದಾಂಪತ್ಯವಿದ್ದುದರಿಂದ ಆ ದಂಪತಿಗಳಲ್ಲಿ ಯಾವ ಬಗೆಯಲ್ಲಿಯೂ ಸಂಕೋಚವೆಂಬುದೇ ಇರಲಿಲ್ಲ

೬೩ ಕರ್ಮಕಾಂಡವನ್ನು ಚೆನ್ನಾಗಿ ಬಲ್ಲ ಆ ವಿಶ್ವಾನರನು ಪೂರ್ವಾಹ್ನದಲ್ಲಿ ದೇವಪೂಜಾದಿ ಸತ್ಕರ್ಮಗಳನ್ನೂ, ಮಧ್ಯಾಹ್ನದಲ್ಲಿ ಅತಿಥಿ ಅಭ್ಯಾಗತರ ಸೇವೆಯನ್ನೂ ಅಪರಾಹ್ನದಲ್ಲಿ ಪಿತೃತರ್ಪಣಾದಿ ಕ್ರಿಯೆಗಳನ್ನೂ ಬಿಡದೆ ಮಾಡುತ್ತಿದ್ದನು.

೬೪–೬೫. ಹೀಗೆ, ಬಹುಕಾಲ ಕಳೆಯಲು ಕಾಮಪತ್ನಿಯಾದ ರತಿಯಂತೆ ಮಹಾಪತಿವ್ರತೆಯೆನಿಸಿದ ಆ ಬ್ರಾಹ್ಮಣನ ಮಡದಿಯಾದ ಶುಚಿಷ್ಮತಿಯು ಸ್ವರ್ಗಕ್ಕೆ ಸಾಧನವಾದ ಸಂತತಿಯ ಅಂಕುರವನ್ನೇ ಕಾಣದವಳಾಗಿ, ಈಶ್ವರ ಸ್ವರೂಪನಾಗಿ ಸಮಸ್ತ ಇಷ್ಟಾರ್ಥಗಳನ್ನೂ ಈಡೇರಿಸುವ ತನ್ನ ಕಾಂತನನ್ನು ಬಳಿಸಾರಿ ಮಣಿದು ಈ ರೀತಿ ವಿಜ್ಞಾಪಿಸಿಕೊಂಡಳು.

೬೬. ಶುಚಿಷ್ಮತಿಯು ಹೇಳುತ್ತಾಳೆ —ಆರ್ಯಪುತ್ರ, ನಿನ್ನ ಬುದ್ಧಿಯು ಸುಸಂಸ್ಕೃತವಾದುದು. ನೀನು ನನ್ನ ಪ್ರಾಣನಾಥನು ಅತ್ಯಂತಪ್ರಿಯವಾದ ವ್ರತಗಳುಳ್ಳವನು ಇಂಥ ನಿನ್ನ ಚರಣಸೇವೆಯನ್ನೆಸಗುತ್ತಿರುವ ನನಗೆ ಈ ಲೋಕದಲ್ಲಿ ದುರ್ಲಭವಾದುದು ಯಾವುದೂ ಇರುವುದಿಲ್ಲ.

೬೭. ಸ್ತ್ರೀಯರಿಗೆ ಯಾವ ಯಾವ ಭೋಗಭಾಗ್ಯಗಳು ತಕ್ಕುವೆಂದು ತಿಳಿಯಲಾಗಿರುವುವೊ ಅವುಗಳೆಲ್ಲವೂ ನಿನ್ನ ಅನುಗ್ರಹದಿಂದಲೆ ನನಗೆ ಲಭಿಸಿರುತ್ತವೆ. ನೀನೂ ಆ ಭೋಗಭಾಗ್ಯಗಳನ್ನು ನನ್ನೊಡನೆ ಸಮಸಮವಾಗಿ ಅನುಭವಿಸಿರುತ್ತೀಯೆ. ಪ್ರಸಂಗವಶದಿಂದ ಅವುಗಳನ್ನು ಹೇಳುತ್ತೇನೆ.

ಸುವಾಸಾಂಸಿ ಸುವಾಸಾಶ್ಚ ಸುಶಯ್ಯಾ ಸುನಿತಂಬಿನೀ ।
ಸ್ರಕ್ತಾಂಬೂಲಾಽನ್ನಪಾನಾಶ್ಚ ಅಷ್ಟೌ ಭೋಗಾಃ ಸ್ವಧರ್ಮಿಣಾಂ ॥ ೬೮ ॥
ಏಕಂ ಮೇ ಪ್ರಾರ್ಥಿತಂ ನಾಥ ಚಿರಾಯ ಹೃದಿ ಸಂಸ್ಥಿತಂ ।
ಗೃಹಸ್ಥಾನಾಂ ಸಮುಚಿತಂ ತತ್ತ್ವಂ ದಾತುಮಿಹಾಽರ್ಹಸಿ ॥ ೬೯ ॥

ವಿಶ್ವಾನರ ಉವಾಚ :—

ಕಿಮದೇಯಂ ಹಿ ಸುಶ್ರೋಣಿ ತವ ಪ್ರಿಯಹಿತೈಷಿಣಿ ।
ತತ್ಪ್ರಾರ್ಥಯ ಮಹಾಭಾಗೇ ಪ್ರಯಚ್ಛಾಮ್ಯವಿಲಂಬಿತಂ ॥ ೭೦ ॥
ಮಹೇಶಿತುಃ ಪ್ರಸಾದೇನ ಮಮ ಕಿಂಚಿನ್ನದುರ್ಲಭಂ ।
ಇಹಾಽಮುತ್ರ ಚ ಕಲ್ಯಾಣಿ ಸರ್ವಕಲ್ಯಾಣಕಾರಿಣಃ ॥ ೭೧ ॥
ಇತಿ ಶ್ರುತ್ವಾ ವಚಃ ಪತ್ಯುಸ್ತಸ್ಯ ಸಾ ಪತಿದೇವತಾ ।
ಉವಾಚ ಹೃಷ್ಟವದನಾ ಯದಿ ದೇಯೋ ವರೋ ಮಮ ॥ ೭೨ ॥

---

೬೮. ಸ್ವಧರ್ಮದಲ್ಲಿ ತೊಡಗಿರುವವರಿಗೆ ಒಳ್ಳೆಯ ವಸ್ತ್ರಗಳೂ, ಮನೋಹರವಾದ ಭವನಗಳು, ಸುಂದರವಾದ ಶಯನ, ಸುರೂಪಿಣಿಯರಾದ ದಾಸಿಯರು, ಪುಷ್ಪಮಾಲಿಕೆ ತಾಂಬೂಲ ಅನ್ನಪಾನಗಳು—ಎಂಬಿವೇ ಅಷ್ಟಭೋಗಗಳೆನಿಸುತ್ತವೆ. ಇವುಗಳೆಲ್ಲವನ್ನೂ ನಾನು ಅನುಭವಿಸಿರುತ್ತೇನೆ

೬೯. ಆದರೆ, ಎಲೈ ಸ್ವಾಮಿಯೆ, ಬಹಳ ಕಾಲದಿಂದಲೂ ನನ್ನ ಮನಸ್ಸಿನಲ್ಲಿಯೆ ನೆಲಸಿರುವ ಒಂದು ಪ್ರಾರ್ಥನೆಯುಂಟು. ಅದು ಗೃಹಸ್ಥರಿಗೆ ಯೋಗ್ಯವಾದದ್ದು ಅದನ್ನು ನಡಸಿಕೊಡಲು ನೀನು ಕೃಪೆಮಾಡಬೇಕು.

೭೦. ವಿಶ್ವಾನರನು ಹೇಳುತ್ತಾನೆ —"ಎಲೆ ಶುಶ್ರೋಣಿ, ನನಗೆ ಅತ್ಯಂತ ಪ್ರಿಯಳೂ ನನ್ನ ಹಿತವನ್ನೆ ಬಯಸುವವಳೂ ಆದ ನಿನಗೆ ಅದೇಯವಾದುದು ಯಾವುದೂ ಇರುವುದಿಲ್ಲ ಆದುದರಿಂದ ಮಹಾಭಾಗ್ಯಶಾಲಿನಿಯಾದ ನೀನು ಸಂಕೋಚವಿಲ್ಲದೆ ಕೇಳು. ಕಾಲವಿಲಂಬವಿಲ್ಲದೆಯೆ ನಾನು ಕೊಡುತ್ತೇನೆ.

೭೧–೭೨. ಓ ಕಲ್ಯಾಣಿ, ಸಮಸ್ತ ಕಲ್ಯಾಣಗಳನ್ನೂ ಉಂಟುಮಾಡಿಕೊಡುವ ಸಾಕ್ಷಾತ್ ಪರಮೇಶ್ವರನ ಅನುಗ್ರಹಕ್ಕೆ ಪಾತ್ರನಾಗಿರುವ ನನಗೆ ಈ ಲೋಕದಲ್ಲಿಯಾಗಲಿ, ಪರಲೋಕದಲ್ಲಿಯಾಗಲಿ ದುರ್ಲಭವಾದುದು ಯಾವುದೂ ಇರುವುದಿಲ್ಲ." ಎಲೈ ಶಿವಶರ್ಮನೆ, ವಿಶ್ವಾನರನಿಂತೆನಲು ಪತಿದೇವತೆಯಾದ ಆ ಶುಚಿಷ್ಮತಿಯು ಸಂತೋಷದಿಂದರಳಿದ ಮುಖವುಳ್ಳವಳಾಗಿ, "ನಾಥ, ನೀನು ನನಗೆ ವರವನ್ನು ಕರುಣಿಸಿದೆ. ನಾನು ಆ ವರವನ್ನು ಪಡೆಯಲು ಯೋಗ್ಯಳೇ ಆಗಿದ್ದರೆ, ಮಹಾ ಶಿವಭಕ್ತನಾದ ನೀನು ನನಗೆ ಪರಮೇಶ್ವರನಿಗೆಣೆಯಾದ ಪುತ್ರನನ್ನು ಅನುಗ್ರಹಿಸು. ಇದೊಂದು ವರವನ್ನುಳಿದು ಬೇರಾವ ವರವನ್ನೂ ಬಯಸುವುದಿಲ್ಲ."

ವರಯೋಗ್ಯಾಽಸ್ಮಿ ಚೇನ್ನಾಥ ನಾಽನ್ಯಂ ವರಮಹಂ ವೃಣೇ ।
ಮಹೇಶಸದೃಶಂ ಪುತ್ರಂ ದೇಹಿ ಮಾಹೇಶ್ವರಾಽನಘ ॥ ೭೩ ॥
ಇತಿ ತಸ್ಯಾ ವಚಃ ಶ್ರುತ್ವಾ ಶುಚಿಷ್ಮತ್ಯಾಃ ಶುಚಿವ್ರತಃ ।
ಕ್ಷಣಂ ಸಮಾಧಿಮಾಧಾಯ ಹೃದ್ಯೇತತ್ಸಮಚಿಂತಯತ್ ॥ ೭೪ ॥
ಅಹೋ ಕಿಮೇತಯಾ ತನ್ವ್ಯಾ ಪ್ರಾರ್ಥಿತಂ ಹ್ಯತಿದುರ್ಲಭಂ ।
ಮನೋರಥಪಥಾದ್ದೂರಮಸ್ತುವಾ ಸಹಿ ಸರ್ವಕೃತ್ ॥ ೭೫ ॥
ತೇನೈವಾಽಸ್ಯಾ ಮುಖೇ ಸ್ಥಿತ್ವಾ ವಾಕ್ಸ್ವರೂಪೇಣ ಶಂಭುನಾ ।
ವ್ಯಾಹೃತಂ ಕೋಽನ್ಯಥಾ ಕರ್ತುಮುತ್ಸಹೇತ ಭವೇದಿದಂ ॥ ೭೬ ॥
ತತಃ ಪ್ರೋವಾಚ ತಾಂ ಪತ್ನೀಮೇಕಪತ್ನೀವ್ರತೇ ಸ್ಥಿತಃ ।
ವಿಶ್ವಾನರ ಮುನಿಃ ಶ್ರೀಮಾನಿತಿ ಕಾಂತೇ ಭವಿಷ್ಯತಿ ॥ ೭೭ ॥
ಇತ್ಥಮಾಶ್ವಾಸ್ಯ ತಾಂ ಪತ್ನೀಂ ಜಗಾಮ ತಪಸೇ ಮುನಿಃ ।
ಯತ್ರ ವಿಶ್ವೇಶ್ವರಃ ಸಾಕ್ಷಾತ್ಕಾಶೀನಾಥೋಽಧಿತಿಷ್ಠತಿ ॥ ೭೮ ॥
ಪ್ರಾಪ್ಯ ವಾರಾಣಸೀಂ ತೂರ್ಣಂ ದೃಷ್ಟ್ವಾಽಥ ಮಣಿಕರ್ಣಿಕಾಂ ।
ತತ್ಯಾಜ ತಾಪತ್ರಿತಯಮಪಿ ಜನ್ಮಶತಾರ್ಜಿತಂ ॥ ೭೯ ॥

---

೭೪. ಇಂತು ನುಡಿದ ಆ ಶುಚಿಷ್ಮತಿಯ ಮಾತುಗಳನ್ನು ಕೇಳಿ, ಶುಚಿವ್ರತನಾದ ಆ ವಿಶ್ವಾನರನು ಒಂದು ಕ್ಷಣಕಾಲ ಸಮಾಧಿನಿಷ್ಠನಾಗಿ, ತನ್ನಲ್ಲಿಯೇ ಈ ರೀತಿ ಚಿಂತಿಸಿದನು.

೭೫–೭೬. "ಆಹ! ಈ ಸುಂದರಿಯು ಅತಿದುರ್ಲಭವಾದ ವರವನ್ನೇ ಕೇಳಿದಳು. ಇದು ಮನೋರಥದ ಹಾದಿಗೂ ಮೀರಿದ್ದು ಇರಲಿ. ಆ ಪರಮೇಶ್ವರನೇ ಎಲ್ಲವನ್ನೂ ಸಾಧಿಸಿಕೊಡುವಾತನು. ಆತನೇ ಇವಳ ಮುಖದಲ್ಲಿ ನೆಲಸಿ ವಾಕ್ಯರೂಪದಿಂದ ಈ ರೀತಿ ನುಡಿಸಿರುತ್ತಾನೆ. ಆದುದರಿಂದ ಇದನ್ನು ಅಲ್ಲಗಳೆಯಲು ಯಾರಿಂದ ತಾನೆ ಸಾಧ್ಯವಾದೀತು?"

೭೭–೭೮. ಆ ಮುನಿಯು ಏಕಪತ್ನೀವ್ರತನೂ ಶಮದಮಾದಿತಪಸ್ಸಮೃದ್ಧಿಯಿಂದ ಮಹಾತೇಜಸ್ವಿಯೂ ಆದುದರಿಂದ ಆ ಶುಚಿಷ್ಮತಿಯನ್ನು ಕುರಿತು, "ಎಲೆ ಕಾಂತೆ, ನೀನು ಕೋರಿದ ವರವು ಈಡೇರುತ್ತದೆ" ಎಂದು ನುಡಿದು ಅವಳನ್ನು ಸಮಾಧಾನಗೊಳಿಸಿ, ಕಾಶೀನಾಥನಾದ ಸಾಕ್ಷಾತ್ ವಿಶ್ವೇಶ್ವರನು ಅಧಿಷ್ಠಿಸಿರುವ ವಾರಾಣಸೀಕ್ಷೇತ್ರಕ್ಕೆ ತಪಸ್ಸಿಗಾಗಿ ಹೊರಟನು.

೭೯. ವಾರಾಣಸಿಯನ್ನು ಸೇರಿದಮೇಲೆ ಆ ಮುನಿಪುಂಗವನು ಮೊತ್ತಮೊದಲು ಮಣಿಕರ್ಣಿಕೆಯನ್ನು ಸಂದರ್ಶಿಸಿ ನೂರು ಜನ್ಮಗಳಿಂದ ಆರ್ಜಿತವಾಗಿ ಬಂದಿದ್ದ ತಾಪತ್ರಯಗಳನ್ನು ದೂರಮಾಡಿಕೊಂಡನು.

ದೃಷ್ಟ್ವಾ ಸರ್ವಾಣಿ ಲಿಂಗಾನಿ ವಿಶ್ವೇಶಪ್ರಮುಖಾನಿ ಚ ।
ಸ್ನಾತ್ವಾ ಸರ್ವೇಷು ಕುಂಡೇಷು ವಾಪೀಕೂಪಸರಃಸು ಚ ॥ ೮೦ ॥
ನತ್ವಾ ವಿನಾಯಕಾನ್ಸರ್ವಾನ್ಗೌರೀಃ ಸರ್ವಾಃ ಪ್ರಣಮ್ಯ ಚ ।
ಸಂಪೂಜ್ಯ ಕಾಲರಾಜಂ ಚ ಭೈರವಂ ಪಾಪಭಕ್ಷಣಂ ॥ ೮೧ ॥
ದಂಡನಾಯಕಮುಖ್ಯಾಂಶ್ಚ ಗಣಾನ್ಸ್ತುತ್ವಾ ಪ್ರಯತ್ನತಃ ।
ಆದಿಕೇಶವಮುಖ್ಯಾಂಶ್ಚ ಕೇಶವಾನ್ಪರಿತೋಷ್ಯ ಚ ॥ ೮೨ ॥
ಲೋಲಾರ್ಕಮುಖ್ಯಸೂರ್ಯಾಂಶ್ಚ ಪ್ರಣಮ್ಯ ಚ ಪುನಃ ಪುನಃ ।
ಕೃತ್ವಾ ಪಿಂಡಪ್ರದಾನಾನಿ ಸರ್ವತೀರ್ಥೇಷ್ವತಂದ್ರಿತಃ ॥ ೮೩ ॥
ಸಹಸ್ರಭೋಜನಾದ್ಯೈಶ್ಚ ಯತೀನ್ ವಿಪ್ರಾನ್ಸ್ರತರ್ಪ್ಯ ಚ ।
ಮಹಾಪೂಜೋಪಚಾರೈಶ್ಚ ಲಿಂಗಾನ್ಯಭ್ಯರ್ಚ್ಯ ಭಕ್ತಿತಃ ॥ ೮೪ ॥
ಅಸಕೃಚ್ಚಿಂತಯಾಮಾಸ ಕಿಂ ಲಿಂಗಂ ಕ್ಷಿಪ್ರಸಿದ್ಧಿದಂ ।
ಯತ್ರ ನಿಶ್ಚಲತಾಮೇತಿ ತಪಸ್ತನಯಕಾಮ್ಯಯಾ ॥ ೮೫ ॥

---

೮೦ ವಿಶ್ವೇಶನೇ ಮೊದಲಾದ ಸಮಸ್ತಶಿವಲಿಂಗಗಳನ್ನೂ ಸಂದರ್ಶಿಸಿದ ತರುವಾಯ ಆತನು ಆ ಕ್ಷೇತ್ರದ ಸಮಸ್ತ ತೀರ್ಥಕುಂಡಗಳಲ್ಲಿಯೂ ಬಾವಿಗಳಲ್ಲಿಯೂ ಸಣ್ಣ ಪುಟ್ಟ ಸರೋವರಗಳಲ್ಲಿಯೂ ವಿಧ್ಯುಕ್ತವಾಗಿ ಸ್ನಾನ ಮಾಡಿದನು.

೮೧. ಅಲ್ಲಿನ ವಿನಾಯಕಮೂರ್ತಿಗಳನ್ನೂ ಗೌರಿಯರನ್ನೂ ನಮಸ್ಕರಿಸಿ, ಕಾಲರಾಜನಾಗಿ ಸಮಸ್ತ ಭಕ್ತರ ಪಾಪಗಳನ್ನು ನಿವಾರಿಸುವ ಭೈರವಮೂರ್ತಿಯನ್ನು ಕ್ರಮವಾಗಿ ಪೂಜಿಸಿದನು.

೮೨ ದಂಡನಾಯಕನೇ ಮೊದಲಾದ ಶಿವಗಣಗಳನ್ನು ಭಕ್ತಿಪೂರ್ವಕವಾಗಿ ಸ್ತುತಿಸಿ, ಆದಿಕೇಶವನಾದಿಯಾದ ಕೇಶವಮೂರ್ತಿಗಳನ್ನು ಸ್ತುತಿನತಿಗಳಿಂದ ಸಂತೋಷಗೊಳಿಸಿದನು

೮೩ ಲೋಲಾರ್ಕಪ್ರಮುಖರಾದ ದ್ವಾದಶಾದಿತ್ಯರನ್ನು ಅಡಿಗಡಿಗೂ ನಮಸ್ಕರಿಸಿದ ತರುವಾಯ, ಯಾವ ಬೇಸರವೂ ಇಲ್ಲದೆ ಆ ಕ್ಷೇತ್ರದ ಸಮಸ್ತ ತೀರ್ಥಗಳಲ್ಲಿಯೂ ಪಿತೃದೇವತೆಗಳಿಗೆ ಪಿಂಡಪ್ರದಾನವನ್ನು ಮಾಡಿದನು.

೮೪. ಆ ಬಳಿಕ ಮಹಾಪೂಜೋಪಚಾರಗಳಿಂದ ಶಿವಲಿಂಗಗಳನ್ನು ಭಕ್ತಿಪೂರ್ವಕವಾಗಿ ಪೂಜಿಸಿ, ಯತಿಗಳನ್ನೂ ವಿಪ್ರರನ್ನೂ ಸಹಸ್ರ ಸಂತರ್ಪಣೆಯಿಂದ ತೃಪ್ತಿಗೊಳಿಸಿದನು.

೮೫. ಇದೆಲ್ಲವೂ ಆದ ತರುವಾಯ ಪುತ್ರಕಾಮನೆಯಿಂದ ನಾನು ಮಾಡುವ ತಪಸ್ಸು ನಿಶ್ಚಲವಾಗಿ, ಯಾವ ಪ್ರದೇಶದಲ್ಲಿನ ಶಿವಲಿಂಗವು ಕ್ಷಿಪ್ರವಾಗಿ ಸಿದ್ಧಿಯನ್ನು ದೊರೆಯಿಸುವುದೊ ಎಂದು ಬಾರಿಬಾರಿಗೂ ಯೋಚಿಸಿದನು.

ಶ್ರೀಮದೋಂಕಾರನಾಥಂ ವಾ ಕೃತ್ತಿವಾಸೇಶ್ವರಂ ಕಿಮು ।
ಕಾಲೇಶಂ ವೃದ್ಧಕಾಲೇಶಂ ಕಲಶೇಶ್ವರಮೇವ ಚ ॥ ೮೬ ॥
ಕೇದಾರೇಶಂ ತು ಕಾಮೇಶಂ ಚಂದ್ರೇಶಂ ವಾ ತ್ರಿಲೋಚನಂ ।
ಜ್ಯೇಷ್ಠೇಶಂ ಜಂಬುಕೇಶಂ ವಾ ಜೈಗೀಷವ್ಯೇಶ್ವರಂ ತು ವಾ ॥ ೮೭ ॥
ದಶಾಽಶ್ವಮೇಧಮಿಾಶಾನಂ ದ್ರುಮಿಚಂಡೇಶಮೇವ ಚ ।
ದೃಕ್ಕೇಶಂ ಗರುಡೇಶಂ ಚ ಗೋಕರ್ಣೇಶಂ ಗಣೇಶ್ವರಂ ॥ ೮೮ ॥
ಢುಂಢ್ಯಾಶಾಗಜಸಿದ್ಧಾಖ್ಯಂ ಧರ್ಮೇಶಂ ತಾರಕೇಶ್ವರಂ ।
ನಂದಿಕೇಶಂ ನಿವಾಸೇಶಂ ಪತ್ರೀಶಂ ಪ್ರೀತಿಕೇಶ್ವರಂ ॥ ೮೯ ॥
ಪರ್ವತೇಶಂ ಪಶುಪತಿಂ ಬ್ರಹ್ಮೇಶಂ ಮಧ್ಯಮೇಶ್ವರಂ ।
ಬೃಹಸ್ಪತೀಶ್ವರಂ ವಾಽಥ ವಿಭಾಂಡೇಶ್ವರಮೇವ ಚ ॥ ೯೦ ॥
ಭಾರಭೂತೇಶ್ವರಂ ಕಿಂ ವಾ ಮಹಾಲಕ್ಷ್ಮೀಶ್ವರಂ ತು ವಾ ।
ಮರುತ್ತೇಶಂ ತು ಮೋಕ್ಷೇಶಂ ಗಂಗೇಶಂ ನರ್ಮದೇಶ್ವರಂ ॥ ೯೧ ॥
ಮಾರ್ಕಂಡಂ ಮಣಿಕರ್ಣೀಶಂ ರತ್ನೇಶ್ವರಮಥಾಽಪಿ ವಾ ।
ಅಥವಾ ಯೋಗಿನೀಪೀಠಂ ಸಾಧಕಸ್ಯೈವ ಸಿದ್ಧಿದಂ ॥ ೯೨ ॥
ಯಾಮುನೇಶಂ ಲಾಂಗಲೀಶಂ ಶ್ರೀಮದ್ವಿಶ್ವೇಶ್ವರಂ ವಿಭುಂ ।
ಅವಿಮುಕ್ತೇಶ್ವರಂ ವಾಥ ವಿಶಾಲಾಕ್ಷೀಶಮೇವ ಚ ॥ ೯೩ ॥

---

೮೬–೯೨. ಶ್ರೀಮದೋಂಕಾರನಾಥ, ಕೃತ್ತಿವಾಸೇಶ್ವರ, ಕಾಲೇಶ, ವೃದ್ಧಕಾಲೇಶ, ಕಲಶೇಶ್ವರ, ಕೇದಾರೇಶ್ವರ, ಕಾಮೇಶ್ವರ, ಚಂದ್ರೇಶ್ವರ, ತ್ರಿಲೋಚನ ಜ್ಯೇಷ್ಠೇಶ, ಜಂಬುಕೇಶ, ಜೈಗೀಷವ್ಯೇಶ್ವರ, ದಶಾಶ್ವಮೇಧೇಶ್ವರ, ದ್ರುಮಚಂಡೇಶ್ವರ, ದೃಕ್ಕೇಶ, ಗರುಡೇಶ, ಗೋಕರ್ಣೇಶ, ಗಣೇಶ್ವರ, ಢುಂಢಿ, ಆಶಾ, ಗಜ, ಸಿದ್ಧ, ಧರ್ಮೇಶ, ತಾರಕೇಶ್ವರ, ನಂದಿಕೇಶ, ನಿವಾಸೇಶ, ಪತ್ರೀಶ, ಪ್ರೀತಿಕೇಶ್ವರ, ಪರ್ವತೇಶ, ಪಶುಪತಿ, ಬ್ರಹ್ಮೇಶ, ಮಧ್ಯಮೇಶ್ವರ, ಬೃಹಸ್ಪತೀಶ್ವರ, ವಿಭಾಂಡೇಶ್ವರ, ಭಾರಭೂತೇಶ್ವರ, ಮಹಾಲಕ್ಷ್ಮೀಶ್ವರ, ಮರುತ್ತೇಶ, ಮೋಕ್ಷೇಶ, ಗಂಗೇಶ, ನರ್ಮದೇಶ್ವರ, ಮಾರ್ಕಂಡ, ಮಣಿಕರ್ಣೀಶ, ರತ್ನೇಶ್ವರ ಮುಂತಾದ ಶಿವಲಿಂಗಗಳಲ್ಲಿ ಯಾವುದು ಶೀಘ್ರದಲ್ಲಿಯೆ ಸಿದ್ಧಿಯನ್ನುಂಟು ಮಾಡುವುದು? ಅಥವಾ ಸಾಧಕರಿಗೆಲ್ಲ ಸಿದ್ಧಿಯನ್ನು ಕೊಡುವ ಯೋಗಿನೀ ಪೀಠವನ್ನಾಶ್ರಯಿಸಲೆ?

೯೩–೯೭. ಅಥವಾ ಯಾಮುನೇಶ, ಲಾಂಗಲೀಶ, ಶ್ರೀಮದ್ವಿಶ್ವೇಶ್ವರ, ಅವಿಮುಕ್ತೇಶ್ವರ, ವಿಶಾಲಾಕ್ಷೀಶ, ವ್ಯಾಘ್ರೇಶ್ವರ, ವರಾಹೇಶ, ವ್ಯಾಸೇಶ, ವೃಷಭಧ್ವಜ, ವರುಣೇಶ, ವಿಧೀಶ, ವಾಸಿಷ್ಠೇಶ, ಶನೀಶ್ವರ, ಸೋಮೇಶ್ವರ, ಇಂದ್ರೇಶ, ಸ್ವರ್ಲೀನೇಶ, ಸಂಗಮೇಶ್ವರ, ಹರಿಶ್ಚಂದ್ರೇಶ್ವರ, ಹರಿಕೇಶೇಶ್ವರ,

ವ್ಯಾಘ್ರೇಶ್ವರಂ ವರಾಹೇಶಂ ವ್ಯಾಸೇಶಂ ವೃಷಭಧ್ವಜಂ ।
ವರುಣೇಶಂ ವಿಧೀಶಂ ವಾ ವಸಿಷ್ಠೇಶಂ ಶನೀಶ್ವರಂ ॥ ೯೪ ॥
ಸೋಮೇಶ್ವರಂ ಕಿಮಿಂದ್ರೇಶಂ ಸ್ವರ್ಲೀನಂ ಸಂಗಮೇಶ್ವರಂ ।
ಹರಿಶ್ಚಂದ್ರೇಶ್ವರಂ ಕಿಂ ವಾ ಹರಿಕೇಶೇಶ್ವರಂ ತು ವಾ ॥ ೯೫ ॥
ತ್ರಿಸಂಧ್ಯೇಶಂ ಮಹಾದೇವಮುಪಶಾಂತಿಶಿವಂ ತಥಾ ।
ಭವಾನೀಶಂ ಕಪರ್ದೀಶಂ ಕಂದುಕೇಶಂ ಮಖೇಶ್ವರಂ ॥ ೯೬ ॥
ಮಿತ್ರಾವರುಣಸಂಜ್ಞಂ ವಾ ಕಿಮೇಷಾಮಾಶು ಪುತ್ರದಂ ।
ಕ್ಷಣಂ ವಿಚಾರ್ಯ ಸಮುನಿರಿತಿ ವಿಶ್ವಾನರಃ ಸುಧೀಃ ॥ ೯೭ ॥
ಆಜ್ಞಾತಂ ವಿಸ್ಮೃತಂ ತಾವತ್ಫಲಿತೋ ಮೇ ಮನೋರಥಃ ।
ಸಿದ್ಧೈಃ ಸಂಸೇವಿತಂ ಲಿಂಗಂ ಸರ್ವಸಿದ್ಧಿಕರಂ ಪರಂ ॥ ೯೮ ॥
ದರ್ಶನಾತ್ಸ್ಪರ್ಶನಾದ್ಯಸ್ಯ ಮನೋ ನಿರ್ವೃತಿಭಾಗ್ಭವೇತ್ ।
ಉದ್ಘಾಟಿತಂ ಸದೈವಾಸ್ತೇ ಸ್ವರ್ಗದ್ವಾರಂ ಹಿ ಯತ್ರ ವೈ ॥ ೯೯ ॥
ದಿವಾನಿಶಂ ಪೂಜನಾರ್ಥಂ ವಿಜ್ಞಾಪ್ಯ ತ್ರಿದಶೇಶ್ವರಂ ।
ಪಂಚಮುದ್ರೇ ಮಹಾಪೀಠೇ ಸಿದ್ಧಿದೇ ಸರ್ವಜಂತುಷು ॥ ೧೦೦ ॥
ಯತ್ರ ಸಾ ವಿಕಟಾ ದೇವೀ ಪ್ರಕಟಾ ಸಿದ್ಧಿರೂಪಿಣೀ ।
ಯತ್ರ ಸ್ಥಿತಾನಾಂ ಭಕ್ತಾನಾಂ ಸಾಕ್ಷಾತ್ಸಿದ್ಧಿವಿನಾಯಕಃ ॥ ೧೦೧ ॥

---

ತ್ರಿಸಂಧ್ಯೇಶ, ಮಹಾದೇವ, ಉಪಶಾಂತಿಶಿವ, ಭವಾನೀಶ, ಕಪರ್ದೀಶ, ಕಂದುಕೇಶ, ಮಖೇಶ್ವರ, ಮಿತ್ರಾವರುಣೇಶ, ಮುಂತಾದ ಈ ಮಹಾ ಶಿವಲಿಂಗಗಳಲ್ಲಿ ಯಾವುದು ಪುತ್ರವರವನ್ನು ಶೀಘ್ರವಾಗಿ ಅನುಗ್ರಹಿಸುತ್ತದೆ'' ಎಂಬೀ ಪ್ರಕಾರವಾಗಿ ಮಹಾ ಪಂಡಿತನಾದ ಆ ವಿಶ್ವಾನರ ಮುನಿಯು ಒಂದು ಕ್ಷಣ ಕಾಲ ಯೋಚಿಸಿದನು

೯೮. ಆಮೇಲೆ ಆ ಮುನಿಯು "ಆಹ! ನನ್ನ ಮನೋರಥವು ಫಲಿಸಿತು. ಸಿದ್ಧರಿಂದ ಸಂಸೇವಿತವಾಗಿ ಸಮಸ್ತ ಸಿದ್ಧಿಗಳನ್ನೂ ದಯಪಾಲಿಸುವುದಾಗಿ ಉತ್ತಮೋತ್ತಮವೆನಿಸಿದ ಶಿವಲಿಂಗವನ್ನು ನಾನು ಮರೆತೇ ಹೋಗಿದ್ದೆನು. ಅದು ಈ ವರೆಗೆ ತಿಳಿಯದೆ ಹೋಯಿತು.

೯೯–೧೦೩. ಯಾವುದರ ದರ್ಶನ ಸ್ಪರ್ಶನಗಳಿಂದ ಮನಸ್ಸು ಶಾಂತಿಯನ್ನು ಪಡೆಯುವುದೊ, ಎಲ್ಲಿ ಸ್ವರ್ಗದ್ವಾರವು ನಿರಂತರವೂ ತೆರೆದೇ ಇರುತ್ತದೆಯೊ, ಹಗಲಿರುಳೂ ತ್ರಿದಶೇಶ್ವರನನ್ನು ಸಮ್ಮತಗೊಳಿಸಿ ಪೂಜೆಗೋಸ್ಕರವಾಗಿ ಸಮಸ್ತ ಜಂತುಗಳಿಗೂ ಸಿದ್ಧಿಪ್ರದವಾಗಿ ಶೋಭಿಸುವ ಪಂಚಮುದ್ರಮಹಾಪೀಠದಲ್ಲಿ ಸಮಸ್ತರೂ ಸೇವೆಗೆಯ್ಯುವರೊ, ಎಲ್ಲಿ ಸಿದ್ಧರೂಪಿಣಿಯಾದ ವಿಕಟಾದೇವಿಯು ಪ್ರಕಟವಾಗಿ ಶೋಭಿಸುತ್ತಿರುವಳೊ, ಎಲ್ಲಿ ಭಕ್ತಜನರಿಗೆ ಸಾಕ್ಷಾತ್ತಾಗಿ ಸಿದ್ಧಿ ವಿನಾಯಕನು ಸಮಸ್ತ ವಿಘ್ನ ಸಮೂಹಗಳನ್ನೂ ಕಳೆದು ಸಿದ್ಧಿಯನ್ನು ನೀಡು

**ನಿರ್ಧೂಯ ವಿಘ್ನಜಾಲಾನಿ ಸರ್ವಾಃ ಸಿದ್ಧೀಃ ಪ್ರಯಚ್ಛತಿ ।**
**ಅವಿಮುಕ್ತೇ ಮಹಾಕ್ಷೇತ್ರೇ ಸಿದ್ಧಿಕ್ಷೇತ್ರಂ ಹಿ ತತ್ಪರಂ ॥ ೧೦೨ ॥**
**ಯತ್ರ ವೀರೇಶ್ವರಂ ಲಿಂಗಂ ಮಹಾಗುಹ್ಯತಮಂ ಮತಂ ।**
**ತಿಲಾಽಂತರಾಽಪಿ ನೋ ಕಾಶ್ಯಾಂ ಭೂಮಿರ್ಲಿಂಗಂ ವಿನಾ ಕ್ವಚಿತ್ ॥೧೦೩॥**
**ಪರಂ ವೀರೇಶ ಸದೃಶಂ ನ ಲಿಂಗಂ ತ್ವಾಶು ಸಿದ್ಧಿದಂ ।**
**ಧರ್ಮದಂ ಚಾರ್ಥದಂ ಸಮ್ಯಕ್ಕಾಮದಂ ಮೋಕ್ಷದಂ ತಥಾ ॥ ೧೦೪ ॥**
**ಯಥಾ ವೀರೇಶ್ವರಂ ಲಿಂಗಂ ಕಾಶ್ಯಾಂ ನಾಽನ್ಯತ್ತಥಾ ಧ್ರುವಂ ।**
**ಪಂಚಸ್ವರೋಽತ್ರ ಗಂಧರ್ವಃ ಪರಾಂ ಸಿದ್ಧಿಮಗಾತ್ಪುರಾ ॥ ೧೦೫ ॥**
**ವಿದ್ಯಾಧರಃ ಸ್ವಚ್ಛವಿದ್ಯೋ ವಸುಪೂರ್ಣಶ್ಚ ಯಕ್ಷರಾಟ್ ।**
**ನೃತ್ಯಂತೀ ನಿಜಭಾವೇನ ಪುರಾಹ್ಯತ್ರಾಽಪ್ಸರೋ ವರಾ ।**
**ಸದೇಹಾ ಕೋಕಿಲಾಲಾಪಾ ಲಿಂಗಮಧ್ಯೇ ಲಯಂಗತಾ ॥ ೧೦೬ ॥**
**ಋಷಿರ್ವೇದಶಿರಾನಾಮ ಜಪನ್ವೈ ಶತರುದ್ರಿಯಂ ।**
**ಮಂತ್ರಜ್ಯೋತಿರ್ಮಯೇ ಲಿಂಗೇ ಸ ಶರೀರೋಽವಿಶತ್ಪುರಾ ॥ ೧೦೭ ॥**
**ಚಂದ್ರಮೌಲಿಭರದ್ವಾಜಾವುಭೌ ಪಾಶುಪತೋತ್ತಮೌ ।**
**ವೀರೇಶ್ವರಂ ಸಮಭ್ಯರ್ಚ್ಯ ಗಾಯಮಾನೌ ಲಯಂ ಗತೌ ॥ ೧೦೮ ॥**

---

ತ್ತಾನೆಯೊ ಅಂತಹ ಅವಿಮುಕ್ತ ಮಹಾ ಕ್ಷೇತ್ರವೇ ಇದು. ಇದೇ ಅತ್ಯುತ್ತಮವಾದ ಸಿದ್ಧಿಕ್ಷೇತ್ರವು ಇಲ್ಲಿರುವ ವೀರೇಶ್ವರ ಲಿಂಗವು ಮಹಾ ಗುಹ್ಯತಮವೆನಿಸಿದೆ. ಈ ಕ್ಷೇತ್ರದಲ್ಲಿ ಎಳ್ಳು ಹಿಡಿಸುವಷ್ಟು ಭೂಮಿಯೂ ಸಹ ಶಿವಲಿಂಗ ವಿಹೀನವಾಗಿರುವುದಿಲ್ಲ.

೧೦೪. ಆದರೆ ವೀರೇಶ್ವರ ಲಿಂಗಕ್ಕೆ ಸದೃಶವಾಗಿ ಸಿದ್ಧಿಪ್ರದವೂ ಧರ್ಮಸಂಪಾದಕವೂ ಅರ್ಥಪ್ರದವೂ ಕಾಮಮೋಕ್ಷಪ್ರದವೂ ಆದ ಶಿವಲಿಂಗವು ಬೇರಾವುದೂ ಇರುವುದಿಲ್ಲ.

೧೦೫. ಈ ಕಾಶೀಕ್ಷೇತ್ರದಲ್ಲಿ ವೀರೇಶ್ವರ ಲಿಂಗಕ್ಕೆ ಸಮಾನವಾದ ಬೇರೊಂದು ಲಿಂಗವು ಇರುವುದಿಲ್ಲ ಇದು ದಿಟ. ಇಲ್ಲಿ ಪೂರ್ವದಲ್ಲಿ ಪಂಚಸ್ವರನೆಂಬ ಗಂಧರ್ವನು ಉತ್ತಮವಾದ ಸಿದ್ಧಿಯನ್ನು ಪಡೆದನು.

೧೦೬–೧೧೨. ಸ್ವಚ್ಛವಿದ್ಯನೆಂಬ ವಿದ್ಯಾಧರನೂ ಯಕ್ಷರಾಜನಾದ ವಸುಪೂರ್ಣನೆಂಬುವನೂ ನಿಜಭಕ್ತಿಭಾವದಿಂದ ನರ್ತನಮಾಡುತ್ತಲಿದ್ದ ಅಪ್ಸರಶ್ರೇಷ್ಠಳಾದ ಕೋಕಿಲಾಲಾಪೆಯೆಂಬವಳೂ ಈ ವೀರೇಶ್ವರ ಲಿಂಗದಲ್ಲಿ ಲಯವಾದರು. ಶತರುದ್ರೀಯವನ್ನು ಜಪಿಸುತ್ತಿದ್ದ ವೇದಶಿರನೆಂಬ ಋಷಿವರನು ಮಂತ್ರಜ್ಯೋತಿರ್ಮಯವಾದ ಈ ಲಿಂಗದಲ್ಲಿ ಸಶರೀರನಾಗಿ ಪ್ರವೇಶಿಸಿದನು. ಪೂರ್ವದಲ್ಲಿ ಮಹಾಪಾಶುಪತವ್ರತಿಗಳಾದ ಚಂದ್ರಮೌಲಿ ಭರದ್ವಾಜರೆಂಬವ

ಶಂಖಚೂಡೋಹಿ ನಾಗೇಂದ್ರಃ ಸ್ವಫಣಾಮಣಿಭಿರ್ನಿಶಿ ।
ಷಣ್ಮಾಸಾತ್ಸಿದ್ಧಿಮಗಮದ್ಬಹುನೀರಾಜನೈರಿಹ ॥ ೧೦೯ ॥
ಕಿನ್ನರೀ ಹಂಸಪದ್ಯತ್ರ ಭರ್ತ್ರಾ ವೇಣುಪ್ರಿಯೇಣ ವೈ ।
ಗಾಯಂತೀ ಸುಸ್ವರಂ ಯಾತಾ ಪರಾಂ ನಿರ್ವಾಣಭೂಮಿಕಾಂ ॥ ೧೧೦ ॥
ಅಸಂಖ್ಯಾತಾಃ ಸಹಸ್ರಾಣಿ ಸಿದ್ಧಾಃ ಸಿದ್ಧಿಮಿಹಾಗತಾಃ ॥ ೧೧೧ ॥
ಸಿದ್ಧಲಿಂಗಮಿಹಾಖ್ಯಾತಂ ತಸ್ಮಾದ್ವೀರೇಶ್ವರಂ ಪರಂ ॥ ೧೧೨ ॥
ವೀರೇಶ್ವರಂ ಸಮಾರಾಧ್ಯ ಭ್ರಷ್ಟರಾಜ್ಯೋ ಜಯದ್ರಥಃ ।
ಹತ್ವಾ ರಿಪೂನಸ್ಖಲಿತಂ ರಾಜ್ಯಂ ಪ್ರಾಪ ವಿದೇಹಜಃ ॥ ೧೧೩ ॥
ವಿದೂರಥೋಽಥ ನೃಪತಿರಪುತ್ರಃ ಪುತ್ರವಾನಭೂತ್ ।
ವೀರೇಶ್ವರಪ್ರಸಾದೇನ ಮಗಧಾಧಿಪತಿರ್ವಶೀ ॥ ೧೧೪ ॥
ವಸುದತ್ತೋಽತ್ರ ಚ ವಣಿಕ್ ಸುತಾಂ ವಸುಸುತೋಪಮಾಂ ।
ಅಬ್ದಮಭ್ಯರ್ಚ್ಯ ವೀರೇಶಂ ರತ್ನದತ್ತೋಽಪ್ಯವಾಪ್ತವಾನ್ ॥ ೧೧೫ ॥
ಅಹಮಪ್ಯತ್ರ ವೀರೇಶಂ ಸಮಾರಾಧ್ಯ ತ್ರಿಕಾಲತಃ ।
ಆಶು ಪುತ್ರಮವಾಪ್ಸ್ಯಾಮಿ ಯಥಾಽಭಿಲಷಿತಂ ಸ್ತ್ರಿಯಾ ॥ ೧೧೬ ॥

---

ರಿಬ್ಬರೂ ಈ ವೀರೇಶ್ವರಲಿಂಗವನ್ನು ಪೂಜಿಸಿ ಗಾನಮಾಡುತ್ತಲೆ ಲಯಿಸಿದರು. ನಾಗೇಂದ್ರನಾದ ಶಂಖಚೂಡನೆಂಬುವನಾದರೊ ತನ್ನ ಹೆಡೆಮಣಿಗಳಿಂದ ಇರುಳಲ್ಲಿ ಈ ಪ್ರಭುವಿಗೆ ನೀರಾಜನವನ್ನೆಸಗುತ್ತ ಆರು ತಿಂಗಳಾದ ಮೇಲೆ ಸಿದ್ಧಿಯನ್ನು ಪಡೆದನು. ಹಂಸಪದಿಯೆಂಬ ಕಿನ್ನರಿಯು ತನ್ನ ನಲ್ಲನಾದ ವೇಣುಪ್ರಿಯನೊಡನೆ ಮಧುರವಾಗಿ ಈ ಲಿಂಗದ ಮುಂದೆ ಗಾಯನವನ್ನೆಸಗುತ್ತ ಮೋಕ್ಷವನ್ನೈದಿದಳು. ಇಲ್ಲಿಯೆ ಸಹಸ್ರಾರು ಮಂದಿ ಸಿದ್ಧರೂ ಅಸಂಖ್ಯಾತರಾದ ಇತರ ಭಕ್ತರೂ ಸಿದ್ಧಿಯನ್ನು ಪಡೆದಿರುತ್ತಾರೆ. ಆದುದರಿಂದಲೆ ಶ್ರೇಷ್ಠವಾದ ಈ ವೀರೇಶ್ವರ ಲಿಂಗವು ಸಿದ್ಧಲಿಂಗವೆಂದು ಪ್ರಖ್ಯಾತಿಯನ್ನು ಪಡೆದಿದೆ

೧೧೩. ಪೂರ್ವದಲ್ಲಿ ಜಯದ್ರಥನೆಂಬ ಮಹಾರಾಜನು ರಾಜ್ಯಭ್ರಷ್ಟನಾಗಿ ಈ ವೀರೇಶ್ವರ ಲಿಂಗವನ್ನು ಪೂಜಿಸಿ ಆ ತರುವಾಯ ಹಗೆಗಳನ್ನು ಸದೆದು, ಅಸ್ಖಲಿತವಾದ ಸ್ವರಾಜ್ಯವನ್ನು ಪಡೆದನು

೧೧೪. ಮಗಧಾಧಿಪತಿಯೂ, ಜಿತೇಂದ್ರಿಯನೂ ಆದ ವಿದೂರಥರಾಜನು ಈ ವೀರೇಶ್ವರಲಿಂಗದ ಪ್ರಸಾದದಿಂದಲೆ ಪುತ್ರವಂತನಾದನು.

೧೧೫. ವೈಶ್ಯರಾದ ವಸುದತ್ತ ರತ್ನದತ್ತರೆಂಬುವರು ಈ ವೀರೇಶ್ವರನನ್ನು ಒಂದು ವರ್ಷಕಾಲ ರತ್ನಗಳಿಂದ ಪೂಜಿಸಿ, ಉಪರಿಚರವಸುವಿನ ಕುಮಾರಿಯಾದ ಸತ್ಯವತಿಗೆ ಸಮಾನರಾದ ಕುವರಿಯರನ್ನು ಪಡೆದರು.

೧೧೬. ನಾನೂ ಈ ವೀರೇಶ್ವರನನ್ನು ತ್ರಿಕಾಲಗಳಲ್ಲಿಯೂ ಆರಾಧಿಸಿ ನನ್ನ ಭಾರ್ಯೆಯ ಅಭಿಲಾಷೆಯಂತೆ ಪುತ್ರನನ್ನು ಪಡೆಯುತ್ತೇನೆ.”

ಇತಿ ಕೃತ್ವಾ ಮತಿಂ ಧೀರೋ ವಿಪ್ರೋ ವಿಶ್ವಾನರಃ ಕೃತೀ ।
ಚಂದ್ರಕೂಪಜಲೈಃ ಸ್ನಾತ್ವಾ ಜಗ್ರಾಹ ನಿಯಮಂ ವ್ರತೀ ॥ ೧೧೭ ॥
ಏಕಾಹಾರೋಽಭವನ್ಮಾಸಂ ಮಾಸಂ ನಕ್ತಾಶನೋಽಭವತ್ ।
ಅಯಾಚಿತಾಶನೋ ಮಾಸಂ ಮಾಸಂ ತ್ಯಕ್ತಾಶನಃ ಪುನಃ ॥ ೧೧೮ ॥
ಪಯೋವ್ರತೋಽಭವನ್ಮಾಸಂ ಮಾಸಂ ಶಾಕಫಲಾಶನಃ ।
ಮಾಸಂ ಮುಷ್ಟಿತಿಲಾಽಽಹಾರೋ ಮಾಸಂ ಪಾನೀಯಭೋಜನಃ ॥ ೧೧೯ ॥
ಪಂಚಗವ್ಯಾಶನೋ ಮಾಸಂ ಮಾಸಂ ಚಾಂದ್ರಾಯಣವ್ರತೀ ।
ಮಾಸಂ ಕುಶಾಗ್ರಜಲಭುಕ್ ಮಾಸಂ ಶ್ವಸನಭಕ್ಷಣಃ ॥ ೧೨೦ ॥
ಅಥ ತ್ರಯೋದಶೇ ಮಾಸಿ ಸ್ನಾತ್ವಾ ತ್ರಿಪಥಗಾಂಭಸಿ ।
ಪ್ರತ್ಯೂಷ ಏವ ವೀರೇಶಂ ಯಾವದಾಯಾತಿ ಸ ದ್ವಿಜಃ ॥ ೧೨೧ ॥
ತಾವದ್ವಿಲೋಕಯಾಂಚಕ್ರೇ ಮಧ್ಯೇ ಲಿಂಗಂ ತಪೋಧನಃ ।
ವಿಭೂತಿಭೂಷಿತಂ ಬಾಲಮಷ್ಟವರ್ಷಾಕೃತಿಂ ಶುಭಂ ॥ ೧೨೨ ॥

---

೧೧೭. ಎಲೈ ಶಿವಶರ್ಮನೆ, ಮಹಾಧೀರನೂ ವಿಪ್ರವರನೂ ಪುಣ್ಯಾತ್ಮನೂ ಆದ ಆ ವಿಶ್ವಾನರನು ಹೀಗೆ ನಿಶ್ಚಯಿಸಿ, ಚಂದ್ರಕೂಪದಲ್ಲಿ ಮಿಂದು ನಿಯಮ ವ್ರತವನ್ನು ಕೈಕೊಂಡನು.

೧೧೮-೧೨೦. ಅವನು ಒಂದು ತಿಂಗಳಕಾಲ ಒಪ್ಪೊತ್ತು ಮಾತ್ರ ಭುಜಿಸುತ್ತಲೂ, ಇನ್ನೊಂದು ತಿಂಗಳು ರಾತ್ರಿಯಲ್ಲಿ ಮಾತ್ರ ಆಹಾರವನ್ನು ತೆಗೆದುಕೊಳ್ಳುತ್ತಲೂ, ಮತ್ತೊಂದು ತಿಂಗಳು ಬೇಡದೆ ತಾನಾಗಿ ಒದಗಿದುದನ್ನು ಭುಜಿಸಿಕೊಂಡು, ಇನ್ನೊಂದು ತಿಂಗಳು ಆಹಾರವನ್ನೇ ತ್ಯಜಿಸಿಯೂ, ಒಂದು ತಿಂಗಳು ಕೇವಲ ಕ್ಷೀರಸೇವನೆಯಿಂದಲೂ, ಒಂದು ತಿಂಗಳು ಶಾಖಫಲಾಶನನಾಗಿಯೂ, ಮತ್ತೊಂದು ತಿಂಗಳು ಒಂದು ಮುಷ್ಟಿ ಎಳ್ಳನ್ನು ತಿಂದುಕೊಂಡೂ, ಇನ್ನೂ ಒಂದು ತಿಂಗಳು ನೀರನ್ನು ಮಾತ್ರ ಸೇವಿಸಿಯೂ, ಒಂದು ತಿಂಗಳು ಪಂಚಗವ್ಯವನ್ನು ಪ್ರಾಶನಮಾಡಿಯೂ, ಇನ್ನೊಂದು ತಿಂಗಳು ಚಾಂದ್ರಾಯಣ ವ್ರತವನ್ನೆಸಗುತ್ತಲೂ, ಒಂದು ತಿಂಗಳು ಕುಶಾಗ್ರದಿಂದ ಬರುವ ಜಲವನ್ನು ಪಾನಮಾಡುತ್ತಲೂ, ಇನ್ನೊಂದು ತಿಂಗಳು ಕೇವಲ ವಾಯು ಭಕ್ಷಣೆಯನ್ನು ಮಾಡುತ್ತಲೂ ಆ ವಿರೇಶ್ವರನನ್ನು ಆರಾಧಿಸುವ ವ್ರತದಲ್ಲಿ ತೊಡಗಿದನು.

೧೨೧-೧೨೨. ತರುವಾಯ ಹದಿಮೂರನೆಯ ತಿಂಗಳಲ್ಲಿ ಆ ವಿಶ್ವಾನರನು ಪ್ರಾತಃಕಾಲದಲ್ಲಿ ಗಂಗಾನದಿಯಲ್ಲಿ ಸ್ನಾನಮಾಡಿ ವೀರೇಶ್ವರನನ್ನು ಸಂದರ್ಶಿಸಲು ಬಂದು ಅಲ್ಲಿ ಲಿಂಗಮಧ್ಯದಲ್ಲಿ ವಿಭೂತಿ ಭೂಷಿತನಾಗಿ ಬಹು ಮಂಗಳಕರವಾಗಿ ಬೆಳಗುತ್ತಿದ್ದ ಎಂಟು ವರ್ಷದ ಬಾಲಕನೊರ್ವನನ್ನು ಕಂಡನು.

ಆಕರ್ಣಪೂರ್ಣನೇತ್ರಂ ಚ ಸುರಕ್ತದಶನಚ್ಛದಂ ।
ಚಾರುಪಿಂಗಜಟಾಮೌಲಿಂ ನಗ್ನಂ ಪ್ರಹಸಿತಾನನಂ ॥ ೧೨೩ ॥
ಶೈಶವೋಚಿತನೇಪಥ್ಯಧಾರಿಣಂ ಚಿತ್ತಹಾರಿಣಂ ।
ಪಠಂತಂ ಶ್ರುತಿಸೂಕ್ತಾನಿ ಹಸಂತಂ ಚ ಸ್ವಲೀಲಯಾ ॥ ೧೨೪ ॥
ತಮಾಲೋಕ್ಯ ಸ್ತುತಿಂ ಚಕ್ರೇ ರೋಮಕಂಚುಕಿತೋ ಮುದಾ ।
ಪ್ರೋಚ್ಚರದ್ಗದ್ಗದಾಲಾಪೋ ನಮೋಽಸ್ತ್ವಿತಿ ಪುನಃ ಪುನಃ ॥ ೧೨೫ ॥

ವಿಶ್ವಾನರ ಉವಾಚ :—

ಏಕಂ ಬ್ರಹ್ಮೈವಾಽದ್ವಿತೀಯಂ ಸಮಸ್ತಂ
ಸತ್ಯಂ ಸತ್ಯಂ ನೇಹ ನಾನಾಽಸ್ತಿ ಕಿಂಚಿತ್ ।
ಏಕೋ ರುದ್ರೋ ನ ದ್ವಿತೀಯೋಽವತಸ್ಥೇ
ತಸ್ಮಾದೇಕಂ ತ್ವಾಂ ಪ್ರಪದ್ಯೇ ಮಹೇಶಂ ॥ ೧೨೬ ॥

---

೧೨೩–೧೨೫. ಕಿವಿವರೆಗೆ ಹರಡಿದ್ದ ಕಣ್ಣುಗಳುಳ್ಳವನಾಗಿ, ಬಹು ಸೊಗಸಾದ ದಂತಪಂಕ್ತಿಗಳಿಂದ ಕೂಡಿ, ಪಿಂಗಳವರ್ಣದ ಸುಂದರ ಜಟಾ ಕಲಾಪದಿಂ ದೊಪ್ಪಿದ ಶಿರಸ್ಸುಳ್ಳವನಾಗಿ, ದಿಗಂಬರನಾಗಿ, ನಸುನಗೆಯೊಡಗೂಡಿದ ಮುಖ ವುಳ್ಳವನಾಗಿ, ಬಾಲ್ಯಕ್ಕೆ ಉಚಿತವಾದ ಅಲಂಕಾರಗಳನ್ನು ತೊಟ್ಟು ಮನಸ್ಸನ್ನು ಸೂರೆಗೊಳ್ಳುತ್ತ, ಶ್ರುತಿಸೂಕ್ತಗಳನ್ನು ಪಠಿಸುತ್ತಲೂ ತನ್ನದೇ ಆದ ಒಂದು ಲೀಲೆಯಿಂದ ಗಟ್ಟಿಯಾಗಿ ನಗುತ್ತಲೂ ಇದ್ದ ಆ ಕುಮಾರನನ್ನು ಕಂಡು ವಿಶ್ವಾ ನರಮುನಿಯು ರೋಮಾಂಚಿತನಾಗಿ, ಸಂತೋಷಾಧಿಕ್ಯದಿಂದ ಗದ್ಗದ ಸ್ವರ ಭರಿತನಾಗಿ "ನಮೋನಮೋ" ಎಂದು ಅಡಿಗಡಿಗೂ ಉಚ್ಚರಿಸುತ್ತ ಈ ರೀತಿ ಸ್ತುತಿಸಿದನು.

೧೨೬. ವಿಶ್ವಾನರನು ಸ್ತುತಿಸುತ್ತಾನೆ:—"ಅದ್ವಿತೀಯನೂ, ಜಗತ್ಸ್ವ ರೂಪನೂ ಆಗಿ ಏಕಮಾತ್ರವಾದ ಬ್ರಹ್ಮಾಕಾರದಿಂದ ಬೆಳಗುತ್ತಿರುವ ನಿನ್ನನ್ನು ಬಿಟ್ಟರೆ ಈ ಜಗತ್ತಿನಲ್ಲಿ ಮತ್ತೇನೂ ಇರುವುದಿಲ್ಲ. ಎಲೈ ಮಹೇಶ್ವರನೆ, ಏಕೋ ರುದ್ರೋ ನದ್ವಿತೀಯೋಽವತಸ್ಥೇ—ಸಜಾತೀಯ ಸ್ವಗತಭೇದರಹಿತನಾಗಿ ಅದ್ವಿತೀಯನೆನಿಸಿ ವಿಜಾತೀಯ ಭೇದಶೂನ್ಯನಾಗಿ, ಸಂಸಾರಜನಿತ ದುಃಖ ವನ್ನು ನಿವಾರಣೆಮಾಡುವವನಾದ ರುದ್ರನೊಬ್ಬನೇ ಈ ಜಗತ್ತಿನ ಒಳಗೂ ಹೊರಗೂ ವ್ಯಾಪಿಸಿ ನೆಲೆಸಿರುತ್ತಾನೆ. ಅವನನ್ನು ಬಿಟ್ಟು ಎರಡನೆಯವನಾವನೂ ಇರುವುದಿಲ್ಲ" ಎಂದು ಶ್ರುತಿಯು ಸಾರುತ್ತಿದೆ. ಹೀಗೆ ಶ್ರುತಿಪ್ರತಿಪಾದ್ಯ ನಾದ ಓ ಪ್ರಭುವೆ, ಏಕೈಕ ಸ್ವಾಮಿಯಾದ ನಿನ್ನನ್ನು ನಾನು ಸೇವಿ ಸುತ್ತೇನೆ.

ಏಕಃ ಕರ್ತಾ ತ್ವಂ ಹಿ ಸರ್ವಸ್ಯ ಶಂಭೋ
ನಾನಾರೂಪೇಷ್ವೇಕರೂಪೋಽಸ್ಯರೂಪಃ ।
ಯದ್ವತ್ಪ್ರತ್ಯಪ್ಸ್ವರ್ಕ ಏಕೋಽಪ್ಯನೇಕ
ಸ್ತಸ್ಮಾನ್ನಾನ್ಯಂ ತ್ವಾಂ ವಿನೇಶಂ ಪ್ರಪದ್ಯೇ ॥ ೧೨೭ ॥
ರಜ್ಜೌ ಸರ್ಪಃ ಶುಕ್ತಿಕಾಯಾಂ ಚ ರೂಪ್ಯಂ
ನೈರಃ ಪೂರಸ್ತನ್ಮೃಗಾಖ್ಯೇ ಮರೀಚೌ ।
ಯದ್ವತ್ತದ್ವದ್ವಿಷ್ವಗೇಷ ಪ್ರಪಂಚೋ
ಯಸ್ಮಿನ್ ಜ್ಞಾತೇ ತಂ ಪ್ರಪದ್ಯೇ ಮಹೇಶಂ ॥ ೧೨೮ ॥
ತೋಯೇ ಶೈತ್ಯಂ ದಾಹಕತ್ವಂ ಚ ವಹ್ನೌ
ತಾಪೋ ಭಾನೌ ಶೀತಭಾನೌ ಪ್ರಸಾದಃ ।
ಪುಷ್ಪೇ ಗಂಧೋ ದುಗ್ಧಮಧ್ಯೇಽಪಿ ಸರ್ಪಿ
ರ್ಯತ್ತಚ್ಛಂಭೋ ತ್ವಂ ತತಸ್ತ್ವಾಂ ಪ್ರಪದ್ಯೇ ॥ ೧೨೯ ॥
ಶಬ್ದಂ ಗೃಹ್ಣಾಸ್ಯಶ್ರವಾಸ್ತ್ವಂ ಹಿ ಜಿಘ್ರೇ
ರಘ್ರಾಣಸ್ತ್ವಂ ವ್ಯಂಘ್ರಿರಾಯಾಸಿ ದೂರಾತ್ ।
ವ್ಯಕ್ಷಃ ಪಶ್ಯೇಸ್ತ್ವಂ ರಸಜ್ಞೋಽಪ್ಯಜಿಹ್ವಃ
ಕಸ್ತ್ವಾಂ ಸಮ್ಯಗ್ವೇತ್ತ್ಯತಸ್ತ್ವಾಂ ಪ್ರಪದ್ಯೇ ॥ ೧೩೦ ॥

---

೧೨೭. ಎಲೈ ಶಂಭುವೆ, ನೀನು ಈ ಜಗತ್ತಿನ ಏಕೈಕ ಕರ್ತೃವು. ಏಕ ಮಾತ್ರಸ್ವರೂಪನಾದರೂ ಉಪಾಧಿಭೇದದಿಂದ ನಾನಾರೂಪಗಳಿಂದ ನೀನು ವಿರಾಜಿಸುತ್ತಿರುವೆ. ಸೂರ್ಯನು ಒಬ್ಬನೇ ಆದರೂ ಪ್ರತಿಯೊಂದು ಜಲಾಶಯ ದಲ್ಲಿಯೂ ಬೇರೆಬೇರೆಯಾಗಿಯೆ ಪ್ರತಿಬಿಂಬಿಸುವಂತೆ, ನೀನು ಒಬ್ಬನೇ ಆಗಿದ್ದರೂ ಜಗತ್ತಿನ ಪ್ರತಿಜೀವಿಯಲ್ಲಿಯೂ ನಾನಾ ಪ್ರಕಾರವಾಗಿ ರೂಪಗೊಳ್ಳು ತ್ತಿರುವೆ. ಇಂಥ ನಿನ್ನೊಬ್ಬನನ್ನೇ ನಾನು ಭಜಿಸುತ್ತೇನೆ.

೧೨೮. ಹಗ್ಗದಲ್ಲಿ ಹಾವೆಂಬ, ಮುತ್ತಿನ ಚಿಪ್ಪಿನಲ್ಲಿ ಬೆಳ್ಳಿಯೆಂಬ, ಮೃಗ ಮರೀಚಿಕೆಯಲ್ಲಿ ನೀರೆಂಬ ಭ್ರಾಂತಿಯೆಂತೊ ಅಂತು ಈ ಜಗತ್ತು ನಿನ್ನಿಂದ ಬೇರೆ ಎಂಬ ಭ್ರಾಂತಿಯು ನಿನ್ನನ್ನರಿತೊಡನೆಯೆ ಅಳಿದುಹೋಗುವುದು. ಇಂಥ ಮಹೇಶ್ವರನಾದ ನಿನ್ನನ್ನು ಶರಣುಹೊಗುತ್ತೇನೆ.

೧೨೯. ನೀರಿನಲ್ಲಿ ತಂಪೂ ಬೆಂಕಿಯಲ್ಲಿ ಬೇಗೆಯೂ ಸೂರ್ಯನಲ್ಲಿ ತಾಪವೂ ಚಂದ್ರನಲ್ಲಿ ಪ್ರಸನ್ನತೆಯೂ ಹೂವಿನಲ್ಲಿ ಸುವಾಸನೆಯೂ ಹಾಲನಡುವೆ ಘೃತವೂ ಇರುವಂತೆ ಎಲ್ಲೆಡೆಗಳಲ್ಲಿಯೂ ವ್ಯಾಪಕನಾಗಿ ಬೇರೆಯೆಂದು ಭಾವಿಸಲಾಗದ ಮಂಗಳಮೂರ್ತಿಯಾದ ನಿನ್ನನ್ನು ಶರಣುಹೊಗುತ್ತೇನೆ.

೧೩೦. ಓ ಪರಮೇಶ್ವರ, ನೀನು ಸರ್ವೇಂದ್ರಿಯಗಳಿಗೂ ಅತೀತನಾಗಿರು

ನೋ ವೇದಸ್ತ್ವಾಮೀಶ ಸಾಕ್ಷಾದ್ಧಿ ವೇದ
ನೋ ವಾ ವಿಷ್ಣುರ್ನೋ ವಿಧಾತಾಽಖಿಲಸ್ಯ ।
ನೋ ಯೋಗೀಂದ್ರಾ ನೇಂದ್ರಮುಖ್ಯಾಶ್ಚ ದೇವಾ
ಭಕ್ತೋ ವೇದ ತ್ವಾಮತಸ್ತ್ವಾಂ ಪ್ರಪದ್ಯೇ ॥ ೧೩೧ ॥
ನೋ ತೇ ಗೋತ್ರಂ ನೇಶ ಜನ್ಮಾಽಪಿ ನಾಖ್ಯಾ
ನೋ ವಾ ರೂಪಂ ನೈವ ಶೀಲಂ ನ ದೇಶಃ ।
ಇತ್ಥಂ ಭೂತೋಽಪೀಶ್ವರಸ್ತ್ವಂ ತ್ರಿಲೋಕ್ಯಾಃ
ಸರ್ವಾನ್ಕಾಮಾನ್ಪೂರಯೇಸ್ತದ್ಭಜೇ ತ್ವಾಂ ॥ ೧೩೨ ॥
ತ್ವತ್ತಃ ಸರ್ವಂ ತ್ವಂ ಹಿ ಸರ್ವಂ ಸ್ಮರಾಽರೇ
ತ್ವಂ ಗೌರೀಶಸ್ತ್ವಂ ಚ ನಗ್ನೋಽತಿಶಾಂತಃ ।
ತ್ವಂ ವೈ ವೃದ್ಧಸ್ತ್ವಂ ಯುವಾ ತ್ವಂ ಚ ಬಾಲ
ಸ್ತತ್ತ್ವಂ ಯತ್ಕಿಂ ನಾಸ್ಯತಸ್ತ್ವಾಂ ನತೋಽಸ್ಮಿ ॥ ೧೩೩ ॥

---

ವವನು. ಕಿವಿಗಳಿಲ್ಲದಿದ್ದರೂ ನೀನು ಶಬ್ದವನ್ನು ಗ್ರಹಿಸುತ್ತೀಯೆ. ಕಾಲಿಲ್ಲದೆಯೂ ದೂರವನ್ನು ಮುಟ್ಟುವೆ. ಕಣ್ಣಿಲ್ಲದೆಯೂ ಎಲ್ಲವನ್ನೂ ಕಾಣುವೆ. ನಾಲಿಗೆಯಿಲ್ಲದೆಯೂ ಎಲ್ಲವನ್ನೂ ಸವಿಯುವ ರಸಜ್ಞನಾಗಿರುವೆ. ಇಂತಹ ನಿನ್ನನ್ನು ನೀನೇ ನಿನ್ನ ಭಕ್ತರಿಗೆ ಪ್ರಕಟಗೊಳಿಸಿಕೊಳ್ಳಬೇಕಲ್ಲದೆ ಬೇರೊಂದು ಮಾರ್ಗವಿಲ್ಲ. ಇದೊ ನಾನು ನಿನ್ನನ್ನು ಶರಣುಹೊಕ್ಕಿರುತ್ತೇನೆ.

೧೩೧. ಜಗದೀಶ, ನಿನ್ನನ್ನು ವೇದಗಳು ಸಾಕ್ಷಾತ್ತಾಗಿ ಅರಿತಿಲ್ಲ. ಆದರೂ ನೀನು ವೇದಪ್ರತಿಪಾದ್ಯನು. ವಿಷ್ಣುವಾಗಲಿ ಬ್ರಹ್ಮನಾಗಲಿ ಸರ್ವಸ್ವರೂಪನಾದ ನಿನ್ನನ್ನು ತಿಳಿದಿರುವುದಿಲ್ಲ. ಯೋಗೀಂದ್ರರಾಗಲಿ ಇಂದ್ರಮುಖ್ಯರಾದ ದೇವತೆಗಳೇ ಆಗಲಿ ನಿನ್ನನ್ನು ಅರಿಯರು. ಆದರೂ ನಿನ್ನ ಭಕ್ತರು ಮಾತ್ರ ನಿನ್ನನ್ನು ಅರಿತಿರುತ್ತಾರೆ. ಇದೊ ನಾನು ನಿನ್ನನ್ನು ಭಜಿಸುವೆನು.

೧೩೨. ಪರಮೇಶ್ವರ, ನಿನ್ನ ಹುಟ್ಟು ಗೋತ್ರ ಹೆಸರು ರೂಪ ಶೀಲ ದೇಶ ಯಾವುದೂ ಯಾರಿಗೂ ಗೊತ್ತಿರುವುದಿಲ್ಲ. ಹೀಗಿದ್ದರೂ ನೀನು ಮೂರು ಲೋಕಗಳಿಗೂ ಸಕಲ ಸಂಪತ್ಸಮೃದ್ಧಿಯನ್ನು ನೀಡುವ ಈಶ್ವರನೇ ಆಗಿದ್ದೀಯೆ. ಭಜಿಸಿದ ಭಕ್ತರ ಸಕಲಾಭೀಷ್ಟಗಳನ್ನೂ ಈಡೇರಿಸುವೆ ಆದುದರಿಂದ ನಾನು ನಿನ್ನನ್ನೇ ಶರಣುಹೊಂದಿರುವೆನು.

೧೩೩. ಓ ಮದನಾಂತಕ, ನಿನ್ನಿಂದಲೇ ಈ ಸಮಸ್ತವೂ ಆಗಿದೆ. ನೀನೇ ಈ ಸಮಸ್ತವೂ ಅಹುದು. ಗಿರಿರಾಜತನೂಭವೆಯಾದ ಗೌರೀದೇವಿಯ ರಮಣನೂ ನೀನೆ. ದಿಗಂಬರನೂ ಮಹಾ ಶಾಂತಸ್ವರೂಪನೂ ನೀನೇ ಆಗಿರುವೆ. ಪ್ರಭುವೆ, ವೃದ್ಧನೂ ಯುವಕನೂ ಬಾಲನೂ ನೀನೇ. ನಿನಗೆ ವಯೋಽವಸ್ಥಾ

ಸ್ತುತ್ವೇತಿ ಭೂಮೌ ನಿಪಪಾತ ವಿಪ್ರಃ
ಸದಂಡವದ್ಯಾವದತೀವ ಹೃಷ್ಟಃ ।
ತಾವತ್ಸಬಾಲೋಽಖಿಲವೃದ್ಧವೃದ್ಧಃ
ಪ್ರೋವಾಚ ಭೂದೇವ ವರಂ ವೃಣೀಹಿ ॥ ೧೩೪ ॥
ತತ ಉತ್ಥಾಯ ಹೃಷ್ಟಾತ್ಮಾ ಮುನಿರ್ವಿಶ್ವಾನರಃ ಕೃತೀ ।
ಪ್ರತ್ಯಬ್ರವೀತ್ಕಿಮಜ್ಞಾತಂ ಸರ್ವಜ್ಞಸ್ಯ ತವ ಪ್ರಭೋ ॥ ೧೩೫ ॥
ಸರ್ವಾಂತರಾತ್ಮಾ ಭಗವಾನ್ ಸರ್ವಃ ಸರ್ವಪ್ರದೋ ಭವಾನ್ ।
ಯಾಚ್ಞಾಂ ಪ್ರತಿ ನಿಯುಂಕ್ತೇ ಮಾಂ ಕಿಮೀಶೋ ದೈನ್ಯಕಾರಿಣೀಂ ॥೧೩೬॥
ಇತಿ ಶ್ರುತ್ವಾ ವಚಸ್ತಸ್ಯ ದೇವೋ ವಿಶ್ವಾನರಸ್ಯ ಹ ।
ಶುಚೇಃ ಶುಚಿವ್ರತಸ್ಯಾಶು ಶುಚಿ ಸ್ಮಿತ್ವಾಽಬ್ರವೀಚ್ಛಿಶುಃ ॥ ೧೩೭ ॥

ಬಾಲ ಉವಾಚ :—

ತ್ವಯಾ ಶುಚೇ ಶುಚಿಷ್ಮತ್ಯಾಂ ಯೋಽಭಿಲಾಷಃ ಕೃತೋ ಹೃದಿ ।
ಅಚಿರೇಣೈವ ಕಾಲೇನ ಸ ಭವಿಷ್ಯತ್ಯಸಂಶಯಃ ॥ ೧೩೮ ॥

---

ವಿಕಾರಗಳೇನೂ ಇರುವುದಿಲ್ಲ. ನೀನು ಏನುತಾನೆ ಆಗುವುದಿಲ್ಲ? ಸ್ವಾಮಿ, ಇದೊ ನಿನಗೆ ನಮಸ್ಕಾರವು.''

೧೩೪. ಅಯ್ಯಾ ಶಿವಶರ್ಮನೆ, ವಿಪ್ರನಾದ ಆ ವಿಶ್ವಾನರನು ಈ ರೀತಿ ಸ್ತುತಿಸಿ, ಅತ್ಯಂತ ಸಂತುಷ್ಟವಾದ ಅಂತರಂಗವುಳ್ಳವನಾಗಿ ಭೂಮಿಯಲ್ಲಿ ದಂಡ ಪ್ರಣಾಮಮಾಡಲು, ಸಮಸ್ತ ವೃದ್ಧರಿಗೂ ವೃದ್ಧನಾದ ಆ ಬಾಲರೂಪೀ ಮಹೇಶ್ವರನು ಆ ಭೂದೇವವರನನ್ನು ಕುರಿತು, ''ಎಲೈ ನೀನು ಬೇಕಾದ ವರವನ್ನು ಬೇಡು!'' ಎಂದು ಹೇಳಿದನು.

೧೩೫–೧೩೬. ತರುವಾಯ ಧನ್ಯಾತ್ಮನಾದ ಆ ವಿಶ್ವಾನರಮುನಿಯು ಮೇಲೆದ್ದು ಆನಂದತುಂದಲಿತಸ್ವಾಂತನಾಗಿ, ''ಓ ಪರಮೇಶ್ವರ, ನಿನಗೆ ತಿಳಿಯದುದು ಏನುತಾನೆ ಇದೆ? ಪ್ರಭುವೆ, ನೀನು ಸರ್ವಜ್ಞನು. ಷಡ್ಗುಣೈಶ್ವರ್ಯ ಸಂಪನ್ನನಾದ ನೀನು ಸರ್ವಾಂತರ್ಯಾಮಿಯೂ ಸರ್ವಸ್ವರೂಪನೂ ಸರ್ವ ಪ್ರದನೂ ಆಗಿರುವೆ. ಇಂತಹ ಪ್ರಭುವಾದ ನೀನು ನನ್ನನ್ನು ಯಾಚನೆಯಲ್ಲೇಕೆ ತೊಡಗಿಸುವೆ? ಪ್ರಭುವಾದ ನೀನೇ ನನಗೆ ಪ್ರತ್ಯಕ್ಷನಾಗಿರುವಲ್ಲಿ ನನ್ನನ್ನೇಕೆ ದೈನ್ಯತೆಗೆ ಈಡುಮಾಡುವೆ?'' ಎಂದು ಅರಿಕೆಮಾಡಿದನು.

೧೩೭. ಶುಚಿಯೂ ಶುಚಿವ್ರತನೂ ಆದ ಆ ವಿಶ್ವಾನರನಾಡಿದ ಈ ಮಾತು ಗಳನ್ನು ಕೇಳಿ, ದೇವೇಶ್ವರನಾದ ಆ ಬಾಲಮಹೇಶ್ವರನು ಶುಚಿಸ್ಮಿತವದನನಾಗಿ ಹೀಗೆ ನುಡಿದನು.

೧೩೮. ಬಾಲಮಹೇಶ್ವರನು ಹೇಳುತ್ತಾನೆ:—''ಎಲೈ ಪರಿಶುದ್ಧನಾದ

ತವ ಪುತ್ರತ್ವಮೇಷ್ಯಾಮಿ ಶುಚಿಷ್ಮತ್ಯಾಂ ಮಹಾಮತೇ ।
ಖ್ಯಾತೋ ಗೃಹಪತಿರ್ನಾಮ್ನಾ ಶುಚಿಃ ಸರ್ವಾಽಮರಪ್ರಿಯಃ ॥ ೧೩೯ ॥
ಅಭಿಲಾಷಾಽಷ್ಟಕಂ ಪುಣ್ಯಂ ಸ್ತೋತ್ರಮೇತತ್ತ್ವಯೇರಿತಂ ।
ಅಬ್ದಂ ತ್ರಿಕಾಲಪಠನಾತ್ಕಾಮದಂ ಶಿವಸನ್ನಿಧೌ ॥ ೧೪೦ ॥
ಏತತ್ ಸ್ತೋತ್ರಸ್ಯ ಪಠನಂ ಪುತ್ರಪೌತ್ರ ಧನಪ್ರದಂ ।
ಸರ್ವಶಾಂತಿಕರಂ ಚಾಽಪಿ ಸರ್ವಾಪತ್ಪರಿನಾಶನಂ ॥ ೧೪೧ ॥
ಸ್ವರ್ಗಾಽಪವರ್ಗಸಂಪತ್ತಿಕಾರಕಂ ನಾಽತ್ರ ಸಂಶಯಃ ।
ಪ್ರಾತರುತ್ಥಾಯ ಸುಸ್ನಾತೋ ಲಿಂಗಮಭ್ಯರ್ಚ್ಯ ಶಾಂಭವಂ ॥ ೧೪೨ ॥
ವರ್ಷಂ ಜಪನ್ನಿದಂ ಸ್ತೋತ್ರಮಪುತ್ರಃ ಪುತ್ರವಾನ್ಭವೇತ್ ।
ವೈಶಾಖೇ ಕಾರ್ತಿಕೇ ಮಾಘೇ ವಿಶೇಷನಿಯಮೈರ್ಯುತಃ ॥ ೧೪೩ ॥

---

ವಿಶ್ವಾನರನೆ, ನಿನ್ನ ಭಾರ್ಯೆಯಾದ ಶುಚಿಷ್ಮತಿಯ ಮನಸ್ಸಿನಲ್ಲಿ ಯಾವ ಸಂತಾನಾಭಿಲಾಷೆಯಿರುವುದೊ ಅದು ಬಹು ಬೇಗನೆಯೆ ನೆರವೇರತ್ತದೆಯೆಂಬುದರಲ್ಲಿ ಸಂಶಯವಿಲ್ಲ.

೧೩೯. ಎಲೈ ಮಹಾಮತಿಯೆ, ನಾನು ಆ ನಿನ್ನ ಮಡದಿಯಾದ ಶುಚಿಷ್ಮತಿಯಲ್ಲಿ ನಿನ್ನ ಪುತ್ರನಾಗಿ ಜನಿಸಿ, ಗೃಹಪತಿಯೆಂದು ಪ್ರಖ್ಯಾತಿಯನ್ನು ಪಡೆದು ಪರಮಪವಿತ್ರನೆನಿಸಿ, ಸಮಸ್ತ ದೇವತೆಗಳಿಗೂ ಅತ್ಯಂತ ಪ್ರಿಯನಾಗುತ್ತೇನೆ.

೧೪೦. ಅಯ್ಯಾ ವಿಶ್ವಾನರನೆ, ನೀನೆಸಗಿದ ಪುಣ್ಯಕರವಾದ ಅಭಿಲಾಷಾಷ್ಟಕವೆಂಬ ಈ ಸ್ತೋತ್ರವನ್ನು ಶಿವನಾದ ನನ್ನ ಸನ್ನಿಧಿಯಲ್ಲಿ ಒಂದು ವರ್ಷಕಾಲ ತ್ರಿಕಾಲಗಳಲ್ಲಿಯೂ ಪಠನಮಾಡಿದುದಾದರೆ ಸರ್ವಕಾಮಪ್ರದವೆನಿಸುತ್ತದೆ.

೧೪೧. ಈ ಸ್ತೋತ್ರದ ಪಠನವು ಮಕ್ಕಳು ಮೊಮ್ಮಕ್ಕಳನ್ನೂ ಐಶ್ವರ್ಯವನ್ನೂ ಅನುಗ್ರಹಿಸುವಂಥದು. ಎಲ್ಲ ಅನಿಷ್ಟಗಳನ್ನೂ ನಿವಾರಿಸಿ ಶಾಂತಿಯನ್ನುಂಟುಮಾಡತಕ್ಕುದು. ಸಮಸ್ತ ಆಪತ್ತುಗಳನ್ನೂ ಕಳೆಯತಕ್ಕುದು.

೧೪೨. ಇದು ಸ್ವರ್ಗ ಮೋಕ್ಷಗಳನ್ನು ಉಂಟುಮಾಡುವುದೇ ಅಲ್ಲದೆ ಇಹಲೋಕದಲ್ಲಿ ಸಂಪತ್ಸಮೃದ್ಧಿಯನ್ನು ದೊರೆಯಿಸುವುದೆಂಬುದರಲ್ಲಿ ಸಂಶಯವಿಲ್ಲ. ಮಾನವನು ಉದಯಕಾಲಕ್ಕೆ ಎದ್ದು, ಶೌಚಾದಿಗಳನ್ನು ತೀರಿಸಿಕೊಂಡು ಸ್ನಾನಮಾಡಿ ಶಿವಲಿಂಗವನ್ನರ್ಚಿಸಿ, ಶಾಂಭವವೆನಿಸಿದ ಈ ಸ್ತುತಿಯನ್ನು ಪಠಿಸಬೇಕು.

೧೪೩. ಒಂದು ವರ್ಷಕಾಲ ಈ ಸ್ತೋತ್ರವನ್ನು ಜಪಿಸಿದುದಾದರೆ, ಅಪುತ್ರನಾದವನು ಪುತ್ರವಂತನಾಗುತ್ತಾನೆ. ವೈಶಾಖ ಕಾರ್ತಿಕ ಮಾಘಮಾಸಗಳಲ್ಲಿ ವಿಶೇಷ ನಿಯಮಗಳನ್ನು ಕೈಕೊಂಡು ಈ ಸ್ತೋತ್ರವನ್ನು ಪಠಿಸತಕ್ಕುದು.

ಯಃ ಪಠೇತ್ಸ್ನಾನಸಮಯೇ ಸಲಭೇತ್ಸಕಲಂ ಫಲಂ ।
ಕಾರ್ತಿಕಸ್ಯ ತು ಮಾಸಸ್ಯ ಪ್ರಸಾದಾದಹಮವ್ಯಯಃ ॥ ೧೪೪ ॥
ತವ ಪುತ್ರತ್ವಮೇಷ್ಯಾಮಿ ಯಸ್ತ್ವನ್ಯಸ್ತತ್ಪಠಿಷ್ಯತಿ ।
ಅಭಿಲಾಷಾಷ್ಟಕಮಿದಂ ನ ದೇಯಂ ಯಸ್ಯ ಕಸ್ಯಚಿತ್ ॥ ೧೪೫ ॥
ಗೋಪನೀಯಂ ಪ್ರಯತ್ನೇನ ಮಹಾವಂಧ್ಯಾಪ್ರಸೂತಿಕೃತ್ ।
ಸ್ತ್ರಿಯಾ ವಾ ಪುರುಷೇಣಾಽಪಿ ನಿಯಮಾಲ್ಲಿಂಗಸನ್ನಿಧೌ ॥ ೧೪೬ ॥
ಅಬ್ದಂ ಜಪ್ತಮಿದಂ ಸ್ತೋತ್ರಂ ಪುತ್ರದಂ ನಾಽತ್ರ ಸಂಶಯಃ ।
ಇತ್ಯುಕ್ತ್ವಾಽಂತರ್ದಧೇ ಬಾಲಃ ಸೋಽಪಿ ವಿಪ್ರೋ ಗೃಹಂ ಗತಃ ॥ ೧೪೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಇಂದ್ರಾಽಗ್ನಿಲೋಕವರ್ಣನಂ" ನಾಮ ದಶಮೋಽಧ್ಯಾಯಃ

---

೧೪೪. ಯಾವನು ಸ್ನಾನಸಮಯದಲ್ಲಿ ಈ ಸ್ತೋತ್ರವನ್ನು ಪಠಿಸುವನೊ ಅವನಿಗೆ ಸಮಸ್ತ ಫಲಗಳೂ ದೊರಕುತ್ತವೆ. ಕಾರ್ತಿಕಮಾಸದಲ್ಲಿಯಾದರೊ ಆ ಮಾಸದ ಪ್ರಭಾವದಿಂದಲೆ ಈ ಸ್ತೋತ್ರವನ್ನು ಪಠಿಸುವವನಿಗೆ ಅವ್ಯಯನಾದ ನಾನೇ ಪ್ರತ್ಯಕ್ಷನಾಗುತ್ತೇನೆ.

೧೪೫. ಎಲೈ ವಿಪ್ರನೆ, ನಾನು ನಿನಗೆ ಮಗನಾಗಿ ಜನಿಸುತ್ತೇನೆ ಅಲ್ಲದೆ ಇದನ್ನು ಪಠಿಸುವ ಇತರನಿಗೂ ಪುತ್ರವರವನ್ನು ನೀಡುತ್ತೇನೆ. ಈ ಅಭಿಲಾಷಾ ಷ್ಟಕ ಸ್ತೋತ್ರವನ್ನು ಗೊತ್ತುಗುರಿಯಿಲ್ಲದ ಯಾವನಿಗೂ ಉಪದೇಶಮಾಡ ಬಾರದು.

೧೪೬–೧೪೭. ಹುಟ್ಟುಬಂಜೆಗೂ ಪುತ್ರವರವನ್ನು ದಯೆಗೆಯ್ವ ಈ ಮಹಾ ಸ್ತೋತ್ರವನ್ನು ಪ್ರಯತ್ನಪೂರ್ವಕವಾಗಿ ರಹಸ್ಯವಾಗಿ ಕಾಪಾಡತಕ್ಕುದು. ಸ್ತ್ರೀಯಾಗಲಿ ಪುರುಷನಾಗಲಿ ನಿಯಮವನ್ನು ಕೈಕೊಂಡು ಶಿವಲಿಂಗ ಸನ್ನಿಧಿ ಯಲ್ಲಿ ಈ ಸ್ತೋತ್ರವನ್ನು ಒಂದು ವರ್ಷಕಾಲ ಜಪಿಸಿದ್ದಾದರೆ ಇದು ಪುತ್ರಪ್ರದ ವಾಗುವುದರಲ್ಲಿ ಸಂಶಯವೇ ಇಲ್ಲ." ಎಲೈ ಶಿವಶರ್ಮನೆ, ಬಾಲಮಹೇಶ್ವರನು ಈ ರೀತಿ ವರವನ್ನು ಕರುಣಿಸಿ ಅಲ್ಲಿಯೇ ಅಂತರ್ಧಾನವಾದನು ಆ ತರುವಾಯ ವಿಪ್ರನಾದ ಆ ವಿಶ್ವಾನರನೂ ತನ್ನ ಮನೆಗೆ ತಿರುಗಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಇಂದ್ರಾಗ್ನಿಲೋಕವರ್ಣನ"ವೆಂಬ ಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥೈಕಾದಶೋಽಧ್ಯಾಯಃ

## ವಹ್ನಿಲೋಕವರ್ಣನಂ

ಅಗಸ್ತಿರುವಾಚ :—

**ಶೃಣು ಸುಶ್ರೋಣಿ ಸುಭಗೇ ವೈಶ್ವಾನರಸಮುದ್ಭವಂ ।**
**ಪುಣ್ಯಶೀಲಸುಶೀಲಾಭ್ಯಾಂ ಯಥೋಕ್ತಂ ಶಿವಶರ್ಮಣೇ ॥ ೧ ॥**
**ಅಥ ಕಾಲೇನ ತದ್ಯೋಷಿದಂತರ್ವತ್ನೀ ಬಭೂವ ಹ ।**
**ವಿಧಿವದ್ವಿಹಿತೇ ತೇನ ಗರ್ಭಾಧಾನಾಖ್ಯಕರ್ಮಣಿ ॥ ೨ ॥**
**ತತಃ ಪುಂಸವನಂ ತೇನ ಸ್ಪಂದನಾತ್ಪ್ರಾಗ್ವಿಪಶ್ಚಿತಾ ।**
**ಗೃಹ್ಯೋಕ್ತ ವಿಧಿನಾ ಸಮ್ಯಕ್ ಕೃತಂ ಪುಂಸ್ತ್ವವಿವೃದ್ಧಯೇ ॥ ೩ ॥**
**ಸೀಮಂತೋಽಥಾಽಷ್ಟಮೇ ಮಾಸಿ ಗರ್ಭರೂಪಸಮೃದ್ಧಿಕೃತ್ ।**
**ಸುಖಪ್ರಸವಸಿದ್ಧ್ಯೈ ಚ ತೇನಾಽಕಾರಿ ಕ್ರಿಯಾವಿದಾ ॥ ೪ ॥**
**ಅಥಾಽತಃ ಸತ್ಸು ತಾರಾಸುತಾರಾಧಿಪವರಾನನಃ ।**
**ಕೇಂದ್ರೇ ಗುರೌ ಶುಭೇ ಲಗ್ನೇ ಸುಗ್ರಹೇಷ್ವಯುಗೇಷು ಚ ॥ ೫ ॥**
**ಅರಿಷ್ಟಂ ದೀಪಯನ್ದೀಪ್ತ್ಯಾ ಸರ್ವಾಽರಿಷ್ಟವಿನಾಶಕೃತ್ ।**
**ತನಯೋ ನಾಮ ತಸ್ಯಾಂ ತು ಶುಚಿಷ್ಮತ್ಯಾಂ ಬಭೂವ ಹ ॥ ೬ ॥**

---

## ಕನ್ನಡದ ಅನುವಾದ

### ವಹ್ನಿಲೋಕವರ್ಣನ

೧. ಅಗಸ್ತ್ಯನು ಹೇಳುತ್ತಾನೆ —ಎಲೆ ಶುಶ್ರೋಣಿ, ಸುಮಂಗಲೆಯಾದ ನೀನು ಪುಣ್ಯಶೀಲ ಸುಶೀಲರು ಶಿವಶರ್ಮದ್ವಿಜನಿಗೆ ವರ್ಣಿಸಿ ಹೇಳಿದ ವೈಶ್ವಾನರ ಜನನದ ಕಥೆಯನ್ನು ಮತ್ತೂ ಕೇಳುವವಳಾಗು.

೨ ಕೆಲವು ಕಾಲದ ತರುವಾಯ ಆ ವಿಶ್ವಾನರನು ವಿಧ್ಯುಕ್ತವಾಗಿ ಗರ್ಭಾಧಾನಕರ್ಮವನ್ನು ಆಚರಿಸಿದ ಮೇಲೆ ಆ ಶುಚಿಷ್ಮತಿಯು ಗರ್ಭವತಿ ಯಾದಳು.

೩ ತರುವಾಯ ಪಂಡಿತನಾದ ಆ ವಿಶ್ವಾನರನು ಗರ್ಭದಲ್ಲಿನ ಪಿಂಡವು ಅಲುಗತೊಡಗದಿರುವಾಗಲೆ ಶಿಶುವಿಗೆ ಪುಂಸ್ತ್ವವು ವೃದ್ಧಿಗೊಳ್ಳಲೋಸುಗ ಗೃಹ್ಯಸೂತ್ರವಿಧಾನವನ್ನನುಸರಿಸಿ ಪುಂಸವನ ಕರ್ಮವನ್ನು ಮಾಡಿದನು.

೪ ಎಂಟನೆಯ ತಿಂಗಳಲ್ಲಿ ಕ್ರಿಯಾದಕ್ಷನಾದ ಆ ವಿಪ್ರನು ಗರ್ಭರೂಪ ವನ್ನು ಸಮೃದ್ಧಿಯಾಗಿ ಬೆಳೆಯಿಸತಕ್ಕುದೂ ಸುಖಪ್ರಸವವನ್ನುಂಟುಮಾಡ ತಕ್ಕುದೂ ಆದ ಸೀಮಂತೋನ್ನಯನಕರ್ಮವನ್ನೆಸಗಿದನು.

೫–೬. ಇದಾದ ಬಳಿಕ ಗ್ರಹಗಳೆಲ್ಲವೂ ಉಚ್ಚಸ್ಥಾನದಲ್ಲಿರುವಂದು, ಶತಭಿಷಾ ನಕ್ಷತ್ರದಲ್ಲಿ ಗುರುವು ಕೇಂದ್ರದಲ್ಲಿದ್ದ ಶುಭಲಗ್ನದಲ್ಲಿ ಆ ಶುಚಿಷ್ಮತಿಯ ಗರ್ಭದಿಂದ ಚಂದ್ರನಂತೆ ಸುಪ್ರಸನ್ನವಾದ ಮುಖವುಳ್ಳವನಾಗಿ ಆ ಹೆರಮನೆಯ

**ಸದ್ಯಃ ಸಮಸ್ತಸುಖದೋ ಭೂರ್ಭುವಸ್ಸ್ವರ್ನಿವಾಸಿನಾಂ ।**
**ಗಂಧವಾಹಾ ಗಂಧವಾಹಾ ದಿಗ್ವಧೂಮುಖವಾಸನಾಃ ॥ ೭ ॥**
**ಇಷ್ಟಗಂಧಪ್ರಸೂನೌಘೈರ್ವವರ್ಷುಸ್ತೇ ಘನಾಘನಾಃ ।**
**ದೇವದುಂದುಭಯೋ ನೇದುಃ ಪ್ರಸೇದುಃ ಸರ್ವತೋ ದಿಶಃ ॥ ೮ ॥**
**ಸರಿತಃ ಸರಿತಃ ಸ್ವಚ್ಛಾ ಭೂತಾನಾಂ ಮಾನಸೈಃ ಸಹ ।**
**ತಮೋಽತಾಮ್ಯತ್ತು ನಿತರಾಂ ರಜೋಽಪಿ ವಿರಜೋಽಭವತ್ ॥ ೯ ॥**
**ಸತ್ವಾಃ ಸತ್ವಸಮಾಯುಕ್ತಾ ವಸುಧಾಸೀಚ್ಛುಭಾ ತದಾ ।**
**ಕಲ್ಯಾಣೀ ಸರ್ವತೋ ವಾಣೀ ಪ್ರಾಣಿನಃ ಪ್ರೀಣಯಂತ್ಯಭೂತ್ ॥ ೧೦ ॥**
**ತಿಲೋತ್ತಮೋರ್ವಶೀ ರಂಭಾ ಪ್ರಭಾ ವಿದ್ಯುತ್ಪ್ರಭಾ ಶುಭಾ ।**
**ಸುಮಂಗಲಾ ಶುಭಾಲಾಪಾ ಸುಶೀಲಾಢ್ಯಾ ವರಾಂಗನಾಃ ॥ ೧೧ ॥**
**ಕ್ವಣತ್ಕಂಕಣಪಾತ್ರಾಣಿ ಕೃತ್ವಾ ಕರತಲೇ ಮುದಾ ।**
**ಮುಕ್ತಮುಕ್ತಾಫಲಾಢ್ಯಾನಿ ಯಕ್ಷ್ಮ ಕರ್ದಮವಂತಿ ಚ ॥ ೧೨ ॥**

---

ನ್ನೆಲ್ಲ ತನ್ನ ಕಾಂತಿಯಿಂದ ಬೆಳಗುತ್ತ, ಸರ್ವಾರಿಷ್ಟಗಳನ್ನೂ ನಾಶಗೊಳಿಸುವ ಕುಮಾರನು ಉದಿಸಿಬಂದನು.

೭. ಇಂತು ಆ ಕುಮಾರನು ಜನಿಸಿದೊಡನೆಯೆ ಸ್ವರ್ಗಮರ್ತ್ಯಪಾತಾಳ ನಿವಾಸಿಗಳಾದ ಸಮಸ್ತರಿಗೂ ಸುಖಪ್ರದನಾದ ಗಂಧವಾಹನೆನಿಸಿದ ವಾಯುವು ದಿಗಂಗನೆಯರ ಮುಖಗಳನ್ನು ಸುವಾಸನಾ ಭೂಯಿಷ್ಠಗಳನ್ನಾಗಿಮಾಡಿದನು. ಒಡನೆಯೇ ದಿಕ್ಕುಗಳೆಲ್ಲವೂ ಸುಪ್ರಸನ್ನಗಳಾದುವು.

೮. ಗಗನಾಂಗಣದಲ್ಲಿ ಮುಗಿಲುಗಳು ಸುಗಂಧಭರಿತವಾದ ಹೂಗಳ ಮಳೆಯನ್ನು ಕರೆದುವು. ದೇವದುಂದುಭಿಗಳು ಮೊಳಗಿದುವು. ಎಲ್ಲ ದಿಕ್ಕುಗಳೂ ಪ್ರಸನ್ನತೆಯನ್ನು ಹೊಂದಿದುವು.

೯. ಸುತ್ತಮುತ್ತಣ ಸರೋವರಗಳೇ ಅಲ್ಲದೆ ಸಮಸ್ತಭೂತಗಳ ಮನಸ್ಸುಗಳೂ ನಿರ್ಮಲವಾದುವು. ಕತ್ತಲು ಕಳೆಯಿತು. ಬಹಳವಾಗಿ ತುಂಬಿದ್ದ ದೂಳೆಲ್ಲವೂ ಅಡಗಿ ಹೋಯಿತು.

೧೦. ಸಮಸ್ತ ಪ್ರಾಣಿಗಳೂ ಕೇವಲ ಸಾತ್ತ್ವಿಕ ವೃತ್ತಿಯನ್ನು ತಳೆದು, ವಸುಂಧರೆಯೇ ಆ ಸಮಯದಲ್ಲಿ ಮಂಗಳಮಯಿಯೆನಿಸಿತು. ಎತ್ತೆತ್ತಲೂ ಶುಭಕರವಾದ ಮಂಗಳಗೀತೆಗಳು ಪ್ರಾಣಿಗಳನ್ನು ಸಂತೋಷಗೊಳಿಸಿದುವು.

೧೧-೧೬. ತಿಲೋತ್ತಮೆ, ಊರ್ವಶಿ, ರಂಭೆ, ಪ್ರಭೆ, ಮಂಗಳಾಂಗಿ, ವಿದ್ಯುತ್ಪ್ರಭೆ, ಸುಮಂಗಲೆ, ಶುಭಾಲಾಪೆ, ಸುಶೀಲೆ ಮೊದಲಾದ ಸ್ವರ್ಗಾಂಗನೆಯರು ಕಂಕಣಗಳನ್ನೊಡಗೂಡಿ ಮಧುರ ಧ್ವನಿಯನ್ನೆಸಗುವ ಕೈಗಳಿಂದ ಮುತ್ತುಗಳು ತುಂಬಿ, ಕರ್ಪೂರ ಅಗುರು ಕಸ್ತೂರಿಗಳ ಗಂಧವು ಬೆರೆತು, ಮುಕ್ತಾಕ್ಷತೆ

ವಜ್ರವೈದೂರ್ಯದೀಪಾನಿ ಹರಿದ್ರಾಲೇಪನಾನಿ ಚ ।
ಗಾರುತ್ಮತೈಕರೂಪಾಣಿ ಶಂಖಶುಕ್ತಿದಧೀನಿ ಚ ॥ ೧೩ ॥
ಪದ್ಮರಾಗಪ್ರವಾಲಾಖ್ಯ ರತ್ನಕುಂಕುಮವಂತಿ ಚ ।
ಗೋಮೇದ ಪುಷ್ಪರಾಗೇಂದ್ರನೀಲಸನ್ಮಾಲ್ಯಭಾಂಜಿ ಚ ॥ ೧೪ ॥
ವಿದ್ಯಾಧರ್ಯಶ್ಚ ಕಿನ್ನರ್ಯಸ್ತಥಾಽಮರ್ಯಃ ಸಹಸ್ರಶಃ ।
ಚಾಮರವ್ಯಗ್ರಹಸ್ತಾಽಗ್ರ ಮಂಗಲದ್ರವ್ಯಪಾಣಯಃ ॥ ೧೫ ॥
ಗಂಧರ್ವೋರಗ ಯಕ್ಷಾಣಾಂ ಸುವಾಸಿನ್ಯಃ ಶುಭಸ್ವರಾಃ ।
ಗಾಯಂತ್ಯೋ ಲಲಿತಂ ಗೀತಂ ತತ್ರಾಜಗ್ಮುರನೇಕಶಃ ॥ ೧೬ ॥
ಮರೀಚಿರತ್ರಿಃ ಪುಲಹಃ ಪುಲಸ್ತ್ಯಃ ಕ್ರತುರಂಗಿರಾಃ ।
ವಸಿಷ್ಠಃ ಕಶ್ಯಪಶ್ಚಾಽಹಂ ವಿಭಾಂಡೋ ಮಾಂಡವೀಸುತಃ ॥ ೧೭ ॥
ಲೋಮಶೋ ಲೋಮಚರಣೋ ಭರದ್ವಾಜೋಽಥ ಗೌತಮಃ ।
ಭೃಗುಸ್ತು ಗಾಲವೋ ಗರ್ಗೋ ಜಾತೂಕರ್ಣ್ಯಃ ಪರಾಶರಃ ॥ ೧೮ ॥
ಆಪಸ್ತಂಭೋ ಯಾಜ್ಞವಲ್ಕ್ಯದಕ್ಷವಾಲ್ಮೀಕಿಮುದ್ಗಲಾಃ ।
ಶಾತಾತಪಶ್ಚ ಲಿಖಿತಃ ಶಿಲಾದಃ ಶಂಖ ಉಂಛಭುಕ್ ॥ ೧೯ ॥

---

ಗಳೊಡಗೂಡಿದ ಪೂರ್ಣಪಾತ್ರೆಗಳನ್ನು ಹಿಡಿದು, ಅಲ್ಲಿಗೈತಂದರು. ವಜ್ರ ವೈಡೂರ್ಯ ದೀಪಗಳನ್ನೂ ಅರಿಶಿನದ ಲೇಪನವನ್ನೂ ಗಾರುತ್ಮತ (ಗರುಡ ಮಣಿಯ)ರೂಪವನ್ನೊಳಗೊಂಡ ಶಂಖ, ಮುತ್ತಿನ ಚಿಪ್ಪು ಮತ್ತು ಮೊಸರು ಗಳನ್ನೂ, ಪದ್ಮರಾಗ, ಪ್ರವಾಳ, ಕುಂಕುಮವರ್ಣ ವಿರಾಜಿತವಾದ ರತ್ನಗಳು, ಗೋಮೇದ, ಪುಷ್ಯರಾಗ ಮತ್ತು ಇಂದ್ರನೀಲಮಣಿಗಳು ತುಂಬಿದ ಪಾತ್ರೆ ಗಳನ್ನೂ ಪುಷ್ಪಮಾಲಿಕೆಗಳಗಳನ್ನೂ ಹಿಡಿದು ವಿದ್ಯಾಧರಿಯರೂ ಕಿನ್ನರಿ ಯರೂ ಇತರ ಸಹಸ್ರಾರುಮಂದಿ ಅಮರಿಯರೂ ಅಲ್ಲಿಗೈತಂದರು. ಅವರಲ್ಲಿ ಪ್ರತಿಯೊಬ್ಬರೂ ಚಾಮರಗಳನ್ನು ಹಿಡಿದವರಾಗಿ ಮಂಗಳದ್ರವ್ಯಗಳಿಂದ ಒಡ ಗೂಡಿದವರೇ ಆಗಿದ್ದರು. ಗಂಧರ್ವ ಉರಗ ಯಕ್ಷರ ಸುವಾಸಿನಿಯರೂ ಶುಭ ಸ್ವರದಿಂದ ಲಲಿತವಾದ ಗೀತವನ್ನು ಹಾಡುತ್ತ ಗುಂಪುಗೂಡಿ ಆ ವಿಶ್ವಾನರನ ಮನೆಗೆ ಬಂದರು.

೧೭–೨೩. ಮರೀಚಿ, ಅತ್ರಿ, ಪುಲಹ, ಪುಲಸ್ತ್ಯ, ಕ್ರತು, ಅಂಗಿರಸ, ವಸಿಷ್ಠ, ಕಶ್ಯಪ, ನಾನು (ಅಗಸ್ತ್ಯ), ವಿಭಾಂಡ, ಮಾಂಡವ್ಯ, ಲೋಮಶ, ಲೋಮಪಾದ, ಭರದ್ವಾಜ, ಗೌತಮ, ಭೃಗು, ಗಾಲವ, ಗರ್ಗ, ಜಾತೂಕರ್ಣಿ, ಪರಾಶರ, ಆಪಸ್ತಂಬ, ಯಾಜ್ಞವಲ್ಕ್ಯ, ದಕ್ಷ, ವಾಲ್ಮೀಕಿ, ಮುದ್ಗಲ, ಶಾತಾತಪ, ಲಿಖಿತ, ಶಿಲಾದ, ಶಂಖ, ಉಂಛಭುಜ, ಜಮದಗ್ನಿ, ಸಂವರ್ತ,

ಜಮದಗ್ನಿಶ್ಚ ಸಂವರ್ತೋ ಮತಂಗೋ ಭರತೋಽಂಶುಮಾನ್ ।
ವ್ಯಾಸಃ ಕಾತ್ಯಾಯನಃ ಕುತ್ಸಃ ಶೌನಕಃ ಸುಶ್ರುತಃ ಶುಕಃ ॥ ೨೦ ॥
ಋುಷ್ಯಶೃಂಗೋಽಥ ದುರ್ವಾಸಾ ರುಚಿರ್ನಾರದತುಂಬುರೂ ।
ಉತ್ತಂಕೋ ವಾಮದೇವಶ್ಚ ಚ್ಯವನೋಽಸಿತದೇವಲೌ ॥ ೨೧ ॥
ಶಾಲಂಕಾಯನಹಾರೀತೌ ವಿಶ್ವಾಮಿತ್ರೋಽಥ ಭಾರ್ಗವಃ ।
ಮೃಕಂಡಃ ಸಹಪುತ್ರೇಣ ದಾಲ್ಭ್ಯ ಉದ್ದಾಲಕಸ್ತಥಾ ॥ ೨೨ ॥
ಧೌಮ್ಯೋಪಮನ್ಯುವತ್ಸಾದ್ಯಾ ಮುನಯೋ ಮುನಿಕನ್ಯಕಾಃ ।
ತಚ್ಛಾಂತ್ಯರ್ಥಂ ಸಮಾಜಗ್ಮುರ್ಧನ್ಯಂ ವಿಶ್ವಾನರಾಶ್ರಮಂ ॥ ೨೩ ॥
ಬ್ರಹ್ಮಾ ಬೃಹಸ್ಪತಿಯುತೋ ದೇವೋ ಗರುಡವಾಹನಃ ।
ನಂದಿಭೃಂಗಿಸಮಾಯುಕ್ತೋ ಗೌರ್ಯಾಸಹ ವೃಷಧ್ವಜಃ ॥ ೨೪ ॥
ಮಹೇಂದ್ರಮುಖ್ಯಾ ಗೀರ್ವಾಣಾ ನಾಗಾಃ ಪಾತಾಲವಾಸಿನಃ ।
ರತ್ನಾನ್ಯಾದಾಯ ಬಹುಶಃ ಸಸರಿತ್ಕಾ ಮಹಾಬ್ಧಯಃ ॥ ೨೫ ॥
ಸ್ಥಾವರಾ ಜಂಗಮಂ ರೂಪಂ ಧೃತ್ವಾ ಯಾತಾಃ ಸಹಸ್ರಶಃ ।
ಮಹಾಮಹೋತ್ಸವೇ ತಸ್ಮಿನ್ನಭೂವಾಽಕಾಲಕೌಮುದೀ ॥ ೨೬ ॥

---

ಮತಂಗ, ಭರತ, ಅಂಶುಮಂತ, ವ್ಯಾಸ, ಕಾತ್ಯಾಯನ, ಕುತ್ಸ, ಶೌನಕ, ಸುಶ್ರುತ, ಶುಕ, ಋುಷ್ಯಶೃಂಗ, ದುರ್ವಾಸ, ರುಚಿ, ನಾರದ, ತುಂಬುರು, ಉತ್ತಂಕ, ವಾಮದೇವ, ಚ್ಯವನ, ಅಸಿತ, ದೇವಲ, ಶಾಲಂಕಾಯನ, ಹಾರೀತ, ವಿಶ್ವಾಮಿತ್ರ, ಭಾರ್ಗವ, ಮೃಕಂಡ, ಮಾರ್ಕಂಡೇಯ, ದಾಲ್ಭ್ಯ, ಉದ್ದಾಲಕ, ಧೌಮ್ಯ, ಉಪಮನ್ಯು, ವತ್ಸ—ಮೊದಲಾದ ಮಹರ್ಷಿಗಳೂ ಮುನಿಕನ್ನಿಕೆಯರೂ, ಧನ್ಯನಾದ ಆ ವಿಶ್ವಾನರನ ಆಶ್ರಮಕ್ಕೆ ಆ ಶಿಶುವಿನ ಶಾಂತಿ ಕರ್ಮಕ್ಕಾಗಿ ಚಿತ್ತೈಸಿದರು.

೨೪. ದೇವಪುರೋಹಿತನಾದ ಬೃಹಸ್ಪತಿಯನ್ನೊಡಗೊಂಡು ಬ್ರಹ್ಮ ದೇವನೂ, ಗರುಡನನ್ನೇರಿ ಮಹಾವಿಷ್ಣುವೂ, ನಂದಿ ಭೃಂಗಿಗಳು ಹಿಂಬಾಲಿಸಿ ಬರುತ್ತಿರಲು ವೃಷಭಧ್ವಜನಾಗಿ ಉಮೆಯೊಡನೆ ಪರಮೇಶ್ವರನೂ ಆ ವಿಶ್ವಾನರನ ಆಶ್ರಮಕ್ಕೆ ಬಂದರು.

೨೫. ಮಹೇಂದ್ರನೇ ಮೊದಲಾದ ದೇವತೆಗಳೂ, ಅನೇಕ ಪಾತಾಳವಾಸಿಗಳಾದ ನಾಗರೂ, ಹಲವು ನದಿಗಳೂ ಅಮೂಲ್ಯ ರತ್ನಗಳೊಡಗೂಡಿ ಮಹಾ ಸಮುದ್ರಗಳೂ ಅಲ್ಲಿಗೈತಂದರು.

೨೬. ಸಾವಿರಾರು ಸ್ಥಾವಿರಗಳೆಲ್ಲ ಜಂಗಮ ರೂಪಗಳನ್ನು ಧರಿಸಿಬಂದುವು. ಆ ವೈಶ್ವಾನರ ಜನನ ಮಹಾ ಮಹೋತ್ಸವದಲ್ಲಿ ಚಂದ್ರರಹಿತವಾದ ರಾತ್ರಿಯಾಗಿದ್ದರೂ ಎತ್ತೆತ್ತಲೂ ಬೆಳುದಿಂಗಳು ಬೆಳಗಿತು.

ಜಾತಕರ್ಮ ಸ್ವಯಂ ಚಕ್ರೇ ತಸ್ಯ ದೇವಃ ಪಿತಾಮಹಃ ।
ಶ್ರುತಿಂ ವಿಚಾರ್ಯ ತದ್ರೂಪಾಂ ನಾಮ್ನಾ ಗೃಹಪತಿಸ್ತ್ವಯಂ ॥ ೨೭ ॥
ಇತಿ ನಾಮ ದದೌ ತಸ್ಮೈ ದೇಯಮೇಕಾದಶೇಽಹನಿ ।
ನಾಮ ಕರ್ಮ ವಿಧಾನೇನ ತದರ್ಥಂ ಶ್ರುತಿಮುಚ್ಚರನ್ ॥ ೨೮ ॥
ಅಯಮಗ್ನಿರ್ಗೃಹಪತಿರ್ಗಾರ್ಹಪತ್ಯಃ ಪ್ರಜಾಯಾವಸುವಿತ್ತಮಃ ।
ಅಗ್ನೇ ಗೃಹಪತೇಽಭಿದ್ಯುಮ್ನಮಭಿ ಸಹ ಆಯಚ್ಛಸ್ವ ॥ ೨೯ ॥
ಅಗ್ನೇ ಗೃಹಪತೇ ಸ್ಥಿತ್ಯಾ ಪರಾಮಪಿ ನಿದರ್ಶಯನ್ ।
ಚತುರ್ನಿಗಮ ಮಂತ್ರೋಕ್ತೈರಾಶೀರ್ಭಿರಭಿನಂದ್ಯ ಚ ॥ ೩೦ ॥
ಕೃತ್ವಾ ಬಾಲೋಚಿತಾಂ ರಕ್ಷಾಂ ಹರೇಣ ಹರಿಣಾ ಸಹ ।
ನಿರ್ಯಯೌ ಹಂಸಮಾರುಹ್ಯ ಸರ್ವೇಷಾಂ ಪ್ರಪಿತಾಮಹಃ ॥ ೩೧ ॥
ಅಹೋ ರೂಪಮಹೋ ತೇಜಸ್ತ್ವಹೋ ಸರ್ವಾಂಗಲಕ್ಷಣಂ ।
ಅಹೋ ಶುಚಿಷ್ಮತೀಭಾಗ್ಯಮಾವಿರಾಸೀತ್ಸ್ವಯಂ ಹರಃ ॥ ೩೨ ॥

---

೨೭. ಆಗ ಸರ್ವಲೋಕಪಿತಾಮಹನಾದ ಪಿತಾಮಹನೇ ಸಾಕ್ಷಾತ್ತಾಗಿ ಆ ಶಿಶುವಿಗೆ ಜಾತಕರ್ಮವನ್ನೆಸಗಿ, ಶ್ರುತಿಯನ್ನು ಸಮೀಕ್ಷಿಸಿ ಆ ಮಗುವಿನ ರೂಪಕ್ಕನುಗುಣವಾಗಿ ಗೃಹಪತಿಯೆಂದು ನಾಮಕರಣಮಾಡಿದನು.

೨೮. ಈ ರೀತಿ ಆ ವಿಧಾತನು ಹನ್ನೊಂದನೆಯ ದಿನ ಮಾಡಬೇಕಾದ ನಾಮಕರಣವನ್ನು ಆ ಕರ್ಮಕ್ಕೆ ಅನುಗುಣವಾದ ವಿಧಾನದಿಂದ ಆಯಾಯ ಶ್ರುತಿಮಂತ್ರಗಳನ್ನುಚ್ಚರಿಸುತ್ತ ನಿರ್ವಹಿಸಿದನು

೨೯. "ಯಾವ ಈ ಅಗ್ನಿಯು ಇಲ್ಲಿ ವಿರಾಜಿಸುತ್ತಿರುವನೊ ಈತನು ಗೃಹಪತಿಯಾಗಿ ಗಾರ್ಹಪತ್ಯನೆಂದು ಪ್ರಸಿದ್ಧನಾಗಿ, ಪ್ರಜೆಗೂ ನಿರತಿಶಯವಾದ ಧನಕ್ಕೂ ಒಡೆಯನಾದವನು. ಎಲೈ ಗೃಹಪತಿಯಾದ ಅಗ್ನಿಯೆ, ನೀನು ನಮಗೆ ಅನ್ನವನ್ನೂ ಯಶೋಬಲಗಳನ್ನೂ ದೊರಕಿಸುವವನಾಗು.

೩೦–೩೧. ಗೃಹಪತಿಯಾದ ಎಲೈ ಅಗ್ನಿಯೆ, ನಿನ್ನ ಸ್ಥಿತಿಯಿಂದ ಉಪಾಸಕರಿಗೆ ಪರವನ್ನು ನಿರ್ದರ್ಶಿಸುವವನಾಗಿ ಬೆಳಗುತ್ತಿರು" ಎಂಬುದಾಗಿ ಋಗ್ಯಜುಸ್ಸಾಮಾಥರ್ವಣ ಮಂತ್ರಗಳಿಂದಲೂ ಆ ಶಿಶುವನ್ನು ಆಶೀರ್ವದಿಸಿ ಅಭಿನಂದಿಸಿದ ತರುವಾಯ, ಬಾಲೋಚಿತವಾದ ರಕ್ಷೆಯನ್ನು ಕಟ್ಟಿ, ಪ್ರಪಿತಾಮಹನಾದ ಆ ಬ್ರಹ್ಮದೇವನು ಹಂಸವಾಹನಾರೂಢನಾಗಿ ಹರಿಹರರೊಡನೆ ಅಲ್ಲಿಂದ ತೆರಳಿದನು.

೩೨. "ಆಹ, ಏನು ರೂಪ! ಏನು ತೇಜಸ್ಸು! ಎಂಥ ಅವಯವ ಸನ್ನಿವೇಶ! ಎಂಥ ಶುಭಲಕ್ಷಣಗಳು! ಆಹ, ಶುಚಿಷ್ಮತೀದೇವಿಯ ಭಾಗ್ಯವೇ ಭಾಗ್ಯ. ಸಾಕ್ಷಾತ್ ಪರಮೇಶ್ವರನೇ ಈ ರೀತಿಯಾಗಿ ಆವಿರ್ಭವಿಸಿದನು.

ಅಥವಾ ಕಿಮಿದಂ ಚಿತ್ರಂ ಶರ್ವಭಕ್ತಜನೇಷ್ವಹೋ ।
ಆವಿರ್ಭವೇತ್ಸ್ವಯಂ ರುದ್ರೋ ಯತೋ ರುದ್ರಾಸ್ತದರ್ಚಕಾಃ ॥ ೩೩ ॥
ಇತಿ ಸ್ತುವಂತಸ್ತ್ವನ್ಯೋನ್ಯಂ ಜಗ್ಮುಃ ಸರ್ವೇ ಯಥಾಗತಂ ।
ವಿಶ್ವಾನರಂ ಸಮಾಪೃಚ್ಛ್ಯ ಸಂಪ್ರಹೃಷ್ಟತನೂರುಹಾಃ ॥ ೩೪ ॥
ಅತಃ ಪುತ್ರಂ ಸಮೀಹಂತೇ ಗೃಹಸ್ಥಾಶ್ರಮವಾಸಿನಃ ।
ಪುತ್ರೇಣ ಲೋಕಾಂಜಯತಿ ಶ್ರುತಿರೇಷಾ ಸನಾತನೀ ॥ ೩೫ ॥
ಅಪುತ್ರಸ್ಯ ಗೃಹಂ ಶೂನ್ಯಮಪುತ್ರಸ್ಯಾರ್ಜನಂ ವೃಥಾ ।
ಅಪುತ್ರಸ್ಯಾಽನ್ವಯಚ್ಛಿನ್ನೋ ನಾಽಪವಿತ್ರಂ ಹ್ಯಪುತ್ರತಃ ॥ ೩೬ ॥
ನ ಪುತ್ರಾತ್ಪರಮೋ ಲಾಭೋ ನ ಪುತ್ರಾತ್ಪರಮಂ ಸುಖಂ ।
ನ ಪುತ್ರಾತ್ಪರಮಂ ಮಿತ್ರಂ ಪರತ್ರೇಹ ಚ ಕುತ್ರಚಿತ್ ॥ ೩೭ ॥
ಔರಸಃ ಕ್ಷೇತ್ರಜಃ ಕ್ರೀತೋ ದತ್ತಃ ಪ್ರಾಪ್ತಃ ಸುತಾಸುತಃ ।
ಆಪತ್ಸುರಕ್ಷಿತಶ್ಚಾಽನ್ಯಃ ಪುತ್ರಾಃ ಸಪ್ತಾಽತ್ರ ಕೀರ್ತಿತಾಃ ॥ ೩೮ ॥
ಏಷಾಮನ್ಯತಮಃ ಕಾರ್ಯೋ ಗೃಹಸ್ಥೇನ ವಿಪಶ್ಚಿತಾ ।
ಪೂರ್ವಪೂರ್ವಃ ಸುತಃ ಶ್ರೇಯಾನ್ಹೀನಃ ಸ್ಯಾದುತ್ತರೋತ್ತರಃ ॥ ೩೯ ॥

---

೩೩-೩೪. ಅಥವಾ ಭಕ್ತಜನರ ವಿಷಯದಲ್ಲಿ ಇದೇನು ಆಶ್ಚರ್ಯ? ಆ ರುದ್ರನನ್ನು ಅರ್ಚಿಸುವವರೆಲ್ಲರೂ ರುದ್ರಸ್ವರೂಪರೇ ಆಗಿರುವುದರಿಂದ ಅವರ ಮನೆಗಳಲ್ಲಿ ರುದ್ರನೇ ಅವತರಿಸುತ್ತಾನೆ" ಎಂದು ದೇವತೆಗಳೆಲ್ಲರೂ ಪರಸ್ಪರವಾಗಿ ಸಂಲಪಿಸಿ ಸ್ತುತಿಸುತ್ತ ಆ ವಿಶ್ವಾನರನ ಅನುಜ್ಞೆಯನ್ನು ತೆಗೆದುಕೊಂಡು ರೋಮಾಂಚಿತ ಶರೀರಿಗಳಾಗಿ ಹಿಂತಿರುಗಿದರು.

೩೫. ಅಯ್ಯಾ ಶಿವಶರ್ಮನೆ, ಆದುದರಿಂದಲೆ ಗೃಹಸ್ಥಾಶ್ರಮಿಗಳೆಲ್ಲ ಪುತ್ರನಾಗಬೇಕೆಂದು ಆಸೆಪಡುವುದು. ಅವರು ಪುತ್ರನಿಂದಲೆ ಸಮಸ್ತ ಲೋಕಗಳನ್ನೂ ಜಯಿಸುತ್ತಾರೆಂದು ಸನಾತನವಾದ ಶ್ರುತಿಯೂ ಸಾರುತ್ತಿದೆ.

೩೬. ಅಪುತ್ರವಂತನ ಮನೆಯು ಬರಿದು. ಅಪುತ್ರವಂತನ ಸಂಪಾದನೆಯು ನಿಷ್ಪ್ರಯೋಜಕವಾದುದು. ಅವನ ವಂಶವು ಅಲ್ಲಿಗೆ ಛಿನ್ನವಾಗುವುದು. ಪುತ್ರನಿಲ್ಲದಿದ್ದರೆ ಎಲ್ಲವೂ ಅಪವಿತ್ರವಾಗುವುದು.

೩೭. ಪುತ್ರಲಾಭಕ್ಕಿಂತ ಉತ್ತಮವಾದ ಲಾಭವಿಲ್ಲ. ಪುತ್ರನನ್ನು ಪಡೆಯುವುದಕ್ಕಿಂತ ಮೇಲಾದ ಸುಖವಿಲ್ಲ. ಇಹದಲ್ಲಿಯಾಗಲಿ ಪರದಲ್ಲಿಯಾಗಲಿ ಪುತ್ರನಿಗಿಂತಲೂ ಮಿಗಿಲಾದ ಮಿತ್ರನಿಲ್ಲ.

೩೮. ಔರಸ, ಕ್ಷೇತ್ರಜ, ಕ್ರೀತ, ದತ್ತ, ಪ್ರಾಪ್ತ ದೌಹಿತ್ರ, ಆಪತ್ತಿನಲ್ಲಿ ರಕ್ಷಿತವಾದವನೊಬ್ಬ—ಇವರೆಲ್ಲರೂ ಸಪ್ತಪುತ್ರರೆಂದು ಪ್ರಸಿದ್ಧರಾಗಿದ್ದಾರೆ.

೩೯. ಬುದ್ಧಿಶಾಲಿಯಾದ ಗೃಹಸ್ಥನು ಇವರಲ್ಲಿ ಯಾರನ್ನಾದರೂ ಪಡೆದಿರ

ಗಣಾವೂಚತುಃ:—

ನಿಷ್ಕ್ರಮೋಽಥ ಚತುರ್ಥೇಽಸ್ಯ ಮಾಸಿ ಪಿತ್ರಾ ಕೃತೋ ಗೃಹಾತ್ ।
ಅನ್ನಪ್ರಾಶನಮಬ್ದಾರ್ಧೇ ಚೂಡಾಽಬ್ದೇ ಚಾರ್ಥವತ್ಕೃತಾ ॥ ೪೦ ॥
ಕರ್ಣವೇಧಂ ತತಃ ಕೃತ್ವಾ ಶ್ರವಣರ್ಕ್ಷೇ ಸ ಕರ್ಮವಿತ್ ।
ಬ್ರಹ್ಮತೇಜೋಽಭಿವೃದ್ಧ್ಯರ್ಥಂ ಪಂಚಮೇಽಬ್ದೇ ವ್ರತಂ ದದೌ ॥ ೪೧ ॥
ಉಪಾಕರ್ಮ ತತಃ ಕೃತ್ವಾ ವೇದಾನಧ್ಯಾಪಯತ್ಸುಧೀಃ ।
ತ್ರ್ಯಬ್ದಂ ವೇದಾನ್ ಸವಿಧಿನಾಽಧ್ಯೈಷ್ಟ ಸಾಂಗಪದಕ್ರಮಾನ್ ॥ ೪೨ ॥
ವಿದ್ಯಾಜಾತಂ ಸಮಸ್ತಂ ಚ ಸಾಕ್ಷಿಮಾತ್ರಾದ್ಗುರೋರ್ಮುಖಾತ್ ।
ವಿನಯಾದಿ ಗುಣಾನಾವಿಷ್ಕುರ್ವಂಜಗ್ರಾಹ ಶಕ್ತಿಮಾನ್ ॥ ೪೩ ॥
ತತೋಽಥ ನವಮೇ ವರ್ಷೇ ಪಿತ್ರೋಃ ಶುಶ್ರೂಷಣೇ ರತಂ ।
ವೈಶ್ವಾನರಂ ಗೃಹಪತಿಂ ದೃಷ್ಟ್ವಾ ಕಾಮಚರೋ ಮುನಿಃ ॥ ೪೪ ॥

---

ತಕ್ಕುದು. ಆದರೆ, ಈ ಸಪ್ತಪುತ್ರರಲ್ಲಿ ಮೊದಮೊದಲಿನ ಪುತ್ರರು ಶ್ರೇಯಸ್ಕರರು. ಆ ಮೇಲಿನವರು ಅವರರು.

೪೦. ಗಣಗಳು ಹೇಳುತ್ತಾರೆ:—ಅಯ್ಯಾ ಶಿವಶರ್ಮನೆ, ಆ ಮಗುವಿನ ನಾಲ್ಕನೆಯ ತಿಂಗಳಲ್ಲಿ ತಂದೆಯಾದ ವಿಶ್ವಾನರನು ಹೊಳಲುಮೆಟ್ಟಿಸಿದ ಶಾಸ್ತ್ರವನ್ನೂ ಆರನೆಯ ತಿಂಗಳಲ್ಲಿ ಅನ್ನ ಪ್ರಾಶನವನ್ನೂ ವರ್ಷ ತುಂಬಲು ಚೂಡಾಕರ್ಮವನ್ನೂ ವಿಧಿವತ್ತಾಗಿ ಆಚರಿಸಿದನು.

೪೧. ಚೂಡಾಕರ್ಮವಾದ ತರುವಾಯ ಕರ್ಮಜ್ಞನಾದ ಅವನು ಆ ಬಾಲಕನಿಗೆ ಶ್ರವಣನಕ್ಷತ್ರದಲ್ಲಿ ಉಪನಯನವನ್ನೆಸಗಿ, ಬ್ರಹ್ಮತೇಜಸ್ಸು ಅಭಿವೃದ್ಧಿಗೊಳ್ಳಲೋಸುಗ ಐದನೆಯ ವರ್ಷದಲ್ಲಿ ವೇದವ್ರತವನ್ನು (ಬ್ರಹ್ಮಚರ್ಯವನ್ನು) ಕೊಟ್ಟನು.

೪೨. ತರುವಾಯ ಶ್ರಾವಣಮಾಸದಲ್ಲಿ ಉಪಾಕರ್ಮವನ್ನೆಸಗಿ ಆ ಧೀಮಂತನು ಆ ಬಾಲಕನಿಗೆ ವೇದಾಧ್ಯಯನವನ್ನು ಉಪಕ್ರಮಿಸಿ ಮೂರು ವರ್ಷಗಳಲ್ಲಿ ವಿಧಿಪೂರ್ವಕವಾದ ಸಾಂಗಪದಕ್ರಮ ಸಹಿತವಾದ ವೇದವನ್ನು ಅಧ್ಯಯನಮಾಡಿಸಿದನು.

೪೩. ಮಹಾಶಕ್ತಿವಂತನಾದ ಆ ಕುಮಾರನು ವಿನಯಾದಿ ಸದ್ಗುಣ ಸಂಪತ್ತಿಯನ್ನು ಪ್ರಕಟಗೊಳಿಸುತ್ತ, ಕೇವಲ ಸಾಕ್ಷಿಮಾತ್ರನಾಗಿದ್ದ ಗುರು ಮುಖದಿಂದ ಸಮಸ್ತ ವಿದ್ಯಾಸಮೂಹವನ್ನೂ (ಚತುರ್ದಶ ವಿದ್ಯೆಗಳನ್ನೂ) ಗ್ರಹಿಸಿದನು.

೪೪–೪೫. ತರುವಾಯ ಆ ಗೃಹಪತಿಗೆ ಒಂಬತ್ತನೆಯ ವರ್ಷವು ಪ್ರಾಪ್ತವಾಗಿ ಅವನು ತಾಯಿತಂದೆಗಳ ಶುಶ್ರೂಷೆಯಲ್ಲಿ ತೊಡಗಿರಲು, ಕಾಮಚರನಾದ

ವಿಶ್ವಾನರೋಟಜಂ ಪ್ರಾಪ್ಯ ದೇವರ್ಷಿರ್ನಾರದಃ ಸುಧೀಃ ।
ಪಪ್ರಚ್ಛ ಕುಶಲಂ ತತ್ರ ಗೃಹೀತಾಽರ್ಘ್ಯಾಸನಃ ಕ್ರಮಾತ್ ॥ ೪೫ ॥
ನಾರದ ಉವಾಚ :—
ವಿಶ್ವಾನರ ಮಹಾಭಾಗ ಶುಚಿಷ್ಮತಿ ಶುಭವ್ರತೇ ।
ಕುರುತೇ ಯುವಯೋರ್ವಾಕ್ಯಮಯಂ ಗೃಹಪತಿಃ ಶಿಶುಃ ॥ ೪೬ ॥
ನಾಽನ್ಯತ್ತೀರ್ಥಂ ನವಾ ದೇವೋ ನ ಗುರುರ್ನ ಚ ಸತ್ಕ್ರಿಯಾ ।
ವಿಹಾಯ ಪಿತ್ರೋರ್ವಚನಂ ನಾನ್ಯೋ ಧರ್ಮಃ ಸುತಸ್ಯಹಿ ॥ ೪೭ ॥
ನ ಪಿತ್ರೋರಧಿಕಂ ಕಿಂಚಿತ್ತ್ರಿಲೋಕ್ಯಾಂ ತನಯಸ್ಯಹಿ ।
ಗರ್ಭಧಾರಣ ಪೋಷಾಭ್ಯಾಂ ಪಿತುರ್ಮಾತಾ ಗರೀಯಸೀ ॥ ೪೮ ॥
ಅಂಭೋಭಿರಭಿಷಿಚ್ಯ ಸ್ವಂ ಜನನೀ ಚರಣಚ್ಯುತೈಃ ।
ಪ್ರಾಪ್ನುಯಾತ್ಸ್ವರ್ಧುನೀ ಶುದ್ಧಕಬಂಧಾಽಧಿಕಶುದ್ಧತಾಂ ॥ ೪೯ ॥
ಸನ್ಯಸ್ತಾಽಖಿಲ ಕರ್ಮಾಽಪಿ ಪಿತುರ್ವಂದ್ಯೋಹಿ ಮಸ್ಕರೀ ।
ಸರ್ವವಂದ್ಯೇನ ಯತಿನಾ ಪ್ರಸೂರ್ವಂದ್ಯಾ ಪ್ರಯತ್ನತಃ ॥ ೫೦ ॥

---

ನಾರದಮುನೀಂದ್ರನು ಆ ವಿಶ್ವಾನರನ ಆಶ್ರಮಕ್ಕೆ ಐದಿವಂದು ಆ ಬಾಲಕನನ್ನು ಕಂಡು, ಅರ್ಘ್ಯಾಸನಾದಿಗಳನ್ನು ಕೈಕೊಂಡ ತರುವಾಯ ಕುಶಲಪ್ರಶ್ನೆಯನ್ನು ಮಾಡಿದನು.

೪೬. ನಾರದನು ಹೇಳುತ್ತಾನೆ —"ಮಹಾ ಭಾಗ್ಯಶಾಲಿಯಾದ ಎಲೈ ವಿಶ್ವಾನರನೆ, ಮಂಗಳಕರವಾದ ವ್ರತವುಳ್ಳ ಶುಚಿಷ್ಮತಿಯೆ, ಬಾಲಕನಾದ ಈ ಗೃಹಪತಿಯು ನಿಮ್ಮಿರ್ವರ ಅಪ್ಪಣೆಯನ್ನು ತಪ್ಪದೆ ನಡೆಸುತ್ತಿರುವನಷ್ಟೆ.

೪೭. ಲೋಕದಲ್ಲಿ ಪುತ್ರನೆನಿಸಿದವನಿಗೆ ಪಿತೃವಾಕ್ಯಪರಿಪಾಲನೆಯನ್ನುಳಿದು ಬೇರೊಂದು ತೀರ್ಥವಾಗಲಿ ದೇವತೆಯಾಗಲಿ ಗುರುವಾಗಲಿ ಸತ್ಕ್ರಿಯೆಯಾಗಲಿ ಮತ್ತಾವಬಗೆಯ ಧರ್ಮವೇ ಆಗಲಿ ಇರುವುದಿಲ್ಲ.

೪೮. ಮಾತಾಪಿತೃಗಳಿಗಿಂತಲೂ ಅಧಿಕವಾದದ್ದು ಮೂರು ಲೋಕಗಳಲ್ಲಿ ಏನೂ ಇರುವುದಿಲ್ಲ. ಅವರಲ್ಲಿಯೂ ಗರ್ಭಧಾರಣ ಪೋಷಣಾದಿಗಳಿಂದ ಜನ್ಮವಿತ್ತು ಸಂರಕ್ಷಿಸುವ ತಾಯಿಯು ಉತ್ತಮಳು.

೪೯. ಯಾವ ಮಗನು ತನ್ನ ತಾಯ ಅಡಿಗಳನ್ನು ತೊಳೆದ ನೀರನ್ನು ತನ್ನ ಮೇಲೆ ಪ್ರೋಕ್ಷಿಸಿಕೊಳ್ಳುವನೊ ಅವನು ದೇವಗಂಗೆಯಲ್ಲಿ ಮಿಂದು ಶುದ್ಧನಾಗುವುದಕ್ಕಿಂತಲೂ ಮಿಗಿಲಾಗಿ ಶುದ್ಧನಾಗುತ್ತಾನೆ.

೫೦. ಅಖಿಲ ಕರ್ಮಗಳನ್ನೂ ಸಂನ್ಯಸನಮಾಡಿ ಪರಿವ್ರಾಜಕನಾಗಿರುವವನು ತಂದೆಗೂ ನಮಸ್ಕಾರಾರ್ಹನಾಗುವನು. ಸಮಸ್ತರೂ ಪ್ರಯತ್ನ

ಇದಮೇವ ತಪೋಽತ್ಯುಗ್ರಮಿದಮೇವ ಪರಂ ವ್ರತಂ ।
ಅಯಮೇವ ಪರೋ ಧರ್ಮೋ ಯತ್ಪಿತ್ರೋಃ ಪರಿತೋಷಣಂ ॥ ೫೧ ॥
ಮನ್ಯೇ ಮಾನ್ಯೋ ನಾಽಧಮಸ್ಯ ತಥಾಽನ್ಯಸ್ಯ ಯಥಾ ಯುವಾಂ ।
ಸುಖಾಕಾರೈರ್ವಿನೀತಸ್ಯ ಶಿಶೋರ್ಗೃಹಪತೇರಹಂ ॥ ೫೨ ॥
ವೈಶ್ವಾನರ ಸಮಭ್ಯೇಹಿ ಮನೋತ್ಸಂಗೇ ನಿಷೀದ ಭೋ ।
ಲಕ್ಷಣಾನಿ ಪರೀಕ್ಷೇಽಹಂ ಪಾಣಿಂ ದರ್ಶಯ ದಕ್ಷಿಣಂ ॥ ೫೩ ॥
ಇತ್ಯುಕ್ತೋ ಮುನಿನಾ ಬಾಲಃ ಪಿತ್ರೋರಾಜ್ಞಾಮವಾಪ್ಯ ಸಃ ।
ಪ್ರಣಮ್ಯ ನಾರದಂ ಶ್ರೀಮಾನ್ ಭಕ್ತ್ಯಾ ಪ್ರಹ್ವ ಉಪಾವಿಶತ್ ॥ ೫೪ ॥
ತತೋ ದೃಷ್ಟ್ವಾಽಸ್ಯ ಸರ್ವಾಂಗಂ ತಾಲುಜಿಹ್ವಾ ದ್ವಿಜಾನಪಿ ।
ಆನೀಯ ಕುಂಕುಮಾರಕ್ತಂ ಸೂತ್ರಂ ಚ ತ್ರಿಗುಣೀ ಕೃತಂ ॥ ೫೫ ॥
ಸ್ಮೃತ್ವಾ ಶಿವೌ ಗಣಾಧ್ಯಕ್ಷಮೂರ್ಧ್ವೀಭೂತಮುದಙ್ಮುಖಂ ।
ಮುನಿಃ ಪರಿಮಮೌ ಬಾಲಮಾಪಾದತಲಮಸ್ತಕಂ ॥ ೫೬ ॥

---

ಪೂರ್ವಕವಾಗಿ ನಮಸ್ಕರಿಸಬೇಕಾದ ಆ ಪರಿವ್ರಾಜಕನು ಸಹ ಹೆತ್ತ ತಾಯಿಯನ್ನು ನಮಸ್ಕರಿಸತಕ್ಕುದು.

೫೧–೫೨ ತಂದೆ ತಾಯಿಗಳನ್ನು ಸಂತೋಷಗೊಳಿಸುವುದೇ ಪುತ್ರನಾದವನಿಗೆ ಅತ್ಯುಗ್ರವಾದ ತಪಸ್ಸು. ಅತ್ಯಂತ ಶ್ರೇಷ್ಠವಾದ ವ್ರತ. ಪರಮಧರ್ಮವೂ ಅದೇ. ಎಲೈ ದಂಪತಿಗಳೇ, ಬಾಲಕನಾದ ಈ ಗೃಹಪತಿಯಿಂದ ನೀವೀರ್ವರೂ ಮಾನ್ಯರಾಗಿರುವಂತೆ ಮತ್ತಾವನೂ ಅಧಮನಾದ ಅವನ ಪುತ್ರನಿಂದ ಮಾನ್ಯತೆಯನ್ನು ಪಡೆದಿರುವುದಿಲ್ಲ. ವಿನಯ ವಿಧೇಯತೆಗಳಿಂದ ಕೂಡಿ ಸಂತೋಷವನ್ನುಂಟುಮಾಡುವ ಮುಖಪ್ರಸನ್ನತೆಯನೊಡಗೊಂಡ ಈ ಕುಮಾರಕನಿಂದ ನೀವು ಅತ್ಯಂತ ಮಾನ್ಯರೆನಿಸಿದಿರಿ.

೫೩. ಮಗು, ವೈಶ್ವಾನರ! ನನ್ನ ಬಳಿಗೆ ಬಾ. ತೊಡೆಯಮೇಲೆ ಕುಳಿತುಕೊ ಲಕ್ಷಣಗಳನ್ನು ನೋಡುತ್ತೇನೆ ಬಲದ ಕೈ ತೋರಿಸು.''

೫೪. ನಾರದ ಮುನಿಯು ಈ ರೀತಿ ನುಡಿಯಲು, ಬಾಲಕನಾದ ಗೃಹಪತಿಯು ತಾಯಿತಂದೆಗಳ ಅಪ್ಪಣೆಯನ್ನು ಪಡೆದು ಆ ಮುನಿಯನ್ನು ನಮಸ್ಕರಿಸಿ ಭಕ್ತಿಯಿಂದ ನಮ್ರನಾಗಿ ಅವನ ಬಳಿ ಕುಳಿತನು.

೫೫–೫೬. ತರುವಾಯ ಆ ನಾರದಮುನಿಯು ಕುಮಾರನಾದ ಆ ಗೃಹಪತಿಯ ಸರ್ವಾಂಗಗಳನ್ನೂ ಕಾಲು ಜಿಹ್ವೆ ದಂತಗಳನ್ನೂ ಪರೀಕ್ಷಿಸಿ ನೋಡಿ, ಮುಪ್ಪುರಿಗೊಳಿಸಿದ ಕೆಂಪುದಾರವನ್ನು ತಂದು ಪಾರ್ವತೀಪರಮೇಶ್ವರರನ್ನೂ ಗಣಪತಿಯನ್ನೂ ಉದಙ್ಮುಖನಾಗಿ ಭಕ್ತಿಯಿಂದ ಸ್ಮರಿಸಿದ ತರುವಾಯ ಆ ಬಾಲಕನ ಅಡಿಯಿಂದ ಹಿಡಿದು ಮುಡಿಯವರೆಗೆ ಅಳೆದನು.

ತಿರ್ಯಗೂರ್ಧ್ವಂ ಸಮೋ ಮಾನೇ ಯೋಽಷ್ಟೋತ್ತರಶತಾಂಗುಲಃ ।
ಸಭವೇತ್ಪೃಥಿವೀಪಾಲೋ ಬಾಲೋಽಯಂತೇ ಯಥಾದ್ವಿಜ ॥ ೫೭ ॥
ಪಂಚಸೂಕ್ಷ್ಮಃ ಪಂಚದೀರ್ಘಃ ಸಪ್ತರಕ್ತಃ ಷಡುನ್ನತಃ ।
ತ್ರಿಪೃಥುರ್ಲಘು ಗಂಭೀರೋ ದ್ವಾತ್ರಿಂಶಲ್ಲಕ್ಷಣಸ್ತ್ವಿತಿ ॥ ೫೮ ॥
ಪಂಚದೀರ್ಘಾಣಿ ಶಸ್ಯಾನಿ ಯಥಾ ದೀರ್ಘಾಯುಷೋಽಸ್ಯ ವೈ ।
ಭುಜೌ ನೇತ್ರೇ ಹನುರ್ಜಾನು ನಾಸಾಽಸ್ಯ ತನಯಸ್ಯ ತೇ ॥ ೫೯ ॥
ಗ್ರೀವಾ ಜಂಘಾಮೇಹನ್ಶೈಶ್ಚ ತ್ರಿಭಿರ್ಹ್ರಸ್ವೋಽಯಮೀಡಿತಃ ।
ಸ್ವರೇಣ ಸತ್ವನಾಭಿಭ್ಯಾಂ ತ್ರಿಗಂಭೀರಃ ಶಿಶುಃ ಶುಭಃ ॥ ೬೦ ॥
ತ್ವಕ್ಕೇಶಾಂಗುಲಿದಶನಾಃ ಪರ್ವಾಣ್ಯಂಗುಲಿಜಾನ್ಯಪಿ ।
ತಥಾಽಸ್ಯ ಪಂಚಸೂಕ್ಷ್ಮಾಣಿ ದಿಕ್ಪಾಲಪದಭಾಗ್ಯಥಾ ॥ ೬೧ ॥
ವಕ್ಷಃ ಕುಕ್ಷ್ಯಲಕಂ ಸ್ಕಂಧಕರಂ ವಕ್ತ್ರಂ ಷಡುನ್ನತಂ ।
ತಥಾಽತ್ರ ದೃಶ್ಯತೇ ಬಾಲೇ ಮಹದೈಶ್ವರ್ಯಭಾಗ್ಯಥಾ ॥ ೬೨ ॥

---

೫೭. "ಎಲೈ ವಿಶ್ವಾನರನೆ, ಯಾವನು ಅಡ್ಡಲಾಗಿಯೂ ಎತ್ತರಕ್ಕೂ ನೂರೆಂಟು ಅಂಗುಲಗಳ ಸಮವಾದ ಅಳತೆಯುಳ್ಳವನಾಗಿರುತ್ತಾನೆಯೊ ಅವನು ಈ ಬಾಲಕನಂತೆ ಭೂಪಾಲನಾಗುತ್ತಾನೆ.

೫೮–೫೯. ಈ ಕುಮಾರನು ಚರ್ಮ, ಕೇಶ, ಅಂಗುಲಿ, ದಂತ, ಬೆರಳಗಂಟುಗಳು—ಇವುಗಳಲ್ಲಿ ಸೂಕ್ಷ್ಮತೆಯನ್ನೂ ಭುಜ, ನೇತ್ರ, ಗಲ್ಲ, ಜಾನು, ನಾಸಿಕೆಗಳೆಂಬ ಪಂಚಾಂಗಗಳಲ್ಲಿ ದೈರ್ಘ್ಯವನ್ನೂ ಅಂಗೈ, ಸಣ್ಣಕುಡಿ, ತಾಲು, ನಾಲಗೆ, ಕೆಳದುಟಿ ಮೇಲ್ದುಟಿ, ಉಗುರು ಎಂಬ ಸಪ್ತಾಂಗಗಳಲ್ಲಿ ರಕ್ತಿಮವನ್ನೂ ಎದೆ, ಹೊಟ್ಟೆ, ಮುಂಗುರುಳು, ಹೆಗಲು, ಕೈ, ಮುಖಗಳೆಂಬ ಷಡಗಗಳಲ್ಲಿ ಔನ್ನತ್ಯವನ್ನೂ ಹಣೆ, ಸೊಂಟ, ವಕ್ಷಸ್ಥಲಗಳೆಂಬ ಅವಯವತ್ರಯದಲ್ಲಿ ಪೀನತ್ವವನ್ನೂ ಕುತ್ತಿಗೆ, ಜಂಘೆ ಮೇಹನಗಳಲ್ಲಿ ಲಾಘವವನ್ನೂ ಗಾಂಭೀರ್ಯವನ್ನೂ—ಹೀಗೆ ಮೂವತ್ತೆರಡು ಸಲ್ಲಕ್ಷಣಗಳನ್ನೊಳಗೊಂಡಿರುವನು.

೬೦. ದೀರ್ಘಾಯುಷ್ಮಂತನಾದ ಈ ನಿನ್ನ ಕುಮಾರನಿಗೆ ಇರುವಂತೆ ಭುಜ ನೇತ್ರ ಹನು ಜಾನು ನಾಸಿಕೆಗಳು ಐದೂ ದೀರ್ಘಗಳೂ ಕುತ್ತಿಗೆ ಜಂಘೆ ಮೇಹನಗಳು ಮೂರೂ ಹ್ರಸ್ವಗಳೂ ಸ್ವರ ಸತ್ತ್ವ ನಾಭಿಗಳು ಮೂರೂ ಗಂಭೀರಗಳೂ ಆಗಿರುವ ಮಂಗಳಕರನಾದ ಶಿಶುವು ಸ್ವಯಂಪೂಜ್ಯನಾಗುತ್ತಾನೆ.

೬೧. ಚರ್ಮ, ಕೇಶ, ಅಂಗುಲಿ, ದಂತ, ಮಣಿಗಂಟುಗಳು ಎಂಬ ಈ ಐದೂ ಸೂಕ್ಷ್ಮಗಳಾಗಿರುವುದರಿಂದ ನಿನ್ನ ಈ ಕುಮಾರನು ದಿಕ್ಪಾಲಪದವಿಯನ್ನನುಭವಿಸತಕ್ಕವನು.

೬೨. ವಕ್ಷಸ್ಥಲ, ಕುಕ್ಷಿ, ಅಲಕ, ಸ್ಕಂಧ, ಕರ, ವಕ್ತ್ರಗಳಲ್ಲಿ ಔನ್ನತ್ಯವಿರುವುದರಿಂದ ಈ ಹುಡುಗನಲ್ಲಿ ಮಹದೈಶ್ವರ್ಯಭೋಗವು ಕಾಣುತ್ತದೆ.

ಪಾಣ್ಯೋಸ್ತಲೇ ಚ ನೇತ್ರಾಂತೇ ತಾಲುಜಿಹ್ವಾಽಧರೌಷ್ಠಕಂ ।
ಸಪ್ತಾಽರುಣಂ ಚ ಸ ನಖಮಸ್ಮಿನ್ ರಾಜ್ಯಸುಖಪ್ರದಂ ॥ ೬೩ ॥
ಲಲಾಟಕಟವಕ್ಷೋಭಿಸ್ತ್ರಿಭಿಸ್ತ್ರೀಣ್ಯೋರ್ಣ ಯಥಾಹ್ಯಸೌ ।
ಸರ್ವ ತೇಜೋತಿರೈಶ್ವರ್ಯಂ ತಥಾ ಪ್ರಾಪ್ಸ್ಯತಿ ನಾಽನ್ಯಥಾ ॥ ೬೪ ॥
ಕಮಠೀಪೃಷ್ಠಕಠಿನಾವಕರ್ಮಕರಣೌ ಕರೌ ।
ರಾಜ್ಯಹೇತೂ ಶಿಶೋರಸ್ಯ ಪಾದೌಚಾಽಧ್ವನಿ ಕೋಮಲೌ ॥ ೬೫ ॥
ಅಚ್ಛಿನ್ನಾ ತರ್ಜನೀಂ ವ್ಯಾಪ್ಯ ತಥಾ ರೇಖಾಽಸ್ಯ ದೃಶ್ಯತೇ ।
ಕನಿಷ್ಠಾ ಪೃಷ್ಠನಿರ್ಯಾತಾ ದೀರ್ಘಾಯುಷ್ಯಂ ಯಥಾಽರ್ಪಯೇತ್ ॥ ೬೬ ॥
ಪಾದೌ ಸುಮಾಂಸಲೌ ರಕ್ತೌ ಸಮೌ ಸೂಕ್ಷ್ಮೌ ಸುಶೋಭನೌ ।
ಸಮಗುಲ್ಫೌ ಸ್ವೇದಹೀನೌ ಸ್ನಿಗ್ಧಾವೈಶ್ವರ್ಯಸೂಚಕೌ ॥ ೬೭ ॥
ಸ್ವಲ್ಪಾಭಿಃ ಕರರೇಖಾಭಿರಾರಕ್ತಾಭಿಃ ಸದಾ ಸುಖೀ ।
ಲಿಂಗೇನ ಕೃಶಹ್ರಸ್ವೇನ ರಾಜರಾಜೋ ಭವಿಷ್ಯತಿ ॥ ೬೮ ॥

---

೬೩. ಅಂಗೈಗಳಲ್ಲಿಯೂ ಕಣ್ಣಕುಡಿಗಳಲ್ಲಿಯೂ ತಾಲು ಜಿಹ್ವೆ ಅಧರೋಷ್ಠ ಗಳಲ್ಲಿಯೂ ನಖಗಳಲ್ಲಿಯೂ ರಕ್ತವರ್ಣವಿರುವುದರಿಂದ ಇದು ಈ ಬಾಲಕನಿಗೆ ರಾಜ್ಯಸುಖವನ್ನು ದೊರೆಯಿಸುವುದಾಗಿದೆ.

೬೪. ಹಣೆ ಸೊಂಟ ವಕ್ಷಸ್ಸು—ಈ ಮೂರರಲ್ಲಿಯೂ ಈ ಕುಮಾರಕನಿಗೆ ವೈಶಾಲ್ಯವಿರುವುದರಿಂದ ನಿರುಪಮವಾದ ತೇಜಸ್ಸನ್ನೂ ಅಪರಿಮಿತವಾದ ಐಶ್ವರ್ಯವನ್ನೂ ಇವನು ಪಡೆಯುವನೆಂಬುದರಲ್ಲಿ ಸಂದೇಹವಿಲ್ಲ.

೬೫ ಈ ಕುಮಾರನ ಕೈಗಳೆರಡೂ ಆಮೆಯ ಬೆನ್ನಿನಂತೆ ಬಹು ಕಠಿನ ಗಳಾಗಿದ್ದು, ಕಠಿನವಾದ ಕಾರ್ಯಗಳನ್ನು ಮಾಡಲು ಅರ್ಹಗಳಾಗಿಲ್ಲದೆ ರಾಜ್ಯ ಪರಿಪಾಲನೆಗೆ ಮಾತ್ರ ತಕ್ಕುವಾಗಿವೆ; ಅಲ್ಲದೆ ಇವನ ಪಾದಗಳೆರಡೂ ಬಹು ಕೋಮಲವಾಗಿ ನಡೆಯತಕ್ಕುವಾಗಿವೆ.

೬೬. ಈ ಮಗುವಿನ ಕೈಯಲ್ಲಿ ದೀರ್ಘಾಯುಷ್ಯವನ್ನು ಸೂಚಿಸುವ ರೇಖೆಯು ಬಹಳ ಸ್ಪಷ್ಟವಾಗಿದೆ. ಕಿರುಬೆರಳ ಅಡಿಯಿಂದ ಹೊರಟ ರೇಖೆಯು ತರ್ಜನಿಯ (ತೋರುಬೆರಳ) ವರೆಗೂ ಹರಡಿದೆ.

೬೭. ಇವನ ಕಾಲುಗಳೆರಡೂ ಮಾಂಸಲವಾಗಿಯೂ ರಕ್ತವರ್ಣವಾಗಿಯೂ ಸಮವಾಗಿಯೂ ಸೂಕ್ಷ್ಮವಾಗಿಯೂ ಬಹುಮಂಗಳಕರವಾಗಿಯೂ ಸಮವಾದ ಗೆಣ್ಣುಗಳುಳ್ಳದಾಗಿಯೂ ಬೆವರಿಲ್ಲದ್ದಾಗಿಯೂ ನಯವಾಗಿಯೂ ಇರುವುದರಿಂದ ಶ್ರೀಮಂತಿಕೆಯನ್ನು ಸೂಚಿಸುವವುಗಳಾಗಿರುತ್ತವೆ.

೬೮. ಈ ಮಗುವಿನ ಕೈ ಸ್ವಲ್ಪವೇ ಆದ ರೇಖೆಗಳನ್ನೊಳಗೊಂಡು ಬಹು

ಉತ್ಕಟಾಸನ ಗುಲ್ಫಾಸ್ಫಿಗ್ಭಾಭಿರಸ್ಯಾಽಪಿ ವರ್ತುಲಾ ।
ದಕ್ಷಿಣಾವರ್ತಮರುಣಂ ಮಹದೈಶ್ವರ್ಯಸೂಚಿಕಾ ॥ ೬೯ ॥
ಧಾರೈಕಾ ಮೂತ್ರಯತ್ಯಸ್ಮಿನ್ದಕ್ಷಿಣಾವರ್ತಿನೀ ಯದಿ ।
ಗಂಧಶ್ಚ ಮೀನಮಧುನೋರ್ಯದಿ ವೀರ್ಯೇ ತದಾ ನೃಪಃ ॥ ೭೦ ॥
ವಿಸ್ತೀರ್ಣೌ ಮಾಂಸಲೌ ಸ್ನಿಗ್ಧೌ ಸ್ಫಿಚಾವಸ್ಯ ಸುಖೋಚಿತೌ ।
ವಾಮಾವರ್ತೌ ಸುಪ್ರಲಂಬೌ ದೋಷೌ ದಿಗ್ರಕ್ಷಣೋಚಿತೌ ॥ ೭೧ ॥
ಶ್ರೀವತ್ಸ ವಜ್ರ ಚಕ್ರಾಬ್ಜ ಮತ್ಸ್ಯಕೋದಂಡ ದಂಡಭೃತ್ ।
ತಥಾಽಸ್ಯ ಕರಗಾ ರೇಖಾ ಯಥಾಸ್ಯಾತ್ತ್ರಿದಿವಸ್ಪತಿಃ ॥ ೭೨ ॥
ದ್ವಾತ್ರಿಂಶದ್ದಶನಶ್ಚಾಽಯಂ ಕರಕಂಬುಶಿರೋಧರಃ ।
ಕ್ರೌಂಚ ದುಂದುಭಿಹಂಸಾಽಭ್ರಸ್ಸ್ವರಃ ಸರ್ವೇಶ್ವರಾಽಧಿಕಃ ॥ ೭೩ ॥

---

ಕೆಂಪಾಗಿರುವುದರಿಂದ ಯಾವಾಗಲೂ ಸುಖವಾಗಿರುತ್ತಾನೆ. ಕೃಶವೂ, ಹ್ರಸ್ವವೂ ಆಗಿರುವ ಲಿಂಗವನ್ನೊಳಗೊಂಡಿರುವುದರಿಂದ ಇವನು ರಾಜರಾಜನೆನಿಸುತ್ತಾನೆ.

೬೯. ಇವನು ಮಹತ್ತರವಾದ ಆಸನವನ್ನು ಪಡೆಯಲು ಯೋಗ್ಯವಾದ ಮಾಂಸಲವಾದ ಪಿರ್ರಿಗಳುಳ್ಳವನಾಗಿದ್ದಾನೆ. ಇವನ ಹೊಕ್ಕುಳ ಕುಳಿಯು ದುಂಡಗಿದ್ದು ಬಲಮುರಿಯ ಸುಳಿಯುಳ್ಳದ್ದಾಗಿ ರಕ್ತವರ್ಣವನ್ನೊಳಗೊಂಡು ಮಹದೈಶ್ವರ್ಯವನ್ನು ಸೂಚಿಸುತ್ತದೆ.

೭೦ ಈ ಬಾಲಕನು ಮೂತ್ರಿಸುವಾಗ ದಕ್ಷಿಣಾವರ್ತವನ್ನೊಳಗೊಂಡ ಏಕಧಾರೆಯಾಗಿರುವುದರಿಂದಲೂ, ವೀರ್ಯವು ಮತ್ಸ್ಯಮಧುಗಳ ಗಂಧವನ್ನು ತಳೆದಿರುವುದರಿಂದಲೂ ಇವನು ನೃಪನೇ ಆಗುತ್ತಾನೆ.

೭೧. ಇವನ ಪೃಷ್ಟಗಳು ವಿಶಾಲವಾಗಿಯೂ ಮಾಂಸಲಗಳಾಗಿಯೂ ಮೃದುಗಳಾಗಿಯೂ ಇರುವುದರಿಂದ ಕೇವಲ ಸುಖಕ್ಕೆ ಮಾತ್ರ ಯೋಗ್ಯಗಳಾಗಿವೆ. ತೋಳುಗಳು ಎಡತಿರುವಿನವುಗಳಾಗಿ ನೀಳವಾಗಿ ಕಂಗೊಳಿಸುತ್ತಿರುವುದರಿಂದ ದಶದಿಶೆಗಳನ್ನೂ ಸಂರಕ್ಷಿಸುವ ಸಾಮರ್ಥ್ಯವನ್ನೊಳಗೊಂಡಿವೆ.

೭೨. ಈತನು ಅಂಗೈಯಲ್ಲಿ ಶ್ರೀವತ್ಸ ವಜ್ರ ಚಕ್ರ ಕಮಲ ಮತ್ಸ್ಯ ಕೋದಂಡ ದಂಡ ಮೊದಲಾದ ರೇಖೆಗಳು ಬೆಳಗುತ್ತಿರುವುದರಿಂದ ಇವನು ಮೂರು ಲೋಕಗಳಿಗೂ ಸ್ವಾಮಿಯೆನಿಸಲುಳ್ಳವನು.

೭೩. ಇವನಂತೆ ಮೂವತ್ತೆರಡು ಹಲ್ಲುಗಳೂ ಆನೆಯ ಸೊಂಡಲಿನಂತೆಯೂ ಶಂಖದಂತೆಯೂ ದುಂಡಗಿರುವ ಕುತ್ತಿಗೆಯೂ ಕ್ರೌಂಚ ದುಂದುಭಿ ಹಂಸ ಭ್ರಮರಗಳಂತೆ ಮಧುರವಾದ ಕಂಠಸ್ವರವೂ ಇರುವವನು ಸರ್ವೇಶ್ವರನಿಗಿಂತಲೂ ಅಧಿಕನೆನಿಸುತ್ತಾನೆ.

ಮಧುಪಿಂಗಲನೇತ್ರೋಽಸೌ ನೈನಂ ಶ್ರೀಸ್ತ್ಯಜತಿ ಕ್ವಚಿತ್ ।
ಪಂಚರೇಖಲಲಾಟಸ್ತು ತಥಾ ಸಿಂಹೋದರಃ ಶುಭಃ ॥ ೭೪ ॥
ಊರ್ಧ್ವರೇಖಾಂಕಿತಪದೋ ನಿಃಶ್ವಸನ್ ಪದ್ಮಗಂಧವಾನ್ ।
ಅಚ್ಛಿದ್ರಪಾಣಿಃ ಸುನಖೋ ಮಹಾಲಕ್ಷಣವಾನಯಂ ॥ ೭೫ ॥
ಕಿಂ ತು ಸರ್ವಗುಣೋಪೇತಂ ಸರ್ವಲಕ್ಷಣ ಲಕ್ಷಿತಂ ।
ಸಂಪೂರ್ಣ ನಿರ್ಮಲಕಲಂ ಪಾತಯೇದ್ವಿಧುವದ್ವಿಧಿಃ ॥ ೭೬ ॥
ತಸ್ಮಾತ್ಸರ್ವಪ್ರಯತ್ನೇನ ರಕ್ಷಣೀಯಸ್ತ್ವಸೌ ಶಿಶುಃ ।
ಗುಣೋಽಪಿ ದೋಷತಾಂ ಯಾತಿ ವಕ್ರೀಭೂತೇ ವಿಧಾತರಿ ॥ ೭೭ ॥
ಶಂಕೇಽಸ್ಯ ದ್ವಾದಶೇ ವರ್ಷೇ ಪ್ರತ್ಯೂಹೋ ವಿದ್ಯುದಗ್ನಿತಃ ।
ಇತ್ಯುಕ್ತ್ವಾ ನಾರದೋ ಧೀಮಾನ್ ಸ ಜಗಾಮ ಯಥಾ ಗತಂ ॥ ೭೮ ॥
ವಿಶ್ವಾನರಃ ಸಪತ್ನೀಕಸ್ತಚ್ಛ್ರುತ್ವಾ ನಾರದೇರಿತಂ ।
ತದೈವ ಮನ್ಯಮಾನೋಽಭೂದ್ವಜ್ರಪಾತಂ ಸುದಾರುಣಂ ॥ ೭೯ ॥

---

೭೪. ಈ ಕುಮಾರಕನಂತೆ ಜೇನಿನಂತೆ ಪಿಂಗಳವರ್ಣವುಳ್ಳ ನೇತ್ರವುಳ್ಳವನನ್ನು ಲಕ್ಷ್ಮಿಯು ಎಂದಿಗೂ ತೊರೆಯುವುದಿಲ್ಲ ಐದು ರೇಖೆಗಳುಳ್ಳ ಹಣೆಯೂ ಸಿಂಹದಂತೆ ಉದರವೂ ಉಳ್ಳವನು ಮಂಗಳಕರನೆನಿಸುತ್ತಾನೆ.

೭೫. ಅಯ್ಯಾ ವಿಶ್ವಾನರನೆ, ಮೇಲ್ಮುಖವಾದ ರೇಖೆಗಳನ್ನೊಳಗೊಂಡ ಅಡಿಗಳುಳ್ಳವನೂ ಹಳ್ಳತಿಟ್ಟುಗಳಿಲ್ಲದ ಅಂಗೈಗಳುಳ್ಳವನೂ, ಕೂಡಿ ನೆಟ್ಟಗಿರುವ ಬೆರಳುಗಳುಳ್ಳವನೂ ಸೊಗಸಾದ ಉಗುರುಗಳುಳ್ಳವನೂ ಆದ ನಿನ್ನೀ ಕುಮಾರಕನು ಬಹು ಲಕ್ಷಣವಂತನಾಗಿದ್ದಾನೆ.

೭೬. ಹೀಗೆ ಇವನು ಸಮಸ್ತ ಶುಭ ಲಕ್ಷಣಲಕ್ಷಿತನಾಗಿದ್ದರೂ ಸಂಪೂರ್ಣವೂ ನಿರ್ಮಲವೂ ಆದ ಶೋಡಷಕಲೆಗಳನ್ನು ಒಳಗೊಂಡಿದ್ದರೂ ರಾಹುವು ಚಂದ್ರನನ್ನೆಂತೊ ಅಂತು ವಿಧಿಯು ಇವನನ್ನು ಕೆಡವುತ್ತದೆ.

೭೭. ಅಯ್ಯಾ ದ್ವಿಜನೆ, ವಿಧಿಯು ವಿಮುಖವಾದರೆ ಗುಣಗಳೇ ದೋಷಗಳಾಗಿ ಪರಿಣಮಿಸುತ್ತವೆ. ಆದುದರಿಂದ, ಈ ಬಾಲಕನನ್ನು ಪ್ರಯತ್ನಪೂರ್ವಕವಾಗಿ ಸಂರಕ್ಷಿಸತಕ್ಕದ್ದು.

೭೮. ಹನ್ನೆರಡನೆಯ ವರ್ಷದಲ್ಲಿ ಇವನಿಗೆ ಸಿಡಿಲಿನಿಂದಲೊ ಬೆಂಕಿಯಿಂದಲೊ ಗಂಡಾಂತರವುಂಟೆಂದು ನಾನು ಶಂಕಿಸುತ್ತೇನೆ.'' ಇಂತು ನುಡಿದು ಆ ನಾರದಮುನಿಯು ಬಂದ ದಾರಿಯನ್ನು ಹಿಡಿದು ಹೊರಟುಹೋದನು.

೭೯. ನಾರದನು ನುಡಿದ ಈ ಮಾತುಗಳನ್ನು ಕೇಳಿ ಹೆಂಡತಿಯೊಡಗೂಡಿದ ವಿಶ್ವಾನರ ದ್ವಿಜನು, ಅದು ವಜ್ರಪಾತದಂತೆ ಬಹು ಭಯಂಕರವಾದುದೆಂದು ಭಾವಿಸಿದನು.

ಹಾ ಹತೋಽಸ್ಮೀತಿ ವಚಸಾ ಹೃದಯಂ ಸಮತಾಡಯತ್ ।
ಮೂರ್ಛಾಮವಾಪ ಮಹತೀಂ ಪುತ್ರಶೋಕಸಮಾಕುಲಃ ॥ ೮೦ ॥
ಶುಚಿಷ್ಮತ್ಯಪಿ ದುಃಖಾರ್ತಾ ರುರೋದಾಽತೀವ ದುಃಸಹಂ ।
ಆರ್ತಸ್ವರೇಣ ಹಾರಾವೈರತ್ಯಂತವ್ಯಾಕುಲೇಂದ್ರಿಯಾ ॥ ೮೧ ॥
ಹಾ ಶಿಶೋ ಹಾ ಗುಣನಿಧೇ ಹಾ ಪಿತುರ್ವಾಕ್ಯಕಾರಕ ।
ಹಾ ಕುತೋ ಮಂದಭಾಗ್ಯಾಯಾ ಜಠರೇ ಮೇ ಸಮಾಗತಃ ॥ ೮೨ ॥
ತ್ವದೇಕಪುತ್ರಾಂ ಹಾ ಪುತ್ರ ಕೋಽತ್ರ ಮಾಂ ತ್ರಾಯತೇ ಪುರಾ ।
ತ್ವದೃತೇ ತ್ವದ್ಗುಣೋರ್ಮ್ಯಾಢ್ಯೇ ಪತಿತಾಂ ಶೋಕಸಾಗರೇ ॥ ೮೩ ॥
ಹಾ ಬಾಲ ಹಾ ವಿಮಲ ಹಾ ಕಮಲಾಯತಾಕ್ಷ
ಹಾ ಲೋಕಲೋಚನ ಚಕೋರಕುರಂಗಲಕ್ಷ್ಮನ್ ।
ಹಾ ತಾತ ತಾತ ನಯನಾಽಬ್ಜಮಯೂಖಮಾಲಿನ್
ಹಾ ಮಾತುರುತ್ಸವಸಹಸ್ರಸುಖೈಕಹೇತೋ ॥ ೮೪ ॥
ಹಾ ಪೂರ್ಣಚಂದ್ರಮುಖ ಹಾ ಸುನಖಾಂಗುಲೀಕ
ಹಾ ಚಾಟುಕಾರ ವಚನಾಮೃತವೀಚಿಪೂರ ।
ದುಃಖೈಃ ಕಿಯದ್ಭಿರಹಹಾಂಗ ಮಯಾ ತ್ವಮಾಪ್ತಃ
ಕಿಂ ಕಿಂ ಕೃತಂ ಗೃಹಪತೇ ನ ಮಯಾತ್ವದಾಪ್ತ್ಯೈ ॥ ೮೫ ॥

---

೮೦. ಆ ವಿಪ್ರನು, "ಅಯ್ಯೋ, ಸತ್ತೆ" ಎಂದು ಕೂಗಿಕೊಳ್ಳುತ್ತ ಎದೆಯನ್ನು ಬಡಿದುಕೊಂಡು ಮಹತ್ತರವಾದ ಪುತ್ರಶೋಕದಿಂದ ಕದಡಿದ ಮನಸ್ಸುಳ್ಳವನಾಗಿ ಮೂರ್ಛೆಗೊಂಡನು.

೮೧. ವಿಶ್ವಾನರನ ಪತ್ನಿಯಾದ ಶುಚಿಷ್ಮತಿಯೂ ಸಹ ದುಃಖಪೀಡಿತಳಾಗಿ ಆರ್ತನಾದದಿಂದ ಅಡಿಗಡಿಗೂ ಹಾಹಾಕಾರಮಾಡುತ್ತ ವ್ಯಾಕುಲವಾದ ಸರ್ವೇಂದ್ರಿಯವುಳ್ಳವಳಾಗಿ ಸಹಿಸಲಸದಳವಾಗುವಂತೆ ಅತ್ತಳು.

೮೨-೮೩. "ಅಯ್ಯೋ ಮಗುವೆ, ಗುಣನಿಧಿಯೆ, ಅಕ್ಕಟಾ! ಪಿತೃವಾಕ್ಯ ಪರಿಪಾಲಕ! ಪಾಪಿಯಾದ ನನ್ನ ಹೊಟ್ಟೆಯಲ್ಲಿ ಏಕಾದರೂ ಹುಟ್ಟಿದೆ? ಒಬ್ಬನೇ ಒಬ್ಬ ಮಗನನ್ನು ಪಡೆದಿದ್ದ ನನ್ನನ್ನು ಇನ್ನು ಮುಂದೆ ಯಾರು ತಾನೆ ಕಾಪಾಡುತ್ತಾರೆ? ನೀನಿಲ್ಲದೆ ನಿನ್ನ ಗುಣಗಳೆಂಬ ಅಲೆಗಳು ತುಂಬಿದ ದುಃಖದ ಕಡಲಲ್ಲಿ ಮುಳುಗಿಹೋಗುವ ನನ್ನನ್ನು ಕಾಪಾಡುವವರಾರು?

೮೪-೮೫. "ಎಲೈ ಮಗುವೆ, ನಿರ್ದುಷ್ಟನೆ, ತಾವರೆಯಂತೆ ಅಗಲವಾದ ಕಂಗಳುಳ್ಳವನಾಗಿ, ಜನಗಳ ಕಣ್ಣುಗಳೆಂಬ ಚಕೋರಪಕ್ಷಿಗಳಿಗೆ ಚಂದ್ರನಂತಿದ್ದವನೆ, ಹೋದೆಯಾ! ಅಪ್ಪಾ ಮಗು! ತಂದೆಯ ನೇತ್ರಗಳೆಂಬ ಕಮಲಗಳಿಗೆ ಸೂರ್ಯಪ್ರಾಯನಾಗಿ, ತಾಯಾದ ನನಗೆ ಸಂತೋಷಕರವಾದ ಸಾವಿರಾರು

ನೋಪ್ತೋ ಬಲಿರ್ನ ಬತ ಕಾಸು ಚ ದೇವತಾಸು
ತೀರ್ಥಾನಿ ಕಾನಿ ನ ಮಯಾಽಧ್ಯುಷಿತಾನಿ ವತ್ಸ ।
ಕೇ ಕೇ ಮಯಾ ನ ನಿಯಮೌಷಧಮಂತ್ರಯಂತ್ರಾಃ
ಸಂಸಾಧಿತಾಸ್ತವ ಕೃತೇ ಸುಕೃತೈಕಲಭ್ಯ ॥ ೮೬ ॥
ಸಂಸಾರಸಾಗರತರೇ ಹರ ದುಃಖಭಾರಂ
ಸಾರಂ ಮುಖೇಂದುಮುಭಿದರ್ಶಯ ಸೌಖ್ಯಸಿಂಧೋ ।
ಪುನ್ನಾಮ ತೀವ್ರನರಕಾರ್ಣವವಾಡವಾಗ್ನೇ
ಸ್ಸಂಜೀವಯಸ್ವ ಪಿತರಂ ನಿಜವಾಕ್ಸುಧೋಕ್ಷೈಃ ॥೮೭ ॥
ಕಿಂ ದೇವತಾ ಅಹಹ ಜನ್ಮಮಹೋತ್ಸವೇಽಸ್ಯ
ಜ್ಞಾತ್ವೇತಿ ಭಾವಿ ಮಿಲಿತಾ ಯುಗಪತ್ಸಮಸ್ತಾಃ ।
ಏಕಸ್ಥ ಸರ್ವಗುಣಶೀಲ ಕಲಾಕಲಾಪ
ಸೌಂದರ್ಯಲಕ್ಷಣ ಪರೀಕ್ಷಣ ಪೂರ್ಣ ಹರ್ಷಾಃ ॥ ೮೮ ॥

---

ಉತ್ಸವಗಳನ್ನುಂಟುಮಾಡುತ್ತಿದ್ದ ನೀನು ಅಲ್ಪಾಯುಷ್ಯವಂತನಾಗಬೇಕೆ? ಎಲೈ ಪೂರ್ಣಚಂದ್ರಮುಖನೆ! ನಸುನಗೆಯುಳ್ಳವನಾಗಿ ಒಳ್ಳೆಯ ಉಗುರುಗಳುಳ್ಳ ಬೆರಳುಗಳಿಂದೊಪ್ಪಿ ಮುದ್ದುಮಾತುಗಳನ್ನಾಡುತ್ತ ಸವಿಮಾತುಗಳೆಂಬ ಅಮೃತದ ಅಲೆಗಳಿಂದ ನನ್ನನ್ನು ಆನಂದಗೊಳಿಸುತ್ತಿದ್ದ ನಿನ್ನನ್ನು ಪಡೆಯಲೋಸುಗ ಲೆಕ್ಕವಿಲ್ಲದ ಎಷ್ಟೊಂದು ವ್ರತಗಳನ್ನು ಮಾಡಿದೆ.

೮೬. ಮಗು, ಗೃಹಪತೀ! ನಿನ್ನನ್ನು ಪಡೆಯಲು ಯಾವ ಯಾವ ದೇವತೆಗಳಿಗೆ ನಾನು ಪೂಜೆಯನ್ನು ಸಲ್ಲಿಸಲಿಲ್ಲ? ಯಾವ ಯಾವ ತೀರ್ಥಗಳನ್ನು ಸೇವಿಸಲಿಲ್ಲ. ಪುಣ್ಯದಿಂದ ಮಾತ್ರವೆ ದೊರಕಲು ಸಾಧ್ಯವಾದ ನಿನ್ನನ್ನು ಪಡೆಯಲೋಸುಗ ಆದಾವ ನಿಯಮಗಳನ್ನೂ, ಔಷಧಗಳನ್ನೂ ಯಂತ್ರಮಂತ್ರಗಳನ್ನೂ ಮಾಡಲಿಲ್ಲ!

೮೭. ಮಗು, ನೀನು ಸಂಸಾರವೆಂಬ ಸಾಗರಕ್ಕೆ ಓಡೆಯಂತಿರುವವನು. ಈ ದುಃಖಭರವನ್ನು ಕಳೆ. ಸಾರಸರ್ವಸ್ವವಾದ ನಿನ್ನ ಮುಖಚಂದ್ರನನ್ನೊಮ್ಮೆ ತೋರು. ಸುಖಸಮುದ್ರಪ್ರಾಯನಾದ ಗೃಹಪತಿಯೆ, ಪುನ್ನಾಮವೆಂಬ ಘೋರ ನರಕದ ದಳ್ಳುರಿಗೆ ಹೆದರಿರುವ ನಿನ್ನ ತಂದೆಯನ್ನು ನಿನ್ನ ಮಾತುಗಳೆಂಬ ಅಮೃತ ಸೇಚನದಿಂದ ಪುನರುಜ್ಜೀವನಗೊಳಿಸು.

೮೮. ಅಹಹ! ಈ ಕುಮಾರನ ಜನ್ಮಮಹೋತ್ಸವ ಕಾಲದಲ್ಲಿ ಈ ವಿಷಯವನ್ನು ಅರಿತೂ, ಒಂದೇ ಎಡೆಯಲ್ಲಿ ಸೇರಿದ ಸಮಸ್ತ ಗುಣಶೀಲ ಸಮೂಹಗಳ ಸೌಂದರ್ಯ ಲಕ್ಷಣಗಳನ್ನು ಪರೀಕ್ಷೆಮಾಡಲೋಸುಗವೇ ಅಷ್ಟೊಂದು ಮಂದಿ ದೇವತೆಗಳೆಲ್ಲರೂ ಸಂಪೂರ್ಣ ಹರ್ಷವುಳ್ಳವರಾಗಿ ಸೇರಿದ್ದರೊ ಏನೊ!

ಶಂಭೋ ಮಹೇಶ ಕರುಣಾಕರ ಶೂಲಪಾಣೇ
ಮೃತ್ಯುಂಜಯಸ್ತ್ವಮಿತಿ ವೇದವಿದೋ ವದಂತಿ ।
ತ್ವದ್ದತ್ತಬಾಲತನಯೇ ಯದಿ ಕಾಲಕಾಲಃ
ಸ್ಯಾದೇವಮತ್ರ ವದ ಕಸ್ಯ ಭವೇನ್ನಪಾತಃ ॥ ೮೯ ॥
ಹಾ ಹಂತ ಹಂತ ಭವತಾ ಭವತಾಪಹಾರೀ
ಕಸ್ಮಾದ್ವಿಧೇಽತ್ರ ವಿದಧೇ ಬಹುಭಿಃ ಪ್ರಯತ್ನೈಃ ।
ಬಾಲೋ ವಿಶಾಲಗುಣಸಿಂದುಮಗಾಧಮಧ್ಯಂ
ಸದ್ರತ್ನಸಾರಮಖಿಲಂ ಸ ವಿಧಂ ವಿಧಾಯ ॥ ೯೦ ॥
ಹಾ ಕಾಲ ಬಾಲಕವತೀ ಕಿಮು ತೇನ ರಾಜ್ಞೀ
ತ್ವತ್ಕಾಲತಾಂ ನಹೃತವಾನ್ನಸುತಾನನೇಂದುಃ ।
ಬಾಲೇಽತಿ ಕೋಮಲ ಮೃಣಾಲ ಲತಾಂಗಲೀಲೇ
ದಂಭೋಲಿನಿಷ್ಠುರ ಕಠೋರ ಕುಠಾರದಂಷ್ಟ್ರಃ ॥ ೯೧ ॥
ಇತ್ಥಂ ವಿಲಪ್ಯ ಬಹುಶೋ ನಯನಾಽಂಬುಧಾರಾ
ಸಂಪಾತ ಜಾತ ತಟನೀ ಶತಮುತ್ತರಂಗಂ ।
ಸಾ ತೋಕ ಶೋಕ ಜನಿತಾಽನಲ ತಾಪತಪ್ತಾ
ಪ್ರೋಚ್ಛ್ವಸ್ಯ ದೀರ್ಘವಿಪುಲೋಷ್ಣಮಹೋ ಶುಶೋಷ ॥೯೨॥

---

೮೯–೯೦. ಎಲೈ ಶಂಭುವೆ, ಮಹೇಶ್ವರಾ! ದಯಾಮಯಾ! ಶೂಲಪಾಣಿ! ವೇದವಿತ್ತುಗಳಾದ ಮಹರ್ಷಿಗಳೆಲ್ಲರೂ ನೀನು ಮೃತ್ಯುವನ್ನು ಜಯಿಸಿದವನೆಂದು ತಿಳಿದಿರುತ್ತಾರೆ. ಇಂತಹ ನೀನು ಅನುಗ್ರಹಿಸಿದ ಈ ಕುಮಾರಕನಲ್ಲಿಯೂ ಆ ಯಮನು ಚೇಷ್ಟೆಮಾಡುವುದಾದರೆ ಈ ಲೋಕದಲ್ಲಿ ಯಾವನಿಗೆತಾನೆ ಪತನ ವಾಗದಿರದು? ಅಯ್ಯೊ ವಿಧಿಯೆ! ನೀನು ಅನೇಕ ಪ್ರಯತ್ನಗಳನ್ನುಮಾಡಿ ವಿಶಾಲ ಗುಣಸಮುದ್ರನೂ ಅಗಾಧವಾದ ಹೃದಯವುಳ್ಳವನೂ ಸದ್ರತ್ನಸಾರಸರ್ವಸ್ವನೂ ಸಂಸಾರದ ತಾಪವನ್ನು ಪರಿಹರಿಸುವವನೂ ಆದ ಇಂತಹ ಮಗನನ್ನು ನಿರ್ಮಿಸಿ, ಆಮೇಲೆ ಏಕಾದರೂ ವಧಿಸುವೆ?

೯೧. ಅಯ್ಯೊ ಯಮನೆ! ನಿನ್ನ ರಾಣಿಯಾದ ಶ್ಯಾಮಲಾದೇವಿಯು ಪುತ್ರ ವತಿಯಾಗಿಲ್ಲವೆ? ಆ ನಿನ್ನ ಮಗನ ಮುಖವೆಂಬ ಚಂದ್ರನನ್ನು ಕಾಲಸ್ವರೂಪ ನಾದ ನೀನು ಮರಣದಿಂದ ತಪ್ಪಿಸಿರಬೇಕು. ಇದೀಗ ಕೋಮಲವಾದ ಕಮಲದ ಬಳ್ಳಿಯಂತೆ ಮೃದುವಾದ ದೇಹವನ್ನೊಳಗೊಂಡ ಈ ನನ್ನ ಕುಮಾರಕ ನಲ್ಲಿ ಖಡ್ಗದಂತೆ ಮೊನಚಾದ ಕೋರೆದಾಡೆಗಳುಳ್ಳ ನೀನು ವಜ್ರಾಯುಧದಂತೆ ಬಹು ಕಠಿನವಾಗಿ ನಡೆಯುತ್ತಿರುವೆ. ಇದು ನಿನಗೆ ತರವೆ?''

೯೨. ಅಯ್ಯಾ ಶಿವಶರ್ಮನೆ, ಆ ಶುಚಿಸ್ಮೃತಿಯು ಈ ಪ್ರಕಾರವಾಗಿ ಬಹಳ

ಆಕರ್ಣ್ಯ ತತ್ಕರುಣವತ್ಪರಿದೇವಿತಾನಿ
ತಾನಿ ದ್ರುಮಾ ವ್ರತತಯಃ ಕುಸುಮಾಶ್ರುಪಾತೈಃ ।
ಪ್ರಾಯೋ ರುದಂತಿ ಪತತಾಂ ವಿರುತಾರ್ತರಾವೈ
ರಾಲೋಲ್ಯಮೌಲಿಮುಸಕೃತ್ಪವನಚ್ಛಲೇನ ॥ ೯೩ ॥
ರುಣ್ವಂತಯಾ ಕಿಲ ತಥಾ ಬಹುಮುಕ್ತಕಂಠ
ಮಾರ್ತಸ್ವರೈಃ ಪ್ರತಿರವಚ್ಛಲತೋ ಯಥೋಚ್ಚೈಃ ।
ತದ್ದುಃಖತೋ ನು ರುರುದುರ್ಗಿರಿಕಂದರಾಸ್ಯಾಃ
ಸರ್ವಾ ದಿಶಃ ಸ್ಥಗಿತಪತ್ರಿಮೃಗಾಗಮಾಹಿ ॥ ೯೪ ॥
ಶ್ರುತ್ವಾರ್ತನಾದಮಿತಿ ವಿಶ್ವನರೋಽಪಿ ಮೋಹಂ
ಹಿತ್ವೋತ್ಥಿತಃ ಕಿಮಿತಿ ಕಿಂತ್ವಿತಿ ಕಿಂ ಕಿಮೇತತ್ ।
ಉಚ್ಚೈರ್ವದನ್ ಗೃಹಪತಿಃ ಕ್ವಸಮೇ ಬಹಿಸ್ಥಃ
ಪ್ರಾಣೋಽಂತರಾತ್ಮನಿಲಯಃ ಸಕಲೇಂದ್ರಿಯೇಶಃ ॥ ೯೫ ॥

---

ವಾಗಿ ಅತ್ತು ಕಣ್ಣೀರಬೀಳುವಿಕೆಯಿಂದುಂಟಾಗಿ ಬೆಳೆದು ಅಲೆಅಲೆಯಾಗಿ ಹರಿಯುತ್ತಿರುವ ಶೋಕನದಿಗೆಡೆಗೊಟ್ಟು, ಅಪರಿಮಿತವಾದ ದುಃಖದಿಂದ ಜನಿಸಿದ ಬೆಂಕಿಯ ಬೇಗೆಗೊಳಗಾಗಿ ಬೇಸತ್ತು, ನಿಟ್ಟುಸಿರು ಬಿಟ್ಟು ಬತ್ತಿ ಹೋದಳು.

೯೩. ಎಲೈ ವಿಪ್ರನೆ, ಆ ಶುಚಿಷ್ಮತೀದೇವಿಯು ಅತಿ ದೀನವಾಗಿ ಅತ್ತುದನ್ನು ಕೇಳಿ ಆಶ್ರಮೋಪವನದ ತರುಲತೆಗಳೆಲ್ಲವೂ ಹೂಗಳೆಂಬ ಕಂಬನಿಯನ್ನುದುರಿಸಿದುವು. ಅಲ್ಲದೆ ಅವು ಹಾರಿಹೋಗುತ್ತಿರುವ ಪಕ್ಷಿಗಳ ಕಲಕಲ ಧ್ವನಿಯೆಂಬ ಆರ್ತನಾದದಿಂದ ಅಡಿಗಡಿಗೂ ಗಾಳಿಯ ಬೀಸುವಿಕೆಯಿಂದ ಬಳುಕಿ ಬಾಗಿ ತಲೆಯನ್ನು ಅಲುಗಿಸಿ ಅಳುತ್ತಿರುವುವೊ ಎಂಬಂತೆ ತೋರುತ್ತಿದ್ದವು.

೯೪. ಆಕೆಯು ಬಹುಪ್ರಕಾರವಾಗಿ ಮುಕ್ತಕಂಠವಾಗಿ ದೀನದೀನವಾಗಿ ಅತ್ತುದನ್ನು ಪಡಿದನಿಯೆಂಬ ನೆಪದಿಂದ ಬೆಟ್ಟದ ಗುಹೆಗಳನ್ನೊಳಗೊಂಡ ಸ್ತಂಭಿತಗಳಾದ ಮೃಗಪಕ್ಷಿ ಸಮೂಹವುಳ್ಳ ದಶದಿಶೆಗಳೂ ರೋದಿಸಿದುವೊ ಎಂಬಂತಿದ್ದವು.

೯೫. ಈ ಆರ್ತನಾದವನ್ನು ಕೇಳಿ ವಿಶ್ವಾನರನೂ ಮೂರ್ಛೆಯನ್ನು ತಿಳಿದೆದ್ದು, "ಏನು ಏನಾಯಿತು, ಏನಿದು?" ಎಂದು ಗಟ್ಟಿಯಾಗಿ ಕೂಗಿ ಕೇಳುತ್ತ, "ನನ್ನ ಬಹಿಃಪ್ರಾಣಸ್ವರೂಪನೂ ಅಂತರಾತ್ಮದಲ್ಲಿ ನೆಲಸಿರುವವನೂ ಸಕಲೇಂದ್ರಿಯಗಳಿಗೂ ಒಡೆಯನೂ ಆದ ನನ್ನ ಮಗು ಗೃಹಪತಿಯೆಲ್ಲಿ?" ಎಂದು ಒರಲಿದನು.

ಅಗಸ್ತ್ಯ ಉವಾಚ:—
ತತೋ ದೃಷ್ಟ್ವಾ ಸ ಪಿತರೌ ಬಹುಶೋಕಸಮಾವೃತೌ ।
ಸ್ಮಿತ್ವೋವಾಚ ತತೋ ಮಾತಸ್ತ್ರಾಸಸ್ತ್ವೇದೃಕ್ಕುತೋ ಹಿ ವಾಂ ॥ ೯೬ ॥
ನ ಮಾಂ ಕೃತವಪುಸ್ತ್ರಾಣಂ ಭವಚ್ಚರಣರೇಣುಭಿಃ ।
ಕಾಲಃ ಕಲಯಿತುಂ ಶಕ್ತೋ ವರಾಕೀ ಚಂಚಲಾಽಲ್ಪಿಕಾ ॥ ೯೭ ॥
ಪ್ರತಿಜ್ಞಾಂ ಶೃಣುತಂ ತಾತೌ ಯದಿ ವಾಂ ತನಯೋಹ್ಯಹಂ ।
ಕರಿಷ್ಯೇಹಂ ತಥಾ ತೇನ ವಿದ್ಯುನ್ಮೃತ್ಯುಸ್ತ್ರಸಿಷ್ಯತಿ ॥ ೯೮ ॥
ಮೃತ್ಯುಂಜಯಂ ಸಮಾರಾಧ್ಯ ಸರ್ವಜ್ಞಂ ಸರ್ವದಂ ಸತಾಂ ।
ಕಾಲಕಾಲಂ ಮಹಾಕಾಲಂ ಕಾಲಕೂಟವಿಷಾಽದಿನಂ ॥ ೯೯ ॥
ಇತಿ ಶ್ರುತ್ವಾ ವಚಸ್ತಸ್ಯ ಜರಿತೌ ದ್ವಿಜದಂಪತೀ ।
ಅಕಾಲಾಮೃತವರ್ಷೌಘ ಶಾಂತತಾಪೌ ತದೋಚತುಃ ॥ ೧೦೦ ॥
ಅಪಯೋದಪಯೋವೃಷ್ಟಿರದುಗ್ಧಾಽಬ್ಧಿಃ ಸುಧೋದಯಃ ।
ಅನಿಂದುಃ ಕೌಮುದೀ ಕಾಂತಿಃ ಕುತೋ ನೌ ಸುಖಯತ್ಯಲಂ ॥ ೧೦೧ ॥

---

೯೬. ಅಗಸ್ತ್ಯನು ಹೇಳುತ್ತಾನೆ:—ಎಲೌ ಲೋಪಾಮುದ್ರೆಯೆ, ತರುವಾಯ ಆ ಗೃಹಪತಿಯು ತನ್ನ ತಾಯಿತಂದೆಗಳು ಬಹಳವಾದ ದುಃಖಕ್ಕೊಳಗಾಗಿರುವುದನ್ನು ಕಂಡು ನಸುನಗೆ ಗೂಡಿ, "ಅಮ್ಮಾ, ನಿನಗೆ ಇಂತಹ ಭಯವೇತಕ್ಕೆ? ಅಪ್ಪಾ ನೀನೇಕೆ ಹೆದರುವೆ?

೯೭–೯೮. ನಿಮ್ಮ ಪಾದದೂಳಿಯಿಂದ ದೇಹರಕ್ಷೆಯನ್ನು ಪಡೆದಿರುವ ನನ್ನನ್ನು ಆ ಯಮನು ಮೃತಿಯೊಂದಿಸುವುದಕ್ಕೆ ಎಂದಿಗೂ ಸಮರ್ಥನಾಗುವುದಿಲ್ಲ. ಚಂಚಲವೂ ಅಲ್ಪವೂ ಆದ ಆ ಮೃತ್ಯುವಿನ ವಿಷಯದಲ್ಲಿ ಇನ್ನೇನು? ತಾಯಿತಂದೆಗಳಾದ ನಿವೀರ್ವರೂ ನನ್ನ ಪ್ರತಿಜ್ಞೆಯನ್ನು ಕೇಳಿರಿ. "ನಾನು ನಿಮ್ಮ ಮಗನೇ ಆಗಿದ್ದಲ್ಲಿ ಆ ಸಿಡಿಲೂ ನನಗೆ ಅಂಜುವಂತೆ ಮಾಡುತ್ತೇನೆ.

೯೯. ಸತ್ಪುರುಷರಾದವರಿಗೆ ಸಮಸ್ತ ಅಭೀಷ್ಟಗಳನ್ನೂ ಸಲ್ಲಿಸುವವನಾಗಿ ಸರ್ವಜ್ಞನೂ ಮೃತ್ಯುಂಜಯನೂ ಯಮನಿಗೂ ಯಮನೂ ಮಹಾಕಾಲನೆನಿಸಿ ಕಾಲಕೂಟವನ್ನು ಪಾನಮಾಡಿದವನೂ ಆದ ಪರಮೇಶ್ವರನನ್ನು ತಪಸ್ಸಿನಿಂದ ಸಂತೋಷಗೊಳಿಸುತ್ತೇನೆ."

೧೦೦. ಮುಪ್ಪೇರಿದ ಆ ದ್ವಿಜದಂಪತಿಗಳೀರ್ವರೂ ಮಗನು ಆಡಿದ ಆ ಮಾತುಗಳನ್ನು ಕೇಳಿ ಅಕಾಲದಲ್ಲಿ ಅಮೃತವರ್ಷವನ್ನು ಹೊಂದಿದಂತೆ ಶಾಂತವಾದ ಸಂತಾಪವುಳ್ಳವರಾಗಿ ನುಡಿದರು.

೧೦೧. "ಮಗನೇ, ಗೃಹಪತೀ! ನಿನ್ನ ಮಾತು ಮುಗಿಲಿಲ್ಲದೆಯೆ ಮಳೆಗರೆದಂತೆ ತೃಪ್ತಿಯನ್ನುಂಟುಮಾಡಿದೆ. ಕ್ಷೀರಸಮುದ್ರವಿಲ್ಲದೆಯೆ ಹಾಲುಕ್ಕಿ

ಪುನರ್ಬ್ರೂಹಿ ಪುನರ್ಬ್ರೂಹಿ ಕೀದೃಕ್ಕೀದೃಕ್ಪುನಃ ಪುನಃ ।
ಕಾಲಃ ಕಲಯಿತುಂ ನಾಽಲಂ ವರಾಕೀ ಚಂಚಲಾಽಲ್ಪಿಕಾ ॥ ೧೦೨ ॥
ಆವಯೋಸ್ತಾಪನಾಶಾಯ ಮಹೋಪಾಯಸ್ತ್ವಯೇರಿತಃ ।
ಮೃತ್ಯುಂಜಯಸ್ಯ ದೇವಸ್ಯ ಸಮಾರಾಧನಲಕ್ಷಣಃ ॥ ೧೦೩ ॥
ತದ್ಗಚ್ಛ ಶರಣಂ ತಾತ ನಾಽತಃ ಪರತರಂ ಹಿತಂ ।
ಮನೋರಥಪಥಾಽತೀತಕಾರಿಣಃ ಕಾಲಹಾರಿಣಃ ॥ ೧೦೪ ॥
ಕಿಂ ನ ಶ್ರುತಂ ತ್ವಯಾ ತಾತ ಶ್ವೇತಕೇತುಂ ಯಥಾ ಪುರಾ ।
ಪಾಶಿತಂ ಕಾಲಪಾಶೇನ ರರಕ್ಷ ತ್ರಿಪುರಾಂತಕಃ ॥ ೧೦೫ ॥
ಶಿಲಾದತನಯಂ ಮೃತ್ಯುಗ್ರಸ್ತಮಷ್ಟಾಬ್ದಮರ್ಭಕಂ ।
ಶಿವೋ ನಿಜಜನಂ ಚಕ್ರೇ ನಂದಿನಂ ವಿಶ್ವನಂದಿನಂ ॥ ೧೦೬ ॥
ಕ್ಷೀರೋದಮಥನೋದ್ಭೂತಂ ಪ್ರಲಯಾಽನಲಸನ್ನಿಭಂ ।
ಪೀತ್ವಾ ಹಾಲಾಹಲಂ ಘೋರಮರಕ್ಷದ್ಭುವನತ್ರಯಂ ॥ ೧೦೭ ॥

---

ದಂತಿದೆ. ಚಂದ್ರನಿಲ್ಲದೆಯೆ ಬೆಳುದಿಂಗಳು ಕಾದಂದಿದೆ. ನಮ್ಮನ್ನು ಬಹಳವಾಗಿ ತಣಿಸಿದೆ.

೧೦೨. ಮಗು ಇನ್ನೊಂದು ಸಲ ಹೇಳು, ಹೇಳು! ಅದು ಹೇಗೆ? ನಿಕೃಷ್ಟನೂ ಚಪಲನೂ ಅತ್ಯಲ್ಪನೂ ಆದ ಯಮನು ನಿನ್ನನ್ನು ಕಬಳಿಸಲು ಸಾಧ್ಯವಿಲ್ಲವೆಂದೆಯ?

೧೦೩. ಮಗನೆ, ನಿನ್ನ ಮಾತಾಪಿತೃಗಳಾದ ನಮ್ಮಿಬ್ಬರ ಸಂತಾಪವನ್ನು ನಾಶಗೊಳಿಸಲೋಸುಗ ಮೃತ್ಯುಂಜಯನಾದ ಪರಮೇಶ್ವರನನ್ನು ಆರಾಧಿಸುವ ಲಕ್ಷಣವುಳ್ಳ ಉಪಾಯವನ್ನೇ ಹೇಳಿದೆ.

೧೦೪. ಅಪ್ಪ, ಮನೋರಥಕ್ಕೂ ಮೀರಿದ ಮುಕ್ತಿಯನ್ನು ದೊರಕಿಸುವವನೂ ಕಾಲಸಂಹಾರಿಯೂ ಭಕ್ತಹಿತಂಕರನೂ ಪರತರನೂ ಆದ ಶಂಕರನನ್ನು ಶರಣುಹೋಗು.

೧೦೫. ಮಗು, ಗೃಹಪತೀ! ಪೂರ್ವದಲ್ಲಿ ಈ ತ್ರಿಪುರಾಂತಕನು ಕಾಲನು ಪಾಶಗಳಿಂದ ಬಿಗಿಸಿ ಎಳೆದೊಯ್ಯುತ್ತಿದ್ದ ಶ್ವೇತಕೇತುವನ್ನು ಕಾಪಾಡಿದನೆಂಬ ಸಂಗತಿಯನ್ನು ನೀನು ಕೇಳಿಲ್ಲವೆ?

೧೦೬. ಅಂತೆಯೆ ಎಂಟು ವರ್ಷ ವಯಸ್ಸಿನ ಕೇವಲ ಬಾಲಕನಾದ ಶಿಲಾದ ಮುನಿಯ ಮಗನಾದ ನಂದಿಯನ್ನು ತನ್ನ ಸ್ವಜನವನ್ನಾಗಿ ಮಾಡಿಕೊಂಡು ಲೋಕವನ್ನೇ ಆನಂದಗೊಳಿಸುವವನನ್ನಾಗಿ ಮಾಡಲಿಲ್ಲವೆ?

೧೦೭. ಪೂರ್ವದಲ್ಲಿ ಕ್ಷೀರಸಮುದ್ರವನ್ನು ಮಥನಮಾಡುವಂದು ಮಹಾ

ಜಾಲಂಧರಂ ಮಹಾದರ್ಪಂ ಹೃತತ್ರೈಲೋಕ್ಯಸಂಪದಂ ।
ಚರಣಾಂಗುಷ್ಠ ರೇಖೋತ್ಥ ಚಕ್ರೇಣ ನಿಜಘಾನ ಯಃ ॥ ೧೦೮ ॥
ಯ ಏಕೇಷು ನಿಪಾತೋತ್ಥ ಜ್ವಲನ್ನೈಸ್ತ್ರಿಪುರಂ ಪುರಾ ।
ವಿಧಾಯ ಪತ್ರಿಣಂ ವಿಷ್ಣುಂ ಜ್ವಾಲಯಾಮಾಸ ಧೂರ್ಜಟಿಃ ॥ ೧೦೯ ॥
ಅಂಧಕಂ ಯಸ್ತ್ರಿಶೂಲಾಗ್ರಪ್ರೋತಂ ವರ್ಷಾಯುತಂ ಪುರಾ ।
ತ್ರೈಲೋಕ್ಯೈಶ್ವರ್ಯಸಂಮೂಢಂ ಶೋಷಯಾಮಾಸ ಭಾನುನಾ ॥ ೧೧೦ ॥
ಕಾಮಂ ದೃಷ್ಟಿನಿಪಾತೇನ ತ್ರೈಲೋಕ್ಯವಿಜಯೋರ್ಜಿತಂ ।
ನಿನಾಯಾನಂಗಪದವೀಂ ವೀಕ್ಷಮಾಣೇಷ್ವಜಾದಿಷು ॥ ೧೧೧ ॥
ತಂ ಬ್ರಹ್ಮಾದ್ಯೇಕ ಕರ್ತಾರಂ ಮೇಘವಾಹನಮಚ್ಯುತಂ ।
ಪ್ರಯಾಹಿ ಪುತ್ರ ಶರಣಂ ವಿಶ್ವರಕ್ಷಾಮಣಿಂ ಶಿವಂ ॥ ೧೧೨ ॥
ಪಿತ್ರೋರನುಜ್ಞಾಂ ಪ್ರಾಪ್ಯೇತಿ ಪ್ರಣಮ್ಯ ಚರಣೌ ತಯೋಃ ।
ಪ್ರದಕ್ಷಿಣಮುಪಾವೃತ್ಯ ಬಹ್ವಾಶ್ವಾಸ್ಯ ವಿನಿರ್ಯಯೌ ॥ ೧೧೩ ॥

---

ಪ್ರಳಯಾಗ್ನಿಗೆ ಸಮನಾಗಿ ಉದಿಸಿದ ಘೋರವಾದ ಹಾಲಾಹಲ ವಿಷವನ್ನು ಆ ಸ್ವಾಮಿಯು ಪಾನಮಾಡಿ ತ್ರಿಭುವನಗಳನ್ನೂ ಸಂರಕ್ಷಿಸಲಿಲ್ಲವೆ ?

೧೦೮. ಮೂರು ಲೋಕಗಳ ಸಂಪತ್ತನ್ನು ಪಡೆದೆನೆಂದು ಗರ್ವಿಸಿ ತಾನೇ ತಾನಾಗಿ ಮೆರೆಯುತ್ತಿದ್ದ ಜಲಂಧರನನ್ನು ತನ್ನ ಅಡಿಯ ಹೆಬ್ಬೆರಳಿನ ರೇಖೆಯಿಂದುದಿಸಿದ ಚಕ್ರದಿಂದಲೆ ಆ ಪ್ರಭುವು ವಧಿಸಿದನಷ್ಟೆ.

೧೦೯. ಪೂರ್ವದಲ್ಲಿ ಈ ಪರಮೇಶ್ವರನು ಮಹಾವಿಷ್ಣುವನ್ನೇ ಬಾಣವನ್ನಾಗಿಸಿಕೊಂಡು, ಆ ಒಂದು ಬಾಣವನ್ನು ಪ್ರಯೋಗಿಸಿಯೆ ತ್ರಿಪುರಗಳನ್ನು ಭಸ್ಮಸಾತ್ಕರಿಸಲಿಲ್ಲವೆ ?

೧೧೦. ಪೂರ್ವದಲ್ಲಿ ಇದೇ ಧೂರ್ಜಟಿಯು ಮೂರು ಲೋಕದ ಸಂಪತ್ತಿನಿಂದ ಬುದ್ಧಿಗೆಟ್ಟ ಅಂಧಕಾಸುರನನ್ನು ತ್ರಿಶೂಲಾಗ್ರದಿಂದ ಎತ್ತಿ ಹಿಡಿದು ಸೂರ್ಯನ ಕಿರಣಗಳಿಂದಲೇ ಹತ್ತುಸಾವಿರ ವರ್ಷಗಳಕಾಲ ಕಾಯಿಸಿ ಅವನನ್ನು ಬತ್ತಿಸಲಿಲ್ಲವೆ ?

೧೧೧. ಬ್ರಹ್ಮಾದಿ ದೇವತೆಗಳೆಲ್ಲರೂ ನೋಡುತ್ತಿರುವಂತೆ ಮೂರು ಲೋಕಗಳನ್ನೂ ಜಯಿಸಿ ಮಹೋನ್ನತನಾಗಿದ್ದ ಕಾಮನನ್ನು ದೃಷ್ಟಿಕ್ಷೇಪ ಮಾತ್ರದಿಂದಲೆ ಈ ಮಹಾರುದ್ರನು ಅನಂಗಪದವಿಗೆ ಸಲ್ಲಿಸಲಿಲ್ಲವೆ ?

೧೧೨. ಆದುದರಿಂದ ಇಂತಹ ಬ್ರಹ್ಮಾದಿಗಳಿಗೂ ಏಕಕರ್ತನಾಗಿ, ಮೇಘವಾಹನನೆನಿಸಿ, ಅಚ್ಯುತನಾಗಿ, ವಿಶ್ವವನ್ನೇ ಸಂರಕ್ಷಣಮಾಡುವ ರಕ್ಷಾಮಣಿಯಾದ ಆ ಪರಶಿವನಲ್ಲಿಗೇ ಶರಣುಹೋಗು.''

೧೧೩. ಈ ಪ್ರಕಾರವಾಗಿ ಆ ಗೃಹಪತಿಯು ತಾಯಿತಂದೆಗಳ ಅನುಜ್ಞೆ

ಸ ಪ್ರಾಪ್ಯ ಕಾಶೀಂ ದುಷ್ಪ್ರಾಪಾಂ ಬ್ರಹ್ಮನಾರಾಯಣಾದಿಭಿಃ ।
ಮಹಾಸಂವರ್ತಸಂವೃತ್ತತಾಪಾದ್ವಿಶ್ವೇಶ ಪಾಲಿತಾಂ ॥ ೧೧೪ ॥
ಶಿರಸ್ವರ್ಧುನ್ಯಾ ಹಾರ ಯಷ್ಟ್ಯೇವರಾಜಿತಾಂ ಕಂಠಭೂಮಿಷು ।
ವಿಚಿತ್ರ ಗುಣಶಾಲಿನ್ಯಾ ಹಾರನೀಹಾರಗೌರಯಾ ॥ ೧೧೫ ॥
ಬಹುಸಂಸಾರಸಂತಾಪಸಂತಪ್ತಜನತೋದ್ಭವಂ ।
ವಾರಯಂತೀಂ ವರಣಯಾ ಛಿಂದಂತೀಮಸಿಧಾರಯಾ ॥ ೧೧೬ ॥
ಯಲ್ಲಭ್ಯತೇ ಚ ಕೈವಲ್ಯಂ ಸುದೃಢಾಷ್ಟಾಂಗಯೋಗತಃ ।
ವಿಕಾಸಯಂತೀಂ ತತ್ಸಮ್ಯಕ್ಕಾಶಿಕಾಂ ಯಾಂ ಜಗುರ್ಬುಧಾಃ ॥ ೧೧೭ ॥
ಸಂಸಾರತಾಪತಪ್ತಾಭ್ಯಾಂ ಲೋಚನಾಭ್ಯಾಂ ಸ ದೃಷ್ಟವಾನ್ ।
ಕರ್ಣಾಕರ್ಣಪ್ರಕೀರ್ಣಾಭ್ಯಾಂ ಪ್ರಾಗ್ಯಯೌ ಮಣಿಕರ್ಣಿಕಾಂ ॥ ೧೧೮ ॥
ತತ್ರ ಸ್ನಾತ್ವಾ ವಿಧಾನೇನ ದೃಷ್ಟ್ವಾ ವಿಶ್ವೇಶ್ವರಂ ವಿಭುಂ ।
ತ್ರೈಲೋಕ್ಯಪ್ರಾಣಿಸಂತ್ರಾಣಕಾರಿಣಂ ಪ್ರಣನಾಮಹ ॥ ೧೧೯ ॥

---

ಯನ್ನು ಪಡೆದು ಅವರನ್ನು ಬಗೆಬಗೆಯಾಗಿ ಆಶ್ವಾಸನಗೊಳಿಸಿ ಅಲ್ಲಿಂದ ಹೊರಟನು.

೧೧೪ ಹೀಗೆ ಹೊರಟು ಹರಿಬ್ರಹ್ಮಾದಿ ದೇವತೆಗಳಿಂದಲೂ ಹೊಂದಲಸದಳವಾಗಿ, ಪ್ರಾಕೃತಲಯದ ಕೋಟಲೆಗೆ ಸಿಕ್ಕದಂತೆ ಆ ವಿಶ್ವೇಶ್ವರನಿಂದ ಪರಿಪಾಲಿತವಾಗಿದ್ದ ಕಾಶೀಪಟ್ಟಣಕ್ಕೆ ಬಂದನು.

೧೧೫–೧೧೬. ವಿಚಿತ್ರವಾದ ಶುಭಗುಣಗಳನ್ನೊಳಗೊಂಡು, ಮಂಜಿನಂತೆ ಗೌರವರ್ಣವನ್ನು ತಳೆದು, ಆ ಪಟ್ಟಣದ ಕಂಠಪ್ರದೇಶಗಳಲ್ಲಿ ಪುಷ್ಪಹಾರವೂ ಎಂಬಂತೆ ವಿರಾಜಿಸುತ್ತಿರುವ ದೇವಗಂಗಾನದಿಯಿಂದಲಂಕೃತವಾಗಿ, ಅಪರಿಮಿತವಾದ ಸಂಸಾರದ ಸಂತಾಪದಿಂದ ಸಂತಪ್ತವಾದ ಜನರಿಂದುಂಟಾದ ಪಾಪವನ್ನೂ ತಾಪವನ್ನೂ ವರಣಾನದಿಯಿಂದ ತಡೆಗಟ್ಟಿ ಅಸೀನದಿಯ ಪ್ರವಾಹದಿಂದ ಛೇದಿಸುತ್ತಿರುವುದಾಗಿ ಆ ಕ್ಷೇತ್ರವು ಕಂಗೊಳಿಸುತ್ತಿದ್ದಿತು

೧೧೭–೧೧೮. ಅಷ್ಟಾಂಗಯೋಗಗಳಿಂದ ಪ್ರಯತ್ನಪುರಸ್ಸರವಾಗಿ ಲಭಿಸುವ ಕೈವಲ್ಯವನ್ನು ಪ್ರಕಾಶಗೊಳಿಸುವುದರಿಂದ ಕಾಶಿಕೆಯೆಂದು ಯಾವ ಪಟ್ಟಣವನ್ನು ಪಂಡಿತರು ಹೊಗಳಿದರೊ ಅಂತಹ ಕಾಶೀಪಟ್ಟಣವನ್ನು ಸಂಸಾರತಾಪದಿಂದ ಬೆಂದ ಕಣ್ಣುಗಳುಳ್ಳವನಾದ ಆ ಗೃಹಪತಿಯು ಕಂಡವನಾದನು. ತರುವಾಯ ಅವನು ಮೊದಲು ಕಿವಿಯಿಂದ ಕಿವಿಗೆ ಹರಡಿದ (ಕರ್ಣಾಕರ್ಣಿಕೆಯಾದ) ಯಶಸ್ಸನ್ನೂ ಮಾಹಾತ್ಮ್ಯವನ್ನೂ ಒಳಗೊಂಡ ಮಣಿಕರ್ಣಿಕೆಗೆ ಬಂದನು.

೧೧೯. ಅಲ್ಲಿ ವಿಧ್ಯುಕ್ತವಾಗಿ ಸ್ನಾನವನ್ನಾಚರಿಸಿ ಮೂರು ಲೋಕಗಳ

ಆಲೋಕ್ಯಾಲೋಕ್ಯ ತಲ್ಲಿಂಗಂ ತುತೋಷ ಹೃದಯೇ ಬಹು ।
ಪರಮಾನಂದಕಂದಾಖ್ಯಂ ಸ್ಫುಟಮೇತನ್ನ ಸಂಶಯಃ ॥ ೧೨೦ ॥
ಅಹೋ ನ ಮತ್ತೋ ಧನ್ಯೋಽಸ್ತಿ ತ್ರೈಲೋಕ್ಯೇ ಸ ಚರಾಚರೇ ।
ಯದದ್ರಾಕ್ಷಿಷಮದ್ಯಾಽಹಂ ಶ್ರೀಮದ್ವಿಶ್ವೇಶ್ವರಂ ವಿಭುಂ ॥ ೧೨೧ ॥
ತ್ರಿಲೋಕೀ ಸಾರಸರ್ವಸ್ವಂ ಪಿಂಡೀಭೂತಮಿದಂ ಕಿಲ ।
ಕಿಂ ವಾ ಪೀಯೂಷ ಪಿಂಡೋಽಯಮುದ್ಗತಃ ಕ್ಷೀರನೀರಧೇಃ ॥ ೧೨೨ ॥
ಆತ್ಮಾವಬೋಧಮಹಸಃ ಕಿಮಸೌ ಪ್ರಥಮಾಂಕುರಃ ।
ಬ್ರಹ್ಮಾನಂದಸುಕಂದೋ ವಾ ಕಿಮು ಬ್ರಹ್ಮರಸಾಯನಂ ॥ ೧೨೩ ॥
ಯೋಗಿಹೃತ್ಪದ್ಮನಿಲಯಂ ಯದನಾಕಾರಮುಚ್ಯತೇ ।
ತದಾಕಾರತ್ವಮಾಪೇದೇ ಕಿಮಿದಂ ಲಿಂಗಕೈತವಾತ್ ॥ ೧೨೪ ॥
ಬ್ರಹ್ಮಾಂಡ ಭಾಂಡಮಥವಾ ನಾನಾರತ್ನೌಘಪೂರಿತಂ ।
ಅಥವಾ ಮೋಕ್ಷವೃಕ್ಷಸ್ಯ ಫಲಮೇತನ್ನ ಸಂಶಯಃ ॥ ೧೨೫ ॥

---

ಚರಾಚರ ಪ್ರಾಣಿಗಳನ್ನೂ ಸಲಹುವವನಾದ ಆ ವಿಶ್ವೇಶ್ವರ ವಿಭುವನ್ನು ಸಂದರ್ಶಿಸಿ ನಮಸ್ಕರಿಸಿದನು.

೧೨೦–೧೨೧. ಆ ಗೃಹಪತಿಯು ಆ ಪಾರಮೇಶ್ವರಲಿಂಗವನ್ನು ಪುನಃ ಪುನಃ ನೋಡಿ ನೋಡಿ ಮನಸ್ಸಿನಲ್ಲಿಯೇ ಪರಮಾನಂದವನ್ನು ತಳೆದನು. ಅಲ್ಲದೆ ಆ ಸಂತೋಷಾಧಿಕ್ಯದಿಂದ ಅವನು "ಆಹ! ಈ ವಿಶ್ವೇಶ್ವರ ಲಿಂಗವು ಪರಮಾನಂದಕ್ಕೆ ಮೂಲವೆಂಬುದು ದಿಟ. ಇದರಲ್ಲಿ ಸಂಶಯವಿಲ್ಲ ಚರಾಚರತ್ಮಕವಾದ ಈ ಜಗತ್ತಿನಲ್ಲಿ ನನ್ನಷ್ಟು ಧನ್ಯರಾರೂ ಇಲ್ಲ. ಇಂದು ನಾನು, ಷಡ್ಗುಣೈಶ್ವರ್ಯಸಂಪನ್ನವಾಗಿ ಸರ್ವತ್ರ ವ್ಯಾಪಕವಾಗಿ ಬೆಳಗುತ್ತಿರುವ ಈ ವಿಶ್ವೇಶ್ವರ ಲಿಂಗವನ್ನು ಸಂದರ್ಶಿಸಿದೆನಷ್ಟೆ.

೧೨೨. ಮೂರು ಲೋಕಗಳ ಸಾರಸರ್ವಸ್ವವೇ ಈ ಲಿಂಗರೂಪದಿಂದ ಒಟ್ಟುಗೂಡಿ ಮೆರೆಯುತ್ತಿರುವುದಲ್ಲವೆ? ಅಥವಾ ಇದು ಕ್ಷೀರಸಮುದ್ರದಿಂದ ಉದ್ಭವಿಸಿದ ಅಮೃತದ ಉಂಡೆಯೊ?

೧೨೩. ಅಥವಾ ಆತ್ಮವನ್ನು ತಿಳಿಯಲು ಉಪಯುಕ್ತವಾದ ಜ್ಯೋತಿಯ ಮೊತ್ತಮೊದಲಿನ ಮೊಳಕೆಯೊ! ಅದೂ ಅಲ್ಲದಿದ್ದರೆ, ಬ್ರಹ್ಮಾನಂದಕ್ಕೆ ಮಂಗಳಕರವಾದ ಮೂಲಕಾರಣವೊ! ಅಥವಾ ಬ್ರಹ್ಮರಸಾಯನವೊ!

೧೨೪. ಹಾಗೂ ಅಲ್ಲದಿದ್ದರೆ, ಯಾವುದು ಯೋಗಿಗಳ ಹೃದಯಕಮಲದಲ್ಲಿ ನೆಲಸಿರುವುದೆಂದೂ, ನಿರಾಕಾರವಾದುದೆಂದೂ ಹೇಳಲ್ಪಡುತ್ತದೆಯೊ ಆ ನಿರ್ಗುಣಬ್ರಹ್ಮವು ಈ ಶಿವಲಿಂಗದ ವ್ಯಾಜದಿಂದ ಈ ರೀತಿ ಸಗುಣವಾಗಿ ಪ್ರಕಟಗೊಂಡಿದೆಯೊ ಏನೊ!

೧೨೫. ನಾನಾರತ್ನಸಮೂಹಗಳಿಂದ ತುಂಬಿದ ಬ್ರಹ್ಮಾಂಡ ಭಾಂಡವೇ

ನಿರ್ವಾಣಲಕ್ಷ್ಮ್ಯಾಃ ಕಿಮುಥ ಕೇಶಪಾಶಃ ಸುಪುಷ್ಪಯುಕ್ ।
ಕೈವಲ್ಯಮಲ್ಲೀವಲ್ಲ್ಯಾಃ ಕಿಂ ಸ್ತಬಕಃ ಸ್ತಾವಕಾರ್ಥದಃ ॥ ೧೨೬ ॥
ನಿಃಶ್ರೇಯಸಶ್ರಿಯಃ ಕಿಂವಾಽಽನಂದಕ್ರೀಡನಕಂದುಕಃ ।
ಅಪವರ್ಗೋದಯಾದ್ರೇಃ ಕಿಮುದಿಯಾಯ ಸುಧಾಕರಃ ॥ ೧೨೭ ॥
ಸಂಸಾರಮೋಹತಿಮಿರಭಿದುರಃ ಕಿಮಸೌ ರವಿಃ ।
ಕಿಮು ಕಲ್ಯಾಣರಮಣೀ ರಮ್ಯಶೃಂಗಾರದರ್ಪಣಃ ॥ ೧೨೮ ॥
ಅಜ್ಞಾತಂ ನ ಭವೇದನ್ಯತ್ಸರ್ವೇಷಾಂ ದೇಹಧಾರಿಣಾಂ ।
ಅನೇಕಕರ್ಮಬೀಜಾನಾಂ ಬೀಜಪೂರೋಽಯಮುದ್ಭುತಃ ॥ ೧೨೯ ॥
ವಿಶ್ವೇಷಾಂ ವಿಶ್ವಬೀಜಾನಾಂ ಕರ್ಮಾಖ್ಯಾನಾಂ ಲಯೋ ಯತಃ ।
ಅಸ್ಮಿನ್ನಿರ್ವಾಣದೇ ಲಿಂಗೇ ವಿಶ್ವಲಿಂಗಮಿದಂ ತತಃ ॥ ೧೩೦ ॥
ಮಮ ಭಾಗ್ಯೋದಯೇನೈವ ನಾರದೇನ ಮಹರ್ಷಿಣಾ ।
ತದಾಗತ್ಯ ತಥೋಕ್ತಂ ಯತ್ಕೃತಕೃತ್ಯೋಽಸ್ಮ್ಯಹಂ ತತಃ ॥ ೧೩೧ ॥

---

ಈ ಲಿಂಗವಾಗಿರುವುದೊ! ಅಥವಾ ಮೋಕ್ಷವೃಕ್ಷದ ನಿತ್ಯವೂ ಶುದ್ಧವೂ ಬುದ್ಧವೂ ಮುಕ್ತವೂ ಸ್ವಪ್ರಕಾಶಾನಂದಸ್ವರೂಪಯುಕ್ತವೂ ಆದ ಫಲವೇ ಈ ಶಿವಲಿಂಗ ವೆಂಬುದರಲ್ಲಿ ಸಂಶಯವಿಲ್ಲ

೧೨೬. ಅಥವಾ ಇದು ಮುಕ್ತಿಲಕ್ಷ್ಮಿಯ ಪುಷ್ಪಸಹಿತವಾದ ಕೇಶ ಪಾಶವೊ! ಭಕ್ತರ ಸರ್ವಾಭೀಷ್ಟಗಳನ್ನೂ ಸಲ್ಲಿಸುವ ಕೈವಲ್ಯವೆಂಬ ಮಲ್ಲಿಗೆ ಬಳ್ಳಿಯ ಹೂಗೊಂಚಲೊ!

೧೨೭–೧೨೮. ಹಾಗೂ ಅಲ್ಲದಿದ್ದರೆ, ಮೋಕ್ಷಲಕ್ಷ್ಮಿಯ ಆನಂದಕ್ರೀಡನದ ಚೆಂಡೊ! ಅಪವರ್ಗವೆಂಬ ಉದಯಾದ್ರಿಯಿಂದ ಉದಿಸಿದ ಚಂದ್ರನೊ! ಸಂಸಾರಭ್ರಾಂತಿಯೆಂಬ ಕತ್ತಲನ್ನು ಕಳೆಯುವ ಸೂರ್ಯನೊ! ಕಲ್ಯಾಣ ಲಕ್ಷ್ಮೀರಮಣಿಯ ರಮ್ಯವಾದ ಶೃಂಗಾರದರ್ಪಣವೊ!

೧೨೯. ಸಮಸ್ತದೇಹಧಾರಿಗಳಿಗೂ ಬೇರೆ ಇನ್ನಾವುದೂ ತಿಳಿಯದೆ ಹೋಗುವ ಅನೇಕ ಕರ್ಮಬೀಜಗಳಿಗೆ ಇದು ಅದ್ಭುತವಾದ ಬೀಜಪೂರವೊ! ಇದು ಸಮಸ್ತ ದೇಹಧಾರಿಗಳಿಗೂ ಅವರವರ ಸತ್ಕರ್ಮಾನುಷ್ಠಾನಾನುಸಾರ ವಾಗಿ ಫಲಗಳನ್ನು ಅನುಗ್ರಹಿಸುವಂತಹುದು.

೧೩೦. ನಂಬಿದ ಭಕ್ತರಿಗೆ ಮುಕ್ತಿಯನ್ನು ದೊರೆಯಿಸುವ ಈ ಲಿಂಗದಲ್ಲಿ ಪ್ರಪಂಚದ ಸಮಸ್ತ ಕರ್ಮಬೀಜಗಳೂ ಲಯವಾಗುವುದರಿಂದ ಇದು ವಿಶ್ವಲಿಂಗ ವೆಂದು ಪ್ರಸಿದ್ಧವಾಗಿದೆ.

೧೩೧. ನಾರದಮಹರ್ಷಿಯು ನನ್ನ ಭಾಗ್ಯವಶದಿಂದಲೆ ಸಂದರ್ಶನವನ್ನಿತ್ತು

ಇತ್ಯಾನಂದಾಽಮೃತರಸೈರ್ವಿಧಾಯ ಸಹಿ ಪಾರಣಂ ।
ತತಃ ಶುಭೇಽಹ್ನಿ ಸಂಸ್ಥಾಪ್ಯ ಲಿಂಗಂ ಸರ್ವಹಿತಪ್ರದಂ ॥ ೧೩೨ ॥
ಜಗ್ರಾಹ ನಿಯಮಾನ್ಘೋರಾನ್ದುಷ್ಕೃತಾ ನ ಕೃತಾತ್ಮನಾಂ ।
ಅಷ್ಟೋತ್ತರಶತೈಃ ಕುಂಭೈಃ ಪೂರ್ಣೈರ್ಗಂಗಾಽಮೃತದ್ರವೈಃ ॥ ೧೩೩ ॥
ಸಂಸ್ನಾಪ್ಯ ವಾಸಸಾ ಪೂತೈಃ ಪೂತಾತ್ಮಾ ಪ್ರತ್ಯಹಂ ಶಿವಂ ।
ನೀಲೋತ್ಪಲಮಯೀಂ ಮಾಲಾಂ ಸಮರ್ಪಯತಿ ಸೋಽನ್ವಹಂ ॥ ೧೩೪ ॥
ಅಷ್ಟಾಽಧಿಕಸಹಸ್ರೈಸ್ತು ಸುಮನೋಭಿರ್ವಿನಿರ್ಮಿತಾಂ ।
ಸಪಕ್ಷಾರ್ಧೇನ ಷಣ್ಮಾಸಂ ಕಂದಮೂಲಫಲಾಶನಃ ॥ ೧೩೫ ॥
ಶೀರ್ಣಪರ್ಣಾಽಶನಃ ಪಕ್ಷೇತ್ವಾಷಣ್ಮಾಸಂ ಬಭೂವ ಸಃ ।
ಷಣ್ಮಾಸಂ ವಾಯುಭಕ್ಷೋಽಭೂತ್ ಷಣ್ಮಾಸಂ ಜಲಬಿಂದುಭುಕ್ ॥
ಏವಂ ವರ್ಷದ್ವಯಂ ತಸ್ಯ ವ್ಯತಿಕ್ರಾಂತಂ ತಥಾ ಸತಃ ।
ಜನ್ಮತೋ ದ್ವಾದಶೇ ವರ್ಷೇ ತದ್ವಚೋ ನಾರದೇರಿತಂ ॥ ೧೩೭ ॥

---

ನನಗೆ ಆ ರೀತಿ ಎಚ್ಚರಿಕೆಯ ಮಾತುಗಳನ್ನು ಹೇಳಿದನು. ಅದರಿಂದ ನಾನು ಕೃತಕೃತ್ಯನಾದೆ ”

೧೩೨–೧೩೪. ಇಂತು ಆ ಗೃಹಪತಿಯು ಆನಂದಾಮೃತರಸದಲ್ಲಿ ಓಲಾಡಿ, ಪಾರಣೆಯನ್ನೆಸಗಿ, ಆ ತರುವಾಯ ಒಂದಾನೊಂದು ಶುಭದಿನದಲ್ಲಿ ಸಮಸ್ತ ಇಷ್ಟಾರ್ಥಗಳನ್ನೂ ದಯಪಾಲಿಸುವ ಶಿವಲಿಂಗಪ್ರತಿಷ್ಠೆಯನ್ನು ಮಾಡಿ, ಸ್ಥಿರ ಬುದ್ಧಿಯಿಲ್ಲದವರಿಗೆ ಕೈಕೊಳ್ಳಲಸದಳವಾದ ದುಷ್ಕರವೂ ಅತ್ಯಂತ ಘೋರವೂ ಆದ ನಿಯಮಗಳನ್ನು ಕೈಕೊಂಡನು. ಅವನು ಪ್ರತಿದಿನವೂ ಪವಿತ್ರ ಹೃದಯನಾಗಿ, ಬಹು ನಿರ್ಮಲವಾದ ಗಂಗಾಮೃತದ ನೂರೆಂಟು ಕುಂಭಗಳಿಂದ ಆ ಪರಮೇಶ್ವರಿಗೆ ಅಭಿಷೇಕವನ್ನು ಸಮರ್ಪಿಸಿ ಕನ್ನೈದಿಲೆಯ ಪುಷ್ಪಮಾಲಿಕೆಯನ್ನು ಒಪ್ಪಿಸುತ್ತಿದ್ದನು.

೧೩೫. ಆರು ತಿಂಗಳು ಏಳೂವರೆ ದಿನಗಳಕಾಲ ಕಂದಮೂಲ ಫಲಗಳನ್ನು ಮಾತ್ರ ಭುಜಿಸುತ್ತ ಅವನು ಆ ಶಿವನಿಗೆ ಎಂಟುಸಾವಿರ ಹೂಗಳೊಡಗೂಡಿದ ಪುಷ್ಪಮಾಲಿಕೆಗಳನ್ನೊಪ್ಪಿಸಿ ಪೂಜೆಯನ್ನು ಸಲ್ಲಿಸುತ್ತಿದ್ದನು.

೧೩೬. ಆ ತರುವಾಯ ಆರು ತಿಂಗಳಕಾಲ ಕೆಳಕ್ಕುದುರಿದ ಎಲೆಗಳನ್ನು ಭುಜಿಸುತ್ತಲೂ ಆ ಮೇಲಣ ಆರು ತಿಂಗಳಕಾಲ ವಾಯುವನ್ನು ಭಕ್ಷಿಸಿಕೊಂಡೂ ತರುವಾಯ ಆರು ತಿಂಗಳು ನೀರನ್ನು ಮಾತ್ರ ಸೇವಿಸುತ್ತಲೂ ಶಿವಪೂಜೆಯನ್ನು ನಡೆಸುತ್ತಿದ್ದನು.

೧೩೭. ಹೀಗೆ ಆ ಗೃಹಪತಿಯು ನಿಷ್ಠೆಯಿಂದ ಶಿವಪೂಜೆಯನ್ನೆಸಗುತ್ತಿರಲು

ಸತ್ಯಂ ಕರಿಷ್ಯನ್ನಿವ ತಮುಭ್ಯಗಾತ್ಕುಲಿಶಾಯುಧಃ ।
ಉವಾಚ ಚ ವರಂ ಬ್ರೂಹಿ ದದ್ಮಿ ತನ್ಮನಸಿ ಸ್ಥಿತಂ ॥ ೧೩೮ ॥
ಅಹಂ ಶತಕ್ರತುರ್ವಿಪ್ರ ಪ್ರಸನ್ನೋಽಸ್ಮಿ ಶುಭವ್ರತೈಃ ।
ಇತ್ಯಾಕರ್ಣ್ಯ ಮಹೇಂದ್ರಸ್ಯ ವಾಕ್ಯಂ ಮುನಿಕುಮಾರಕಃ ॥ ೧೩೯ ॥
ಉವಾಚ ಮಧುರಂ ಧೀರಃ ಕೀರವನ್ಮಧುರಾಕ್ಷರಂ ।
ಮಘವನ್ವೃತ್ರಶತ್ರೋ ತ್ವಾಂ ಜಾನೇ ಕುಲಿಶಪಾಣಿನಂ ॥ ೧೪೦ ॥
ನಾಽಹಂ ವೃಣೇ ವರಂ ತ್ವತ್ತಃ ಶಂಕರೋ ವರದೋಽಸ್ತಿಮೇ ॥ ೧೪೧ ॥

ಇಂದ್ರ ಉವಾಚ:—

ನಮತ್ತಃ ಶಂಕರೋಽಸ್ತ್ಯನ್ಯೋ ದೇವದೇವೋಽಸ್ಮ್ಯಹಂ ಶಿಶೋ ।
ವಿಹಾಯ ಬಾಲಿಶತ್ವಂ ತ್ವಂ ವರಂ ಯಾಚಸ್ವ ಮಾಂ ವರಂ ॥ ೧೪೨ ॥

ಬ್ರಾಹ್ಮಣ ಉವಾಚ:—

ಗಚ್ಛಾಽಹಲ್ಯಾಪತೇಸಾಧೋ ಗೋತ್ರಾರೇ ಪಾಕಶಾಸನ ।
ನ ಪ್ರಾರ್ಥಯೇ ಪಶುಪತೇರನ್ಯಂ ದೇವಾಂತರಂ ಸ್ಫುಟಂ ॥ ೧೪೩ ॥

---

ಎರಡು ವರ್ಷಗಳು ಕಳೆದುವು. ಆ ಮೇಲೆ ಆತನಿಗೆ ನಾರದನು ಹೇಳಿದ್ದಂತೆ ಹನ್ನೆರಡನೆಯ ವರ್ಷವು ತುಂಬಿತು.

೧೩೮. ನಾರದನಾಡಿದ ಆ ಮಾತನ್ನು ಯಥಾರ್ಥಗೊಳಿಸಲೋಸುಗವೊ ಎಂಬಂತೆ ಸಾಕ್ಷಾತ್ ಪರಮೇಶ್ವರನು ಮಹೇಂದ್ರನ ರೂಪವನ್ನು ಧರಿಸಿ ವಜ್ರಪಾಣಿಯಾಗಿ ಆ ಗೃಹಪತಿಗೆ ಕಾಣಿಸಿಕೊಂಡು, "ಅಯ್ಯಾ ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ. ನಾನು ಕೊಡುತ್ತೇನೆ.

೧೩೯–೧೪೧ ಎಲೈ ವಿಪ್ರನೆ, ನಾನೇ ಶತಕ್ರತುವಾದ ಮಹೇಂದ್ರನು. ಮಂಗಳಕರವಾದ ನಿನ್ನ ವ್ರತಗಳಿಂದ ನಾನು ಸಂತುಷ್ಟನಾಗಿದ್ದೇನೆ" ಎಂದು ನುಡಿದನು. ಈ ಮಾತುಗಳನ್ನು ಕೇಳಿ ಆ ಮುನಿಕುಮಾರಕನು ದಿಟ್ಟವಾಗಿ ಸವಿನುಡಿಯನ್ನಾಡುವ ಗಿಳಿಯಂತೆ ಬಹು ಮಧುರವಾಗಿ, "ಎಲೈ ವೃತ್ರಾಸುರ ಸಂಹಾರಕನಾದ ಮಹೇಂದ್ರನೆ, ವಜ್ರಧರನಾದ ನಿನ್ನನ್ನು ನಾಬಲ್ಲೆ. ನಿನ್ನಿಂದ ನಾನು ವರವನ್ನು ಅಪೇಕ್ಷಿಸುವುದಿಲ್ಲ ನನಗೆ ವರವನ್ನು ಕೊಡಲು ಶಂಕರನಿರುವನು" ಎಂದು ನುಡಿದನು

೧೪೨. ಇಂದ್ರನು ಹೇಳುತ್ತಾನೆ.—"ಮಗು, ನನಗಿಂತ ಬೇರೆಯವನಾದ ಶಂಕರನಾವನೂ ಇಲ್ಲ. ನಾನು ದೇವತೆಗಳಿಗೆಲ್ಲ ದೇವತೆಯು. ಈ ಹುಡುಗಾಟಿಕೆಯನ್ನು ಬಿಟ್ಟು ನಿನಗೆ ಬೇಕಾದ ವರವನ್ನು ಕೇಳಿಕೊ."

೧೪೩. ಬ್ರಾಹ್ಮಣನು ಹೇಳುತ್ತಾನೆ:—"ಅಯ್ಯಾ ಅಹಲ್ಯಾಪತಿಯೆ, ನೀನು ಬಹಳ ಒಳ್ಳೆಯವನಷ್ಟೆ. ಪರ್ವತಗಳಿಗೆಲ್ಲ ಶತ್ರುವೂ ಪಾಕಾಸುರನನ್ನು

ಇತಿ ತಸ್ಯ ವಚಃ ಶ್ರುತ್ವಾ ಕ್ರೋಧಸಂರಕ್ತಲೋಚನಃ ।
ಉದ್ಯಮ್ಯ ಕುಲಿಶಂ ಘೋರಂ ಭೀಷಯಾಮಾಸ ಬಾಲಕಂ ॥ ೧೪೪ ॥
ಸ ದೃಷ್ಟ್ವಾ ಬಾಲಕೋ ವಜ್ರಂ ವಿದ್ಯುಜ್ಜ್ವಾಲಾಶತಾಕುಲಂ ।
ಸ್ಮರನ್ನಾರದವಾಕ್ಯಂ ಚ ಮುಮೂರ್ಛ ಭಯವಿಹ್ವಲಃ ॥ ೧೪೫ ॥
ಅಥ ಗೌರೀಪತಿಃ ಶಂಭುರಾವಿರಾಸೀತ್ತಮೋನುದಃ ।
ಉತ್ತಿಷ್ಠೋತ್ತಿಷ್ಠ ಭದ್ರಂ ತೇ ಸ್ಪರ್ಶೈಃ ಸಂಜೀವಯನ್ನಿವ ॥ ೧೪೬ ॥
ಉನ್ಮೀಲ್ಯ ನೇತ್ರಕಮಲೇ ಸುಪ್ತೋ ಇವ ದಿವಾಕ್ಷಯೇ ।
ಅಪಶ್ಯದಗ್ರೇ ಚೋತ್ಥಾಯ ಶಂಭುಮರ್ಕಶತಾಧಿಕಂ ॥ ೧೪೭ ॥
ಭಾಲೇ ಲೋಚನಮಾಲೋಕ್ಯ ಕಂಠೇ ಕಾಲಂ ವೃಷಧ್ವಜಂ ।
ವಾಮಾಂಗಸನ್ನಿವಿಷ್ಟಾಽದ್ರಿತನಯಂ ಚಂದ್ರಶೇಖರಂ ॥ ೧೪೮ ॥
ಕಪರ್ದೇನ ವಿರಾಜಂತಂ ತ್ರಿಶೂಲಾಜಗವಾಯುಧಂ ।
ಸ್ಫುರತ್ಕರ್ಪೂರಗೌರಾಂಗಂ ಪರಿಣದ್ಧಗಜಾಽಜಿನಂ ॥ ೧೪೯ ॥

---

ಶಾಸನಮಾಡಿದವನೂ ಆದ ಮಹಾತ್ಮನಲ್ಲವೆ ನೀನು. ಆದರೆ, ನಾನು ಪರಮೇಶ್ವರನನ್ನುಳಿದು ಇತರ ದೇವತೆಯನ್ನು ವರಕ್ಕಾಗಿ ಪ್ರಾರ್ಥಿಸುವುದಿಲ್ಲ.''

೧೪೪. ಇಂತು ನುಡಿದ ಗೃಹಪತಿಯ ಮಾತುಗಳನ್ನು ಕೇಳಿ ಆ ಮಹೇಂದ್ರನು ಕೋಪದಿಂದ ಕೆಂಪಡರಿದ ಕಣ್ಣುಗಳುಳ್ಳವನಾಗಿ, ಮಹಾ ಘೋರವಾದ ತನ್ನ ವಜ್ರಾಯುಧವನ್ನು ಮೇಲಕ್ಕೆತ್ತಿ ಆ ಬಾಲಕನನ್ನು ಬಹುವಾಗಿ ಬೆದರಿಸಿದನು.

೧೪೫. ಬಾಲಕನಾದರೊ ನೂರಾರು ವಿದ್ಯುತ್ತುಗಳ ಜ್ವಾಲೆಗಳನ್ನೊಳಗೊಂಡು ಭಯಂಕರವಾಗಿ ತೋರುತ್ತಿದ್ದ ಆ ವಜ್ರಾಯುಧವನ್ನು ಕಂಡು, ಪೂರ್ವದಲ್ಲಿ ನಾರದಮುನಿಯು ನುಡಿದಿದ್ದ ಮಾತುಗಳನ್ನು ಸ್ಮರಿಸಿ ಭಯದಿಂದ ತತ್ತಳಿಸುತ್ತ ಮೂರ್ಛೆಹೊಂದಿದನು.

೧೪೬. ಬಳಿಕ ಗೌರೀಪತಿಯಾದ ಸಾಕ್ಷಾತ್ ಶಂಭುವು ಆ ಕುಮಾರಕನ ಅಜ್ಞಾನವನ್ನು ಕಳೆಯುವವನಾಗಿ ಅಲ್ಲಿಯೇ ಆವಿರ್ಭವಿಸಿ, ತನ್ನ ಕರಸ್ಪರ್ಶದಿಂದ ಅವನನ್ನು ಉಜ್ಜೀವನಗೊಳಿಸುವನೊ ಎಂಬಂತೆ, '' ವತ್ಸ, ನಿನಗೆ ಮಂಗಳವಾಗಲಿ ಏಳು ಏಳು'' ಎಂದು ನುಡಿದನು

೧೪೭. ಆಗ ಗೃಹಪತಿಯು ನಿದ್ರೆಕಳೆದೆದ್ದವನಂತೆ ಮೇಲಕ್ಕೆದ್ದು ಕಮಲದಂತೆ ಸುಂದರವಾದ ತನ್ನ ಕಣ್ಣುಗಳನ್ನು ತೆರೆದು, ನೂರಾರು ಸೂರ್ಯರನ್ನೂ ಮೀರಿ ಜಾಜ್ವಲ್ಯಮಾನವಾಗಿ ವಿರಾಜಿಸುತ್ತಿದ್ದ ಆ ಪರಮೇಶ್ವರನನ್ನು ತನ್ನ ಮುಂಗಡೆಯೇ ಕಂಡನು.

೧೪೮–೧೫೨. ಹಣೆಯಲ್ಲಿ ನಡುಗಣ್ಣನ್ನೂ, ಕಂಠದಲ್ಲಿ ಕಾಳಕೂಟದ ಚಿಹ್ನೆಯನ್ನೂ, ವೃಷಭವಾಹನವನ್ನೂ, ಎಡಗಡೆ ಕುಳಿತಿದ್ದ ಪಾರ್ವತಿಯನ್ನೂ

ಪರಿಜ್ಞಾಯ ಮಹಾದೇವಂ ಗುರುವಾಕ್ಯತ ಆಗಮಾತ್ ।
ಹರ್ಷಬಾಷ್ಪಾಕುಲಃ ಸನ್ನಕಂಠೋ ರೋಮಾಂಚಕಂಚುಕಃ ॥ ೧೫೦ ॥
ಕ್ಷಣಂ ಸ್ಥಗಿತವತ್ತಸ್ಥೌ ಚಿತ್ರಕೃತಿಮಪುತ್ರಕಃ ।
ಯಥಾ ತಥಾ ಸುಸಂಪನ್ನೋ ವಿಸ್ಮೃತ್ಯಾತ್ಮಾನಮೇವ ಚ ॥ ೧೫೧ ॥
ನ ಸ್ತೋತುಂ ನ ನಮಸ್ಕರ್ತುಂ ಕಿಂಚಿದ್ವಿಜ್ಞಪ್ತುಮೇವ ಚ ।
ಯದಾ ಸ ನ ಶಶಾಕಾಲಂ ತದಾ ಸ್ಮಿತ್ವಾಽಽಹ ಶಂಕರಃ ॥ ೧೫೨ ॥

ಈಶ್ವರ ಉವಾಚ :—

ಶಿಶೋ ಗೃಹಪತೇ ಶಕ್ರಾದ್ವಜ್ರೋದ್ಯತಪರಾದಹೋ ।
ಜ್ಞಾತೋ ಭೀತೋಽಸಿ ಮಾಭೈಷೀರ್ಜಿಜ್ಞಾಸಾ ತೇ ಕೃತಾ ಮಯಾ ॥ ೧೫೩ ॥
ಮಮ ಭಕ್ತಸ್ಯ ನೋ ಶಕ್ರೋ ನ ವಜ್ರಂ ನಾಂತಕೋಽಪಿ ವಾ ।
ಪ್ರಭವೇದಿಂದ್ರರೂಪೇಣ ಮಯೈವ ತ್ವಂ ಹಿ ಭಾಷಿತಃ ॥ ೧೫೪ ॥
ವರಂ ದದಾಮಿ ತೇ ಭದ್ರ ತ್ವಮಗ್ನಿಪದಭಾಗ್ಭವ ।
ಸರ್ವೇಷಾಮೇವ ದೇವಾನಾಂ ವದನಂ ತ್ವಂ ಭವಿಷ್ಯಸಿ ॥ ೧೫೫ ॥

---

ಒಡಗೊಂಡು ಕಪರ್ದ(ಜಟೆ) ದಿಂದ ಬೆಳಗಿ, ತ್ರಿಶೂಲವನ್ನೂ, ಪಿನಾಕಧನುಸ್ಸನ್ನೂ ಧರಿಸಿ, ಸ್ಫುರಿಸುತ್ತಿರುವ ಕರ್ಪೂರದಂತೆ ಬೆಳ್ಳಗಿರುವ ಮೈ ಬಣ್ಣವುಳ್ಳವನಾಗಿ ಗಜಾಜಿನವನ್ನುಟ್ಟು ಮೆರೆಯುತ್ತಿರುವ ಚಂದ್ರಶೇಖರನೂ, ಮಹಾದೇವನೂ ಆದ ಆ ಸ್ವಾಮಿಯನ್ನು ಗುರೂಪದೇಶದಿಂದಲೂ, ಆಗಮಪ್ರಮಾಣದಿಂದಲೂ ಅರಿತುಕೊಂಡು, ಆನಂದಾಶ್ರುಗಳಿಂದ ಆಕುಲನಾಗಿ ಕಂಠವುಡುಗಿ ರೋಮಾಂಚಗೊಂಡು ಒಂದು ಕ್ಷಣಕಾಲ ಚಿತ್ರದಲ್ಲಿ ಬರೆದಿಟ್ಟ ಗೊಂಬೆಯಂತೆ ಸ್ತಂಭಿತನಾಗಿ ನಿಂತಿದ್ದು, ಹೇಗೆಹೇಗೆಯೊ ಚೇತರಿಸಿಕೊಂಡು ಸ್ವಸ್ವರೂಪದ ಜ್ಞಾನವನ್ನು ಪಡೆದರೂ ಆ ಸ್ವಾಮಿಯನ್ನು ಸ್ತುತಿಸುವುದಕ್ಕೂ ನಮಸ್ಕರಿಸುವುದಕ್ಕೂ ಆತನಲ್ಲಿ ವಿಜ್ಞಾಪಿಸಿಕೊಳ್ಳುವುದಕ್ಕೂ ಸಮರ್ಥನಾಗದೆ ಸುಮ್ಮನೆ ನಿಂತಿದ್ದನು. ಆಗ ಶಂಕರನು ನಸುನಕ್ಕು, ಅವನನ್ನು ಕುರಿತು ಇಂತೆಂದನು.

೧೫೩–೧೫೪. ಈಶ್ವರನು ಹೇಳುತ್ತಾನೆ —"ಮಗೂ ಗೃಹಪತಿ! ನೀನು ವಜ್ರಾಯುಧವನ್ನು ಎತ್ತಿಹಿಡಿದ ಆ ಮಹೇಂದ್ರನಿಗೆ ಬಹಳವಾಗಿ ಹೆದರಿಹೋದೆ. ಅಂಜದಿರು. ನಾನು ಎಲ್ಲವನ್ನೂ ವಿಚಾರಮಾಡಿದ್ದೇನೆ. ನನ್ನ ಭಕ್ತರಾದವರನ್ನು ಶಕ್ರನಾಗಲಿ, ಅವನ ವಜ್ರಾಯುಧವಾಗಲಿ, ಕಡೆಗೆ ಯಮನೇ ಆಗಲಿ ಭೀತಿಗೊಳಿಸಲು ಸಮರ್ಥರಲ್ಲ. ನಾನೇ ಮಹೇಂದ್ರನ ರೂಪವನ್ನು ತಳೆದು ನಿನ್ನನ್ನು ಆ ರೀತಿ ಭಯಗೊಳಿಸಿದೆನು.

೧೫೫. ಭದ್ರ, ಈಗ ನಾನು ನಿನಗೆ ವರವನ್ನನುಗ್ರಹಿಸುತ್ತೇನೆ. ಇಂದಿನಿಂದ

ಸರ್ವೇಷಾಮೇವ ಭೂತಾನಾಂ ತ್ವಮಗ್ನೇಽಂತಶ್ಚರೋ ಭವ ।
ಧರ್ಮರಾಜೇಂದ್ರಯೋರ್ಮಧ್ಯೇ ದಿಗೀಶೋ ರಾಜ್ಯಮಾಪ್ನುಹಿ ॥ ೧೫೬ ॥
ತ್ವಯೇದಂ ಸ್ಥಾಪಿತಂ ಲಿಂಗಂ ತವ ನಾಮ್ನಾ ಭವಿಷ್ಯತಿ ।
ಅಗ್ನೀಶ್ವರ ಇತಿ ಖ್ಯಾತಂ ಸರ್ವತೇಜೋಽಭಿಬೃಂಹಣಂ ॥ ೧೫೭ ॥
ಅಗ್ನೀಶ್ವರಸ್ಯ ಭಕ್ತಾನಾಂ ನ ಭಯಂ ವಿದ್ಯುದಗ್ನಿಜಂ ।
ಅಗ್ನಿಮಾಂದ್ಯಭಯಂ ನೈವ ನಾಽಕಾಲಮರಣಂ ಕ್ವಚಿತ್ ॥ ೧೫೮ ॥
ಅಗ್ನೀಶ್ವರಂ ಸಮಭ್ಯರ್ಚ್ಯ ಕಾಶ್ಯಾಂ ಸರ್ವಸಮೃದ್ಧಿದಂ ।
ಅನ್ಯತ್ರಾಽಪಿ ಮೃತೋ ದೈವಾದಗ್ನಿಲೋಕೇ ಮಹೀಯತೇ ॥ ೧೫೯ ॥
ತತಃ ಕಾಶೀಂ ಪುನಃ ಪ್ರಾಪ್ಯ ಕಲ್ಪಾಂತೇ ಮೋಕ್ಷಮಾಪ್ನುಯಾತ್ ।
ವೀರೇಶ್ವರಸ್ಯ ಪೂರ್ವೇಣ ಗಂಗಾಯಾಃ ಪಶ್ಚಿಮೇ ತಟೇ ॥ ೧೬೦ ॥
ಅಗ್ನೀಶ್ವರಂ ಸಮಾರಾಧ್ಯ ವಹ್ನಿಲೋಕೇ ವಸೇನ್ನರಃ ।
ಪಿತೃಭ್ಯಾಂ ಸ್ವಜನೈಃ ಸಾರ್ಧಂ ಮಿತ್ರಬಂಧುಸಮಾಯುತಃ ॥ ೧೬೧ ॥

---

ನೀನು ಅಗ್ನಿಯ ಪದವಿಯನ್ನು ಪಡೆ. ಇನ್ನು ಮುಂದೆ ಸಮಸ್ತ ದೇವತೆಗಳಿಗೂ ನೀನೆ ಮುಖವಾಗಿರುತ್ತೀಯೆ.

೧೫೬. ಎಲೈ ಅಗ್ನಿಯೆ, ಇಂದಿನಿಂದ ನೀನು ಸಮಸ್ತ ಭೂತಗಳಲ್ಲಿಯೂ ಅಂತರ್ಯಾಮಿಯಾಗಿ ಸಂಚರಿಸುತ್ತಿರು. ಧರ್ಮರಾಜನಾದ ಯಮ ಮತ್ತು ಇಂದ್ರರ ನಡುವೆ ನೀನು ದಿಗೀಶ್ವರನಾಗಿ ರಾಜ್ಯವನ್ನು ಪಡೆ.

೧೫೭. ನೀನು ಸ್ಥಾಪಿಸಿದ ಈ ಶಿವಲಿಂಗವು ನಿನ್ನ ಹೆಸರಿನಿಂದಲೆ ಸಮಸ್ತ ಭಕ್ತರ ತೇಜಸ್ಸನ್ನೂ ವೃದ್ಧಿಗೊಳಿಸುವುದಾಗಿ ಅಗ್ನೀಶ್ವರವೆಂದು ಪ್ರಸಿದ್ಧವಾಗಲಿ.

೧೫೮. ಈ ಅಗ್ನೀಶ್ವರಲಿಂಗವನ್ನು ಪೂಜಿಸುವ ಭಕ್ತರಿಗೆ ಬೆಂಕಿ ಸಿಡಿಲುಗಳಿಂದ ಯಾವ ಭಯವೂ ಇರುವುದಿಲ್ಲ. ಶರೀರದಲ್ಲಿ ಅಗ್ನಿಮಾಂದ್ಯದ ಭೀತಿಯಾಗಲಿ ಅಕಾಲಮರಣವಾಗಲಿ ಎಂದಿಗೂ ಉಂಟಾಗುವುದಿಲ್ಲ.

೧೫೯. ಈ ಕಾಶೀ ಕ್ಷೇತ್ರದಲ್ಲಿ ಸಕಲಸಮೃದ್ಧಿಯನ್ನೂ ಅನುಗ್ರಹಿಸುವ ಅಗ್ನೀಶ್ವರ ಲಿಂಗವನ್ನು ವಿಧ್ಯುಕ್ತವಾಗಿ ಪೂಜಿಸಿದವನು ಎಲ್ಲಿಯೇ ಮೃತಿ ಹೊಂದಿದರೂ ಅಗ್ನಿಲೋಕದಲ್ಲಿ ಭೋಗಭಾಗ್ಯಗಳನ್ನು ಅನುಭವಿಸುತ್ತಾನೆ.

೧೬೦–೧೬೧. ಆ ತರುವಾಯ ಅವನು ಮತ್ತೆ ಕಾಶೀಪಟ್ಟಣವನ್ನೇ ಸೇರಿ ಸುಖವಾಗಿದ್ದು ಕಲ್ಪಾಂತದಲ್ಲಿ ಮೋಕ್ಷವನ್ನು ಪಡೆಯುತ್ತಾನೆ. ವೀರೇಶ್ವರನಿಗೆ ಪೂರ್ವದಿಕ್ಕಿನಲ್ಲಿ ಗಂಗಾನದಿಯ ಪಶ್ಚಿಮತೀರದಲ್ಲಿ ನಿನ್ನಿಂದ ಪ್ರತಿಷ್ಠಿತವಾಗಿರುವ ಅಗ್ನೀಶ್ವರ ಲಿಂಗವನ್ನು ಸಮಾರಾಧಿಸಿದವನು ತಾಯಿತಂದೆಗಳಿಂದಲೂ ಸ್ವಜನರಿಂದಲೂ ಮಿತ್ರರಿಂದಲೂ ಬಂಧುಗಳಿಂದಲೂ ಕೂಡಿದವನಾಗಿ ವಹ್ನಿಲೋಕದಲ್ಲಿ ವಾಸಮಾಡುತ್ತಾನೆ.

ವಿಮಾನಮಿದಮಾರುಹ್ಯ ಪ್ರಯಾಹ್ಯೇವ ದಿಶಃ ಪತೇ ।
ಇತ್ಯುಕ್ತ್ವಾನೀಯ ತದ್ಬಂಧೂನ್ ಪಿತ್ರೋಶ್ಚ ಪರಿಪಶ್ಯತೋಃ ।
ದಿಕ್ಪತಿತ್ವೇಽಭಿಷಿಚ್ಯಾಽಗ್ನಿಂ ತತ್ರ ಲಿಂಗೇ ಶಿವೋಽವಿಶತ್ ॥ ೧೬೨ ॥

ಗಣಾವೂಚತುಃ :–

ಇತ್ಥಮಗ್ನಿಸ್ವರೂಪಂ ತೇ ಶಿವಶರ್ಮನ್ಪ್ರವರ್ಣಿತಂ ।
ಕಿಮನ್ಯಚ್ಛ್ರೋತುಕಾಮೋಽಸಿ ಕಥಯಾವಸ್ತದೀರಯ ॥ ೧೬೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ವಹ್ನಿಲೋಕವರ್ಣನಂ" ನಾಮೈಕಾದಶೋಽಧ್ಯಾಯಃ

---

೧೬೨. ಎಲೈ ಗೃಹಪತಿಯೆ, ಈಗ ನೀನು ದಿಕ್ಪತಿಯಾಗಿದ್ದೀಯೆ. ಅಗ್ನಿಯಾದ ನೀನು ಇದೊ ಈ ವಿಮಾನವನ್ನೇರಿ ನಿನ್ನ ಲೋಕಕ್ಕೆ ಹೊರಡು" ಎಂದು ನುಡಿದು ಆ ಪರಮೇಶ್ವರನು ಆ ಗೃಹಪತಿಯ ಬಂಧುಗಳನ್ನೂ ತಾಯಿ ತಂದೆಗಳನ್ನೂ ಕರೆತಂದು ಅವರೆಲ್ಲರೂ ನೋಡುತ್ತಿರುವಂತೆಯೆ ಅವನನ್ನು ದಿಕ್ಪತಿಯಾದ ಅಗ್ನಿಯನ್ನಾಗಿ ಅಭಿಷೇಚನಮಾಡಿ, ಆ ತರುವಾಯ ಅದೇ ಲಿಂಗದಲ್ಲಿಯೇ ಅಂತರ್ಧಾನವಾದನು.

೧೬೩. ಗಣಗಳು ಹೇಳುತ್ತಾರೆ:—ಅಯ್ಯಾ ಶಿವಶರ್ಮನೆ, ಈ ಪ್ರಕಾರವಾಗಿ ನಿನಗೆ ಅಗ್ನಿಲೋಕವನ್ನೂ ಅಗ್ನಿಸ್ವರೂಪವನ್ನೂ ವರ್ಣಿಸಿ ಹೇಳಿದ್ದಾಯಿತು. ಮತ್ತೇನನ್ನು ಕೇಳಲಪೇಕ್ಷಿಸುತ್ತೀಯೆ? ಕೇಳು, ಹೇಳುತ್ತೇವೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ವಹ್ನಿಲೋಕವರ್ಣನ"ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದ್ವಾದಶೋಽಧ್ಯಾಯಃ

## ನಿರ್ಋತಿವರುಣಲೋಕವರ್ಣನಂ

ಶಿವಶರ್ಮೋವಾಚ :—

ನೈರ್ಋತಾದೀನ್ ಕ್ರಮಾಲ್ಲೋಕಾನಾಖ್ಯಾತಂ ಪುರುಷೋತ್ತಮೌ ।
ಪುರುಷೋತ್ತಮಪಾದಾಬ್ಜಪರಾಗೋದ್ಧೂಸರಾಲಕೌ ॥ ೧ ॥

ಗಣಾವೂಚತುಃ :—

ಆಕರ್ಣಯ ಮಹಾಭಾಗ ಸಂಯಮಿನ್ಯಾಃ ಪುರೀಂ ಪರಾಂ ।
ದಿಕ್ಪತೇರ್ನಿರ್ಋತಸ್ಯಾಽಸೌ ಪುಣ್ಯಾ ಪುಣ್ಯಜನೋಷಿತಾ ॥ ೨ ॥
ರಾಕ್ಷಸಾ ನಿವಸಂತ್ಯಸ್ಯಾಮಪರದ್ರೋಹಿಣಃ ಸದಾ ।
ಜಾತಿಮಾತ್ರೇಣ ರಕ್ಷಾಂಸಿ ವೃತ್ತ್ಯಾಃ ಪುಣ್ಯಜನಾ ಇಮೇ ॥ ೩ ॥
ಸ್ಮೃತ್ಯುಕ್ತಶ್ರುತಿವರ್ತ್ಮಾನೋ ಜಾತವರ್ಣಾವರೇಷ್ವಪಿ ।
ನಾದ್ರಿಯಂತೇಽನ್ನಪಾನಾನಾಮಸ್ಮೃತ್ಯುಕ್ತಂ ಕದಾಚನ ॥ ೪ ॥

---

## ಕನ್ನಡದ ಅನುವಾದ

### ನಿರ್ಋತಿವರುಣಲೋಕವರ್ಣನ

೧. ಶಿವಶರ್ಮನು ಕೇಳುತ್ತಾನೆ:— ಅಯ್ಯಾ ಪುರುಷೋತ್ತಮರೆ, ಸಾಕ್ಷಾತ್ ಪುರುಷೋತ್ತಮನ ಪಾದಕಮಲದ ಧೂಳಿಯನ್ನು ಮುಡಿಯಲ್ಲಿ ತಾಳಿರುವ ಭಕ್ತಶಿಖಾಮಣಿಗಳಾದ ನೀವು ಇನ್ನು ಮುಂದೆ ನೈರ್ಋತ್ಯವೇ ಮೊದಲಾದ ಲೋಕಗಳ ವಿಚಾರವನ್ನು ನನಗೆ ತಿಳಿಸುವವರಾಗಿರಿ.

೨. ಗಣಗಳು ಹೇಳುತ್ತಾರೆ —ಅಯ್ಯಾ ಮಹಾಭಾಗನೆ, ಆಲಿಸು. ಶ್ರೇಷ್ಠವಾದ ಈ ಸಂಯಮಿನೀಪಟ್ಟಣದ ಮುಂದೆಯೆ ಪಶ್ಚಿಮದಿಕ್ಕಿಗೆ ಒಡೆಯನಾದ ನಿರ್ಋತಿಯ ಪಟ್ಟಣವಿರುವುದು. ಇಲ್ಲಿ ಸದಾಚಾರಸಂಪನ್ನರಾದ ಧಾರ್ಮಿಕರೆನಿಸಿದ ಪುಣ್ಯಜನರು ವಾಸವಾಗಿದ್ದಾರೆ.

೩. ಈ ಲೋಕದಲ್ಲಿ ಯಾವಾಗಲೂ ಪರರಿಗೆ ದ್ರೋಹವನ್ನು ಎಣಿಸದಿರುವ ರಾಕ್ಷಸರು ವಾಸಮಾಡುತ್ತಿರುತ್ತಾರೆ. ಇವರು ಜಾತಿ ಮಾತ್ರದಿಂದ ರಾಕ್ಷಸರೇ ಹೊರತು ನಡತೆಯಲ್ಲಿ ಪುಣ್ಯವಂತರೇ ಆಗಿರುತ್ತಾರೆ.

೪. ಸ್ಮೃತ್ಯುಕ್ತವಾದ ಮತ್ತು ವೇದೋಕ್ತವಾದ ಮಾರ್ಗದಲ್ಲಿಯೆ ನಡೆಯುವವರಾಗಿದ್ದರೂ ಇವರು ಅಧಮವರ್ಣಗಳಲ್ಲಿ ಜನಿಸಿದವರು. ಹೀಗಿದ್ದರೂ ಸ್ಮೃತಿಗಳಲ್ಲಿ ಉಕ್ತವಾಗಿಲ್ಲದ ಅನ್ನಪಾನಗಳನ್ನು ಭುಜಿಸುವುದಿಲ್ಲ.

ಪರದಾರಪರದ್ರವ್ಯಪರದ್ರೋಹಪರಾಙ್ಮುಖಾಃ ।
ಜಾತಾ ಜಾತೌ ನಿಕೃಷ್ಟಾಯಾಮಪಿ ಪುಣ್ಯಾನುಸಾರಿಣಃ ॥ ೫ ॥
ದ್ವಿಜಾತಿಭಕ್ತ್ಯುತ್ಪನ್ನಾರ್ಥೈರಾತ್ಮಾನಂ ಪೋಷಯಂತಿ ಯೇ ।
ಸದಾ ಸಂಕುಚಿತಾಂಗಾಶ್ಚ ದ್ವಿಜಸಂಭಾಷಣಾದಿಷು ॥ ೬ ॥
ಆಹೂತಾ ವಸ್ತ್ರವದನಾ ವದಂತಿ ದ್ವಿಜಸನ್ನಿಧೌ ।
ಜಯ ಜೀವ ಭಗೋ ನಾಥ ಸ್ವಾಮಿನ್ನಿತಿ ಹಿ ವಾದಿನಃ ॥ ೭ ॥
ತೀರ್ಥಸ್ನಾನಪರಾ ನಿತ್ಯಂ ನಿತ್ಯಂ ದೇವಪರಾಯಣಾಃ ।
ದ್ವಿಜೇಷು ನಿತ್ಯಂ ಪ್ರಣತಾಃ ಸ್ವನಾಮಾಖ್ಯಾನಪೂರ್ವಕಂ ॥ ೮ ॥
ದಮದಾನದಯಾಕ್ಷಾಂತಿಶೌಚೇಂದ್ರಿಯವಿನಿಗ್ರಹಾಃ ।
ಅಸ್ತೇಯಸತ್ಯಾಽಹಿಂಸಾಶ್ಚ ಸರ್ವೇಷಾಂ ಧರ್ಮಹೇತವಃ ॥ ೯ ॥
ಅವಶ್ಯೇಷು ಸದೋದ್ಯುಕ್ತಾ ಯೇ ಜಾತಾ ಯತ್ರ ಕುತ್ರಚಿತ್ ।
ಸರ್ವಭೋಗಸಮೃದ್ಧಾಸ್ತೇ ವಸಂತ್ಯತ್ರ ಪುರೋತ್ತಮೇ ॥ ೧೦ ॥

---

೫. ಇವರು ನಿಕೃಷ್ಟಜಾತಿಗಳಲ್ಲಿ ಜನಿಸಿದವರಾದರೂ ಪರಸ್ತ್ರೀ ಪರದ್ರವ್ಯ ಪರದ್ರೋಹಗಳಲ್ಲಿ ತೊಡಗದೆ ಪುಣ್ಯಕರ್ಮಗಳನ್ನೇ ಮಾಡಿಕೊಂಡಿರುವವರು.

೬. ಬ್ರಹ್ಮ ಕ್ಷತ್ರ ವೈಶ್ಯ ಜಾತೀಯರನ್ನು ಶುಶ್ರೂಷೆಮಾಡುವುದರಿಂದ ದೊರೆತ ದ್ರವ್ಯದಿಂದ ಯಾರು ಉದರಂಭರಣವನ್ನು ಮಾಡಿಕೊಂಡಿರುತ್ತಾರೆಯೊ, ಯಾರು ಬ್ರಾಹ್ಮಣರೊಡನೆ ಮಾತನಾಡುವಾಗ ನಮ್ರತೆಯಿಂದ ನಡೆದುಕೊಳ್ಳುತ್ತಾರೆಯೊ ಅವರೆಲ್ಲರೂ ಈ ನೈರ್ಋತಲೋಕದಲ್ಲಿ ನೆಲಸುತ್ತಾರೆ

೭–೯. ಕರೆದೊಡನೆಯೆ ಬಾಯಿಗೆ ಬಟ್ಟೆಯನ್ನು ತೆರೆಮಾಡಿಕೊಂಡು ದ್ವಿಜಸನ್ನಿಧಿಯಲ್ಲಿ ಜಯ, ಚಿರಂಜೀವ, ಧನಿ, ಒಡೆಯ, ಪ್ರಭು ಎಂದು ವಿನಯದಿಂದ ನುಡಿಯುವ, ತೀರ್ಥಸ್ನಾನಪರಾಯಣರಾಗಿ ಅನುದಿನವೂ ದೇವಪೂಜಾಧುರಂಧರರಾಗಿ, ತಮ್ಮ ಹೆಸರನ್ನು ಹೇಳಿಕೊಂಡು ಬ್ರಾಹ್ಮಣರನ್ನು ನಮಸ್ಕರಿಸುವವರಾಗಿ, ಬಹಿರಿಂದ್ರಿಯನಿಗ್ರಹದಿಂದ ಧೀರರೆನಿಸಿ ದಯೆ, ತಾಳ್ಮೆ, ಶೌಚ, ಅಂತರಿಂದ್ರಿಯನಿಗ್ರಹ, ನಿಷ್ಠೆ, ಸತ್ಯಸಂಧತೆ, ಅಹಿಂಸೆ, ಧರ್ಮನಿಷ್ಠೆಗಳುಳ್ಳವರಾಗಿ, ಸಮಸ್ತಧರ್ಮಕಾರ್ಯಗಳಿಗೂ ಕಾರಣಭೂತರೆನಿಸಿ ಬಾಳಿದವರು ಈ ಲೋಕದಲ್ಲಿ ವಾಸಮಾಡುತ್ತಾರೆ.

೧೦. ಅಯ್ಯಾ ಶಿವಶರ್ಮನೆ, ಆವಶ್ಯಕವಾದ ಸತ್ಕರ್ಮಾನುಷ್ಠಾನಗಳಲ್ಲಿ ಸತತವೂ ಉದ್ಯುಕ್ತರಾಗಿ, ಯಾವೆಡೆಯಲ್ಲಿ ಹುಟ್ಟಿದ್ದರೂ ಸರಿಯೆ, ಆ ಜನರು ಈ ನೈರ್ಋತಲೋಕದಲ್ಲಿ ಸರ್ವಭೋಗಸಮೃದ್ಧರಾಗಿ ವಾಸಮಾಡುತ್ತಾರೆ.

ಮ್ಲೇಚ್ಛಾ ಅಪಿ ಸುತೀರ್ಥೇಷು ಯೇ ಮೃತಾ ನಾಽತ್ಮಘಾತಕಾಃ ।
ವಿಹಾಯ ಕಾಶೀಂ ನಿರ್ವಾಣವಿಶ್ರಾಣಾಂತೇಽತ್ರ ಭೋಗಿನಃ ॥ ೧೧ ॥
ಅಂಧಂತಮೋ ವಿಶೇಯುಸ್ತೇ ಯೇ ಚೈವಾತ್ಮಹನೋ ಜನಾಃ ।
ಭುಕ್ತ್ವಾ ನಿರಯಸಾಹಸ್ರಂ ತೇ ಚ ಸ್ಯುರ್ಗ್ರಾಮಸೂಕರಾಃ ॥ ೧೨ ॥
ಆತ್ಮಘಾತೋ ನ ಕರ್ತವ್ಯಸ್ತಸ್ಮಾತ್ಕ್ವಾಽಪಿ ವಿಪಶ್ಚಿತಾ ।
ಇಹಾಽಪಿ ಚ ಪರತ್ರಾಽಪಿ ನ ಶುಭಾನ್ಯಾತ್ಮಘಾತಿನಾಂ ॥ ೧೩ ॥
ಯಥೇಷ್ಟಮರಣಂ ಕೇಚಿದಾಹುಸ್ತತ್ತ್ವಾವಬೋಧಕಾಃ ।
ಪ್ರಯಾಗೇ ಸರ್ವತೀರ್ಥಾನಾಂ ರಾಜ್ಞಿ ಸರ್ವಾಽಭಿಲಾಷದೇ ॥ ೧೪ ॥
ಅಂತ್ಯಜಾ ಅಪಿ ಯೇ ಕೇಚಿದ್ದಯಾಧರ್ಮಾಽನುಸಾರಿಣಃ ।
ಪರೋಪಕೃತಿನಿಷ್ಠಾಸ್ತೇ ವಸಂತ್ಯತ್ರ ತು ಸತ್ತಮಾಃ ॥ ೧೫ ॥
ಅಸ್ಯ ಸ್ವರೂಪಂ ವಕ್ಷ್ಯಾಮೋ ದಿಕ್ಪತೇಃ ಕ್ಷಣತಃ ಶೃಣು ।
ಮಧ್ಯೇ ವಿಂಧ್ಯಾಽಟವಿ ಪುರಾ ಪಕ್ವಣಸ್ಥಜನಾಽಗ್ರಣೀಃ ॥ ೧೬ ॥

---

೧೧. ಆತ್ಮಹತ್ಯೆಯನ್ನುಳಿದು ತೀರ್ಥಕ್ಷೇತ್ರಗಳಲ್ಲಿ ಮೃತಿಪಟ್ಟ ಮ್ಲೇಚ್ಛರೂ ಸಹ ಈ ಲೋಕದಲ್ಲಿ ವಾಸಮಾಡುವರು. ಕಾಶೀಕ್ಷೇತ್ರದಲ್ಲಿ ಮಾತ್ರ ಮೃತಿ ಹೊಂದಿದರೆ ಮುಕ್ತಿಯು ದೊರಕುವುದೇ ಹೊರತು ಹಾಗೆ ಮೃತಿಪಟ್ಟವರು ಈ ಲೋಕಕ್ಕೆ ಬರುವುದಿಲ್ಲ.

೧೨. ಅಯ್ಯಾ ಬ್ರಾಹ್ಮಣನೆ! ಆತ್ಮಹತ್ಯೆಯನ್ನು ಮಾಡಿಕೊಳ್ಳುವ ಜನರು ಅಂಧತಾಮಿಸ್ರವೆಂಬ ನರಕವನ್ನು ಸೇರಿ, ಆ ನರಕವನ್ನೇ ಅಲ್ಲದೆ ಇನ್ನೂ ಒಂದು ಸಾವಿರ ನರಕಗಳನ್ನನುಭವಿಸಿ, ಆ ತರುವಾಯ ಈ ಭೂಮಿಯಲ್ಲಿ ಹಳ್ಳಿಯ ಹಂದಿಗಳಾಗಿ ಹುಟ್ಟುತ್ತಾರೆ.

೧೩. ಆದುದರಿಂದ ಪಂಡಿತನಾದವನು ಎಲ್ಲಿಯೂ ಆತ್ಮಹತ್ಯೆಯನ್ನು ಮಾಡಿಕೊಳ್ಳತಕ್ಕದ್ದಲ್ಲ. ಆತ್ಮಘಾತುಕರಿಗೆ ಇಹಪರಗಳೆರಡರಲ್ಲಿಯೂ ಅಶುಭಗಳೇ ಸಂಭವಿಸುತ್ತವೆ.

೧೪ ತತ್ವವನ್ನು ಬೋಧಿಸುವವರು ಕೆಲವರು ಸರ್ವತೀರ್ಥರಾಜವೆನಿಸಿ ಸಮಸ್ತ ಅಭೀಷ್ಟಗಳನ್ನೂ ದೊರಕಿಸುವ ಪ್ರಯಾಗಕ್ಷೇತ್ರದಲ್ಲಿ ಇಚ್ಛಾಮರಣವು ಶ್ರೇಷ್ಠವೆಂದು ಹೇಳುತ್ತಾರೆ.

೧೫. ಅದಂತಿರಲಿ; ಧರ್ಮಮಾರ್ಗಾನುಸಾರಿಗಳಾಗಿ ಪರೋಪಕಾರದಲ್ಲಿಯೆ ತೊಡಗಿರುವ ಉತ್ತಮರಾದ ಅಂತ್ಯಜರಾರುಂಟೊ ಅವರಿಗೂ ಈ ಲೋಕದಲ್ಲಿ ವಾಸವುಂಟು.

೧೬–೧೮. ಇನ್ನು ದಿಕ್ಪತಿಯಾದ ಈ ನಿರ್ಋತಿಯ ಸ್ವರೂಪವನ್ನು ಹೇಳುತ್ತೇವೆ. ಗಮನವಿಟ್ಟುಕೇಳು. ಪೂರ್ವದಲ್ಲಿ ವಿಂಧ್ಯಾಟವಿಯ ಮಧ್ಯಪ್ರದೇಶ

ಪಲ್ಲೀಪತಿರಭೂದುಗ್ರಃ ಪಿಂಗಾಕ್ಷ ಇತಿ ವಿಶ್ರುತಃ ।
ನಿರ್ವಿಂಧ್ಯಾಯಾಸ್ತಟೇ ಶೂರಃ ಕ್ರೂರಕರ್ಮಪರಾಙ್ಮುಖಃ ॥ ೧೭ ॥
ಘಾತಯೇದ್ದೂರಸಂಸ್ಥೋಽಪಿ ಯಃ ಪಾಂಥಪರಿಪಂಥಿನಃ ।
ವ್ಯಾಘ್ರಾದೀನ್ ದುಷ್ಟಸತ್ವಾಂಶ್ಚ ಸಹಿನಸ್ತಿ ಪ್ರಯತ್ನತಃ ॥ ೧೮ ॥
ಜೀವೇನ್ಮೃಗಯಯಾಧರ್ಮೇಣ ತತ್ರಾಽಪಿ ಕರುಣಾಪರಃ ।
ನ ವಿಶ್ವಸ್ತಾನ್ ಪಕ್ಷಿಮೃಗಾನ್ನ ಸುಪ್ತಾನ್ನ ವ್ಯವಾಯಿನಃ ॥ ೧೯ ॥
ನ ತೋಯಗೃಧ್ನೂನ್ನ ಶಿಶೂನ್ನಾಂತರ್ವತ್ನಿತ್ವಲಕ್ಷಣಾನ್ ।
ಸ ಘಾತಯತಿ ಧರ್ಮಜ್ಞೋ ಜಾತಿಧರ್ಮಪರಾಙ್ಮುಖಃ ॥ ೨೦ ॥
ಶ್ರಮಾತುರೇಭ್ಯಃ ಪಾಂಥೇಭ್ಯಃ ಸ ವಿಶ್ರಾಮಂ ಪ್ರಯಚ್ಛತಿ ।
ಹರೇತ್ ಕ್ಷುಧಾಂ ಕ್ಷುಧಾರ್ತಾನಾಮುಪಾನದ್ಭ್ಯೋಽನುಪಾನಹೇ ॥ ೨೧ ॥
ಮೃಗತ್ವಚೋಽತಿಮೃದುಲಾ ವಿವಸ್ತ್ರೇಭ್ಯೋಽತಿಸರ್ಜತಿ ।
ಅನುವ್ರಜತಿ ಕಾಂತಾರೇ ಪ್ರಾಂತರೇ ಪಥಿಕಾನ್ ಪಥಿ ॥ ೨೨ ॥

---

ದಲ್ಲಿ ಪಿಂಗಾಕ್ಷನೆಂದು ಪ್ರಸಿದ್ಧನಾದ ಶಬರಶ್ರೇಷ್ಠನೊರ್ವನಿದ್ದನು. ಅವನು ಮಹಾ ಉಗ್ರನೂ ಪರಾಕ್ರಮಿಯೂ ಆಗಿದ್ದನು. ಆ ಅಟವಿಯಲ್ಲಿ ಹರಿಯುತ್ತಿದ್ದ ನಿರ್ವಿಂಧ್ಯಾನದಿಯ ದಡದಲ್ಲಿಯೆ ವಾಸಮಾಡುತ್ತ, ಶೂರನಾಗಿ ಪಾಪಕರ್ಮ ವಿಮುಖನಾಗಿ ಅಲ್ಲಿ ಸಂಚಾರಮಾಡುವ ಪಾಂಥರಿಗೆ ಪರಿಪಂಥಿಗಳೆನಿಸಿದ ವ್ಯಾಘ್ರಾದಿ ಕ್ರೂರ ಮೃಗಗಳನ್ನು ದೂರದಿಂದಲೆ ಪ್ರಯತ್ನಪುರಸ್ಸರವಾಗಿ ಕೊಲ್ಲುತ್ತಿದ್ದನು.

೧೯–೨೦. ಬೇಟೆಗಾರನಾಗಿ ಜೀವನವನ್ನು ನಡೆಸುತ್ತಿದ್ದರೂ ಆ ಪಿಂಗಾಕ್ಷನು ಕೇವಲ ದಯಾಮಯನಾಗಿ ನಂಬಿನಡೆವ ಪಕ್ಷಿಗಳನ್ನಾಗಲಿ, ಜಿಂಕೆಗಳೇ ಮೊದಲಾದ ಸಾಧು ಮೃಗಗಳನ್ನಾಗಲಿ, ಮಲಗಿರುವ ಅಥವಾ ಕೂಡಿರುವ ಸತ್ತ್ವಗಳನ್ನಾಗಲಿ, ನೀರಡಸಿ ಬರುವ ಪ್ರಾಣಿಗಳನ್ನಾಗಲಿ, ಎಳೆ ಮರಿಗಳನ್ನಾಗಲಿ, ಗಬ್ಬವಾಗಿರುವವುಗಳನ್ನಾಗಲಿ, ಜಾತಿ ಧರ್ಮವನ್ನೂ ಮೀರಿ ಅವನು ಘಾತಿಸುತ್ತಿರಲಿಲ್ಲ.

೨೧–೨೨. ನಡೆದು ಬಳಲಿ ಬಂದಿರುವ ದಾರಿಗರಿಗೆ ಅವನು ವಿಶ್ರಮಿಸಿಕೊಳ್ಳಲು ನೆರಳು ಮಾಡಿಕೊಡುತ್ತಿದ್ದನು. ಹಸಿದು ಬಂದವರಿಗೆ ಆಹಾರವನ್ನೊದಗಿಸುತ್ತಿದ್ದನು. ಪಾದುಕೆಗಳಿಲ್ಲದವರಿಗೆ ಪಾದುಕೆಗಳನ್ನು ಕೊಟ್ಟು ಉಪಕರಿಸುತ್ತಿದ್ದನು. ವಸ್ತ್ರವಿಲ್ಲದೆ ದಿಗಂಬರರಾಗಿರುವವರಿಗೆ ಮೆತ್ತನೆಯ ಚರ್ಮಗಳನ್ನು ದಾನಮಾಡುತ್ತಿದ್ದನು. ಆ ಕಾಡುದಾರಿಯಲ್ಲಿ ಹೋಗಲಂಜುವ ದಾರಿಗರಿಗೆ ಧೈರ್ಯಹೇಳಿ ಅವರನ್ನು ಹಿಂಬಾಲಿಸುತ್ತಿದ್ದನು.

ನ ಜಿಘೃಕ್ಷತಿ ತೇಭ್ಯೋಽರ್ಥಮಭಯಂ ಚೇತಿ ಯಚ್ಛತಿ ।
ಆವಿಂಧ್ಯಾಟವಿ ಮೇ ನಾಮ ಗ್ರಾಹ್ಯಂ ದುಷ್ಟಭಯಾಪಹಂ ॥ ೨೩ ॥
ನಿತ್ಯಂ ಕಾರ್ಪಟಿಕಾನ್ ಸರ್ವಾನ್ ಸ ಪುತ್ರೇಣ ಪ್ರಪಶ್ಯತಿ ।
ತೇಽಪಿ ಚ ಪ್ರತಿತೀರ್ಥಂ ಹಿ ತಮಾಶೀರ್ವಾದಯಂತಿ ವೈ ॥ ೨೪ ॥
ಇತಿ ತಿಷ್ಠತಿ ಪಿಂಗಾಕ್ಷೇ ಸಾಽಟವೀ ನಗರಾಯಿತಾ ।
ಅಧ್ವನೀನಧ್ವಗಾನ್ ಕೋಽಪಿ ನ ರುಣದ್ಧಿ ಸಸಾಧ್ವಸಃ ॥ ೨೫ ॥
ಕದಾಚಿತ್ತತ್ಪಿತೃವ್ಯೇಣ ಸಮೀಪಗ್ರಾಮವಾಸಿನಾ ।
ಶ್ರುತಃ ಕಾರ್ಪಟಿಕಾನಾಂ ಹಿ ಸಾರ್ಥಃ ಸಾರ್ಥೋ ಮಹಾಸ್ವನಃ ॥ ೨೬ ॥
ಲುಬ್ಧಕಸ್ತದ್ಧನೇ ಲುಬ್ಧಃ ಕ್ಷುದ್ರಸ್ತನ್ನಿಧನೋದ್ಯತಃ ।
ಸ ರುರೋಧ ತಮಧ್ವಾನಮಗ್ರೇ ಗತ್ವಾಽತಿಗೂಢವತ್ ॥ ೨೭ ॥
ತದಾಯುಷ್ಯಸ್ಯ ಶೇಷೇಣ ಪಿಂಗಾಕ್ಷೋ ಮೃಗಯಾಂ ಗತಃ ।
ತಸ್ಮಿನ್ನರಣ್ಯೇ ತನ್ಮಾರ್ಗಂ ನಿಕಷಾಽಧ್ಯುಷಿತೋ ನಿಶಿ ॥ ೨೮ ॥

---

೨೩. ಅವನು ಆ ಪಥಿಕರಲ್ಲಿನ ದ್ರವ್ಯವೇನನ್ನೂ ಅಪೇಕ್ಷಿಸುತ್ತಿರಲಿಲ್ಲ. ಅವರಲ್ಲೇನಾದರೂ ದ್ರವ್ಯವಿದ್ದುದಾದರೆ ಅದು ಕಳೆದೀತೆಂಬ ಅವರ ಶಂಕೆಯನ್ನು ಪರಿಹರಿಸಿ ಅಭಯನೀಡುತ್ತಿದ್ದನು. "ಅಯ್ಯಾ ಪಾಂಥರೆ, ಈ ವಿಂಧ್ಯಾಟವಿಯು ಕಳೆಯುವವರೆಗೂ ದುಷ್ಟರ ಭಯವನ್ನು ಕಳೆಯುವ ನನ್ನ ಹೆಸರನ್ನು ಹೇಳಬೇಕು" ಎಂದು ಹೇಳುತ್ತಿದ್ದನು.

೨೪. ಯಾತ್ರಿಕರನ್ನು ಅವನು ಅನುದಿನವೂ ಮಕ್ಕಳೊಡಗೂಡಿ ಕಾಣುತ್ತಿದ್ದನು. ಅವರೂ ಪ್ರತಿ ತೀರ್ಥಸ್ನಾನದ ವೇಳೆಯಲ್ಲಿಯೂ ಅವನನ್ನು ನೆನೆಸಿಕೊಂಡು ಆಶೀರ್ವದಿಸುತ್ತಿದ್ದರು.

೨೫. ಎಲೈ ಶಿವಶರ್ಮನೆ, ಈ ಪ್ರಕಾರವಾಗಿ ಶಬರನಾದ ಆ ಪಿಂಗಾಕ್ಷನು ಧರ್ಮತತ್ಪರನಾಗಿ ಆ ವಿಂಧ್ಯಾಟವಿಯಲ್ಲಿ ನೆಲಸಿರಲು ಆ ಅಡವಿಯೇ ಊರೆನಿಸಿತು. ಆ ಕಾಡಿನಲ್ಲಿ ಬಲಿಷ್ಠನಾದ ಯಾವ ದಾರಿಗನೂ ದುರ್ಬಲನಾದ ದಾರಿಗನನ್ನು ಧೈರ್ಯವಹಿಸಿ ಬಾಧಿಸುತ್ತಿರಲಿಲ್ಲ.

೨೬–೨೭. ಒಂದಾನೊಂದು ದಿನ ಆ ವಿಂಧ್ಯಾಟವಿಯ ಸಮೀಪದಲ್ಲಿಯೆ ಒಂದು ಗ್ರಾಮದಲ್ಲಿ ನೆಲಸಿದ್ದ ಆ ಪಿಂಗಾಕ್ಷನ ಚಿಕ್ಕತಂದೆಯಾದ ತಾರಾಕ್ಷನೆಂಬುವನು ದಾರಿಯಲ್ಲಿ ಬರುತ್ತಿರುವ ಯಾತ್ರಿಕರ ಗುಂಪಿನ ಕೋಲಾಹಲ ಧ್ವನಿಯನ್ನು ಕೇಳಿದನು. ಕಳ್ಳನೂ ಆ ಯಾತ್ರಿಕರ ಧನದಲ್ಲಿ ಲೋಭವುಳ್ಳವನೂ ಬಹು ನೀಚನೂ ಆದ ಆ ತಾರಾಕ್ಷನು ಆ ಯಾತ್ರಿಕರ ಗುಂಪನ್ನು ಸದೆಯಲು ಯತ್ನಿಸಿ ಬಹು ಗುಟ್ಟಾಗಿ ಅವರ ಮುಂಗಡೆ ಹೋಗಿ ನಿಂತು ಅಡ್ಡಗಟ್ಟಿದನು.

೨೮. ಅದೇ ಸಮಯದಲ್ಲಿಯೆ ಆ ಪಾಂಥರಿಗೆ ಇನ್ನೂ ಆಯುಸ್ಸು

ಪರಪ್ರಾಣದ್ರುಹಾಂ ಪುಂಸಾಂ ನ ಸಿದ್ಧ್ಯೇಯುರ್ಮನೋರಥಾಃ ।
ವಿಶ್ವಂ ಕುಶಲಿತೇನೈತದ್ವಿಶ್ವೇಶಪರಿರಕ್ಷಿತಂ ॥ ೨೯ ॥
ನ ಚಿಂತಯೇದನಿಷ್ಟಾನಿ ತಸ್ಮಾತ್ಕೃಷ್ಟಿಃ ಕದಾಚನ ।
ವಿಧಿದೃಷ್ಟಂ ಯತೋ ಭಾವಿ ಕಲುಷಂ ಭಾವಿ ಕೇವಲಂ ॥ ೩೦ ॥
ತಸ್ಮಾದಾತ್ಮಸುಖಂ ಪ್ರೇಪ್ಸುರಿಷ್ಟಾನಿಷ್ಟಂ ನ ಚಿಂತಯೇತ್ ।
ಚಿಂತಯೇಚ್ಚೇತ್ತದಾ ಚಿಂತ್ಯೋ ಮೋಕ್ಷೋಪಾಯೋ ನ ಚೇತರಃ ॥೩೧॥
ವ್ಯುಷ್ಟಾಯಾಮಥ ಯಾಮಿನ್ಯಾಮುಭೂತ್ಕೋಲಾಹಲೋ ಮಹಾನ್ ।
ಘಾತಯಧ್ವಂ ಪಾತಯಧ್ವಂ ನಗ್ನಯಧ್ವಂ ದ್ರುತಂ ಭಟಾಃ ॥ ೩೨ ॥
ಮಾ ಮಾರಯಧ್ವಂ ತ್ರಾಯಧ್ವಂ ಭಟಾಃ ಕಾರ್ಪಟಿಕಾ ವಯಂ ।
ಅನಾಯಾಸಂ ಲುಂಠಯಧ್ವಂ ನಯಧ್ವಂ ಚ ಯದಸ್ತಿ ನಃ ॥ ೩೩ ॥
ವಯಂ ಪಾಂಥಾ ಅನಾಥಾಃ ಸ್ಮೋ ವಿಶ್ವನಾಥಪರಾಯಣಾಃ ।
ಸನಾಥಾಸ್ತೇನ ದೂರಂ ಸನಾಥತಾಂ ಪಥಿಕೋಽಪರಃ ॥ ೩೪ ॥
ವಯಂ ಪಿಂಗಾಕ್ಷವಿಶ್ವಾಸಾದಸ್ಮಿನ್ಮಾರ್ಗೇಽಕುತೋಭಯಾಃ ।
ಯಾತಾಯಾತಂ ಸದಾ ಕುರ್ಮಃ ಸ ಚ ದೂರ ಇತೋ ವನಾತ್ ॥ ೩೫ ॥

---

ಉಳಿದಿದ್ದುದರಿಂದ ಪಿಂಗಾಕ್ಷನು ಬೇಟೆಗೆಂದು ಬಂದಿದ್ದವನು ಅದೇ ಅರಣ್ಯ ಪ್ರದೇಶದ ಹಾದಿಯ ಬಳಿಯಲ್ಲಿಯೆ ರಾತ್ರಿಯೆಲ್ಲ ಕಾದು ಕುಳಿತಿದ್ದನು

೨೯. ಇತರ ಪ್ರಾಣಿಗಳಿಗೆ ದ್ರೋಹಮಾಡಲೆಳಸುವ ದುಷ್ಟರ ಮನೋರಥವೆಂದಿಗೂ ಈಡೇರುವುದಿಲ್ಲ. ವಿಶ್ವೇಶ್ವರನಿಂದ ಸಂರಕ್ಷಿತವಾದ ಈ ವಿಶ್ವವೆಲ್ಲವೂ ಸುರಕ್ಷಿತವಾಗಿರತಕ್ಕದೆ.

೩೦. ಆದುದರಿಂದ ಈ ಪ್ರಪಂಚದಲ್ಲಿ ಯಾರೂ ಇತರರಿಗೆ ಅನಿಷ್ಟವನ್ನು ಬಯಸಬಾರದು. ಧರ್ಮವರಿಯದವನು ಒಂದು ವೇಳೆ ಜಾರಿದರೂ ಅವನಿಗೆ ಪ್ರಾಯಶ್ಚಿತ್ತವುಂಟು. ಪಂಡಿತನಾದವನು ಎಂದಿಗೂ ಅಧರ್ಮಕ್ಕೆ ತೊಡಗಬಾರದು. ತೊಡಗಿದಲ್ಲಿ ಅವನಿಗೆ ನಿಷ್ಕೃತಿಯೇ ಇರುವುದಿಲ್ಲ. ಏಕೆಂದರೆ, ಮುಂದಾಗುವುದೆಲ್ಲವೂ ವಿಧಿಯೆನಿಸಿಕೊಳ್ಳುತ್ತದೆ. ಕಾಲುಷ್ಯವೆಂಬುದು ಕೇವಲ ಭಾವನೆಯಲ್ಲಿ ಮಾತ್ರ ಇರುತ್ತದೆ.

೩೧ ಆದುದರಿಂದ ಆತ್ಮಸುಖವನ್ನು ಬಯಸುವ ಮಾನವನು ಇಷ್ಟಾನಿಷ್ಟಗಳನ್ನು ಕುರಿತು ಯೋಚಿಸಲೇಬಾರದು. ಒಂದು ವೇಳೆ ಯೋಚಿಸಬೇಕಾದರೆ ಮೋಕ್ಷೋಪಾಯವನ್ನೇ ಕುರಿತು ಚಿಂತಿಸತಕ್ಕದ್ದು. ಮತ್ತಾವುದನ್ನೂ ಅಲ್ಲ.

೩೨–೩೫. ರಾತ್ರಿಕಳೆದು ಬೆಳಗಾಗುತ್ತಲೆ ಆ ಮಾರ್ಗದಲ್ಲಿ "ಹೊಡೆಯಿರಿ, ಕೆಡವಿರಿ, ಬಟ್ಟೆಗಳನ್ನು ಕಸಿದುಕೊಂಡು ಬೆತ್ತಲೆಮಾಡಿರಿ" ಎಂದೂ, "ಅಯ್ಯಾ

ಇತಿ ಶ್ರುತ್ವಾಽಥ ಪಿಂಗಾಕ್ಷೋ ಭಟಃ ಕಾರ್ಪಟಿಕೇರಿತಂ ।
ದೂರಾನ್ಮಾಭೈಷ್ಟ ಮಾಭೈಷ್ಟ ಬ್ರುವನ್ನಿತಿ ಸಮಾಗತಃ ॥ ೩೬ ॥
ತತ್ಕರ್ಮಸೂತ್ರೈರಾಕೃಷ್ಟೋ ಭಿಲ್ಲಃ ಕಾರ್ಪಟಿಕಪ್ರಿಯಃ ।
ತೂರ್ಣಂ ತದಾಯುಷ್ಯಮಿವ ತತ್ರೋಪಸ್ಥಿತವಾನ್ ಕ್ಷಣಾತ್ ॥ ೩೭ ॥
ಕೋಽಯಂ ಕೋಽಯಂ ದುರಾಚಾರಃ ಪಿಂಗಾಕ್ಷೇ ಮಯಿ ಜೀವತಿ ।
ಉಲ್ಲುಲಂಠಯಿಷುಃ ಪಾಂಥಾನ್ ಪ್ರಾಣಲಿಂಗಸಮಾನ್ಮಮ ॥ ೩೮ ॥
ಇತಿ ತದ್ವಾಕ್ಯಮಾಕರ್ಣ್ಯ ತಾರಾಕ್ಷಸ್ತತ್ಪಿತೃವ್ಯಕಃ ।
ಧನಲೋಭೇನ ಪಿಂಗಾಕ್ಷೇ ಪಾಪಂ ಪಾಪೋ ವ್ಯಚಿಂತಯತ್ ॥ ೩೯ ॥
ಕುಲಧರ್ಮಂ ವ್ಯಪಾಸ್ಯೈಷ ವರ್ತತೇ ಕುಲಪಾಂಸನಃ ।
ಚಿರಂ ಚಿಂತಿತಮದ್ಯಾಽಮುಂ ಘಾತಯಿಷ್ಯಾಮ್ಯಸಂಶಯಂ ॥ ೪೦ ॥

---

ಭಟರೆ, ಹೊಡೆಯಬೇಡಿ, ಕಾಪಾಡಿ. ನಾವು ಯಾತ್ರಿಕರು. ಹಿಂಸೆಮಾಡವೆ ನಮ್ಮಲ್ಲಿರುವುದನ್ನು ಕೊಳ್ಳೆಹೊಡೆದುಕೊಂಡು ಹೋಗಿರಿ. ನಾವು ಕಾಶೀ ವಿಶ್ವೇಶ್ವರನ ಭಕ್ತರು. ಅನಾಥರು. ಈಗ ಆ ಸ್ವಾಮಿಯ ಸಂದರ್ಶನಕ್ಕಾಗಿ ಹೋಗುವ ದಾರಿಗರಾಗಿಯೂ ಇದ್ದೇವೆ. ನಮಗೆ ಆ ವಿಶ್ವನಾಥನೇ ನಾಥನು. ಆದರೆ ಆತನು ಬಹು ದೂರದಲ್ಲಿದ್ದಾನೆ. ಇನ್ನು ನಮಗೆ ದಿಕ್ಕಾರು? ಇಷ್ಟೇ ಅಲ್ಲದೆ, ನಾವು ಇಲ್ಲಿಯ ಪಿಂಗಾಕ್ಷ ಶಬರನಲ್ಲಿ ವಿಶ್ವಾಸವನ್ನಿಟ್ಟುಕೊಂಡು ಯಾವ ಹೆದರಿಕೆಯೂ ಇಲ್ಲದೆ ಯಾವಾಗಲೂ ಬಂದು ಹೋಗುತ್ತಿದ್ದೇವೆ ಆದರೆ ಪ್ರಕೃತದಲ್ಲಿ ಆ ಪಿಂಗಾಕ್ಷನೂ ಈ ಕಾಡಿಗೆ ಬಹು ದೂರದಲ್ಲಿದ್ದಾನೆ'' ಎಂದೂ ಮಹತ್ತರವಾದ ಕೋಲಾಹಲ ಧ್ವನಿಯು ಕೇಳಬಂದಿತು.

೩೬. ಈ ಪ್ರಕಾರವಾಗಿ ಕೂಗಿಕೊಂಡ ದಾರಿಗರಾದ ಆ ಯಾತ್ರಿಕರ ಕೂಗನ್ನು ಕೇಳಿ ಭಿಲ್ಲರೊಡೆಯನಾದ ಪಿಂಗಾಕ್ಷನು ದೂರದಿಂದಲೆ "ಹೆದರಬೇಡಿ ಹೆದರಬೇಡಿ'' ಎಂದು ಹೇಳುತ್ತ ಅಲ್ಲಿಗೆ ಬಂದನು.

೩೭-೩೮. ಯಾತ್ರಿಕರಿಗೆ ಅತ್ಯಂತ ಪ್ರಿಯನಾದ ಆ ಪಿಂಗಾಕ್ಷನು ತಾರಾಕ್ಷ ನೆಸಗಿದ ಕ್ರೂರಕರ್ಮ ಸೂತ್ರಗಳಿಂದ ಸೆಳೆಯಲ್ಪಟ್ಟವನಂತೆ ಬಹು ಬೇಗನೆಯೆ ಆ ಯಾತ್ರಿಕರ ಆಯುಸ್ಸೋ ಎಂಬಂತೆ ಒಂದು ಕ್ಷಣಮಾತ್ರದಲ್ಲಿಯೆ ಅಲ್ಲಿಗೈತಂದು ನಿಂದನು. ಅವನು "ಎಲಾ! ಪಿಂಗಾಕ್ಷನಾದ ನಾನು ಜೀವದಿಂದಿರುವಲ್ಲಿ ನನಗೆ ಪ್ರಾಣಲಿಂಗಸಮಾನರಾದ ಈ ಯಾತ್ರಿಕರನ್ನು ಕೊಳ್ಳೆಹೊಡೆಯಲಪೇಕ್ಷಿಸುವ ದುರಾತ್ಮನಾರು ?'' ಎಂದು ಕೂಗಿ ಹೇಳಿದನು.

೩೯. ಈ ಮಾತನ್ನು ಕೇಳಿ ಅವನ ಚಿಕ್ಕತಂದೆಯಾದ ತಾರಾಕ್ಷನು ಧನ ಲೋಭಕ್ಕೆ ಒಳಗಾಗಿ ಅವನನ್ನೇ ವಧಿಸಬಯಸಿದನು.

೪೦-೪೧. "ಈ ಕುಲಗೇಡಿಯು ನಮ್ಮ ಕುಲೋಚಿತವಾದ ಧರ್ಮವನ್ನು

ವಿಚಾರ್ಯೇತಿ ಸ ದುಷ್ಟಾತ್ಮಾ ಭೃತ್ಯಾನಾಜ್ಞಾಪಯತ್ ಕ್ರುಧಾ ।
ಆದಾವೇನಂ ಘಾತಯಂತು ತತಃ ಕಾರ್ಪಟಿಕಾನಿಮಾನ್ ॥ ೪೧ ॥
ತತೋಽಯುಧ್ಯನ್ದುರಾಚಾರಾಸ್ತೇನೈಕೇನ ಚ ತೇಽಖಿಲಾಃ ।
ಯಥಾ ಕಥಂಚಿತ್ತಾನನಯತ್ಸ ಚ ಸ್ವಾವಸಥಾಂತಿಕಂ ॥ ೪೨ ॥
ಆಚ್ಛಿನ್ನಂ ಹಿ ಧನುರ್ಬಾಣಾ ಭಿನ್ನಂ ಸನ್ನಹನಂ ಶರೈಃ ।
ಅಸೂದಯಿಷ್ಯಮೇತಾಂಸ್ತದಭವಿಷ್ಯಂ ಯದೀಶ್ವರಃ ॥ ೪೩ ॥
ಅಭಿಲಷ್ಯನ್ನಿತಿ ಪ್ರಾಣಾನತ್ಯಾಕ್ಷೀತ್ಸ ಪರಾರ್ಥಕಃ ।
ತೇಽಪಿ ಕಾರ್ಪಟಿಕಾಃ ಪ್ರಾಪ್ತಾಸ್ತತ್ಪಲ್ಲೀಂ ಗತಸಾಧ್ವಸಾಃ ॥ ೪೪ ॥
ಯಾ ಮತಿಸ್ತ್ವಂತಕಾಲೇ ಸ್ಯಾದ್ಗತಿಸ್ತದನುರೂಪತಃ ।
ದಿಗೀಶತ್ವಮತಃ ಪ್ರಾಪ್ತೋ ನಿರ್ಋತ್ಯಾಂ ನೈರ್ಋತೇಶ್ವರಃ ॥ ೪೫ ॥

---

ತೊರೆದು ನಡೆಯುತ್ತಿದ್ದಾನೆ. ನಾನು ಈ ವಿಚಾರವಾಗಿಯೆ ಬಹಳಕಾಲ ಏನು ಮಾಡಬೇಕೆಂದೇ ಯೋಚಿಸುತ್ತಿದ್ದೆ. ಈಗ ಒಳ್ಳೆಯ ಸಮಯವೂ ಒದಗಿದೆ. ಇವನನ್ನು ನಿಸ್ಸಂಶಯವಾಗಿಯೂ ಘಾತಿಸದೆ ಬಿಡೆನು" ಎಂದು ಯೋಚಿಸಿ, ದುರುಳನಾದ ಆ ತಾರಾಕ್ಷನು ಮುನಿದು ತನ್ನ ಆಳುಗಳನ್ನು ಕುರಿತು, "ಎಲ್ಲೈ ಮೊದಲು ಇವನನ್ನೇ ಕೊಲ್ಲಿರಿ. ಆಮೇಲೆ ಈ ಕಾರ್ಪಾಟಿಕರನ್ನು ಕೊಲ್ಲುವಿರಂತೆ" ಎಂದು ಅಪ್ಪಣೆಮಾಡಿದನು.

೪೨. ತಾರಾಕ್ಷನಿಂತು ನುಡಿದೊಡನೆಯೆ ದುರಾಚಾರರಾದ ಆ ಭೃತ್ಯರೆಲ್ಲರೂ ಒಂಟಿಯಾಗಿದ್ದ ಆ ಪಿಂಗಾಕ್ಷನೊಡನೆ ಕಾಳಗಕ್ಕೆ ಮೊದಲಿಟ್ಟರು. ಅವನಾದರೊ ಕಾಳಗಮಾಡುತ್ತಲೆ ಹೇಗೆಹೇಗೆಯೊ ಆ ಧೂರ್ತರನ್ನು ತಾನಿದ್ದ ಹಳ್ಳಿಯ ಬಳಿಗೆ ಕರೆತಂದನು.

೪೩-೪೪. ಆ ಹೊತ್ತಿಗೆ ಅವನ ಬಿಲ್ಲುಬಾಣಗಳೂ ಕವಚವೂ ಶತ್ರುಗಳ ಬಾಣಗಳಿಂದ ಕತ್ತರಿಸಿಹೋದುವು. ಅವನು "ಅಯ್ಯೊ, ನಾನೇ ಪರಮೇಶ್ವರನಾಗಿದ್ದಿದ್ದರೆ ಇವರೆಲ್ಲರನ್ನೂ ಏಕಕಾಲದಲ್ಲಿಯೆ ಕೊಲ್ಲುತ್ತಿದ್ದೆನು. ಆ ಭಾಗ್ಯವು ನನಗಿಲ್ಲ" ಎಂದು ಈಶ್ವರತ್ವವನ್ನೇ ಬಯಸುತ್ತ ಮರುಗಿ ಪ್ರಾಣಗಳನ್ನು ಪರಾರ್ಥಕ್ಕೋಸುಗ ನೀಗಿದನು. ಆ ಯಾತ್ರಿಕರು ಭಯವುಳಿದು ಆ ಹಳ್ಳಿಗೆ ಹೊರಟುಹೋದರು.

೪೫. ಅಯ್ಯಾ ಶಿವಶರ್ಮನೆ, ಪ್ರಾಣಿಯು ಅಂತ್ಯಕಾಲದಲ್ಲಿ ಯಾವ ಗತಿಯನ್ನು ಬಯಸುತ್ತದೆಯೊ ಅದಕ್ಕನುರೂಪವಾದ ಗತಿಯೇ ಪರಲೋಕದಲ್ಲಿಯೂ ಲಭಿಸುತ್ತದೆಯಷ್ಟೆ. ಅಂತೆಯೆ ಆ ಪಿಂಗಾಕ್ಷಶಬರನು ನೈರ್ಋತ್ಯದಿಕ್ಕಿಗೆ ಒಡೆಯನಾಗಿ ನೈರ್ಋತೇಶ್ವರನೆನಿಸಿದನು.

ಇತ್ಥಮಸ್ಯ ಸ್ವರೂಪಂ ತೇ ಆವಾಭ್ಯಾಂ ಸಮುದೀರಿತಂ ।
ಏತಸ್ಯೋತ್ತರತೋ ಲೋಕೋ ವರುಣಸ್ಯಾಽಯಮದ್ಭುತಃ ॥ ೪೬ ॥
ಕೂಪವಾಪೀತಡಾಗಾನಾಂ ಕರ್ತಾರೋ ನಿರ್ಮಲೈರ್ಘನೈಃ ।
ಇಹಲೋಕೇ ಮಹೀಯಂತೇ ವಾರುಣೇ ವರುಣಪ್ರಭಾಃ ॥ ೪೭ ॥
ನಿರ್ಜಲೇ ಜಲದಾತಾರಃ ಪರಸಂತಾಪಹಾರಿಣಃ ।
ಅರ್ಥಿಭ್ಯೋ ಯೇ ಪ್ರಯಚ್ಛಂತಿ ಚಿತ್ರಛತ್ರಕಮಂಡಲೂನ್ ॥ ೪೮ ॥
ಪಾನೀಯಶಾಲಿಕಾಃ ಕುರ್ಯುರ್ನಾನೋಪಸ್ಕರಸಂಯುತಾಃ ।
ದದ್ಯುರ್ಧರ್ಮಘಟಾಂಶ್ಚಾಽಪಿ ಸುಗಂಧೋದಕಪೂರಿತಾನ್ ॥ ೪೯ ॥
ಅಶ್ವತ್ಥಸೇಕಂ ಯೇ ಕುರ್ಯುಃ ಪಥಿ ಪಾದಪರೋಪಕಾಃ ।
ವಿಶ್ರಾಮಶಾಲಾಕರ್ತಾರಃ ಶ್ರಾಂತಸಂತಾಪನೋದಕಾಃ ॥ ೫೦ ॥
ಗ್ರೀಷ್ಮೋಷ್ಮಹಂತಿಮಾಯೂರಪಿಚ್ಛಾದಿರಚಿತಾನ್ಯಪಿ ।
ಚಿತ್ರಾಣಿ ತಾಲವೃಂತಾನಿ ವಿತರಂತಿ ತಪಾಗಮೇ ॥ ೫೧ ॥

---

೪೬. ಅಯ್ಯಾ ವಿಪ್ರನೆ, ಈ ಪ್ರಕಾರವಾಗಿ ನಿನಗೆ ಈ ನಿಋರ್ಋತಿಯ ಸ್ವರೂಪವನ್ನು ತಿಳಿಸಿದೆವು. ಇನ್ನು ಅದ್ಭುತವಾದ ವರುಣಲೋಕದ ವಿಚಾರ ವನ್ನು ತಿಳಿಸುತ್ತೇವೆ, ಕೇಳು.

೪೭. ಈ ನೈಋರ್ತಲೋಕಕ್ಕೆ ಉತ್ತರದಿಕ್ಕಿನಲ್ಲಿ ವರುಣಲೋಕವಿರುವುದು. ಬಾವಿ ಕೊಳ ಕೆರೆ ಮೊದಲಾದುವುಗಳನ್ನು ಕಷ್ಟಪಟ್ಟು ಸಂಪಾದಿಸಿದ ದ್ರವ್ಯದಿಂದ ಕಟ್ಟಿಸಿ ನೇರ್ಪಡಿಸುವ ಪುಣ್ಯಾತ್ಮರು ಈ ಲೋಕದಲ್ಲಿ ವರುಣನಿಗೆ ಸಮಾನವಾದ ತೇಜಸುಳ್ಳವರಾಗಿ ಬಾಳುತ್ತಾರೆ.

೪೮–೫೬. ನೀರಿಲ್ಲದೆಡೆಗಳಲ್ಲಿ ಜನಗಳಿಗೆ ಜಲದಾನಮಾಡುವವರೂ, ಇತರರ ಸಂತಾಪವನ್ನು ಪರಿಹರಿಸುವವರೂ, ಯಾಚಕರಿಗೆ ಕೊಡೆ, ಕಮಂಡಲುಗಳನ್ನು ದಾನಮಾಡುವವರೂ, ಹಲವಾರು ಪರಿಕರಗಳನ್ನೊಳಗೊಂಡ ಅರವಟ್ಟಿಗೆಗಳನ್ನು ಏರ್ಪಡಿಸುವವರೂ, ಗಂಧೋದಕ ಪೂರ್ಣವಾದ ಧರ್ಮಕುಂಭಗಳನ್ನು ಕೊಡು ವವರೂ, ಅರಳಿಯ ಮರಕ್ಕೆ ನೀರೆರೆಯುವವರೂ, ದಾರಿಯ ಇಕ್ಕೆಲಗಳಲ್ಲಿಯೂ ಮರಗಳನ್ನು ನಟ್ಟು ಬೆಳಸುವವರೂ, ದಾರಿಗರ ಆಯಾಸವು ಕಳೆಯಲೋಸುಗ ವಿಶ್ರಾಂತಿಗೃಹಗಳನ್ನು ಕಟ್ಟಿಸುವವರೂ, ಬೇಸಗೆಯಲ್ಲಿ ನವಿಲುಗರಿಗಳಿಂದ ಮಾಡಿದ ಬಹು ಸುಂದರವಾದ ಮತ್ತು ತಾಪಪರಿಹಾರಕವಾದ ಬೀಸಣಿಗೆಗಳನ್ನು ದಾನಮಾಡುವವರೂ, ರುಚಿಕರವೂ ಸುಗಂಧಭರಿತವೂ ಶೀತಳವೂ ಆದ ಪಾನಕ ಗಳನ್ನುಪ್ರಯತ್ನಪೂರ್ವಕವಾಗಿ ಬಿಸಿಲಿನಿಂದ ಬೇಸತ್ತು ಬಂದ ದಾರಿಗರಿಗೆ ಕೊಟ್ಟು ತೃಪ್ತಿಪಡಿಸುವವರೂ, ಅದೇ ವಸಂತ ಗ್ರೀಷ್ಮಋತುಗಳಲ್ಲಿ ಕಬ್ಬಿನ ತೋಟಗಳನ್ನು

ರಸವಂತಿ ಸುಗಂಧೀನಿ ಹಿಮವಂತಿ ತಪರ್ತುಷು ।
ವಿಶ್ರಾಣಯಂತಿ ವಾ ತೃಪ್ತಿಪಾನಕಾನಿ ಪ್ರಯತ್ನತಃ ॥ ೫೨ ॥
ಇಕ್ಷುಕ್ಷೇತ್ರಾಣಿ ಸಂಕಲ್ಪ್ಯ ಬ್ರಾಹ್ಮಣೇಭ್ಯೋ ದದತ್ಯಪಿ ।
ತಥಾ ನಾನಾಪ್ರಕಾರಾಂಶ್ಚ ವಿಕಾರಾನೈಕ್ಷವಾನ್ ಬಹೂನ್ ॥ ೫೩ ॥
ಗೋರಸಾನಾಂ ಪ್ರದಾತಾರಸ್ತಥಾ ಗೋಮಹಿಷೀಪ್ರದಾಃ ।
ಧಾರಾಮಂಡಪಕರ್ತಾರಶ್ಛಾಯಾಮಂಡಪಕಾರಿಣಃ ॥ ೫೪ ॥
ದೇವಾಲಯೇಷು ಯೇ ದದ್ಯುರ್ಬಹುಧಾರಾಗಲಂತಿಕಾಃ ।
ತೀರ್ಥೇ ವಾ ಕರಹರ್ತಾರಸ್ತೀರ್ಥಮಾರ್ಗಾವನೇಜಕಾಃ ॥ ೫೫ ॥
ಅಭಯಂ ಯೇ ಪ್ರಯಚ್ಛಂತಿ ಭಯಾರ್ತೇಭ್ಯೋದ್ಯತಪಾಣಯಃ ।
ನಿರ್ಭಯಾ ವಾರುಣೇ ಲೋಕೇ ತೇ ವಸಂತಿ ಲಸಂತಿ ಚ ॥ ೫೬ ॥
ವಿಪಾಶಯಂತಿ ಯೇ ಪುಣ್ಯಾ ದುರ್ವೃತ್ತೈಃ ಕಂಠಪಾಶಿತಾನ್ ।
ತೇ ಪಾಶಪಾಣೇರ್ಲೋಕೇಽಸ್ಮಿನ್ನಿವಸಂತ್ಯಕುತೋಭಯಾಃ ॥ ೫೭ ॥
ನೌಕಾದ್ಯುಪಾಯೈರ್ನದ್ಯಾದೌ ಪಾಂಥಾನ್ ಯೇ ತಾರಯಂತ್ಯಪಿ ।
ತಾರಯಂತ್ಯಪಿ ದುಃಖಾಬ್ಧೇಸ್ತತ್ರ ನಾಗರಿಕಾ ದ್ವಿಜ ॥ ೫೮ ॥
ಘಟ್ಟಾನ್ ಪುಣ್ಯತಟಿನ್ಯಾದೇರ್ಬಂಧಯಂತಿ ಶಿಲಾದಿಭಿಃ ।
ತೋಯಾರ್ಥಿಸುಖಸಿದ್ಧ್ಯರ್ಥಂ ಯೇ ನರಾಸ್ತೇಽತ್ರ ಭೋಗಿನಃ ॥ ೫೯ ॥

---

ಸಂಕಲ್ಪಪೂರ್ವಕವಾಗಿ ಬ್ರಾಹ್ಮಣರಿಗೆ ದಾನಮಾಡುವವರೂ, ಅಂತೆಯೆ ಇಕ್ಷು ಸಂಬಂಧವಾದ ಕಬ್ಬಿನ ಹಾಲು ಬೆಲ್ಲ ಸಕ್ಕರೆ ಆಸವಾದಿಗಳು ಮೊದಲಾದುವನ್ನು ಕೊಡುವವರೂ, ಹಸುವಿನ ಮತ್ತು ಎಮ್ಮೆಯ ಹಾಲು ಮಜ್ಜಿಗೆಗಳನ್ನೂ ಹಸು ಎಮ್ಮೆಗಳನ್ನೂ ದಾನಮಾಡುವವರೂ, ಸ್ನಾನಗೃಹಗಳನ್ನೂ, ನೆರಳು ಚಪ್ಪರಗಳನ್ನೂ ರಚಿಸಿಕೊಡುವವರೂ, ದೇವಾಲಯಗಳಲ್ಲಿ ಈಶ್ವರನ ಅಭಿಷೇಕಕ್ಕಾಗಿ ಧಾರಾ ಪಾತ್ರೆಗಳನ್ನು ಕೊಡುವವರೂ, ತೀರ್ಥಕ್ಷೇತ್ರಗಳಲ್ಲಿ ಸುಂಕ ಮೊದಲಾದುವನ್ನು ತೆಗೆದುಕೊಳ್ಳದಿರುವವರೂ, ಅವುಗಳಿಗೆ ಹೋಗುವ ಮಾರ್ಗಗಳನ್ನು ಮೇಲು ಪಡಿಸಿ ಇಡುವವರೂ, ಭಯಗ್ರಸ್ತರಾದವರಿಗೆ ಅಭಯವನ್ನು ನೀಡಿ ಕತ್ತಿಹಿಡಿದು ನಿಲ್ಲುವವರೂ—ಇವರೆಲ್ಲರೂ ಯಾವೊಂದು ಹೆದರಿಕೆಯೂ ಇಲ್ಲದೆ ಈ ವರುಣ ಲೋಕದಲ್ಲಿ ನೆಲಸಿ ಸುಖಿಸುತ್ತಾರೆ.

೫೭. ಎಲೈ ಬ್ರಾಹ್ಮಣನೆ! ದುರಾತ್ಮರ ಪಾಶಕ್ಕೆ ಒಳಗಾದ ದೀನರನ್ನು ಬಿಡಿಸಿ ಕಾಪಾಡುವ ಪುಣ್ಯಾತ್ಮರು ಪಾಶಪಾಣಿಯಾದ ಈ ವರುಣನ ಲೋಕದಲ್ಲಿ ಯಾವ ಭಯವೂ ಇಲ್ಲದೆ ವಾಸಮಾಡುವರು.

೫೮-೫೯. ಯಾರು ಓಡೆ ನಾವೆಗಳಿಂದ ಪಥಿಕರನ್ನು ಹೊಳೆ ನದಿಗಳನ್ನೂ ದಾಟಿಸುತ್ತಾರೆಯೊ, ಯಾವ ಸುಸಂಸ್ಕೃತರು ಆತ್ಮಾನಾತ್ಮವಿಚಾರನಿಷ್ಣಾತರಾಗಿ

ವಿತರ್ಪಯಂತಿ ಯೇ ಪುಣ್ಯಾಸ್ತೃಷಿತಾಂಛೀತಲೈರ್ಜಲೈಃ ।
ತೇಽತ್ರ ವೈ ವಾರುಣೇ ಲೋಕೇ ಸುಖಸಂತತಿಭಾಗಿನಃ ॥ ೬೦ ॥
ಜಲಾಶಯಾನಾಂ ಸರ್ವೇಷಾಮಯಮೇಕತಮಃ ಪತಿಃ ।
ಪ್ರಚೇತಾ ಯಾದಸಾಂ ನಾಥಃ ಸಾಕ್ಷೀ ಸರ್ವೇಷು ಕರ್ಮಸು ॥ ೬೧ ॥
ಅಸ್ಯೋತ್ಪತ್ತಿಂ ಶೃಣು ಪತೇರ್ವರುಣಸ್ಯ ಮಹಾತ್ಮನಃ ।
ಆಸೀನ್ಮುನಿರಮೇಯಾತ್ಮಾ ಕರ್ದಮಸ್ಯ ಪ್ರಜಾಪತೇಃ ॥ ೬೨ ॥
ಶುಚಿಷ್ಮಾನಿತಿ ವಿಖ್ಯಾತಸ್ತನಯೋ ವಿನಯೋಚಿತಃ ।
ಸ್ಥೈರ್ಯಮಾಧುರ್ಯಧೈರ್ಯಾದ್ಯೈರ್ಗುಣೈರುಪಚಿತೋ ಹಿತಃ ॥ ೬೩ ॥
ಅಚ್ಛೋದೇ ಸರಸಿ ಸ್ನಾತುಂ ಸ ಗತೋ ಬಾಲಕೈಃ ಸಹ ।
ಜಲಕ್ರೀಡನಸಂಸಕ್ತಂ ಶಿಶುಮಾರೋಽಹರಚ್ಚ ತಂ ॥ ೬೪ ॥
ತತಸ್ತಸ್ಮಿನ್ಮುನಿಸುತೇ ಹೃತೇಽತ್ಯಾಹಿತಶಂಸಿಭಿಃ ।
ತೈಃ ಸಮಾಗತ್ಯ ಶಿಶುಭಿಃ ಕಥಿತಂ ತತ್ಪಿತುಃ ಪುರಃ ॥ ೬೫ ॥

---

ಸನ್ಮಾರ್ಗಬೋಧೆಯಿಂದ ಇತರ ಸಾಂಸಾರಿಕಕಷ್ಟಪರಂಪರೆಯಿಂದಲೂ ಜನಗಳನ್ನು ದುಃಖಸಮುದ್ರದಿಂದ ಉದ್ಧಾರಮಾಡುತ್ತಾರೆಯೊ, ಯಾರು ಪುಣ್ಯನದಿಗಳ ತೀರಗಳಲ್ಲಿ ಸ್ನಾನಘಟ್ಟಗಳನ್ನು ಶಿಲಾದಿಗಳಿಂದ ಕಟ್ಟಿಸುತ್ತಾರೆಯೊ ಅವರೆಲ್ಲರೂ ಈ ವರುಣಲೋಕದ ಭೋಗಕ್ಕೆ ಪಾತ್ರರಾದವರು.

೬೦–೬೧. ಯಾರು ಬಾಯಾರಿ ಬಂದವರನ್ನು ತೋಯದಾನದಿಂದ ತೃಪ್ತಿಪಡಿಸುವ ಪುಣ್ಯಾತ್ಮರೊ ಅವರು ಈ ವರುಣಲೋಕದ ಸುಖಾನುಭವಕ್ಕೆ ಭಾಗಿಗಳು. ಸಮಸ್ತ ಸತ್ಕರ್ಮಗಳಲ್ಲಿಯೂ ಸಾಕ್ಷಿಯಾಗಿ, ಅಖಿಲ ಜಲಜಂತುಗಳಿಗೂ ಒಡೆಯನಾಗಿ, ಪ್ರಚೇತನೆನಿಸಿದ ಈ ವರುಣನು ಸಮಸ್ತ ಜಲಾಶಯಗಳಿಗೂ ಏಕೈಕಸ್ವಾಮಿಯು

೬೨–೬೩. ಎಲೈ ಶಿವಶರ್ಮನೆ! ಮಹಾತ್ಮನೂ, ಈ ಲೋಕದ ಅಧಿಪತಿಯೂ ಆದ ವರುಣನ ಉತ್ಪತ್ತಿಯನ್ನು ಹೇಳುತ್ತೇವೆ, ಕೇಳು. ಪೂರ್ವದಲ್ಲಿ ಅಮೇಯಾತ್ಮನೂ ಮನನಶೀಲನೂ ಆದ ಕರ್ದಮಪ್ರಜಾಪತಿಗೆ ವಿನಯಶೀಲನೂ ಯೋಗ್ಯನೂ ಸ್ಥೈರ್ಯ ಮಾಧುರ್ಯ ಔದಾರ್ಯಾದಿ ಗುಣಗಳುಳ್ಳವನೂ ಆದ ಶುಚಿಷ್ಮಂತನೆಂಬ ಮಗನಿದ್ದನು.

೬೪. ಒಮ್ಮೆ ಆ ಕುಮಾರನು ಇತರ ಬಾಲಕರೊಡನೆ ಸ್ನಾನಮಾಡಲೋಸುಗ ಅಚ್ಛೋದಸರೋವರಕ್ಕೆ ಹೋದನು. ಅವನು ಅಲ್ಲಿ ಜಲಕ್ರೀಡೆಯಲ್ಲಿ ತೊಡಗಿರಲು ಶಿಶುಮಾರನೆಂಬ ರಾಕ್ಷಸನೋರ್ವನು ಅವನನ್ನು ಅಪಹರಿಸಿ ಕೊಂಡು ಹೋದನು.

೬೫. ಆ ಮುನಿಕುಮಾರನು ಈ ರೀತಿ ಅಪಹೃತನಾಗಲು ಪ್ರಮಾದ

ಹರಾಽರ್ಚನೋಪವಿಷ್ಟಸ್ಯ ಸಮಾಧೌ ನಿಶ್ಚಲಾತ್ಮನಃ ।
ಶ್ರುತಬಾಲವಿಪತ್ತೇಶ್ಚ ಚಚಾಲ ನ ಮನೋ ಹರಾತ್ ॥ ೬೬ ॥
ಅಧಿಕಂ ಶೀಲಯಾಮಾಸ ಸ ಸರ್ವಜ್ಞಂ ತ್ರಿಲೋಚನಂ ।
ಪಶ್ಯಂಛಂಭೋಃ ಸಮೀಪೇ ಸ ಭುವನಾನಿ ಚತುರ್ದಶ ॥ ೬೭ ॥
ನಾನಾಭೂತಾನಿ ಭೂತಾನಿ ಬ್ರಹ್ಮಾಂಡಾಂತರ್ಗತಾನಿ ಚ ।
ಚಂದ್ರಸೂರ್ಯರ್ಕ್ಷತಾರಾಶ್ಚ ಪರ್ವತಾನ್ ಸರಿತೋ ದ್ರುಮಾನ್ ॥ ೬೮ ॥
ಸಮುದ್ರಾನಂತರೀಯಾಣಿ ಹ್ಯರಣ್ಯಾನಿ ಸರಾಂಸಿ ಚ ।
ನಾನಾದೇವನಿಕಾಯಾಂಶ್ಚ ವಹ್ನೇರ್ದಿವಿಷದಾಂ ಪುರೀಃ ॥ ೬೯ ॥
ವಾಪೀಕೂಪತಡಾಗಾದಿಕುಲ್ಯಾಃ ಪುಷ್ಕರಿಣೀರ್ಬಹು ।
ಏಕಸ್ಮಿನ್ನ್ಯಾಽಪಿ ಸರಸಿ ಜಲಕ್ರೀಡಾಪರಾಯಣಾನ್ ॥ ೭೦ ॥
ಬಹೂನ್ಮುನಿಕುಮಾರಾಂಶ್ಚ ಮಜ್ಜನೋನ್ಮಜ್ಜನಾದಿಭಿಃ ।
ಕರಯಂತ್ರ ವಿನಿರ್ಮುಕ್ತತೋಯಧಾರಾಽಭಿಷೇಚನೈಃ ॥ ೭೧ ॥
ಕರತಾಡಿತಪಾನೀಯಶಬ್ದದಿಙ್ಮುಖನಾದಿಭಿಃ ।
ಜಲಖೇಲನಕೈರಿತ್ಥಂ ಸಂಸಕ್ತಾನ್ ಬಹುಬಾಲಕಾನ್ ॥ ೭೨ ॥

---

ವಾಯಿತೆಂದು ಭಯಗೊಂಡು ಅಲ್ಲಿದ್ದ ಇತರ ಬಾಲಕರೆಲ್ಲರೂ ಆ ವೃತ್ತಾಂತವನ್ನು ಅವನ ತಂದೆಯಾದ ಕರ್ದಮಮುನಿಗೆ ತಿಳಿಸಿದರು.

೬೬. ಆ ಮುನಿಯಾದರೊ ಶಿವಾರ್ಚನೆಗಾಗಿ ಕುಳಿತು, ಸಮಾಧಿನಿಷ್ಠನಾಗಿ ಕಟ್ಟಕದಲದೆ ಕುಳಿತಿದ್ದುದರಿಂದ ತನ್ನ ಮಗನ ಆ ಬಗೆಯ ವಿಪತ್ತನ್ನು ಕೇಳಿಯೂ ಪರಮೇಶ್ವರನಲ್ಲಿ ನಟ್ಟುಹೋಗಿದ್ದ ತನ್ನ ಮನಸ್ಸನ್ನು ಚಲಿಸಗೊಳಿಸಲಿಲ್ಲ.

೬೭–೭೧. ಆತನು ಸರ್ವಜ್ಞನೂ ತ್ರಿಣೇತ್ರನೂ ಆದ ಆ ಮಹೇಶ್ವರನನ್ನೇ ಎವೆಯಿಕ್ಕದೆ ನೋಡುತ್ತ ಚತುರ್ದಶ ಭುವನಗಳನ್ನೂ ಒಮ್ಮೆ ಜ್ಞಾನದೃಷ್ಟಿ ಯಿಂದ ಪರಿಶೀಲಿಸಿದನು. ಬ್ರಹ್ಮಾಂಡದೊಳಗಣ ಚತುರ್ವಿಧ ಭೂತಸೃಷ್ಟಿಯನ್ನೂ, ಚಂದ್ರಸೂರ್ಯ ನಕ್ಷತ್ರಲೋಕಗಳನ್ನೂ, ಪರ್ವತಗಳನ್ನೂ, ಸಮುದ್ರಗಳನ್ನೂ, ಮಹಾವೃಕ್ಷಗಳನ್ನೂ, ಸಮುದ್ರದಾಚೆಗಿರುವ ಅರಣ್ಯಗಳನ್ನೂ, ಸರೋವರ ಗಳನ್ನೂ, ಅನೇಕ ದೇವಾಲಯಗಳನ್ನೂ, ಹಲವಾರು ದೇವತೆಗಳ ಲೋಕಗಳನ್ನೂ, ಬಾವಿಕೊಳ ಕೆರೆ ಹಳ್ಳ ಕಲ್ಯಾಣಿಗಳನ್ನೂ ಅಂತೆಯೆ ನೋಡಿದನು. ಎಲ್ಲಿಯೊ ಒಂದು ಸರೋವರದಲ್ಲಿ ಜಲಕ್ರೀಡಾಪರಾಯಣರಾಗಿ ಮುಳುಗುತ್ತಲೂ ಏಳುತ್ತಲೂ ಕೈಕೊಳವಿಗಳಿಂದ ನೀರೆರಚಾಡುತ್ತಲೂ ಇದ್ದ ಅನೇಕ ಮುನಿ ಕುಮಾರರನ್ನು ಆ ಮುನಿಯು ಕಂಡನು.

೭೨. ಆ ಬಾಲಕರೆಲ್ಲರೂ ಕೈಗಳಿಂದ ನೀರನ್ನು ಹೊಡೆದು ದಿಕ್ಕುಗಳೆಲ್ಲವನ್ನೂ ಆ ಧ್ವನಿಯಿಂದ ತುಂಬಿ ನೀರಾಟದಲ್ಲಿಯೆ ತೊಡಗಿ ಆನಂದಿಸುತ್ತಿದ್ದರು.

ತೇಷಾಂ ಮಧ್ಯೇ ದದರ್ಶಾಽಥ ಸಮಾಧಿಸ್ಥಃ ಸ ಕರ್ದಮಃ ।
ಸ್ವಂ ಶಿಶುಂ ಶಿಶುಮಾರೇಣ ನೀಯಮಾನಂ ಸುವಿಹ್ವಲಂ ॥ ೭೩ ॥
ಕಯಾಚಿಜ್ಜಲದೇವ್ಯಾಽಥ ತಸ್ಮಾಚ್ಚ ಕ್ರೂರಯಾದಸಃ ।
ಪ್ರಸಹ್ಯ ನೀತ್ವೋದಧಯೇ ದೃಷ್ಟವಾಂಸ್ತಂ ಸಮರ್ಪಿತಂ ॥ ೭೪ ॥
ನಿರ್ಭರ್ತ್ಸ್ಯ ಸರಿತಾಂನಾಥಂ ಕೇನಚಿದ್ರುದ್ರರೂಪಿಣಾ ।
ತ್ರಿಶೂಲಪಾಣಿನೇತ್ಯುಕ್ತಂ ಕ್ರೋಧತಾಮ್ರಾನನೇನ ಚ ॥ ೭೫ ॥
ಕುತೋ ಜಲಾನಾಮಧಿಪ ಶಿವಭಕ್ತಸ್ಯ ಬಾಲಕಃ ।
ಪ್ರಜಾಪತೇಃ ಕರ್ದಮಸ್ಯ ಮಹಾಭಾಗಸ್ಯ ಧೀಮತಃ ॥ ೭೬ ॥
ಅಜ್ಞಾತ್ವಾ ಶಿವಸಾಮರ್ಥ್ಯಂ ಭವತಾ ಚಿರಮಾಸಿತಃ ।
ಭಯತ್ರಸ್ತೇನ ತದ್ವಾಕ್ಯಶ್ರವಣಾತ್ತಮುದನ್ವತಾ ॥ ೭೭ ॥
ಬಾಲಂ ರತ್ನೈರಲಂಕೃತ್ಯ ಬದ್ಧ್ವಾ ತಂ ಶಿಶುಮಾರಕಂ ।
ಸಮರ್ಪಿತಂ ಸಮಾನೀಯ ಶಂಭುಪಾದಾಬ್ಜಸನ್ನಿಧೌ ॥ ೭೮ ॥
ನತ್ವಾ ವಿಜ್ಞಾಪಯತ್ತಂ ಚ ನಾಽಪರಾಧ್ಯಾಮ್ಯಹಂ ವಿಭೋ ।
ಅನಾಥನಾಥ ವಿಶ್ವೇಶ ಭಕ್ತಾಪತ್ತಿವಿನಾಶನ ॥ ೭೯ ॥

---

೭೩. ಅಯ್ಯಾ ವಿಪ್ರನೆ, ಆ ಕರ್ದಮಪ್ರಜಾಪತಿಯು ಸಮಾಧಿಯಲ್ಲಿದ್ದೇ ಆ ಮುನಿಕುಮಾರರ ಮಧ್ಯದಲ್ಲಿ ಆಡುತ್ತಿದ್ದ ತನ್ನ ಕುಮಾರನನ್ನು ಕಂಡನು. ಅವನನ್ನು ಅಸುರನಾದ ಶಿಶುಮಾರನು ಅಪಹರಿಸಿಕೊಂಡು ಹೋದುದನ್ನೂ ನೋಡಿದನು.

೭೪. ಅದೇ ಸಮಯದಲ್ಲಿ ಒಬ್ಬಾನೊಬ್ಬ ಜಲದೇವತೆಯು ಆ ಕ್ರೂರ ರಾಕ್ಷಸನಿಂದ ಆ ಕುಮಾರನನ್ನು ಬಲಾತ್ಕಾರವಾಗಿ ಸೆಳೆದುಕೊಂಡು ಸಮುದ್ರ ರಾಜನಿಗೆ ಅವನನ್ನು ಸಮರ್ಪಿಸಿದುದನ್ನೂ ಆ ಮುನಿಯು ನೋಡಿದನು.

೭೫–೭೮. ಆಗ ರುದ್ರರೂಪಿಯೂ ತ್ರಿಶೂಲಪಾಣಿಯೂ ಆದ ಯಾವನೊ ಒಬ್ಬನು ಆ ಸಮುದ್ರರಾಜನನ್ನು ಕುರಿತು, ಕೋಪದಿಂದ ಕೆಂಪಾದ ಮುಖವುಳ್ಳವನಾಗಿ, ''ಅಯ್ಯಾ ಜಲಧಿಯೆ! ಮಹಾ ಶಿವಭಕ್ತನೂ ಪುಣ್ಯಶಾಲಿಯೂ ಧೀಮಂತನೂ ಆದ ಕರ್ದಮಪ್ರಜಾಪ್ರತಿಯ ಮಗನಾದ ಈ ಬಾಲಕನನ್ನು ಪರಮೇಶ್ವರನ ಸಾಮರ್ಥ್ಯವನ್ನೇ ತಿಳಿಯದೆ ಇಷ್ಟು ಹೊತ್ತು ಏಕಾದರೂ ನಿನ್ನಲ್ಲುಳಿಸಿಕೊಂಡೆ?'' ಎಂದು ನುಡಿದುದನ್ನೂ, ಆ ಮಾತನ್ನು ಕೇಳಿ ಭಯದಿಂದ ತತ್ತಳಿಸಿ ಸಮುದ್ರರಾಜನು ಆ ಬಾಲಕನನ್ನು ರತ್ನಭೂಷಣಾದಿಗಳಿಂದ ಅಲಂಕರಿಸಿ ಅವನನ್ನು ಅಪಹರಿಸಿ ತಂದಿದ್ದ ಶಿಶುಮಾರ ರಾಕ್ಷಸನನ್ನೂ ಬಂಧಿಸಿ ಇಬ್ಬರನ್ನೂ ಶಿವನ ಪಾದಕಮಲ ಸನ್ನಿಧಿಯಲ್ಲಿ ಸಮರ್ಪಿಸಿದುದನ್ನೂ ಕಂಡನು.

೭೯–೮೦. ತರುವಾಯ ಆ ಸರಿತ್ಪತಿಯು ಪರಮೇಶ್ವರನಿಗೆ ಮಣಿದು,

ಭಕ್ತಕಲ್ಪತರೋ ಶಂಭೋಽನೇನಾಽಯಂ ದುಷ್ಟಯಾ ಸದಾ ।
ಅನಾಯಿ ನ ಮಯಾ ನಾಥ ಭವದ್ಭಕ್ತಜನಾರ್ಭಕಃ ॥ ೮೦ ॥
ಗಣೇನ ತೇನ ವಿಜ್ಞಾಯ ಶಂಭೋರಥ ಮನೋಗತಂ ।
ಪಾಶೇನ ಬದ್ಧ್ವಾ ತದ್ವ್ಯಾದಃ ಶಿಶುಹಸ್ತೇ ಸಮರ್ಪಿತಂ ॥ ೮೧ ॥
ಗೃಹಾಣೇಮಂ ಸ್ವತನಯಂ ಪಾರ್ಷದೇ ಶಂಕರಾಜ್ಞಯಾ ।
ಯಾಹಿ ಸ್ವಭವನಂ ವತ್ಸ ಬ್ರುವತೀತಿ ಸ ಕರ್ದಮಃ ॥ ೮೨ ॥
ಸಮಾಧಿಸಮಯೇ ಸರ್ವಮಿತಿ ಶೃಣ್ವನ್ನುದಾರಧೀಃ ।
ಉನ್ಮೀಲ್ಯ ನಯನೇ ಯಾವತ್ಪ್ರಣಿಧಾನಂ ವಿಸೃಜ್ಯ ಚ ॥ ೮೩ ॥
ಸಂಪಶ್ಯತೇ ಶಿಶುಂ ತಾವತ್ಪುರತಃ ಸಮವೈಕ್ಷತ ।
ಗೃಹೀತ ಶಿಶುಮಾರಂ ಚ ಪಾರ್ಶ್ವೇಽಲಂಕೃತಕರ್ಣಿಕಂ ॥ ೮೪ ॥
ತೋಯಾರ್ದ್ರಕಾಕಪಕ್ಷಾಗ್ರಂ ಕಷಾಯ ನಯನಾಂಚಲಂ ।
ಕಿಂಚಿದ್ವಿರೂಕ್ಷಂ ತ್ವಕ್ಕ್ಷೋಭಂ ಸಂಭ್ರಮಾಪನ್ನಮಾನಸಂ ॥ ೮೫ ॥

---

"ಎಲೈ, ಅನಾಥನಾಥನೂ ವಿಶ್ವೇಶ್ವರನೂ ಭಕ್ತರ ಆಪತ್ತುಗಳನ್ನು ಕಳೆಯುವವನೂ ಆದ ಪ್ರಭುವೆ! ನಾನು ಯಾವ ಅಪರಾಧವನ್ನೂ ಮಾಡಿರುವುದಿಲ್ಲ. ಎಲೈ ಭಕ್ತಕಲ್ಪತರುವೆ, ಶಂಭುವೆ! ನಿನ್ನ ಭಕ್ತನಾದ ಕರ್ದಮನ ಮಗನಾದ ಈ ಕುಮಾರಕನನ್ನು ದುಷ್ಟನಾದ ಈ ರಾಕ್ಷಸನು ಕರೆತಂದನು. ಪ್ರಭು! ನಾನು ಕರೆತರಲಿಲ್ಲ" ಎಂದು ವಿಜ್ಞಾಪಿಸಿಕೊಂಡನು.

೮೧. ತರುವಾಯ ಆ ಶಂಭುವಿನ ಮನೋಗತವನ್ನು ತಿಳಿದ ಶಿವಗಣಗಳಲ್ಲೊಬ್ಬನು ಆ ಶಿಶುಮಾರನನ್ನು ಹಗ್ಗದಿಂದ ಕಟ್ಟಿ ಆ ಬಾಲಕನ ಕೈಗೆ ಕೊಟ್ಟನು.

೮೨. ಅಲ್ಲದೆ ಆ ಪಾರ್ಷದನು ಒಡೆಯನಾದ ಶಂಕರನ ಅಪ್ಪಣೆಯಿಂದ, "ಮಗು, ಇವನನ್ನು ಸ್ವೀಕರಿಸು. ನಿನ್ನ ತಂದೆಯಾದ ಕರ್ದಮನು ಕರೆಯುತ್ತಿದ್ದಾನೆ. ಮನೆಗೆ ಹೋಗು" ಎಂದು ಹೇಳಿದನು.

೮೩–೮೪. ಉದಾರಬುದ್ಧಿಯಾದ ಆ ಕರ್ದಮಮುನಿಯು ಸಮಾಧಿಯಲ್ಲಿದ್ದುಕೊಂಡೇ ಈ ಮಾತುಗಳೆಲ್ಲವನ್ನೂ ಕೇಳಿ, ಬಹಿರ್ಮುಖನಾಗಿ ಕಣ್ಣುಗಳನ್ನು ತೆರೆದು ನೋಡುವಷ್ಟರಲ್ಲಿಯೆ ಆ ತನ್ನ ಮಗನಾದ ಶುಚಿಷ್ಮಂತನು ಶಿಶುಮಾರನನ್ನು ಹಿಡಿದು ತನ್ನ ಪಾರ್ಶ್ವದಲ್ಲಿಯೆ ಕಿವಿಗೊಟ್ಟು ನಿಂತಿರುವುದನ್ನು ಕಂಡನು.

೮೫. ಆಗ ಆ ಕುಮಾರನು ಒದ್ದೆಯಾದ ಕಾಕಪಕ್ಷಗಳ ತುದಿಯುಳ್ಳವನಾಗಿ ಕೆಂಪಡರಿದ ಕಣ್ಕುಡಿಗಳನ್ನೊಡಗೊಂಡು ಸ್ವಲ್ಪಮಟ್ಟಿಗೆ ಮೊರಟಾಗಿ, ಸ್ವಲ್ಪ ಮುದುಡಿದ ಚರ್ಮವುಳ್ಳವನಾಗಿ ತಳಮಳಗೊಂಡ ಮನಸ್ಸುಳ್ಳವನಾಗಿದ್ದನು.

ಕೃತಪ್ರಣಾಮಮಾಲಿಂಗ್ಯ ಜಿಘ್ರಂಸ್ತನ್ಮುಖಪಂಕಜಂ ।
ಪುನರ್ಜಾತಮಿವಾಮಂಸ್ತ ಪಶ್ಯಂಶ್ಚಾಽಪಿ ಮುಹುರ್ಮುಹುಃ ॥ ೮೬ ॥
ಶತಾನಿ ಪಂಚ ವರ್ಷಾಣಿ ಪ್ರಣಿಧಾನಸ್ಥಿತಸ್ಯ ಹಿ ।
ಕರ್ದಮಸ್ಯ ವ್ಯತೀತಾನಿ ಶಂಭುಮರ್ಚಯತಸ್ತದಾ ॥ ೮೭ ॥
ಕರ್ದಮೋಽಪಿ ಚ ತತ್ಕಾಲಮಜ್ಞಾಸೀತ್ ಕ್ಷಣಸಂಗತಂ ।
ಯತೋ ನ ಪ್ರಭವೇತ್ಕಾಲೋ ಮಹಾಕಾಲಸ್ಯ ಸಂನಿಧೌ ॥ ೮೮ ॥
ತತಸ್ತಂ ತನಯಃ ಪೃಷ್ಟ್ವಾ ಪಿತರಂ ಪ್ರಣಿಪತ್ಯ ಚ ।
ಜಗಾಮ ತೂರ್ಣಂ ತಪಸೇ ಶ್ರೀಮದ್ವಾರಾಣಸೀಂ ಪುರೀಂ ॥ ೮೯ ॥
ತತ್ರ ತಪ್ತ್ವಾ ತಪೋ ಘೋರಂ ಲಿಂಗಂ ಸಂಸ್ಥಾಪ್ಯ ಶಾಂಭವಂ ।
ಪಂಚವರ್ಷಸಹಸ್ರಾಣಿ ಸ್ಥಿತಃ ಪಾಷಾಣನಿಶ್ಚಲಃ ॥ ೯೦ ॥
ಆವಿರಾಸೀನ್ಮಹಾದೇವಸ್ತುಷ್ಟಸ್ತತ್ತಪಸಾ ತತಃ ।
ಉವಾಚ ಕಾರ್ದಮೇ ಬ್ರೂಹಿ ಕಂ ದದಾಮಿ ವರೋತ್ತಮಂ ॥ ೯೧ ॥

ಕಾರ್ದಮಿರುವಾಚ :—

ಯದಿ ನಾಥ ಪ್ರಸನ್ನೋಽಸಿ ಭಕ್ತಾನಾಮನುಕಂಪಕ ।
ಸರ್ವಾಸಾಮಾಧಿಪತ್ಯಂ ಮೇ ದೇಹ್ಯಪಾಂ ಯಾದಸಾಮಪಿ ॥ ೯೨ ॥

---

೮೬. ಅವನು ಭಕ್ತಿಯಿಂದ ನಮಸ್ಕರಿಸಲು ಕರ್ದಮನು ಅವನನ್ನು ಬರಸೆಳೆದು ಆಲಿಂಗಿಸಿ, ಅವನ ಮುಖಕಮಲವನ್ನು ಮುದ್ದಿಸಿ, ಅವನನ್ನೇ ಅಡಿಗಡಿಗೂ ನಟ್ಟನೆ ನೋಡುತ್ತ ಪುನರ್ಜನ್ಮವೆತ್ತಿದನೆಂದು ಭಾವಿಸಿದನು.

೮೭. ಹೀಗೆಯೆ ಆತನು ಸಮಾಧಿನಿಷ್ಠನಾಗಿ ತಪಸ್ಸನ್ನೆಸಗಿ ಶಿವನನ್ನು ಪೂಜಿಸುತ್ತಿರಲು ಐನೂರು ವರ್ಷಗಳು ಕಳೆದುವು.

೮೮. ಆಗ ಆ ಕರ್ದಮಮುನಿಯು ಮಹಾಕಾಲನ ಸನ್ನಿಧಿಯಲ್ಲಿ ಅಷ್ಟೊಂದು ಕಾಲವೂ ಒಂದು ಕ್ಷಣದಂತೆ ಕಳೆದುಹೋದುವನ್ನು ಅರಿತನು

೮೯. ಆ ಸಮಯದಲ್ಲಿ ಅವನ ಮಗನಾದ ಶುಚಿಷ್ಮಂತನು ಅವನನ್ನು ನಮಸ್ಕರಿಸಿ ಬೀಳ್ಕೊಂಡು ತಪಸ್ಸನ್ನೆಸಗಲೋಸುಗ ಕಾಶೀಪಟ್ಟಣಕ್ಕೆ ಜಾಗ್ರತೆಯಾಗಿ ಬಂದು ಸೇರಿದನು.

೯೦-೯೧. ಅಲ್ಲಿ ಶಾಂಭವವಾದ ಲಿಂಗವನ್ನು ಸ್ಥಾಪಿಸಿ, ಕಲ್ಲುಬಂಡೆಯಂತೆ ನಿಶ್ಚಲನಾಗಿ ನಿಂತು, ಐದು ಸಾವಿರ ವರ್ಷಗಳ ಕಾಲ ಘೋರವಾದ ತಪಸ್ಸನ್ನು ಮಾಡಿದನು. ಈ ರೀತಿಯ ಅವನ ತಪಸ್ಸಿನಿಂದ ಸಂತೋಷಗೊಂಡು ಪ್ರತ್ಯಕ್ಷನಾಗಿ, ಶಿವನು ''ಅಯ್ಯಾ, ಕರ್ದಮ ಕುಮಾರನೆ, ಶುಚಿಷ್ಮಂತ! ನಿನಗೆ ಪ್ರಸನ್ನನಾಗಿದ್ದೇನೆ. ಉತ್ತಮ ವರವನ್ನು ಕೇಳು, ಅನುಗ್ರಹಿಸುವೆನು'' ಎಂದು ಹೇಳಿದನು.

೯೨. ಶುಚಿಷ್ಮಂತನು ಹೇಳುತ್ತಾನೆ:— ''ಭಕ್ತಾನುಗ್ರಹತತ್ಪರನಾದ

ಇತಿ ಶ್ರುತ್ವಾ ಮಹೇಶಾನಃ ಸರ್ವಚಿಂತಿತದಃ ಪ್ರಭುಃ ।
ಅಭ್ಯಷಿಂಚತ ತಂ ತತ್ರ ವಾರುಣೇ ಪರಮೇ ಪದೇ ॥ ೯೩ ॥
ರತ್ನಾನಾಮಬ್ಧಿಜಾತಾನಾಮಬ್ಧೀನಾಂ ಸರಿತಾಮಪಿ ।
ಸರಸಾಂ ಪಲ್ವಲಾನಾಂ ಚ ವಾಪ್ಯಂಬುಸ್ರೋತಸಾಂ ಪುನಃ ॥ ೯೪ ॥
ಜಲಾಶಯಾನಾಂ ಸರ್ವೇಷಾಂ ಪ್ರತೀಚ್ಯಾಶ್ಚಾಽಪಿ ವೈ ದಿಶಃ ।
ಅಧೀಶ್ವರಃ ಪಾಶಪಾಣಿರ್ಭವ ಸರ್ವಾಽಮರಪ್ರಿಯಃ ॥ ೯೫ ॥
ದದಾಮಿ ವರಮನ್ಯಂ ಚ ಸರ್ವೇಷಾಂ ಹಿತಕಾರಕಂ ।
ತ್ವಯೈತತ್ ಸ್ಥಾಪಿತಂ ಲಿಂಗಂ ತವ ನಾಮ್ನಾ ಭವಿಷ್ಯತಿ ॥ ೯೬ ॥
ವರುಣೇಶಮಿತಿ ಖ್ಯಾತಂ ವಾರಾಣಸ್ಯಾಂ ಸುಸಿದ್ಧಿದಂ ।
ಮಣಿಕರ್ಣೇಶಲಿಂಗಸ್ಯ ನೈರ್ಋತ್ಯಾಂ ದಿಶಿ ಸಂಸ್ಥಿತಂ ॥ ೯೭ ॥
ಆರಾಧಿತಂ ಸದಾ ಪುಂಸಾಂ ಸರ್ವಜಾಡ್ಯವಿನಾಶಕೃತ್ ।
ವರುಣೇಶಸ್ಯ ಯೇ ಭಕ್ತಾ ನ ತೇಷಾಮಬ್ಭಯಂ ಕ್ವಚಿತ್ ॥ ೯೮ ॥

---

ಓ ಸ್ವಾಮಿಯೆ, ನೀನು ನನ್ನ ವಿಷಯದಲ್ಲಿ ಪ್ರಸನ್ನನಾಗಿರುವುದು ದಿಟವಾದರೆ, ಸಮಸ್ತ ಜಲಜಂತುಗಳಿಗೂ ಸಾಗರಗಳಿಗೂ ಒಡೆತನವನ್ನು ಅನುಗ್ರಹಿಸು.''

೯೩. ಈ ಮಾತನ್ನು ಕೇಳಿ, ಭಕ್ತರ ಅಭೀಷ್ಟವೆಲ್ಲವನ್ನೂ ಸಲ್ಲಿಸುವ ಆ ಪರಮೇಶ್ವರನು ಅತ್ಯುತ್ತಮವಾದ ವರುಣಲೋಕದಲ್ಲಿ ಆ ಶುಚಿಷ್ಮಂತನನ್ನು ನೆಲೆಗೊಳಿಸಿ ಪಟ್ಟಾಭಿಷೇಕವನ್ನು ಮಾಡಿದನು.

೯೪-೯೫ ''ಸಮುದ್ರದಲ್ಲಿ ಉದಿಸಿದ ಸಮಸ್ತ ರತ್ನಸಮೂಹಗಳಿಗೂ, ಆ ಸಮುದ್ರಗಳಿಗೂ, ನದಿಗಳಿಗೂ, ಸರೋವರ ಹಳ್ಳ ಕೊಳ್ಳ ಬಾವಿ ಹೊಳೆಗಳಿಗೂ, ಕೆರೆಗಳಿಗೂ, ಪಶ್ಚಿಮದಿಕ್ಕಿಗೂ ನೀನು ಅಧೀಶ್ವರನೆನಿಸಿ ಪಾಶಪಾಣಿಯಾಗಿ ಸಮಸ್ತ ದೇವತೆಗಳಿಗೂ ಅತ್ಯಂತ ಪ್ರಿಯನಾಗಿರು'' ಎಂದು ಆ ಪರಮೇಶ್ವರನು ಹೇಳಿದನು.

೯೬-೯೭. ''ಎಲೈ ಭಕ್ತನೆ, ನಿನಗೆ ಮತ್ತೊಂದು ವರವನ್ನು ಕೊಡುತ್ತೇನೆ. ಅದು ಎಲ್ಲರಿಗೂ ಹಿತಕರವಾದದ್ದು. ನೀನು ಸ್ಥಾಪಿಸಿರುವ ಈ ಲಿಂಗವು ನಿನ್ನ ಹೆಸರಿನಿಂದಲೆ ವರುಣೇಶ್ವರವೆಂದು ಪ್ರಸಿದ್ಧವಾಗುತ್ತದೆ. ಮಣಿಕರ್ಣೇಶ್ವರ ಲಿಂಗಕ್ಕೆ ನೈರ್ಋತ್ಯದಿಕ್ಕಿನಲ್ಲಿ ನೆಲೆಗೊಂಡಿರುವ ಈ ಲಿಂಗವು ಈ ವಾರಾಣಸೀ ಕ್ಷೇತ್ರದಲ್ಲಿ ಭಕ್ತರಿಗೆ ಸರ್ವಸಿದ್ಧಿಯನ್ನುಂಟುಮಾಡಿಕೊಡುತ್ತದೆ.

೯೮-೯೯. ಈ ವರುಣೇಶ್ವರ ಲಿಂಗವನ್ನು ಆರಾಧಿಸುವ ಮಾನವರಿಗೆ ನಾನು ಸಮಸ್ತ ರೋಗಗಳನ್ನೂ ಪರಿಹರಿಸಿ ಕ್ಷೇಮವನ್ನುಂಟುಮಾಡುತ್ತೇನೆ. ವರುಣೇಶ್ವರನ ಭಕ್ತರಿಗೆ ನೀರಿನ ಭಯವೇ ಇರುವುದಿಲ್ಲ. ಸಂತಾಪಭಯ

ನ ಸಂತಾಪಭಯಂ ತೇಷಾಂ ನಾಽಪಾಯಮರಣಂ ಕ್ವಚಿತ್ ।
ಜಲೋದರಭಯಂ ನೈವ ನ ಭಯಂ ವೈ ತೃಷಃ ಕ್ವಚಿತ್ ॥ ೯೯ ॥
ನೀರಸಾನ್ಯನ್ನಪಾನಾನಿ ವರುಣೇಶ್ವರಸಂಸ್ಮೃತೇಃ ।
ಸರಸಾನಿ ಭವಿಷ್ಯಂತಿ ನಾಽತ್ರ ಕಾರ್ಯಾ ವಿಚಾರಣಾ ॥ ೧೦೦ ॥
ಇತ್ಯುಕ್ತ್ವಾಽಂತರ್ದಧೇ ಶಂಭುರ್ವರುಣೋಽಪಿ ಸ್ವಬಂಧುಭಿಃ ।
ಇಮಂ ಲೋಕಮಲಂಕುರ್ವಂಸ್ತದಾರಭ್ಯ ಸ್ಥಿತೋ ದ್ವಿಜ ॥ ೧೦೧ ॥
ಇದಂ ವರುಣಲೋಕಸ್ಯ ಸ್ವರೂಪಂ ತೇ ನಿರೂಪಿತಂ ।
ಯಚ್ಛ್ರುತ್ವಾ ನ ನರಃ ಕ್ವಾಽಪಿ ದುರಪಾಯೈಃ ಪ್ರಬಾಧ್ಯತೇ ॥ ೧೦೨ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ನಿರ್ಋತಿವರುಣಲೋಕವರ್ಣನಂ" ನಾಮ ದ್ವಾದಶೋಽಧ್ಯಾಯಃ

---

ವಾಗಲಿ ಅಪಮೃತ್ಯುವಾಗಲಿ ಜಲೋದರರೋಗದ ಭಯವಾಗಲಿ ಬಾಯಾರಿಕೆಯಾಗಲಿ ಎಂದಿಗೂ ಸಂಭವಿಸುವುದಿಲ್ಲ.

೧೦೦. ವರುಣೇಶ್ವರನನ್ನು ಸ್ಮರಿಸುವುದರಿಂದಲೆ ನೀರಸಗಳಾದ ಅನ್ನಪಾನಗಳೆಲ್ಲವೂ ರಸಭರಿತಗಳಾಗುತ್ತವೆ. ಈ ವಿಷಯದಲ್ಲಿ ಸಂಶಯವಿಲ್ಲವು."

೧೦೧. ಎಲೈ ಶಿವಶರ್ಮನೆ, ಶಂಭುವು ಆ ಶುಚಿಷ್ಮಂತನಿಗೆ ಈ ರೀತಿ ವಾರುಣಲೋಕಾಧಿಪತ್ಯವನ್ನಿತ್ತು ಈ ಮಾತುಗಳನ್ನು ಹೇಳಿ ಅಲ್ಲಿಯೆ ಅಂತರ್ಧಾನನಾದನು. ಅಂದಿನಿಂದ ವರುಣನಾದ ಆ ಶುಚಿಷ್ಮಂತನು ಬಂಧುಗಳೊಡಗೂಡಿ ಈ ಲೋಕವನ್ನು ಅಲಂಕರಿಸಿ ಆಳುತ್ತಿದ್ದಾನೆ.

೧೦೨. ಹೀಗೆ ಈ ವರುಣಲೋಕದ ಸ್ವರೂಪವನ್ನು ನಿನಗೆ ನಿರೂಪಿಸಿದ್ದಾಯಿತು. ಇದನ್ನು ಕೇಳಿದ ಮಾನವನು ಎಲ್ಲಿಯೂ ಅಪಾಯಗಳಿಗೆ ತುತ್ತಾಗಿ ಬಾಧೆಪಡುವುದಿಲ್ಲ.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ನಿರ್ಋತಿ ವರುಣಲೋಕವರ್ಣನ"ವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತ್ರಯೋದಶೋಽಧ್ಯಾಯಃ

## ಗಂಧವತ್ಯಲಕಾವರ್ಣನಂ

ಗಣಾವೂಚತುಃ :—

ಇಮಾಂ ಗಂಧವತೀಂ ಪುಣ್ಯಾಂ ಪುರೀಂ ವಾಯೋರ್ವಿಲೋಕಯ ।
ವಾರುಣ್ಯಾ ಉತ್ತರೇ ಭಾಗೇ ಮಹಾಭಾಗ್ಯನಿಧೇ ದ್ವಿಜ ॥ ೧ ॥
ಅಸ್ಯಾಂ ಪ್ರಭಂಜನೋ ನಾಮ ಜಗತ್ಪ್ರಾಣೋ ದಿಗೀಶ್ವರಃ ।
ಆರಾಧ್ಯ ಶ್ರೀಮಹಾದೇವಂ ದಿಕ್ಪಾಲತ್ವಮವಾಪ್ತವಾನ್ ॥ ೨ ॥
ಪುರಾ ಕಶ್ಯಪದಾಯಾದಃ ಪೂತಾತ್ಮೇತಿ ಚ ವಿಶ್ರುತಃ ।
ಧೂರ್ಜಟೇ ರಾಜಧಾನ್ಯಾಂ ಸ ಚಚಾರ ವಿಪುಲಂ ತಪಃ ॥ ೩ ॥
ವಾರಾಣಸ್ಯಾಂ ಮಹಾಭಾಗೋ ವರ್ಷಾಣಾಮಯುತಂ ಶತಂ ।
ಸ್ಥಾಪಯಿತ್ವಾ ಮಹಾಲಿಂಗಂ ಪಾವನಂ ಪವನೇಶ್ವರಂ ॥ ೪ ॥
ಯಸ್ಯ ದರ್ಶನಮಾತ್ರೇಣ ಪೂತಾತ್ಮಾ ಜಾಯತೇ ನರಃ ।
ಪಾಪಕಂಚುಕಮುತ್ಸೃಜ್ಯ ಸ ವಸೇತ್ಪಾವನೇ ಪುರೇ ॥ ೫ ॥

---

## ಕನ್ನಡದ ಅನುವಾದ

### ಗಂಧವತೀ ಅಲಕಾಪುರಗಳ ವರ್ಣನ

೧. ಗಣಗಳು ಹೇಳುತ್ತಾರೆ —ಅಯ್ಯಾ ಮಹಾ ಭಾಗ್ಯನಿಧಿಯಾದ ಶಿವಶರ್ಮದ್ವಿಜನೆ, ಈ ವರುಣಲೋಕದ ಉತ್ತರಕ್ಕೆ ವಾಯುದೇವನ ಪಟ್ಟಣವಾದ ಗಂಧವತೀಪುರಿಯು ವಿರಾಜಿಸುತ್ತಿದೆ; ನೋಡು

೨. ಈ ಪಟ್ಟಣದಲ್ಲಿ ಜಗತ್ತಿಗೇ ಪ್ರಾಣಸ್ವರೂಪನಾಗಿ ದಿಗೀಶ್ವರನೆನಿಸಿದ ಪ್ರಭಂಜನನು ನೆಲಸಿರುತ್ತಾನೆ ಇವನು ಶ್ರೀ ಮಹಾದೇವನನ್ನಾರಾಧಿಸಿ ದಿಕ್ಪಾಲಪದವನ್ನು ಪಡೆದವನು

೩. ಹಿಂದೆ ಕಶ್ಯಪನ ಮಗನಾದ ಪೂತಾತ್ಮನೆಂದು ಪ್ರಸಿದ್ಧನಾದೊರ್ವನು ಧೂರ್ಜಟಿಯ ರಾಜಧಾನಿಯಾದ ಕಾಶಿಯಲ್ಲಿ ಮಹತ್ತರವಾದ ತಪಸ್ಸನ್ನೆಸಗಿದನು.

೪. ಆತನು ಆ ವಾರಾಣಸೀ ಕ್ಷೇತ್ರದಲ್ಲಿ ಪವನೇಶ್ವರವೆಂಬ ಮಹಾ ಲಿಂಗವನ್ನು ಸ್ಥಾಪಿಸಿ, ಹತ್ತುಲಕ್ಷ ವರ್ಷಗಳ ಕಾಲ ಕಠಿನವಾದ ತಪಸ್ಸನ್ನೆಸಗಿದನು.

೫. ಆ ಪವನೇಶ್ವರನನ್ನು ಸಂದರ್ಶಿಸಿದ ಮಾನವನು ಪಾಪಕಂಚುಕವನ್ನು ತೆಗೆದೆಸೆದು ಪೂತಾತ್ಮನಾಗಿ ಪವನನ ಈ ಗಂಧವತೀ ಪಟ್ಟಣದಲ್ಲಿ ವಾಸ ಮಾಡುತ್ತಾನೆ.

ತತಸ್ತಸ್ಯೋಗ್ರತಪಸಾ ತಪಸಾಂ ಫಲದಃ ಶಿವಃ ।
ಆವಿರಾಸೀತ್ತತೋ ಲಿಂಗಾಜ್ಜ್ಯೋತೀರೂಪೋ ಮಹೇಶ್ವರಃ ॥ ೬ ॥
ಉವಾಚ ಚ ಪ್ರಸನ್ನಾತ್ಮಾ ಕರುಣಾಮೃತಸಾಗರಃ ।
ಉತ್ತಿಷ್ಠೋತ್ತಿಷ್ಠ ಪೂತಾತ್ಮನ್ ವರಂ ವರಯ ಸುವ್ರತ ॥ ೭ ॥
ಅನೇನ ತಪಸೋಗ್ರೇಣ ಲಿಂಗಸ್ಯಾರಾಧನೇನ ಚ ।
ತವಾಽದೇಯಂ ನ ಪೂತಾತ್ಮಂಸ್ತ್ರೈಲೋಕ್ಯೇ ಸಚರಾಚರೇ ॥ ೮ ॥

ಪೂತಾತ್ಮೋವಾಚ :—

ದೇವದೇವ ಮಹಾದೇವ ದೇವಾನಾಮಭಯಪ್ರದ ।
ಬ್ರಹ್ಮನಾರಾಯಣೇಂದ್ರಾದಿ ಸರ್ವದೇವಪದಪ್ರದ ॥ ೯ ॥
ವೇದಾಸ್ತ್ವಾಂ ನ ಚ ವಿಂದಂತಿ ಕಿಮಾತ್ಮಕ ಇತಿ ಪ್ರಭೋ ।
ಪ್ರಾಪ್ತಾಃ ಶತಪಥತ್ವಂ ಚ ನೇತಿ ನೇತೀತಿ ವಾದಿನಃ ॥ ೧೦ ॥
ಬ್ರಹ್ಮವಿಷ್ಣ್ವೋರಪಿ ಗಿರಾಂ ಗೋಚರೋ ನ ಚ ವಾಕ್ಪತೇಃ ।
ಪ್ರಮಥೇಶಂ ಕಥಂ ಸ್ತೋತುಂ ಮಾದೃಶಃ ಪ್ರಭವೇತ್ಪ್ರಭೋ ॥ ೧೧ ॥

---

೬. ತರುವಾಯ ಇಂತಹ ಉಗ್ರತಪಸ್ಸುಗಳಿಗೆಲ್ಲ ಫಲವನ್ನು ಕೊಡುವ ಪರಮೇಶ್ವರನು ಜ್ಯೋತಿಃಸ್ವರೂಪನಾಗಿ ಆ ಲಿಂಗದಿಂದ ಆವಿರ್ಭವಿಸಿದನು.

೭–೮. ಕರುಣಾಮೃತಸಾಗರನೂ ಪ್ರಸನ್ನಾತ್ಮನೂ ಆದ ಆ ಮಹೇಶ್ವರನು ಅಂತು ಆವಿರ್ಭವಿಸಿ, "ಅಯ್ಯಾ ಸುವ್ರತನೆ, ಪೂತಾತ್ಮಾ! ಏಳು, ವರವನ್ನು ಬೇಡು. ಈ ನಿನ್ನ ಉಗ್ರತಪಸ್ಸಿನಿಂದಲೂ, ಈ ಶಿವಲಿಂಗಾರಾಧನೆಯಿಂದಲೂ ನಿನಗೆ ಕೊಡಬಾರದ್ದು ಚರಾಚರಾತ್ಮಕವಾದ ಈ ಜಗತ್ತಿನಲ್ಲಿ ಯಾವುದೂ ಇರುವುದಿಲ್ಲ" ಎಂದು ಹೇಳಿದನು.

೯. ಪೂತಾತ್ಮನು ಕೇಳುತ್ತಾನೆ.—"ದೇವದೇವ, ಓ ಮಹಾದೇವ! ದೇವತೆಗಳಿಗೆಲ್ಲ ಅಭಯಪ್ರದನಾದ ಪ್ರಭುವೆ; ನೀನು ಬ್ರಹ್ಮ ನಾರಾಯಣ ಮಹೇಂದ್ರಾದಿ ಸಮಸ್ತ ದೇವತೆಗಳಿಗೂ ಪದವಿಗಳನ್ನನುಗ್ರಹಿಸುವವನು.

೧೦. ನೀನು ಇಂಥವನೆಂಬುದನ್ನು ವೇದಗಳೂ ಅರಿಯಲಾರದೆ ಹೋದುವು. ಅವು "ಇದಲ್ಲ ಇದಲ್ಲ" ಎಂದು ಶತಪಥ(ಬ್ರಾಹ್ಮಣ)ತ್ವವನ್ನು ಹೊಂದಿದವು.

೧೧. ಬ್ರಹ್ಮ ವಿಷ್ಣುಗಳಾಗಲಿ, ಸಾಕ್ಷಾತ್ ಜ್ಞಾನನಿಧಿಯಾದ ಸರಸ್ವತೀ ದೇವಿಗಾಗಲಿ, ಆಕೆಯ ಪತಿಯಾದ ವಾಚಸ್ಪತಿಗಾಗಲಿ ಮಾತಿಗೂ ಮನಸ್ಸಿಗೂ ನಿಲುಕದವನು ನೀನು. ಆದುದರಿಂದಲೇ ಪ್ರಭುವೆ, ಪ್ರಮಥೇಶ್ವರನಾದ ನಿನ್ನನ್ನು ನನ್ನಂತಹ ಪಾಮರನು ಸ್ತೋತ್ರಮಾಡುವುದೆಂತು?

ಪ್ರಸಹ್ಯ ಪ್ರಮಿಮಿತೇಶ ಭಕ್ತಿರ್ಮಾಂ ಸ್ತುತಿಕರ್ಮಣಿ ।
ಕರೋಮಿ ಕಿಂ ಜಗನ್ನಾಥ ನ ವಶ್ಯಾನೀಂದ್ರಿಯಾಣಿ ಮೇ ॥ ೧೨ ॥
ವಿಶ್ವಂ ತ್ವಂ ನಾಸ್ತಿ ವೈ ಭೇದಸ್ತ್ವಮೇಕಃ ಸರ್ವಯೋಗತಃ ।
ಸ್ತುತ್ಯಂ ಸ್ತೋತಾ ಸ್ತುತಿಸ್ತ್ವಂ ಚ ಸಗುಣೋ ನಿರ್ಗುಣೋ ಭವಾನ್ ॥೧೩॥
ಸರ್ಗಾತ್ಪುರಾ ಭವಾನೇಕೋ ರೂಪನಾಮವಿವರ್ಜಿತಃ ।
ಯೋಗಿನೋಽಪಿ ನ ತೇ ತತ್ತ್ವಂ ವಿಂದಂತಿ ಪರಮಾರ್ಥತಃ ॥ ೧೪ ॥
ಯದೈಕಲೋ ನ ಶಕ್ನೋಷಿ ರಂತುಂ ಸ್ವೈರಚರ ಪ್ರಭೋ ।
ತದಿಚ್ಛಾ ತವ ಯೋತ್ಪನ್ನಾ ಸೇವ್ಯಾ ಶಕ್ತಿರಭೂತ್ತವ ॥ ೧೫ ॥
ತ್ವಮೇಕೋ ದ್ವಿತ್ವಮಾಪನ್ನಃ ಶಿವಶಕ್ತಿಪ್ರಭೇದತಃ ।
ತ್ವಂ ಜ್ಞಾನರೂಪೋ ಭಗವಾನ್ ಸ್ವೇಚ್ಛಾಶಕ್ತಿಸ್ವರೂಪಿಣೀ ॥ ೧೬ ॥
ಉಭಾಭ್ಯಾಂ ಶಿವಶಕ್ತಿಭ್ಯಾಂ ಯುವಾಭ್ಯಾಂ ನಿಜಲೀಲಯಾ ।
ಉತ್ಪಾದಿತಾ ಕ್ರಿಯಾಶಕ್ತಿಸ್ತತಃ ಸರ್ವಮಿದಂ ಜಗತ್ ॥ ೧೭ ॥

---

೧೨ ಎಲೈ ಜಗನ್ನಾಥನೆ, ಇಷ್ಟಾದರೂ ನಿನ್ನಲ್ಲಿ ನನಗಿರುವ ಅಪರಿಮಿತವಾದ ಭಕ್ತಿಯು ನನ್ನನ್ನು ಸ್ತೋತ್ರಕರ್ಮದಲ್ಲಿ ಪ್ರವರ್ತನೆಗೊಳಿಸುತ್ತಿದೆ. ಆದರೆ ನನ್ನ ಇಂದ್ರಿಯಗಳು ನನ್ನ ಸ್ವಾಧೀನದಲ್ಲೇ ಇಲ್ಲದಿರುವುದರಿಂದ ನಾನು ಆ ರೀತಿ ಸ್ತುತಿಸಲು ಆರದವನಾಗಿದ್ದೇನೆ. ಏನುಮಾಡಲಿ?

೧೩. ನೀನು ಸರ್ವವ್ಯಾಪಿಯಾಗಿರುವುದರಿಂದ ಸಮಸ್ತವೂ ನೀನೊಬ್ಬನೇ ಆಗಿರುವೆ. ವಿಶ್ವವೇ ನೀನು, ನೀನೇ ವಿಶ್ವವು ಅದಕ್ಕೂ ನಿನಗೂ ಯಾವ ಭೇದವೂ ಇರುವುದಿಲ್ಲ. ಸ್ತುತ್ಯನೂ ಸ್ತೋತ್ರಮಾಡುವವನೂ ಸ್ತುತಿಯೂ ನೀನೇ ಆಗಿರುವೆ. ಸಗುಣ ನಿರ್ಗುಣ ಬ್ರಹ್ಮವೂ ನೀನೇ ಆಗಿರುವೆ.

೧೪. ಸೃಷ್ಟಿಗೆ ಮೊದಲು ನೀನು ನಾಮರೂಪವಿವರ್ಜಿತನಾಗಿ, ಏಕೈಕಮಾತ್ರ ಸ್ವರೂಪನಾಗಿ ನೆಲಸಿದ್ದೆ. ಆ ನಿನ್ನನ್ನು ಯೋಗಿಗಳು ಪಾರಮಾರ್ಥಿಕವಾಗಿ ತತ್ತ್ವತಃ ಅರಿಯಲಿಲ್ಲವು.

೧೫. ಎಲೈ ಪ್ರಭುವೆ, ಸರ್ವತಂತ್ರಸ್ವತಂತ್ರನೂ, ಏಕೈಕಸ್ವರೂಪನೂ ಆದ ನೀನು ಯಾವಾಗ ನಿನ್ನಲ್ಲಿ ನೀನೇ ರಮಿಸಲು ಸಮರ್ಥನಾಗದೆ ಹೋಗುವೆಯೊ ಆಗ ಆ ನಿನ್ನ ಬಯಕೆಯು ನಿನ್ನಿಂದಲೇ ಉದಿಸಿ ಶಕ್ತಿಸ್ವರೂಪಿಣಿಯಾಗಿ ನಿನಗೆ ಸೇವ್ಯಳೆನಿಸಿದಳು.

೧೬. ಇಂತು ನೀನೊಬ್ಬನೇ ಶಿವ, ಶಕ್ತಿ ಎಂದು ಎರಡಾದೆ. ಎಲೈ ಶಿವನೆ, ನೀನು ಜ್ಞಾನಸ್ವರೂಪನಾದ ಭಗವಂತನು. ನಿನ್ನ ಇಚ್ಛೆಯೇ ಶಕ್ತಿಸ್ವರೂಪಿಣಿಯು.

೧೭. ಶಿವಶಕ್ತಿಗಳೆನಿಸಿದ ನಿಮ್ಮಿಬ್ಬರ ಲೀಲೆಯಿಂದ ಕ್ರಿಯಾಶಕ್ತಿಯು

ಜ್ಞಾನಶಕ್ತಿರ್ಭವಾನೀಶ ಇಚ್ಛಾಶಕ್ತಿರುಮಾ ಸ್ಮೃತಾ ।
ಕ್ರಿಯಾಶಕ್ತಿರಿದಂ ವಿಶ್ವಮಸ್ಯ ತ್ವಂ ಕಾರಣಂ ತತಃ ॥ ೧೮ ॥
ದಕ್ಷಿಣಾಂಗಂ ತವ ವಿಧಿರ್ವಾಮಾಂಗಂ ತವ ಚಾಽಚ್ಯುತಃ ।
ಚಂದ್ರಸೂರ್ಯಾಽಗ್ನಿ ನೇತ್ರಸ್ತ್ವಂ ತ್ವನ್ನಿಶ್ವಾಸಃ ಶ್ರುತಿತ್ರಯಂ ॥ ೧೯ ॥
ತ್ವತ್ಸ್ವೇದಾದಂಬುನಿಧಯಸ್ತವ ಶ್ರೋತ್ರಂ ಸಮೀರಣಃ ।
ಬಾಹವಸ್ತೇ ದಶದಿಶೋ ಮುಖಂ ತೇ ಬ್ರಾಹ್ಮಣಾಃ ಸ್ಮೃತಾಃ ॥ ೨೦ ॥
ರಾಜನ್ಯವರ್ಯಾಸ್ತೇ ಬಾಹೂ ವೈಶ್ಯಾ ಊರುಸಮುದ್ಭವಾಃ ।
ಪದ್ಭ್ಯಾಂ ಶೂದ್ರಸ್ತ್ವನೇಶಾನ ಕೇಶಾಸ್ತೇ ಜಲದಾಃ ಪ್ರಭೋ ॥ ೨೧ ॥
ತ್ವಂ ಪುಂಪ್ರಕೃತಿರೂಪೇಣ ಬ್ರಹ್ಮಾಂಡಮಸೃಜಃ ಪುರಾ ।
ಮಧ್ಯೇ ಬ್ರಹ್ಮಾಂಡಮಖಿಲಂ ವಿಶ್ವಮೇತಚ್ಚರಾಽಚರಂ ॥ ೨೨ ॥
ಅತಸ್ತ್ವತ್ತೋ ನ ಮನ್ಯೇಽಹಂ ಕಿಂಚಿದ್ಭಿನ್ನಂ ಜಗನ್ಮಯ ।
ತ್ವಯಿ ಸರ್ವಾಣಿ ಭೂತಾನಿ ಸರ್ವಭೂತಮಯೋ ಭವಾನ್ ॥ ೨೩ ॥

---

ಉತ್ಪಾದಿತವಾಯಿತು. ಆ ಕ್ರಿಯಾಶಕ್ತಿಯಿಂದಲೆ ಈ ಜಗತ್ತೆಲ್ಲವೂ ನಿರ್ಮಾಣವಾಯಿತು.

೧೮. ಓ ಪರಮೇಶ್ವರ, ನೀನೇ ಜ್ಞಾನಶಕ್ತಿಯು. ನಿನ್ನ ಸಹಧರ್ಮಿಣಿಯಾದ ಉಮಾದೇವಿಯೆ ಇಚ್ಛಾಶಕ್ತಿಯೆನಿಸಿರುವಳು. ನಿನ್ನ ಕ್ರಿಯಾಶಕ್ತಿಯೇ ಈ ಪ್ರಪಂಚವು. ಸಮಸ್ತಕ್ಕೂ ನೀನೇ ಮೂಲಕಾರಣಸ್ವರೂಪನು.

೧೯. ನಿನ್ನ ದಕ್ಷಿಣಾಂಗವೇ ಸೃಷ್ಟಿಕರ್ತನಾದ ವಿಧಾತೃವು. ವಾಮಾಂಗವೇ ಪಾಲನಕರ್ತನಾದ ಅಚ್ಯುತನು. ನೀನು ಚಂದ್ರಸೂರ್ಯಾಗ್ನಿಗಳೆಂಬ ತ್ರಿಣೇತ್ರಗಳನ್ನು ತಳೆದಿದ್ದೀಯೆ. ಪ್ರಭುವೆ, ನಿನ್ನ ನಿಃಶ್ವಾಸವೇ ಋಗ್ವೇದಾದಿ ಶ್ರುತಿತ್ರಯವು.

೨೦. ನಿನ್ನ ಬೆವರ್ಹನಿಗಳೇ ಸಪ್ತ ಸಾಗರಗಳು. ನಿನ್ನ ಶ್ರೋತ್ರವೇ ವಾಯುವು. ನಿನ್ನ ಬಾಹುಗಳೇ ದಶದಿಶೆಗಳು. ನಿನ್ನ ಮುಖವು ಬ್ರಾಹ್ಮಣರೆಂದು ತಿಳಿಯಲಾಗಿದೆ.

೨೧. ಕ್ಷತ್ರಿಯರು ನಿನ್ನ ತೋಳುಗಳಿಂದಲೂ ವೈಶ್ಯರು ನಿನ್ನ ಊರುಗಳಿಂದಲೂ ಶೂದ್ರರು ನಿನ್ನಡಿಗಳಿಂದಲೂ ಉದ್ಭವಿಸಿದರು. ನಿನ್ನ ಕೇಶಗಳೇ ಮುಗಿಲುಗಳೆನಿಸಿವೆ.

೨೨. ಪೂರ್ವದಲ್ಲಿ ನೀನು ಪ್ರಕೃತಿಸ್ವರೂಪನಾಗಿ ಬ್ರಹ್ಮಾಂಡವನ್ನು ಸೃಜಿಸಿದೆ. ತರುವಾಯ ಆ ಬ್ರಹ್ಮಾಂಡಮಧ್ಯದಲ್ಲಿ ಚರಾಚರಾತ್ಮಕವಾದ ಈ ವಿಶ್ವವನ್ನು ನಿರ್ಮಿಸಿದೆ.

೨೩. ಓ ಜಗನ್ಮಯನೆ, ಈ ಕಾರಣದಿಂದ ನಿನ್ನೊಬ್ಬನನ್ನುಳಿದು ನಿನ್ನಿಂದ

ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ನಮೋ ನಮಃ ।
ಅಯಮೇವ ವರೋ ನಾಥ ತ್ವಯಿ ಮೇಽಸ್ತು ಸ್ಥಿರಾ ಮತಿಃ ॥ ೨೪ ॥
ಇತ್ಯುಕ್ತವತಿ ದೇವೇಶಸ್ತಸ್ಮಿನ್ ಪೂತಾತ್ಮನಿ ಪ್ರಭುಃ ।
ಸ್ವಮೂರ್ತಿತ್ವಂ ಸಮಾರೋಪ್ಯ ದಿಕ್ಪಾಲಪದಮಾದಧೇ ॥ ೨೫ ॥
ಸರ್ವಗೋ ಮಮ ರೂಪೇಣ ಸರ್ವತತ್ತ್ವಾವಬೋಧಕಃ ।
ಸರ್ವೇಷಾಮಾಯುಷೋ ರೂಪಂ ಭವಾನೇವ ಭವಿಷ್ಯತಿ ॥ ೨೬ ॥
ತವ ಲಿಂಗಮಿದಂ ದಿವ್ಯಂ ಯೇ ದ್ರಕ್ಷ್ಯಂತೀಹ ಮಾನವಾಃ ।
ಸರ್ವಭೋಗಸಮೃದ್ಧಾಸ್ತೇ ತ್ವಲ್ಲೋಕಸುಖಭಾಗಿನಃ ॥ ೨೭ ॥
ಪವಮಾನೇಶ್ವರಂ ಲಿಂಗಂ ಮಧ್ಯೇ ಜನ್ಮ ಸಕೃನ್ನರಃ ।
ಯಥೋಕ್ತವಿಧಿನಾಪೂಜ್ಯ ಸುಗಂಧಸ್ನಪನಾದಿಭಿಃ ॥ ೨೮ ॥
ಸುಗಂಧಚಂದನೈಃ ಪುಷ್ಪೈರ್ಮನು ಲೋಕೇ ಮಹೀಯತೇ ।
ಜ್ಯೇಷ್ಠೇಶಾತ್ಪಶ್ಚಿಮೇ ಭಾಗೇ ವಾಯುಕುಂಡೋತ್ತರೇಣತು ॥ ೨೯ ॥

---

ಬೇರೆಯಾದ ಯಾರನ್ನೂ ನಾನರಿಯೆನು. ಸಮಸ್ತ ಭೂತಗಳೂ ನಿನ್ನಲ್ಲಿಯೇ ಅಡಗಿರುವುವು. ನೀನು ಸರ್ವಭೂತಮಯನು.

೨೪. ಓ ಮಹೇಶ್ವರ, ನಿನಗೆ ನಮೊನಮೊ ಎನ್ನುವೆ. ಸತತವೂ ನಾನು ನಿನ್ನನ್ನು ನಮಸ್ಕರಿಸುತ್ತಲೇ ಇರುವ ಸ್ಥಿರಮತಿಯೊಂದು ನನಗಿರಲಿ ನಾಥ! ಇದೇ ವರದನಾದ ನೀನು ನನಗೆ ಅನುಗ್ರಹಿಸುವ ವರವಾಗಲಿ."

೨೫. ಪೂತಾತ್ಮನು ಈ ರೀತಿಯಾಗಿ ನುಡಿದು ಸುಮ್ಮನಾಗಲು ದೇವ ದೇವೇಶ್ವರನಾದ ಮಹೇಶ್ವರನು ಅವನಲ್ಲಿ ಸ್ವಮೂರ್ತಿತ್ವವನ್ನಾರೋಪಿಸಿ ಅವನನ್ನು ದಿಕ್ಪಾಲಕಪಟ್ಟಕ್ಕೇರಿಸಿದನು.

೨೬. "ಅಯ್ಯಾ ಭಕ್ತನೆ, ನೀನು ನನ್ನ ಸ್ವರೂಪದಿಂದ ಎಲ್ಲೆಡೆಯಲ್ಲಿಯೂ ಸಂಚರಿಸುವ ಸಾಮರ್ಥ್ಯವುಳ್ಳವನಾಗಿ ಸಕಲ ತತ್ತ್ವಾರ್ಥಗಳನ್ನೂ ಬಲ್ಲವನಾಗಿ, ಪ್ರಪಂಚದ ಸಮಸ್ತ ಪ್ರಾಣಿಗಳ ಆಯುಸ್ಸಿನ ಸ್ವರೂಪವಾಗಿರುತ್ತೀಯೆ.

೨೭. ನೀನು ಸ್ಥಾಪಿಸಿದ ಈ ದಿವ್ಯಲಿಂಗವನ್ನು ಸಂದರ್ಶಿಸಿದ ಮಾನವರು ಸಮಸ್ತಭೋಗಭಾಗ್ಯಗಳಿಂದ ಸಮೃದ್ಧರಾಗಿ ನಿನ್ನ ಲೋಕದಲ್ಲಿ ವಾಸ ಮಾಡುತ್ತಾರೆ.

೨೮–೩೦. ಮಾನವನು ತನ್ನ ಜೀವಿತಕಾಲದಲ್ಲಿ ಒಮ್ಮೆಯಾದರೂ ಪವಮಾನೇಶ್ವರವೆಂದು ಪ್ರಸಿದ್ಧವಾದ ಈ ಲಿಂಗವನ್ನು ಯಥೋಕ್ತವಿಧಿಯಿಂದಲೂ ಸುಗಂಧಸ್ನಪನಾದಿಗಳಿಂದಲೂ, ಸುಗಂಧಚಂದನದಿಂದಲೂ, ಪುಷ್ಪದಿಂದಲೂ ಪೂಜಿಸಿದುದಾದರೆ, ನನ್ನ ಲೋಕದಲ್ಲಿ ಸುಖಪಡುತ್ತಾರೆ. ಜ್ಯೇಷ್ಠೇಶ್ವರನ ಪಶ್ಚಿಮದಿಕ್ಕಿಗೆ ವಾಯುಕುಂಡಕ್ಕೆ ಉತ್ತರದಲ್ಲಿ ನಿನ್ನಿಂದ ಪ್ರತಿಷ್ಠಿತವಾಗಿರುವ

ಪಾವಮಾನಂ ಸಮಾರಾಧ್ಯ ಪೂತೋ ಭವತಿ ತತ್‌ಕ್ಷಣಾತ್ ।
ಇತಿ ದತ್ವಾ ವರಾನ್ದೇವಸ್ತಸ್ಮಿಲ್ಲಿಂಗೇ ಲಯಂ ಯಯೌ ॥ ೩೦ ॥

ಗಣಾವೂಚತುಃ:—

ಇತಿ ಗಂಧವತೀಪುರ್ಯಾಃ ಸ್ವರೂಪಂ ತೇ ನಿರೂಪಿತಂ ।
ತಸ್ಯಾಃ ಪ್ರಾಚ್ಯಾಂ ಕುಬೇರಸ್ಯ ಶ್ರೀಮತ್ಯೇಷಾಽಲಕಾಪುರೀ ॥ ೩೧ ॥
ಶಂಭೋಃ ಸಖಿತ್ವಮಾಪೇದೇ ನಾಥೋಽಸ್ಯಾ ಭಕ್ತಿಯೋಗತಃ ।
ನಿಧೀನಾಂ ಪದ್ಮಮುಖ್ಯಾನಾಂ ದಾತಾ ಭೋಕ್ತಾ ಹರಾರ್ಚನಾತ್ ॥ ೩೨ ॥

ಶಿವಶರ್ಮೋವಾಚ :—

ಕೋಽಸೌ ಕಸ್ಯ ಪುನಃ ಕೀದೃಕ್ ಭಕ್ತಿರಸ್ಯ ಸದಾಶಿವೇ ।
ಯಯಾ ಸಖಿತ್ವಮಾಪನ್ನೋ ದೇವದೇವಸ್ಯ ಧೂರ್ಜಟೇಃ ॥ ೩೩ ॥
ಇತಿ ಶ್ರೋತುಂ ಮಮ ಮನಃ ಶ್ರುತಿಗೋಚರತಾಂ ಗತಂ ।
ಯುವಯೋರ್ವಾಕ್‌ಸುಧಾಸ್ವಾದಮೇದುರೋ ದರಮಂಥರಂ ॥ ೩೪ ॥

---

ಈ ಪವಮಾನೇಶ್ವರ ಲಿಂಗವನ್ನು ಆರಾಧಿಸಿದ ಮಾನವನು ತತ್‌ಕ್ಷಣವೆ ಪರಿಶುದ್ಧನಾಗುತ್ತಾನೆ" ಎಂಬೀ ಪ್ರಕಾರವಾಗಿ ಆ ಪರಮೇಶ್ವರನು ಪೂತಾತ ನಿಗೆ ವರಗಳನ್ನಿತ್ತು ಆ ಲಿಂಗದಲ್ಲಿಯೆ ಅಂತರ್ಧಾನವಾದನು.

೩೧. ಗಣಗಳು ಹೇಳುತ್ತಾರೆ·—ಅಯ್ಯಾ ಶಿವಶರ್ಮನೆ, ಈ ಪ್ರಕಾರವಾ ಈ ಗಂಧವತೀಪಟ್ಟಣದ ಸ್ವರೂಪವನ್ನು ನಿರೂಪಿಸಿದ್ದಾಯಿತು. ಈ ಗಂಧವತಿ ಪಟ್ಟಣಕ್ಕೆ ಪೂರ್ವದಲ್ಲಿ ಕಂಗೊಳಿಸುತ್ತಿರುವುದು ಕುಬೇರನ ಸರ್ವೈಶ್ವರ್ಯ ಸಮೃದ್ಧವಾದ ಅಲಕಾಪಟ್ಟಣವು

೩೨. ಅಯ್ಯಾ ವಿಪ್ರನೆ, ಈ ಪಟ್ಟಣದೊಡೆಯನಾದ ಕುಬೇರನು ಕೂಡ ಭಕ್ತಿ ಯೋಗದಿಂದಲೆ ಪರಮೇಶ್ವರನಿಗೆ ಪರಮಮಿತ್ರನೆನಿಸಿ, ಪದ್ಮವೇ ಮೊದಲಾ ನವನಿಧಿಗಳಿಗೆ ಸ್ವಾಮಿಯೆನಿಸಿದ್ದಾನೆ. ಇಷ್ಟೆ ಅಲ್ಲದೆ ಆ ನಿಧಿಗಳನ್ನು ಅನುಭವಿಸ ವವನೂ ಆಗಿದ್ದಾನೆ.

೩೩–೩೪. ಶಿವಶರ್ಮನು ಕೇಳುತ್ತಾನೆ —ಎಲೈ ವಿಷ್ಣುಪಾರ್ಷದ ಈ ಅಲಕಾಪುರದ ಒಡೆಯನೆಂಬವನಾರು? ಈತನು ಯಾರ ಮಗನು ಪರಮೇಶ್ವರನಲ್ಲಿ ಈತನಿಗಿರುವ ಭಕ್ತಿಯೆಂಥದು? ದೇವದೇವನಾದ ಧೂರ್ಜ ಯಲ್ಲಿ ಇವನು ಆ ಭಕ್ತಿಯೋಗದಿಂದ ಮಿತ್ರನಾದುದೆಂತು? ಈ ವಿಚಾರವನ ಕೇಳಲು ನನ್ನ ಮನಸ್ಸು ಬಯಸುತ್ತಿದೆ. ನಿಮ್ಮಿರ್ವರ ವಾಕ್ಸುಧೆಯನ ಸ್ವಾದಿಸಿ ನನ್ನ ಮನಸ್ಸು ಅತ್ಯಂತವಾಗಿ ತೃಪ್ತಿಯನ್ನೈದುತ್ತಿದೆ.

ಗಣಾವೂಚತುಃ :—

ಶಿವಶರ್ಮನ್ ಮಹಾಪ್ರಾಜ್ಞ ಪರಿಶುದ್ಧೇಂದ್ರಿಯೇಶ್ವರ ।
ಸುತೀರ್ಥಕ್ಷಾಲಿತಾಽಶೇಷಜನ್ಮಜಾತಮಹಾಽಮಲ ॥ ೩೫ ॥
ಸುಹೃದಿ ಪ್ರೇಮಸಂಪನ್ನೇ ತ್ವಯ್ಯನುದ್ಯಂ ನ ಕಿಂಚನ ।
ಸಾಧುಭಿಃ ಸಹ ಸಂವಾದಃ ಸರ್ವಶ್ರೇಯೋಽಭಿವೃದ್ಧಯೇ ॥ ೩೬ ॥
ಆಸೀತ್ಕಾಂಪಿಲ್ಯನಗರೇ ಸೋಮಯಾಜಿಕುಲೋದ್ಭವಃ ।
ದೀಕ್ಷಿತೋ ಯಜ್ಞದತ್ತಾಖ್ಯೋ ಯಜ್ಞವಿದ್ಯಾವಿಶಾರದಃ ॥ ೩೭ ॥
ವೇದವೇದಾಂಗವೇದಾರ್ಥಾನ್ ವೇದೋಕ್ತಾಚಾರಚಂಚುರಃ ।
ರಾಜಮಾನ್ಯೋ ಬಹುಧನೋ ವದಾನ್ಯಃ ಕೀರ್ತಿಭಾಜನಂ ॥ ೩೮ ॥
ಅಗ್ನಿ ಶುಶ್ರೂಷಣರತೋ ವೇದಾಽಧ್ಯಯನ ತತ್ಪರಃ ।
ತಸ್ಯ ಪುತ್ರೋ ಗುಣನಿಧಿಶ್ಚಂದ್ರಬಿಂಬಸಮಾಕೃತಿಃ ॥ ೩೯ ॥
ಕೃತೋಪನಯನಃ ಸೋಽಥ ವಿದ್ಯಾಂ ಜಗ್ರಾಹಭೂರಿಶಃ ।
ಅಥ ಪಿತ್ರಾಽನಭಿಜ್ಞಾತೋ ದ್ಯೂತಕರ್ಮರತೋಽಭವತ್ ॥ ೪೦ ॥

---

೩೫–೩೬. ಗಣಗಳು ಹೇಳುತ್ತಾರೆ —ಅಯ್ಯಾ ಶಿವಶರ್ಮನೆ, ನೀನು ಮಹಾಪ್ರಾಜ್ಞನು. ಪರಿಶುದ್ಧವಾದ ಇಂದ್ರಿಯಗಳುಳ್ಳವನೂ, ಜನ್ಮಜನ್ಮಾಂತರ ಗಳಲ್ಲಿಯ ಪಾಪಮಲಗಳನ್ನೆಲ್ಲ ತೀರ್ಥಕ್ಷೇತ್ರಾದಿಗಳಲ್ಲಿ ಸ್ನಾನದಾನಾದಿಗಳಿಂದ ತೊಳೆದವನೂ ಆಗಿದ್ದೀಯೆ. ಇಂತಹ ಪ್ರೇಮಸಂಪನ್ನನೂ, ಮಿತ್ರನೂ ಆದ ನಿನ್ನಲ್ಲಿ ಹೇಳದಿರುವುದು ಏನೂ ಇರುವುದಿಲ್ಲ. ಸಾಧುಗಳೊಡನೆ ಸಂವಾದವನ್ನು ಬೆಳಸುವುದು ಎಲ್ಲ ಬಗೆಯ ಶ್ರೇಯಸ್ಸುಗಳ ಅಭಿವೃದ್ಧಿಯನ್ನೂ ಪಡೆಯುವುದಕ್ಕಾಗಿ ಎಂಬು ದನ್ನು ನಾವು ಬಲ್ಲೆವು

೩೭. ಅಯ್ಯಾ ದ್ವಿಜನೆ, ಆಲಿಸು. ಪೂರ್ವದಲ್ಲಿ ಕಾಂಪಿಲ್ಯವೆಂಬ ನಗರದಲ್ಲಿ ಸೋಮಯಾಜಿಗಳ ವಂಶದಲ್ಲಿ ಜನಿಸಿ ಯಜ್ಞವಿದ್ಯಾವಿಶಾರದನೆನಿಸಿದ ಯಜ್ಞದತ್ತ ದೀಕ್ಷಿತನೆಂಬುವನೊಬ್ಬನಿದ್ದನು.

೩೮. ಈತನು ವೇದವೇದಾಂಗಗಳಲ್ಲಿ ಮಹಾ ಪಂಡಿತನೇ ಅಲ್ಲದೆ ವೇದಾರ್ಥವನ್ನು ಬಹು ಚೆನ್ನಾಗಿ ಬಲ್ಲವನಾಗಿಯೂ ವೇದೋಕ್ತವಾದ ಆಚಾರ ಗಳನ್ನು ಬಿಡದೆ ನಡೆಸುವುದರಲ್ಲಿ ಬಹಳ ದಕ್ಷನಾಗಿಯೂ ಮಹಾರಾಜ ಮಾನ್ಯನಾಗಿ ಶ್ರೀಮಂತನಾಗಿ ದಾತೃವೆನಿಸಿ ಅಪಾರವಾದ ಕೀರ್ತಿಗೆ ಪಾತ್ರನೆನಿಸಿದ್ದನು

೩೯ ಅಗ್ನಿ ಶುಶ್ರೂಷೆಯನ್ನು ಮಾಡುವುದರಲ್ಲಿ ಸತತವೂ ಆಸಕ್ತನಾಗಿ, ವೇದಾಧ್ಯಯನತತ್ಪರನಾಗಿಯೂ ಇದ್ದ ಈ ಯಜ್ಞದತ್ತನಿಗೆ ಚಂದ್ರಬಿಂಬದಂತೆ ಬಹು ಮನೋಹರನಾಗಿ ಕಂಗೊಳಿಸುತ್ತಿದ್ದ ಗುಣನಿಧಿಯೆಂಬ ಮಗನಿದ್ದನು.

೪೦. ಈ ಗುಣನಿಧಿಯು ಸಕಾಲದಲ್ಲಿ ತಂದೆಯಿಂದ ಉಪನೀತನಾಗಿ

ಆದಾಯಾದಾಯ ಬಹುಶೋ ಧನಂ ಮಾತುಃ ಸಕಾಶತಃ ।
ದದಾತಿ ದ್ಯೂತಕಾರೇಭ್ಯೋ ಮೈತ್ರೀಂ ತೈಶ್ಚ ಚಕಾರ ಸಃ ॥ ೪೧ ॥
ಸಂತ್ಯಕ್ತಬ್ರಾಹ್ಮಣಾಚಾರಃ ಸಂಧ್ಯಾಸ್ನಾನಪರಾಙ್ಮುಖಃ ।
ನಿಂದಕೋ ವೇದಶಾಸ್ತ್ರಾಣಾಂ ದೇವಬ್ರಾಹ್ಮಣನಿಂದಕಃ ॥ ೪೨ ॥
ಸ್ಮೃತ್ಯಾಚಾರವಿಹೀನಸ್ತು ಗೀತವಾದ್ಯವಿನೋದಭಾಕ್ ।
ನಟಪಾಖಂಡಿಭಂಡೈಶ್ಚ ಬದ್ಧಪ್ರೇಮಪರಂಪರಃ ॥ ೪೩ ॥
ಪ್ರೇರಿತೋಽಪಿ ಜನನ್ಯಾ ಸ ನಯಾತಿ ಪಿತುರಂತಿಕಂ ।
ಗೃಹಕಾರ್ಯಾಂತರವ್ಯಗ್ರೋ ದೀಕ್ಷಿತೋ ದೀಕ್ಷಿತಾಯಿನೀಂ ॥ ೪೪ ॥
ಯದಾ ಯದೈವ ತಾಂ ಪೃಚ್ಛೇದಯೇ ಗುಣನಿಧಿಃ ಸುತಃ ।
ನ ದೃಶ್ಯತೇ ಮಯಾಗೇಹೇ ಕ್ವ ಯಾತಿ ವಿದಧಾತಿ ಕಿಂ ॥ ೪೫ ॥
ತದಾ ತದೇತಿ ಸಾ ಬ್ರೂಯಾದಿದಾನೀಂ ಸ ಬಹಿರ್ಗತಃ ।
ಸ್ನಾತ್ವಾ ಸಮರ್ಚ್ಯ ವೈ ದೇವಾನೇತಾವಂತಮನೇಹಸಂ ॥ ೪೬ ॥

---

ವಿದ್ಯೆಯನ್ನು ಅಖಂಡವಾಗಿ ಗ್ರಹಿಸಿದನು. ಆದರೂ ಪೂರ್ವಜನ್ಮದ ವಾಸನಾ ವಿಶೇಷದಿಂದ ಇವನು ತಂದೆಗೆ ತಿಳಿಯದಂತೆಯೆ ಜೂಜಾಡುವುದರಲ್ಲಿ ನಿರತ ನಾದನು.

೪೧. ತಾಯಿಯಿಂದ ಆಗಿಂದಾಗ್ಗೆ ಬಹಳವಾಗಿ ಹಣವನ್ನು ತೆಗೆದುಕೊಂಡು ಹೋಗಿ ಜೊತೆಯ ಜೂಜುಕೋರರಿಗೆ ಕೊಟ್ಟು ಅವರೊಡನೆ ಸ್ನೇಹವನ್ನು ಮಾಡಿ ಕೊಂಡನು

೪೨ ಕೆಲವು ಕಾಲದಮೇಲೆ ಇವನು ಬ್ರಾಹ್ಮಣಾಚಾರವನ್ನೆಲ್ಲ ಬದಿಗಿಟ್ಟು ಸ್ನಾನ ಸಂಧ್ಯಾವಂದನೆಗಳಿಗೆ ಪರಾಙ್ಮುಖನೆನಿಸಿ, ವೇದಶಾಸ್ತ್ರಗಳನ್ನೂ ಬ್ರಾಹ್ಮಣ ರನ್ನೂ ಹಳಿಯತೊಡಗಿದನು.

೪೩ ಸ್ಮೃತ್ಯುಕ್ತವಾದ ಆಚಾರಗಳನ್ನು ತೊರೆದು ಗೀತ ವಾದ್ಯ ವಿನೋದ ಗಳಲ್ಲಿ ತೊಡಗಿ, ನಟುವರಲ್ಲಿಯೂ ಪಾಖಂಡಿಗಳಲ್ಲಿಯೂ ಭಂಡರಲ್ಲಿಯೂ ಬಹಳ ವಾಗಿ ವಿಶ್ವಾಸವನ್ನು ಬೆಳಸಿದನು.

೪೪. ತಾಯಿಯೂ, ಇವನನ್ನು ಎಷ್ಟೋ ಬಗೆಯಿಂದ ಪ್ರೇರಿಸಿ ಕಳುಹಿಸಿ ದರೂ ಇವನು ತಂದೆಯ ಬಳಿಗೆ ಹೋಗುತ್ತಲೆ ಇರಲಿಲ್ಲ. ಮನೆಗೆಲಸಗಳಲ್ಲಿಯೇ ತೊಡಗಿ ಯಜ್ಞಕರ್ಮಗಳಲ್ಲಿ ನಿರತನಾಗಿದ್ದ ಯಜ್ಞದತ್ತನೂ ಇವನ ವಿಷಯ ವನ್ನು ಅರಿತು ಕೇಳಲಿಲ್ಲ.

೪೫–೪೬. ಅವನು ಹೆಂಡತಿಯನ್ನು "ಎಲೌ, ನಮ್ಮ ಮಗನಾದ ಗುಣ ನಿಧಿಯೆಲ್ಲಿ? ಆವನನ್ನು ನಾನು ಮನೆಯಲ್ಲಿಯೇ ಕಾಣುವುದಿಲ್ಲವಲ್ಲ. ಎಲ್ಲಿಗೆ ಹೋಗುತ್ತಾನೆ, ಏನುಮಾಡುತ್ತಾನೆ?" ಎಂದು ಕೇಳಿದಾಗಲೆಲ್ಲ ಆ ದೀಕ್ಷಿತನಿಗೆ

ಅಧೀತ್ಯಾಽಧ್ಯಯನಾರ್ಥಂ ಸ ದ್ವಿತ್ರೈರ್ಮಿತ್ರೈಃ ಸಮಂ ಯಯೌ ।
ಏಕಪುತ್ರೇತಿ ತನ್ಮಾತಾ ಪ್ರತಾರಯತಿ ದೀಕ್ಷಿತಂ ॥ ೪೭ ॥
ನ ತತ್ಕರ್ಮ ಚ ತದ್ವೃತ್ತಂ ಕಿಂಚಿದ್ವೇತ್ತಿ ಸ ದೀಕ್ಷಿತಃ ।
ಸ ಚ ಕೇಶಾಂತಕರ್ಮಾಸ್ಯ ಕೃತ್ವಾ ವರ್ಷೇಽಥ ಷೋಡಶೇ ॥ ೪೮ ॥
ಗೃಹ್ಯೋಕ್ತೇನ ವಿಧಾನೇನ ಪಾಣಿಗ್ರಾಹಮಕಾರಯತ್ ।
ಪ್ರತ್ಯಹಂ ತಸ್ಯ ಜನನೀ ಸುತಂ ಗುಣನಿಧಿಂ ಮೃದು ॥ ೪೯ ॥
ಶಾಸ್ತಿ ಸ್ನೇಹಾರ್ದ್ರಹೃದಯಾ ಕ್ರೋಧನಸ್ತೇ ಪಿತೇತ್ಯಲಂ ।
ಯದಿ ಜ್ಞಾಸ್ಯತಿ ತೇ ವೃತ್ತಂ ತ್ವಾಂ ಚ ಮಾಂ ತಾಡಯಿಷ್ಯತಿ ॥ ೫೦ ॥
ಆಚ್ಛಾದಯಾಮಿ ತೇ ನಿತ್ಯಂ ಪಿತುರಗ್ರೇ ಕುಚೇಷ್ಟಿತಂ ।
ಲೋಕಮಾನ್ಯೋಽಸ್ತಿ ತೇ ತಾತಃ ಸದಾಚಾರೈರ್ನ ವೈಃ ಧನೈಃ ॥ ೫೧ ॥
ಬ್ರಾಹ್ಮಣಾನಾಂ ಧನಂ ಪುತ್ರ ಸದ್ವಿದ್ಯಾ ಸಾಧುಸಂಗಮಃ ।
ಸಚ್ಛ್ರೋತ್ರಿಯಾಸ್ತ್ವನೂಚಾನಾ ದೀಕ್ಷಿತಾಃ ಸೋಮಯಾಜಿನಃ ॥ ೫೨ ॥
ಇತಿ ರೂಢಿಮಿಹ ಪ್ರಾಪ್ತಾಸ್ತವ ಪೂರ್ವಪಿತಾಮಹಾಃ ।
ತ್ಯಕ್ತ್ವಾ ದುರ್ವೃತ್ತಸಂಸರ್ಗಂ ಸಾಧುಸಂಗರತೋಭವ ॥ ೫೩ ॥

---

ತಾಯಿಯು, “ಈಗಲೆ ಹೊರಗೆ ಹೋದನು. ಅವನು ಈವರೆಗೂ ಸ್ನಾನಮಾಡಿ, ಬಹಳ ಹೊತ್ತು ದೇವತಾರ್ಚನೆಯನ್ನು ಮಾಡುತ್ತಿದ್ದು ಅಧ್ಯಯನಮಾಡಿ ಆ ವೇದಾಧ್ಯಯನಕ್ಕೆಂದೇ ಯಾರೋ ಇಬ್ಬರು ಸ್ನೇಹಿತರೊಡನೆ ಹೊರಗೆ ಹೋದನು” ಎಂದು ಹೇಳುತ್ತಿದ್ದಳು. ಅವಳು ಏಕಪುತ್ರನೆಂಬ ವ್ಯಾಮೋಹದಿಂದ ದೀಕ್ಷಿತನಿಗೆ ಈ ರೀತಿ ಹೇಳಿ ಮೋಸಗೊಳಿಸುತ್ತಿದ್ದಳು.

೪೮–೫೧ ಇದರಿಂದ ಯಜ್ಞದತ್ತದೀಕ್ಷಿತನಿಗೆ ಗುಣನಿಧಿಯ ನಡತೆಯಾಗಲಿ ಅವನು ಮಾಡುತ್ತಿದ್ದ ಕೆಲಸವಾಗಲಿ ತಿಳಿಯುತ್ತಿರಲಿಲ್ಲ. ಆದುದರಿಂದ ಅವನು ಆ ಹುಡುಗನ ಹದಿನಾರನೆಯ ವರ್ಷದಲ್ಲಿ ಮಾಡಬೇಕಾದ ಗೌದಾನಿಕ ಕರ್ಮವನ್ನು ಸಾಂಗಗೊಳಿಸಿ. ಸ್ವಶಾಖೋಕ್ತವಾದ ಆಶ್ವಲಾಯನ ಸೂತ್ರ ವಿಧಾನದಿಂದ ಅವನಿಗೆ ಮದುವೆಯನ್ನು ಮಾಡಿದನು. ಇದಾದಮೇಲೆ ಅವನ ತಾಯಿಯು ಪ್ರತಿನಿತ್ಯವೂ ಅವನನ್ನು ಕರೆದು ಸ್ನೇಹಾರ್ದ್ರಹೃದಯಳಾಗಿ, “ಮಗೂ, ನಿಮ್ಮ ತಂದೆಯು ಬಹಳ ಕೋಪಿಷ್ಠರು. ನಿನ್ನ ನಡತೆಯೇನಾದರೂ ಅವರಿಗೆ ತಿಳಿದರೆ ನಿನ್ನನ್ನೂ ನನ್ನನ್ನೂ ಇಬ್ಬರನ್ನೂ ಹೊಡೆಯುತ್ತಾರೆ. ನಾನು ನಿತ್ಯವೂ ನಿನ್ನ ಈ ದುಶ್ಚೇಷ್ಟೆಯನ್ನು ಅವರಲ್ಲಿ ಹೇಳದೆ ಮರೆಮಾಚುತ್ತಿದ್ದೇನೆ. ಮಗೂ, ನಿಮ್ಮ ತಂದೆಯವರೆಂದರೆ ಸದಾಚಾರಗಳಿಂದಲೂ ಸದ್ಧರ್ಮದಿಂದ ಆರ್ಜಿಸಿದ ಸಂಪತ್ತಿನಿಂದಲೂ ಲೋಕಮಾನ್ಯರೆನಿಸಿದವರು.

೫೨–೬೪. ಬ್ರಾಹ್ಮಣರಿಗೆ ಸಂಪತ್ತೆಂದರೆ ಸದ್ವಿದ್ಯೆ, ಸಾಧುಸಂತರ ಸಹವಾಸ.

ಸದ್ವಿದ್ಯಾಸು ಮನೋ ಧೇಹಿ ಬ್ರಾಹ್ಮಣಾಚಾರಮಾಚರ ।
ತವಾಽನುರೂಪಾ ರೂಪೇಣ ವಯಸಾ ಕುಲಶೀಲತಃ ॥ ೫೪ ॥
ಊನವಿಂಶತಿಕೋಽಸಿ ತ್ವಮೇಷಾ ಷೋಡಶವಾರ್ಷಿಕೀ ।
ತವ ಪತ್ನೀ ಗುಣನಿಧೇ ಸಾಧ್ವೀ ಮಧುರಭಾಷಿಣೀ ॥ ೫೫ ॥
ಏತಾಂ ಸಂವೃಣು ಸದ್ವೃತ್ತಾಂ ಪಿತೃಭಕ್ತಿಯುತೋ ಭವ ।
ಶ್ವಶುರೋಽಪಿ ಹಿ ತೇ ಮಾನ್ಯಃ ಸರ್ವತ್ರ ಗುಣಶೀಲತಃ ॥ ೫೬ ॥
ತತೋಽಪತ್ರಪಸೇ ಕಿಂ ನ ತ್ಯಜ ದುರ್ವೃತ್ತತಾಂ ಶಿಶೋ ।
ಮಾತುಲಾಸ್ತೇಽತುಲಾಃ ಪುತ್ರ ವಿದ್ಯಾಶೀಲಕುಲಾದಿಭಿಃ ॥ ೫೭ ॥
ತೇಭ್ಯೋಽಪಿ ನ ಬಿಭೇಷಿ ತ್ವಂ ಶುದ್ಧೋಽಸ್ಯುಭಯವಂಶತಃ ।
ಪಶ್ಯೈತಾನ್ ಪ್ರತಿವೇಶ್ಮಸ್ಥಾನ್ ಬ್ರಾಹ್ಮಣಾನಾಂ ಕುಮಾರಕಾನ್ ॥ ೫೮ ॥
ಗೃಹೇಽಪಿ ಶಿಷ್ಯಾನ್ ಪಶ್ಯೈತಾನ್ ಪಿತುಸ್ತೇ ವಿನಯೋಚಿತಾನ್ ।
ರಾಜಾಽಪಿ ಶ್ರೋಷ್ಯತಿ ಯದಾ ತವ ದುಶ್ಚೇಷ್ಟಿತಂ ಸುತ ॥ ೫೯ ॥

---

ಕೇಳು, ನಿನ್ನ ತಾತ ಮುತ್ತಾತಂದಿರೆಲ್ಲರೂ ಒಳ್ಳೆಯ ಶ್ರೋತ್ರಿಯರು, ಸಾಂಗ ವೇದಾಧ್ಯಯನ ಸಂಪನ್ನರಾದ ಅನೂಚಾನರು, ದೀಕ್ಷಿತರು, ಸೋಮಯಾಜಿಗಳು ಎಂದು ಈ ಲೋಕದಲ್ಲಿ ಪ್ರಖ್ಯಾತಿಯನ್ನು ಪಡೆದಿದ್ದರು. ಆದುದರಿಂದ ನೀನು ಇನ್ನುಮೇಲೆ ಈ ದುರ್ಮಾರ್ಗತನವನ್ನೆಲ್ಲ ಬಿಟ್ಟು ಸತ್ಸಂಗದಲ್ಲಿ ಪ್ರೀತಿಯುಳ್ಳವನಾಗಿ ಸನ್ಮಾರ್ಗದಲ್ಲಿ ನಡೆಯಬೇಕು. ನಿನ್ನ ಮನಸ್ಸೆಲ್ಲ ಸದ್ವಿದ್ಯೆಯಲ್ಲಿ ನೆಲಸಲಿ. ಬ್ರಾಹ್ಮಣರ ಆಚಾರವನ್ನು ನಡೆಸು. ನಿನಗೆ ರೂಪದಿಂದಲೂ ವಯಸ್ಸಿನಿಂದಲೂ ಕುಲಶೀಲಗಳಿಂದಲೂ ಸಮಾನಳಾದ ಹೆಂಡತಿಯು ದೊರಕಿದ್ದಾಳೆ. ನಿನಗಿನ್ನೂ ಹತ್ತೊಂಬತ್ತೇ ವರ್ಷ. ಅವಳಿಗೆ ಇನ್ನೂ ಹದಿನಾರೇ ವರ್ಷ. ಮಗೂ ಗುಣನಿಧಿ! ನಿನ್ನ ಹೆಂಡತಿಯೆಂದರೆ ಒಳ್ಳೆಯ ಪತಿವ್ರತೆ, ಬಹುಮುದ್ದಾಗಿ ಮಾತನಾಡುವವಳು. ಇಂತಹ ಒಳ್ಳೆಯ ನಡತೆಯುಳ್ಳ ಹೆಂಡತಿಯನ್ನು ವರಿಸಿರುವ ನೀನು ಅವಳನ್ನು ಸರಿಯಾಗಿ ನಡೆಸಿಕೊ. ತಂದೆಯಲ್ಲಿ ಭಕ್ತಿಯನ್ನಿಟ್ಟುಕೊ. ನಿನ್ನ ಮಾವನೇನು ಸಾಮಾನ್ಯನೇ? ಗುಣಶೀಲಗಳಲ್ಲಿಯೂ ಎಲ್ಲ ಬಗೆಯಲ್ಲಿಯೂ ಆತನು ಬಹಳ ಗೌರವಸ್ಥ. ಆದುದರಿಂದ ನಾಚಿಕೆಯಾಗುವುದಿಲ್ಲವೇಕೆ? ಮಗೂ, ಇನ್ನುಮೇಲೆ ಈ ದುಷ್ಟತನವನ್ನು ಬಿಟ್ಟುಬಿಡು. ಮಗನೆ, ಗುಣನಿಧಿ! ನಿನ್ನ ಸೋದರಮಾವಂದಿರೆಂದರೆ ಸಾಮಾನ್ಯರೆ? ಕುಲದಲ್ಲಿ, ಶೀಲದಲ್ಲಿ, ವಿದ್ಯೆಯಲ್ಲಿ ಅವರೆಲ್ಲರೂ ಬಹು ಹೆಚ್ಚಿನವರು. ಹೀಗೆ ನೀನು ಉಭಯವಂಶಗಳ ಮೂಲಕವೂ ಶುದ್ಧನಾಗಿದ್ದು ಅವರಿಗೆ ಯಾವ ಬಗೆಯಲ್ಲಿಯೂ ಹೆದರುವುದೇ ಇಲ್ಲವಲ್ಲ. ಅಕ್ಕಪಕ್ಕದ ಮನೆಗಳ ಬ್ರಾಹ್ಮಣರ ಹುಡುಗರನ್ನಾದರೂ ನೋಡು. ನಿನ್ನ ತಂದೆಯಲ್ಲಿ ಭಕ್ತಿಯನ್ನಿಟ್ಟು

ಶ್ರಾದ್ಧಂ ವಿಹಾಯ ತೇ ತಾತೇ ವೃತ್ತಿಲೋಪಂ ಕರಿಷ್ಯತಿ ।
ಬಾಲಚೇಷ್ಟಿತಮೇವೈತತ್ ವದಂತ್ಯದ್ಯಾಽಪಿ ತೇ ಜನಾಃ ॥ ೬೦ ॥
ಅನಂತರಂ ಹಸಿಷ್ಯಂತಿ ಯುಕ್ತಂ ದೀಕ್ಷಿತತಾಸ್ತ್ವಿತಿ ।
ಸರ್ವೇಽಪ್ಯಾಕಾರಯಿಷ್ಯಂತಿ ತವ ವಿಪ್ರಂ ಚ ಮಾಂ ಚ ವೈ ॥ ೬೧ ॥
ಮಾತುಶ್ಚರಿತ್ರಂ ತನಯೋ ಧತ್ತೇ ದುರ್ಭಾಷಣೈರಿತಿ ।
ಪಿತಾಪಿ ತೇ ನ ಪಾಪೀಯಾಂಛ್ರುತಿಸ್ಮೃತಿಪಥೇ ನ ಕಿಂ ॥ ೬೨ ॥
ತದಂಘ್ರಿಲೀನಮನಸೋ ಮಮ ಸಾಕ್ಷೀ ಮಹೇಶ್ವರಃ ।
ನ ಚರ್ತುಸ್ನಾತಯಾಪೀಹ ಮುಖಂ ದುಷ್ಟಸ್ಯ ವೀಕ್ಷಿತಂ ॥ ೬೩ ॥
ಅಹೋ ಬಲೀಯಾನ್ ಸ ವಿಧಿರ್ಯೇನ ಜಾತೋ ಭವಾನಿತಿ ।
ಪ್ರತಿಕ್ಷಣಂ ಜನನ್ಯೇತಿ ಶಿಕ್ಷ್ಯಮಾಣೋಽತಿದುರ್ಮದಃ ॥ ೬೪ ॥
ನ ತತ್ಯಾಜ ಚ ತದ್ಧರ್ಮಂ ದುರ್ಬೋಧೋ ವ್ಯಸನೀ ಯತಃ ।
ಮೃಗಯಾಮದ್ಯಪೈಶುನ್ಯವೇಶ್ಯಾಚೌರ್ಯದುರೋದರೈಃ ॥ ೬೫ ॥

---

ಕೊಂಡು ವಿನಯಸಂಪನ್ನರಾಗಿ ಮನೆಯಲ್ಲಿಯೇ ವ್ಯಾಸಂಗಮಾಡುತ್ತಿರುವ ಶಿಷ್ಯರನ್ನಾದರೂ ನೋಡು. ನಮ್ಮ ದೊರೆಯೇನಾದರೂ ಈ ನಿನ್ನ ಕೆಟ್ಟನಡತೆಯನ್ನು ಕೇಳಿದ ಪಕ್ಷದಲ್ಲಿ ನಿನ್ನ ತಂದೆಯಲ್ಲಿನ ಶ್ರದ್ಧೆಯನ್ನು ತೊರೆದು ಜೀವನ ವೃತ್ತಿಯನ್ನೇ ತಪ್ಪಿಸಿಯಾನು. ಈಗೇನೊ ಜನಗಳು 'ಇನ್ನೂ ಹುಡುಗ, ಇದೆಲ್ಲ ಹುಡುಗಾಟಿಕೆಗಳು' ಎನ್ನುತ್ತಾರೆ. ಆಮೇಲೆ 'ಅಯ್ಯೋ! ದೀಕ್ಷಿತರ ಮಗ ಹೀಗಾದನೇ' ಎಂದು ಅವರೇ ನಗುತ್ತಾರೆ. ಅಲ್ಲದೆ, ನಿನ್ನ ತಂದೆಯನ್ನೂ ನನ್ನನ್ನೂ ನಿಂದಿಸುತ್ತಾರೆ. 'ಈ ಹುಡುಗನು ಈ ದುರ್ಭಾಷಣಾದಿಗಳಿಂದ ತಾಯಿಯ ನಡತೆಯನ್ನೇ ಅನುಸರಿಸಿದ್ದಾನೆ. ಇವನ ತಂದೆಯೂ ಪಾಪಿಷ್ಠನೇ. ಶ್ರುತಿಸ್ಮೃತಿ ಮಾರ್ಗಗಳನ್ನನುಸರಿಸಿದ್ದರೇನಾಯಿತು?' ಎಂದು ನನ್ನನ್ನೂ ನಿಮ್ಮ ತಂದೆಯನ್ನೂ ಆಡಿಕೊಳ್ಳುತ್ತಾರೆ ನಾನಾದರೊ ಅವರ ಅಡಿಗಳಲ್ಲಿಯೇ ನಟ್ಟ ಮನಸ್ಸುಳ್ಳವಳಾಗಿದ್ದೇನೆ. ಇದಕ್ಕೆ ಪರಮೇಶ್ವರನೇ ಸಾಕ್ಷಿ ಋತುಸ್ನಾನ ಮಾಡಿದಮೇಲೂ ನಾನು ಯಾವ ದುಷ್ಟನ ಮುಖವನ್ನೂ ನೋಡಿದ್ದಿಲ್ಲ. ಹೀಗಿದ್ದರೂ ನಿನ್ನಂತಹ ಮಗನು ಹುಟ್ಟಿರುವುದನ್ನು ನೋಡಿದರೆ ವಿಧಿಯು ಬಲವತ್ತರವಾದುದು. ಮುಖ್ಯವಾಗಿ ಇದು ನನ್ನ ಹಣೆಯಬರಹ." ಅಯ್ಯಾ ಶಿವಶರ್ಮನೆ! ಹೀಗೆ ಆ ತಾಯಿಯು ಆ ಗುಣನಿಧಿಯನ್ನು ಪ್ರತಿಕ್ಷಣದಲ್ಲಿಯೂ ದಂಡಿಸಿ ಬುದ್ಧಿ ಹೇಳುತ್ತಿದ್ದಳು. ಆದರೂ ಆ ದುಷ್ಟನು ಸನ್ಮಾರ್ಗಕ್ಕೆ ಬರಲಿಲ್ಲ.

೬೫–೭೦. ಅವನು ಕೇವಲ ವ್ಯಸನಗಳಲ್ಲಿಯೇ ತೊಡಗಿದ್ದುದರಿಂದ ಈ ಬೋಧೆಯು ಅವನ ಮನಸ್ಸಿಗೆ ನಾಟಲೇ ಇಲ್ಲ ಬೇಟೆ, ಸುರಾಪಾನದ

ಸಪಾರದಾರ್ಯೈರ್ನ್ಯಸನೈರೇಭಿಃ ಕೋಽತ್ರ ನ ಖಂಡಿತಃ ।
ಯದ್ಯನ್ಮಧ್ಯೇ ಗೃಹೇ ಪಶ್ಯೇತ್ತತ್ತನ್ನೀತ್ವಾ ಸುದುರ್ಮತಿಃ ॥ ೬೬ ॥
ಅರ್ಪಯೇದ್ದ್ಯೂತಕಾರಾಣಾಂ ಸ ಕುಪ್ಯಂ ವಸನಾದಿಕಂ ।
ನವರತ್ನಮಯೀಂ ಮಾತುಃ ಕರತಃ ಪಿತುರೂರ್ಮಿಕಾಂ ॥ ೬೭ ॥
ಸ್ವಪಂತ್ಯಾಸ್ತ್ವೇಕದಾಽಽದಾಯ ದುರೋದರಿಕರೇಽರ್ಪಯತ್ ।
ಏಕದಾ ಗಚ್ಛತಾ ರಾಜಭವನಾನ್ನಿಜಮುದ್ರಿಕಾ ॥ ೬೮ ॥
ದೀಕ್ಷಿತೇನ ಪರಿಜ್ಞಾತಾ ದೈವಾದ್ದ್ಯೂತಕೃತಃ ಕರೇ ।
ಉವಾಚ ದೀಕ್ಷಿತಸ್ತಂ ಚ ಕುತೋ ಲಬ್ಧಾ ತ್ವಯೋರ್ಮಿಕಾ ।
ಪೃಷ್ಟಸ್ತೇನಾಽಥ ನಿರ್ಬಂಧಾದಸಕೃತ್ಪ್ರತ್ಯುವಾಚ ಕಿಂ ॥ ೬೯ ॥
ಮಮಾಕ್ಷಿಪಸಿ ವಿಪ್ರೋಚ್ಚೈಃ ಕಿಂ ಮಯಾ ಚೌರ್ಯಕರ್ಮಣಾ ।
ಲಬ್ಧಾ ಮುದ್ರಾ ತ್ವದೀಯೇನ ಪುತ್ರೇಣೈಷಾ ಮಮಾರ್ಪಿತಾ ॥ ೭೦ ॥
ಮಮ ಮಾತುರ್ಹಿ ಪೂರ್ವೇದ್ಯುರ್ಜಿತ್ವಾ ನೀತೋ ಹಿ ಶಾಟಕಃ ।
ನ ಕೇವಲಂ ಮಮಾಽಪ್ಯೇತದಂಗುಲೀಯಂ ಸಮರ್ಪಿತಂ ॥ ೭೧ ॥
ಅನ್ಯೇಷಾಂ ದ್ಯೂತಕರ್ತೄಣಾಂ ಭೂರಿ ತೇನಾಽರ್ಪಿತಂ ವಸು ।
ರತ್ನಕುಪ್ಯದುಕೂಲಾನಿ ಭೃಂಗಾರುಪ್ರಭೃತೀನಿ ಚ ॥ ೭೨ ॥

---

ಗೀಳು, ಸೂಳೆಗಾರಿಕೆ, ಕಳ್ಳತನ, ಜೂಜು, ಪರಸ್ತ್ರೀಗಮನ ಮೊದಲಾದುವುಗಳನ್ನು ಮಾಡಿದವನು ಯಾವನುತಾನೆ ಭ್ರಷ್ಟನಾಗುವುದಿಲ್ಲ? ಆ ಗುಣನಿಧಿಯು ಮನೆಯಲ್ಲಿ ತಾಮ್ರದ ಪಾತ್ರೆಗಳು, ಬಟ್ಟೆಬರೆಗಳು ಮೊದಲಾದ ಯಾವ ಪದಾರ್ಥವೇ ಆದರೂ ಕಣ್ಣಿಗೆ ಬಿದ್ದೊಡನೆಯೇ ತೆಗೆದುಕೊಂಡು ಹೋಗಿ ಜೂಜುಕೋರರಿಗೆ ಕೊಟ್ಟುಬಿಡುತ್ತಿದ್ದನು. ಅವನು ಒಮ್ಮೆ ತಾಯಿಯ ಬೆರಳಲ್ಲಿದ್ದ ನವರತ್ನಮಯವಾದ ತಂದೆಯ ಉಂಗುರವನ್ನು ಆಕೆಯು ಮಲಗಿದ್ದಾಗ ಅಪಹರಿಸಿ ತಂದು ಜೂಜಾಡಿಗನಿಗೆ ಕೊಟ್ಟುಬಿಟ್ಟನು ತರುವಾಯ ಒಂದಾನೊಂದು ದಿವಸ ಯಜ್ಞದತ್ತ ದೀಕ್ಷಿತನು ರಾಜಭವನದಿಂದ ಹಿಂತಿರುಗುತ್ತಿದ್ದಾಗ ಆ ಜೂಜುಕೋರನ ಕೈಯಲ್ಲಿ ತನ್ನ ಉಂಗುರವನ್ನು ಕಂಡು, "ಎಲವೊ, ನಿನಗೆ ಈ ಉಂಗುರವು ಎಲ್ಲಿಂದ ಬಂದಿತು?" ಎಂದು ಕೇಳಿದನು ಆತನಿಂತು ಕೇಳಿದೊಡನೆಯೆ ಆ ಜೂಜಿನವನು ನಿರ್ಬಂಧಕ್ಕೊಳಗಾಗಿ, "ಅಯ್ಯಾ ಬ್ರಾಹ್ಮಣ, ನನ್ನನ್ನೇಕೆ ಆಕ್ಷೇಪಿಸುತ್ತೀಯ? ನಾನೇನು ಇದನ್ನು ಕಳವುಮಾಡಿ ತಂದಿದ್ದೇನೆಯೆ? ನಿನ್ನ ಮಗನೇ ನನಗೆ ಇದನ್ನು ತಂದುಕೊಟ್ಟನು.

೭೧–೭೩. ಅವನು ಹಿಂದಿನ ದಿವಸ ತನ್ನ ತಾಯಿಯಿಂದ ವಟ್ಟುಮಡಿಯನ್ನೂ ಕದ್ದು ತಂದಿದ್ದನು. ಅವನು ನನಗೆ ಮಾತ್ರ ಈ ಉಂಗುರವನ್ನು ಕೊಟ್ಟಿರುವುದಲ್ಲದೆ ನನ್ನ ಜೊತೆಯ ಇತರ ಜೂಜಿನವರಿಗೆ ಹಣ, ರತ್ನ, ತಾಮ್ರದ

ಭಾಜನಾನಿ ವಿಚಿತ್ರಾಣಿ ಕಾಂಸ್ಯತಾಮ್ರಮಯಾನಿ ಚ ।
ನಗ್ನೀಕೃತ್ಯ ಪ್ರತಿದಿನಂ ಬಧ್ಯತೇ ದ್ಯೂತಕಾರಿಭಿಃ ॥ ೭೩ ॥
ನ ತೇನ ಸದೃಶಃ ಕಶ್ಚಿದಾಕ್ಷಿಕೋ ಭೂಮಿಮಂಡಲೇ ।
ಅದ್ಯ ಯಾವತ್ತ್ವಯಾ ವಿಪ್ರ ದುರೋದರಶಿರೋಮಣಿಃ ॥ ೭೪ ॥
ಕಥಂ ನಾಽಜ್ಞಾಯಿ ತನಯೋಽವಿನಯಾನಯಕೋವಿದಃ ।
ಇತಿ ಶ್ರುತ್ವಾ ತ್ರಪಾಭಾರವಿನಮ್ರತರಕಂಧರಃ ॥ ೭೫ ॥
ಪ್ರಾವೃತ್ಯ ವಾಸಸಾ ಮೌಲಿಂ ಪ್ರಾವಿಶನ್ನಿಜಮಂದಿರಂ ।
ಮಹಾಪತಿವ್ರತಾಮಸ್ಯ ಪತ್ನೀಂ ಪ್ರೋವಾಚ ತಾಮಥ ॥ ೭೬ ॥
ದೀಕ್ಷಿತಾಯಿನಿ ಕುತ್ರಾಽಸಿ ಕ್ವ ತೇ ಗುಣನಿಧಿಃ ಸುತಃ ।
ಅಥ ತಿಷ್ಠತು ಕಿಂ ತೇನ ಕ್ವಸಾ ಮಮ ಶುಭೋರ್ಮಿಕಾ ॥ ೭೭ ॥
ಅಂಗೋದ್ವರ್ತನಕಾಲೇ ಯಾ ತ್ವಯಾ ಮೇಽಂಗುಲಿತೋ ಹೃತಾ ।
ನವರತ್ನಮಯೀಂ ಶೀಘ್ರಂ ತಾಮಾನೀಯ ಪ್ರಯಚ್ಛ ಮೇ ॥ ೭೮ ॥
ಇತಿ ಶ್ರುತ್ವಾಽಥ ತದ್ವಾಕ್ಯಂ ಭೀತಾ ಸಾ ದೀಕ್ಷಿತಾಯಿನೀ ।
ಪ್ರೋವಾಚ ಸಾತು ಮಾಧ್ಯಾಹ್ನೀಂ ಕ್ರಿಯಾಂ ನಿಷ್ಪಾದಯತ್ವಥ ॥ ೭೯ ॥

---

ಪಾತ್ರೆಗಳು, ಪೀತಾಂಬರಗಳು, ಚಿನ್ನ ಬೆಳ್ಳಿಗಳ ಪಾತ್ರೆಗಳು, ಕಂಚು ತಾಮ್ರಗಳ ಚಿತ್ರವಿಚಿತ್ರವಾದ ಇತರ ಪಾತ್ರೆಗಳು ಮೊದಲಾದುವುಗಳನ್ನೆಲ್ಲ ಕೊಟ್ಟಿರುತ್ತಾನೆ. ಜೂಜಾಡಿಗರು ಪ್ರತಿದಿನವೂ ಅವನನ್ನು ಬೆತ್ತಲೆಯಾಗಿಸಿ ಕಟ್ಟಿಹಾಕುತ್ತಾರೆ.

೭೪–೭೬. ಅಯ್ಯಾ ವಿಪ್ರನೆ, ಈ ಭೂಮಂಡಲದಲ್ಲಿ ಅವನಿಗೆಣೆ ಯಾವ ಜೂಜಾಡಿಗನಿಲ್ಲ. ಎಲೈ ನೀತಿಕೋವಿದನೆ, ಅವನು ನಿನ್ನ ಮಗನೇ ಆಗಿದ್ದರೂ, ಇಷ್ಟು ದುಷ್ಟನಾಗಿದ್ದರೂ ಈವರೆಗೂ ಅವನು ದುರೋದರ ಶಿರೋಮಣಿಯೆಂಬ ವಿಚಾರವನ್ನು ನೀನು ತಿಳಿಯದೆ ಹೋದುದು ಹೇಗೆ?'' ಎಂದನು. ಇದನ್ನು ಕೇಳಿ ಆ ಯಜ್ಞದೀಕ್ಷಿತನು ಲಜ್ಜೆಯಿಂದ ತಲೆತಗ್ಗಿಸಿ ಕೊಂಡು, ಬಟ್ಟೆಯಿಂದ ಮುಖವನ್ನು ಮರೆಮಾಡಿಕೊಂಡು ನಿಜಮಂದಿರವನ್ನು ಪ್ರವೇಶಿಸಿ, ಮಹಾ ಪತಿವ್ರತೆಯಾದ ತನ್ನ ಹೆಂಡತಿಯನ್ನು ಕರೆದು ಹೀಗೆಂದನು.

೭೭–೭೮. '' ಎಲೆ ದೀಕ್ಷಿತಾಯಿನಿ, ಎಲ್ಲಿದ್ದೀಯೆ? ನಿನ್ನ ಮಗ ಆ ಗುಣನಿಧಿ ಯೆಲ್ಲಿ? ಅಥವಾ ಅವನಂತಿರಲಿ ಅವನಿಂದ ಈಗೇನು? ಮಂಗಳಕರವಾದ ಆ ನನ್ನ ಮುದ್ರೆಯುಂಗುರವೆಲ್ಲಿ? ನವರತ್ನಮಯವಾದ ಆ ಉಂಗುರವನ್ನು ಅಭ್ಯಂಜನಕಾಲದಲ್ಲಿ ಬೆರಳಿನಿಂದ ನೀನು ತೆಗೆದಿಟ್ಟಿಯಲ್ಲವೆ? ಅದನ್ನು ಜಾಗ್ರತೆ ಯಾಗಿ ತಂದುಕೊಡು'' ಎಂದು ಕೇಳಿದನು.

೭೯–೮೧. ದೀಕ್ಷಿತಾಯಿನಿಯು ಈ ಮಾತನ್ನು ಕೇಳಿ ಬಹಳವಾಗಿ ಹೆದರಿ ದಳು. ಅವಳು '' ಈಗ ಎದ್ದು ಮಧ್ಯಾಹ್ನಿಕ ಕ್ರಿಯೆಗಳನ್ನು ನಡಸಿರಿ. ದೇವರ

ವ್ಯಗ್ರಾಽಸ್ಮಿ ದೇವಪೂಜಾರ್ಥಮುಪಹಾರಾದಿಕರ್ಮಣಿ ।
ಸಮಯೋಽಯಮತಿಕ್ರಾಂತೋಽದತಿಥೀನಾಂ ಪ್ರಿಯಾಽತಿಥೇ ॥ ೪೦ ॥
ಇದಾನೀಮೇವ ಪಕ್ವಾನ್ನಕರಣವ್ಯಗ್ರಯಾ ಮಯಾ ।
ಸ್ಥಾಪಿತಾ ಭಾಜನೇ ಕ್ವಾಽಪಿ ವಿಸ್ಮೃತೇತಿ ನ ವೇದ್ಮ್ಯಹಂ ॥ ೪೧ ॥
ದೀಕ್ಷಿತ ಉವಾಚ:—
ಹಂಹೋ ಸತ್ಪುತ್ರಜನನಿ ನಿತ್ಯಂ ಸತ್ಯಪ್ರಭಾಷಿಣಿ ।
ಯದಾ ಯದಾ ತ್ವಾಂ ಸಂಪೃಚ್ಛೇ ತನಯಃ ಕ್ವಗತಸ್ತ್ವಿತಿ ॥ ೪೨ ॥
ತದಾ ತದೇತಿ ತ್ವಂ ಬ್ರೂಯಾ ನಾಥೇದಾನೀಂ ಸ ನಿರ್ಗತಃ ।
ಅಧೀತ್ಯಾಽಧ್ಯಯನಾರ್ಥಂ ಚ ದ್ವಿತ್ರೈರ್ಮಿತ್ರೈಃ ಸಯುಗ್ಬಹಿಃ ॥ ೪೩ ॥
ಕುತಸ್ತ್ವಚ್ಛಾಟಿಕಃ ಪತ್ನಿ ಮಾಂಜಿಷ್ಠೋ ಯೋ ಮಯಾಽರ್ಪಿತಃ ।
ಲಂಬತೇ ವಸ್ತ್ರಧಾನ್ಯಾಂ ಯಸ್ತಥ್ಯಂ ಬ್ರೂಹಿ ಭಯಂ ತ್ಯಜ ॥ ೪೪ ॥
ಸಾಂಪ್ರತಂ ನೇಕ್ಷ್ಯತೇ ಸೋಽಪಿ ಭೃಂಗಾರುರ್ಮಣಿಮಂಡಿತಃ ।
ಪಟ್ಟಸೂತ್ರಮಯೀ ಸಾಽಪಿ ತ್ರಿಪಟೀ ಕ್ವ ನೃಪಾಽರ್ಪಿತಾ ॥ ೪೫ ॥

---

ಪೂಜೆಗೆ ಅಣಿಮಾಡುವುದರಲ್ಲಿಯೂ ಅಡಿಗೆ ಮುಸುರೆ ಕೆಲಸಗಳನ್ನು ಮಾಡುವುದರಲ್ಲಿಯೂ ತೊಡಗಿದ್ದೇನೆ. ನನಗೆ ವಿರಾಮವಿಲ್ಲ ಅತಿಥಿಗಳಿಗೆ ಹೊತ್ತು ಮೀರಿ ಹೋಗುತ್ತದೆ. ಈಗ ನಾವು ಇದನ್ನೆಲ್ಲ ಕಟ್ಟಿಕೊಳ್ಳಬಾರದು. ನೀವು ಅತಿಥಿಪ್ರಿಯರಲ್ಲವೆ? ಅಡಿಗೆಮಾಡುವುದರಲ್ಲಿಯೇ ತೊಡಗಿದ್ದ ನಾನು ಅದನ್ನು ಈಗತಾನೆ ಪಾತ್ರೆಯಲ್ಲಿ ಇಟ್ಟಿದ್ದೆನು. ಎಲ್ಲಿಟ್ಟಿದ್ದೆನೆಂಬುದು ಮರೆತುಹೋಗಿದೆ. ಇನ್ನೂ ಜ್ಞಾಪಕಕ್ಕೆ ಬಂದಿಲ್ಲ'' ಎಂದು ಹೇಳಿದಳು.

೪೨-೪೩. ದೀಕ್ಷಿತನು ಹೇಳುತ್ತಾನೆ:—''ಎಲೆ ಸತ್ಪುತ್ರಜನನಿ, ದೀಕ್ಷಿತಾಯಿನಿ, ನೀನು ಪ್ರತಿದಿನವೂ ಸತ್ಯವನ್ನೇ ನುಡಿಯುವವಳಲ್ಲವೆ' 'ನಿನ್ನ ಮಗನೆಲ್ಲಿ ಹೋದನು' ಎಂದು ಕೇಳಿದಾಗಲೆಲ್ಲ ನೀನು ಹೇಳುತ್ತಿದ್ದುದೇನು? 'ನಾಥ, ಹಿಂದಿನ ಪಾಠಗಳನ್ನೆಲ್ಲ ಓದಿಕೊಂಡು ಮುಂದಿನ ಪಾಠಗಳನ್ನು ಕಲಿಯಲೋಸುಗ ಇಬ್ಬರು ಮೂವರು ಗೆಳೆಯರೊಡನೆ ಅವನು ಈಗತಾನೆ ಹೊರಗೆ ಹೋದನು' ಎಂದಲ್ಲವೆ?

೪೪. ಎಲೆ ಮಡದಿ, ನಿನಗೆ ನಾನು ತಂದುಕೊಟ್ಟ ಕೆಂಪು ಮಗುಟ ಎಲ್ಲಿ ಹೋಯಿತು? ಹಗ್ಗದ ಮೇಲೆ ಹಾಕಿದ್ದ ಅದು ಎಲ್ಲಿ ಮಾಯವಾಯಿತು? ದಿಟವನ್ನು ಹೇಳು, ಹೆದರಬೇಡ.

೪೫-೪೬. ಮಣಿಮಂಡಿತವಾದ ಆ ಸ್ವರ್ಣಕಲಶವು ಈಗ ಕಾಣುವುದೇ ಇಲ್ಲವಲ್ಲ. ಮಹಾರಾಜನು ನನಗೆ ಬಹುಮತಿಸಿದ ಜರತಾರಿಯ ಮೇಲು

ಕ್ವ ದಾಕ್ಷಿಣಾತ್ಯಂ ತತ್ಕಾಂಸ್ಯಂ ಗೌಡೀ ತಾಮ್ರಘಟೀ ಕ್ವ ಸಾ ।
ನಾಗದಂತಮಯೀ ಸಾ ಕ್ವ ಸುಖಕೌತುಕಮಂಚಿಕಾ ॥ ೮೬ ॥
ಕ್ವ ಸಾ ಪರ್ವತದೇಶೀಯಾ ಚಂದ್ರಕಾಂತಶಿಲೋದ್ಭವಾ ।
ದೀಪಿಕಾವ್ಯಗ್ರಹಸ್ತಾಗ್ರಾ ಸಾಲಂಕೃಚ್ಛಾಲಭಂಜಿಕಾ ॥ ೮೭ ॥
ಕಿಂ ಬಹೂಕ್ತೇನ ಕುಲಜೇ ತುಭ್ಯಂ ಕುಪ್ಯಾಮ್ಯಹಂ ವೃಥಾ ।
ತದಾಽಭ್ಯವಹರಿಷ್ಯೇಽಹಮುಪಯಂಸ್ಯಾಮ್ಯಹಂ ಯದಾ ॥ ೮೮ ॥
ಅನಪತ್ಯೋಽಸ್ಮಿ ತೇನಾಽಹಂ ದುಷ್ಟೇನ ಕುಲದೂಷಿಣಾ ।
ಉತ್ತಿಷ್ಠಾನಯ ದರ್ಭಾಂಬು ತಸ್ಮೈ ದದ್ಯಾಂ ತಿಲಾಂಜಲಿಂ ॥ ೮೯ ॥
ಅಪುತ್ರತ್ವಂ ವರಂ ನೄಣಾಂ ಕುಪುತ್ರಾತ್ಕುಲಪಾಂಸನಾತ್ ।
ತ್ಯಜೇದೇವಂ ಕುಲಸ್ಯಾರ್ಥೇ ನೀತಿರೇಷಾ ಸನಾತನೀ ॥ ೯೦ ॥
ಸ್ನಾತ್ವಾ ನಿತ್ಯವಿಧಿಂ ಕೃತ್ವಾ ತಸ್ಮಿನ್ನೇವಾಽಹ್ನಿ ಕಸ್ಯ ಚಿತ್ ।
ಶ್ರೋತ್ರಿಯಸ್ಯ ಸುತಾಂ ಪ್ರಾಪ್ಯ ಪಾಣಿಂ ಜಗ್ರಾಹ ದೀಕ್ಷಿತಃ ॥ ೯೧ ॥

---

ಹೊದಿಕೆಯು ಕಾಣುತ್ತಿಲ್ಲ. ದಕ್ಷಿಣದೇಶದ ಆ ಕಂಚಿನ ಪಾತ್ರೆಯೂ ಗೌಡ ದೇಶದ ಆ ಸ್ವಚ್ಛತಾಮ್ರಘಟವೂ ಎಲ್ಲಿ ಹೋದುವು? ದಂತದ ಆ ಮೆಲು ಮಂಚವೆಲ್ಲಿ.

೮೭. ಬೆಟ್ಟದ ಸೀಮೆಯಿಂದ ತಂದಿದ್ದ ಚಂದ್ರಕಾಂತಮಣಿಶಿಲೆಯ ಸರ್ವಾಲಂಕೃತವಾದ ಆ ದೀಪದ ಕೈಗೊಂಬೆಯೆಲ್ಲಿ?

೮೮. ಎಲೌ ಸದ್ವಂಶಪ್ರಸೂತಳೆ, ನಾನು ಹೆಚ್ಚಾಗಿ ಹೇಳಲೇಕೆ, ನಿನ್ನ ವಿಷಯದಲ್ಲಿ ಸುಮ್ಮನೆ ಕೋಪಮಾಡಿಕೊಳ್ಳುವುದೇಕೆ? ನಾನು ಬೇರೊಂದು ಮದುವೆಮಾಡಿಕೊಂಡ ಮೇಲೆ ನಿನ್ನೊಡನೆ ಮಾತು.

೮೯ ದುಷ್ಟನೂ ಕುಲಕಳಂಕನೂ ಆದ ಅವನಿಂದ ನಾನು ಈಗ ಅಪುತ್ರವಂತನೇ ಆಗಿಹೋಗಿದ್ದೇನೆ. ಅವನಿದ್ದೂ ಇಲ್ಲದಂತೆಯೆ. ಏಳು, ಒಂದಷ್ಟು ದರ್ಭೆ ನೀರು ತೆಗೆದುಕೊಂಡು ಬಾ. ಅವನಿಗೊಂದಷ್ಟು ತಿಲಾಂಜಲಿಯನ್ನು ಬಿಟ್ಟುಬಿಡುತ್ತೇನೆ.

೯೦ ಲೋಕದಲ್ಲಿ ಮಾನವರು ಕುಲಪಾಂಸನರಾದ ಮಕ್ಕಳನ್ನು ಪಡೆಯುವುದಕ್ಕಿಂತ ಅಪುತ್ರವಂತರಾಗಿರುವುದೇ ಮೇಲು. ಕುಲಕ್ಕಾಗಿ ಒಬ್ಬನನ್ನು ಬಿಟ್ಟುಬಿಡುವುದೇ ಸನಾತನ ಧರ್ಮ.''

೯೧. ಹೀಗೆ ಹೇಳಿದ ತರುವಾಯ ದೀಕ್ಷಿತನಾದ ಆ ಯಜ್ಞದತ್ತನು ಎದ್ದು ಸ್ನಾನಮಾಡಿ ನಿತ್ಯವಿಧಿಯನ್ನೆಲ್ಲ ಮುಗಿಸಿ, ಆ ದಿನವೇ ಒಬ್ಬಾನೊಬ್ಬ ಶ್ರೋತ್ರಿಯನ ಮಗಳನ್ನು ಮದುವೆಮಾಡಿಕೊಂಡನು.

ಶ್ರುತ್ವಾ ತಥಾ ಸ ವೃತ್ತಾಂತಂ ಪ್ರಾಕ್ತನಂ ಸ್ವಂ ವಿನಿಂದ್ಯಚ ।
ಕಾಂಚಿದ್ದಿಶಂ ಸಮಾಲೋಚ್ಯ ನಿರ್ಯಯೌ ದೀಕ್ಷಿತಾಂಗಜಃ ॥ ೯೨ ॥
ಚಿಂತಾಮವಾಪ ಮಹತೀಂ ಕ್ವ ಯಾಮಿ ಕರವಾಣಿ ಕಿಂ ।
ನಾಽಹಮಭ್ಯಸ್ತವಿದ್ಯೋಽಸ್ಮಿ ನ ಚೈವಾಽಸ್ತಿ ಧನೋಮಯಿ ॥ ೯೩ ॥
ದೇಶಾಂತರೇ ಹ್ಯಸ್ತಿ ಧನಃ ಸದ್ವಿದ್ಯಃ ಸುಖಮೇಧತೇ ।
ಭಯಮಸ್ತಿ ಧನೇ ಚೌರಾತ್ಸವಿದ್ಯಃ ಸರ್ವತೋಽಭಯಃ ॥ ೯೪ ॥
ಕ್ವ ಯಾಯಜೂಕಕುಲೇ ಜನ್ಮ ಕ್ವ ಮೇ ವ್ಯಸನಂ ತಥಾ ।
ಅಹೋ ಬಲೀಯಾನ್ವಿಧಿರ್ಭಾವಿಕರ್ಮಾಽನುಸಂಧಯೇತ್ ॥ ೯೫ ॥
ಭಿಕ್ಷಿತಂ ನಾಧಿಗಃಚ್ಛಾಮಿ ನ ಮೇ ಪರಿಚಿತಃ ಕ್ವಚಿತ್ ।
ನ ಚ ಪಾರ್ಶ್ವೇ ಧನಂ ಕಿಂಚಿತ್ಕಿಮತ್ರ ಶರಣಂ ಭವೇತ್ ॥ ೯೬ ॥
ಸದಾನಭ್ಯುದಿತೇ ಭಾನೌ ಪ್ರಸೂರ್ಮೇ ಮೃಷ್ಟಭೋಜನಂ ।
ದದ್ಯಾದದ್ಯಾಽತ್ರ ಕಂ ಯಾಚೇ ಯಾಚೇ ಹ ಜನನೀ ನ ಮೇ ॥ ೯೭ ॥

---

೯೨. ತರುವಾಯ ಈ ಸುದ್ದಿಯನ್ನು ಕೇಳಿ ಆ ದೀಕ್ಷಿತನ ಮಗನಾದ ಗುಣನಿಧಿಯು ತನ್ನ ಹಿಂದಿನ ನಡತೆಯನ್ನೆಲ್ಲ ನಿಂದಿಸಿಕೊಂಡು, ಯಾವುದೊ ಒಂದು ದಿಕ್ಕನ್ನು ಆಶ್ರಯಿಸಬಯಸಿ ಮನೆ ಬಿಟ್ಟು ಹೊರಟುಹೋದನು.

೯೩. ಅವನು ಬಹಳವಾದ ಚಿಂತೆಗೊಳಗಾಗಿ ಹೀಗೆಂದುಕೊಂಡನು. ''ಎಲ್ಲಿಗೆ ಹೋಗಲಿ, ಏನುಮಾಡಲಿ? ನಾನು ವಿದ್ಯಾಭ್ಯಾಸಮಾಡಿ ಪಂಡಿತನಾಗಿರುವುದಿಲ್ಲ. ನಿರ್ಧನನೂ ಆಗಿದ್ದೇನೆ.

೯೪. ದೇಶಾಂತರದಲ್ಲಿ ಧನವೇನೊ ಇರುವುದು. ಆದರೆ ಅದರ ಸುಖವನ್ನು ಒಳ್ಳೆಯ ವಿದ್ಯಾವಂತರಾದವರು ಅನುಭವಿಸುತ್ತಾರೆ. ಧನವಿದ್ದಲ್ಲಿ ಕಳ್ಳಕಾಕರ ಭೀತಿಯಾದರೂ ಉಂಟು. ವಿದ್ಯೆಗೆ ಯಾವ ಭಯವೂ ಇಲ್ಲ. ವಿದ್ಯಾವಂತನಾದವನು ಯಾವಾಗಲೂ ನಿರ್ಭಯನಾಗಿಯೇ ಇರುತ್ತಾನೆ.

೯೫. ಸೋಮಯಾಜಿಗಳ ವಂಶದಲ್ಲಿ ಹುಟ್ಟಿಂಬುದೆಲ್ಲಿ, ಇಂತಹ ದುರ್ವ್ಯಸನಗಳೆಂದರೇನು? ಆಹ, ವಿಧಿಯು ಬಹಳ ಬಲವತ್ತರವಾದುದು. ಅದು ಮನುಷ್ಯನನ್ನು ಪೂರ್ವಜನ್ಮದ ಕರ್ಮಗಳಲ್ಲಿಯೇ ತೊಡಗಿಸುತ್ತದೆ.

೯೬. ನನಗೆ ಭಿಕ್ಷೆಯೆತ್ತಲು ಬಾರದು. ಹೇಗಾದರೂ ಎಲ್ಲಿಯಾದರೂ ಒಂದು ಕಡೆ ಕಾಲಹಾಕೋಣವೆಂದರೆ, ನನಗೆ ಪರಿಚಿತರಾದವರು ಯಾರೂ ಇರುವುದಿಲ್ಲ. ಬಳಿಯಲ್ಲಿ ಧನವೇನೂ ಇಲ್ಲ. ಹೀಗಿರುವಾಗ ನನ್ನ ಗತಿಯೇನು?

೯೭. ಇನ್ನೂ ಸೂರ್ಯನು ಹುಟ್ಟದಿರುವಾಗಲೆ ನನ್ನ ತಾಯಿಯು ನನಗೆ ಮೃಷ್ಟಾನ್ನಭೋಜನವನ್ನು ನೀಡುತ್ತಿದ್ದಳು. ಅಂತಹ ಭೋಜನವನ್ನು ಈಗ

ಇತಿ ಚಿಂತಯತಸ್ತಸ್ಯ ಭಾನುರಸ್ತಾಚಲಂ ಗತಃ ।
ಏತಸ್ಮಿನ್ನೇವ ಸಮಯೇ ಕಶ್ಚಿನ್ಮಾಹೇಶ್ವರೋ ನರಃ ॥ ೯೮ ॥
ಮಹೋಪಹಾರಾನಾದಾಯ ನಗರಾದ್ಬಹಿರಭ್ಯಗಾತ್ ।
ಸಮಭ್ಯರ್ಚಿತುಮೀಶಾನಂ ಶಿವರಾತ್ರಾವುಪೋಷಿತಃ ॥ ೯೯ ॥
ಪಕ್ವಾನ್ನಗಂಧಮಾಘ್ರಾಯ ಕ್ಷುಧಿತಃ ಸತಮನ್ವಗಾತ್ ।
ಇದಮನ್ನಂ ಮಯಾಗ್ರಾಹ್ಯಂ ಶಿವಾಯೋಪಸ್ಕೃತಂ ನಿಶಿ ॥ ೧೦೦ ॥
ಇತ್ಯಾಶಾಮವಲಂಬ್ಯಾಽಥ ದ್ವಾರಿ ಶಂಭೋರುಪಾವಿಶತ್ ।
ದದರ್ಶ ಚ ಮಹಾಪೂಜಾಂ ತೇನ ಭಕ್ತೇನ ನಿರ್ಮಿತಾಂ ॥ ೧೦೧ ॥
ವಿಧಾಯ ನೃತ್ಯಗೀತಾದಿ ಭಕ್ತಾಃ ಸುಪ್ತಾಃ ಕ್ಷಣಂ ಯದಾ ।
ನೈವೇದ್ಯಂ ಸ ತದಾಽಽದಾತುಂ ಗರ್ಭಾಗಾರಂ ವಿವೇಶ ಹ ॥ ೧೦೨ ॥
ದೀಪಂ ಮಂದಪ್ರಭಂ ದೃಷ್ಟ್ವಾ ಪಕ್ವಾನ್ನಾಽವೇಕ್ಷಣಾಯ ಸಃ ।
ನಿಜ ಚೈಲಾಂಚಲಾದ್ವರ್ತಿಂ ದತ್ವಾ ಸಮುದದೀಪಯತ್ ॥ ೧೦೩ ॥

---

ಯಾರು ಕೊಡುವವರು? ಹಾಗೆ ಭೋಜನವಿಡುವ ತಾಯಿಯಾರೂ ಇಲ್ಲಿರುವುದಿಲ್ಲ.''

೯೮–೯೯. ಎಲೈ ಶಿವಶರ್ಮನೆ, ಗುಣನಿಧಿಯು ಈ ರೀತಿ ಯೋಚಿಸುತ್ತಿರುವಂತೆಯೆ ಸೂರ್ಯನಸ್ತಮಿಸಿದನು. ಅದೇ ಸಮಯದಲ್ಲಿಯ ಒಬ್ಬಾನೊಬ್ಬ ಶಿವಭಕ್ತನು ಮಹಾಪೂಜೆಯ ಸಂಭಾರಗಳನ್ನು ತೆಗೆದುಕೊಂಡು ಶಿವರಾತ್ರಿಯಲ್ಲಿ ಉಪವಾಸವಿದ್ದು ಶಿವನನ್ನರ್ಚಿಸಲೋಸುಗ ಊರಹೊರಗೆ ಬಂದನು.

೧೦೦. ಆಗ ಗುಣನಿಧಿಯು ಹಸಿದಿದ್ದನಾಗಿ ಆ ಪಕ್ವಾನ್ನಗಳ ವಾಸನೆಯನ್ನು ಹಿಡಿದು, ''ರಾತ್ರಿಯಲ್ಲಿ ಶಿವನಿಗೆ ನೈವೇದ್ಯವನ್ನು ಮಾಡುವ ಈ ಅನ್ನವನ್ನು ನಾನು ಪಡೆಯತಕ್ಕುದು'' ಎಂದುಕೊಂಡು, ಅವನನ್ನು ಹಿಂಬಾಲಿಸಿ ನಡೆದನು.

೧೦೧. ಹೀಗೆ ನೈವೇದ್ಯದನ್ನದ ಆಶೆಯಿಂದ ಗುಣನಿಧಿಯು ಆ ಶಿವಭಕ್ತನನ್ನು ಹಿಂಬಾಲಿಸಿ ಹೋಗಿ, ಶಿವನನ್ನರ್ಚಿಸಲು ಅವನು ದೇವಾಲಯಕ್ಕೆ ಹೋದ ಮೇಲೆ, ಬಾಗಿಲಲ್ಲಿಯೇ ಕುಳಿತು ಆ ಭಕ್ತನೆಸಗಿದ ಮಹಾ ಪೂಜೆಯನ್ನು ನೋಡಿದನು.

೧೦೨. ದೇವಾಲಯದಲ್ಲಿ ಭಕ್ತರೆಲ್ಲರೂ ಪರಶಿವನಿಗೆ ಮಹಾ ಪೂಜೆಯನ್ನು ಸಮರ್ಪಿಸಿ ನೃತ್ಯವನ್ನು ಮಾಡಿ, ಗೀತವನ್ನು ಹಾಡಿ, ಒಂದು ಕ್ಷಣಕಾಲ ಮಲಗುತ್ತಲೆ, ಗುಣನಿಧಿಯು ಶಿವನ ಮುಂಗಡೆಯಿದ್ದ ನೈವೇದ್ಯವನ್ನು ತೆಗೆದುಕೊಳ್ಳುವುದಕ್ಕಾಗಿ ಗರ್ಭಗೃಹವನ್ನು ಪ್ರವೇಶಿಸಿದನು.

೧೦೩. ಅಲ್ಲಿ ನಂದಾದೀಪವು ಮಂಕಾಗಿದ್ದುದನ್ನು ಕಂಡು ಅವನು ಪಕ್ವಾನ್ನಗಳನ್ನು ಚೆನ್ನಾಗಿ ಕಣ್ಣಿಟ್ಟು ನೋಡಲೋಸುಗ ತನ್ನ ಮೇಲುಹೊದಿಕೆಯ

ತತಃ ಪಕ್ವಾನ್ನಮಾದಾಯ ತ್ವರಿತಂ ಗಚ್ಛತೋ ಬಹಿಃ ।
ತಸ್ಯ ಪಾದತಲಾಘಾತಾತ್ಪ್ರಸುಪ್ತಃ ಕೋಽಪ್ಯಬುಧ್ಯತ ॥ ೧೦೪ ॥
ಕೋಽಯಂ ಕೋಽಯಂ ತ್ವರಾಪನ್ನಶ್ಚೋರೋಽಯಂ ಗೃಹ್ಯತಾಮಿತಿ ।
ಯಾವದ್ಭೂಯಾತ್ಸಮಾಗತ್ಯ ತಾವತ್ಸ ಪುರರಕ್ಷಕೈಃ ॥ ೧೦೫ ॥
ಪಲಾಯಮಾನೋ ನಿಹತಃ ಕ್ಷಣಾತ್ಪಂಚತ್ವಮಾಗತಃ ।
ಅಭಕ್ಷಯಚ್ಚ ನೈವೇದ್ಯಂ ಭಾವಿಪುಣ್ಯಬಲಾನ್ನ ಸಃ ॥ ೧೦೬ ॥
ಅಥ ಬದ್ಧಃ ಸಮಾಗತ್ಯ ಪಾಶಮುದ್ಗರಪಾಣಿಭಿಃ ।
ನಿನೀಷುಭಿಃ ಸಂಯಮಿನೀಂ ಯಾಮ್ಯೈಃ ಸ ವಿಕಟೈರ್ಭಟೈಃ ॥ ೧೦೭ ॥
ತಾವತ್ಪಾರಿಷದಾಃ ಪ್ರಾಪ್ತಾಃ ಕಿಂಕಿಣೀಜಾಲಮಾಲಿತಂ ।
ದಿವ್ಯಂ ವಿಮಾನಮಾದಾಯ ತಂ ನೇತುಂ ಶೂಲಪಾಣಯಃ ॥ ೧೦೮ ॥
ಶಂಭೋರ್ಗಣಾನ್ ಸಮಾಲೋಕ್ಯ ಭೀತೈಸ್ತೈರ್ಯಮಕಿಂಕರೈಃ ।
ಅವಾದಿ ಪ್ರಣತೈರಿತ್ಥಂ ದುರ್ವೃತ್ತೋಽಹಂ ಗಣಾ ದ್ವಿಜಃ ॥ ೧೦೯ ॥

---

ಅಂಚಿನಲ್ಲಿ ಸ್ವಲ್ಪಭಾಗವನ್ನು ಹರಿದು ದಪ್ಪವಾದ ಬತ್ತಿಯನ್ನು ಮಾಡಿ ಹಾಕಿ ದೊಡ್ಡದಾಗಿ ದೀಪವನ್ನು ಬೆಳಗಿಸಿದನು.

೧೦೪ ತರುವಾಯ ಅವನು ಅಲ್ಲಿದ್ದ ಪಕ್ವಾನ್ನಗಳನ್ನು ತೆಗೆದುಕೊಂಡು ಜಾಗ್ರತೆಯಾಗಿ ಹೊರಗೆ ಬರುತ್ತಿರುವಾಗ ಅವನ ಕಾಲು ಹೊಡೆತದಿಂದ ಮಲಗಿದ್ದವನೊಬ್ಬನು ಎಚ್ಚರಗೊಂಡನು

೧೦೫. ಅವನು, 'ಯಾರಿವನು, ಯಾರಿವನು?' ಎಂದೂ 'ಅಯ್ಯೋ ಕಳ್ಳ, ಹಿಡಿಯಿರಿ, ಹಿಡಿಯಿರಿ!' ಎಂದೂ ಕೂಗಿಕೊಳ್ಳುತ್ತಿರಲು ಆ ಗುಣನಿಧಿಯು ಹೊರಗೆ ಬಂದು ಓಡುತ್ತಿರುವಂತೆಯೆ ಆ ಪಟ್ಟಣದ ರಕ್ಷಕರು ಅವನನ್ನು ಹಿಡಿದು ಹೊಡೆದರು ಒಡನೆಯೆ ಒಂದು ಕ್ಷಣಕಾಲದಲ್ಲಿ ಅವನು ಮಡಿದು ಹೋದನು

೧೦೬. ಮುಂದಣ ಪುಣ್ಯಪರಿಪಾಕದ ದೆಸೆಯಿಂದ ಅವನು ಆ ನೈವೇದ್ಯದ ಅನ್ನವನ್ನು ಅಂದಿನ ಶಿವರಾತ್ರಿಯಂದು ಭುಜಿಸಿಲಿಲ್ಲ.

೧೦೭ ಆಗ ಸಂಯಮಿನೀಪಟ್ಟಣಕ್ಕೆ ಅವನನ್ನು ಕಟ್ಟಿ ಸೆಳೆದೊಯ್ಯಲು ವಿಕಟರೂಪಿಗಳಾದ ಯಮಭಟರು ಶೂಲಗಳನ್ನೂ, ಮುದ್ಗರಗಳನ್ನೂ ಕೈಯಲ್ಲಿ ಹಿಡಿದು ಅಲ್ಲಿಗೆ ಬಂದರು.

೧೦೮. ಅಷ್ಟರಲ್ಲಿಯೇ ಕಿರುಗೆಜ್ಜೆಗಳ ಮಾಲೆಯಿಂದ ಅಲಂಕೃತವಾದ ದಿವ್ಯ ವಿಮಾನವನ್ನು ತೆಗೆದುಕೊಂಡು ತ್ರಿಶೂಲಪಾಣಿಗಳಾದ ಶಿವಭಕ್ತರೂ ಶಿವನ ಪಾರ್ಷದರೂ ಅಲ್ಲಿಗೆ ಬಂದರು.

೧೦೯–೧೧೪. ಅಯ್ಯಾ ಶಿವಶರ್ಮನೆ, ಯಮಕಿಂಕರರು ಆ ಶಿವಕಿಂಕರ

ಕುಲಾಚಾರಪ್ರತೀಪೋಽಯಂ ಪಿತ್ರೋರ್ವಾಕ್ಯಪರಾಙ್ಮುಖಃ ।
ಸತ್ಯಶೌಚಪರಿಭ್ರಷ್ಟಃ ಸಂಧ್ಯಾಸ್ನಾನವಿವರ್ಜಿತಃ ॥ ೧೧೦ ॥
ಆಸ್ತಾಂ ದೂರೇಽಸ್ಯ ಕರ್ಮಾಣಿ ಶಿವ ನಿರ್ಮಾಲ್ಯಹಾರಕಃ ।
ಪ್ರತ್ಯಕ್ಷತೋಽತ್ರ ವೀಕ್ಷಧ್ವಮಸ್ಪೃಶ್ಯೋಽಯಂ ಭವಾದೃಶಾಂ ॥ ೧೧೧ ॥
ಶಿವನಿರ್ಮಾಲ್ಯಭೋಕ್ತಾರಃ ಶಿವನಿರ್ಮಾಲ್ಯಲಂಘಕಾಃ ।
ಶಿವನಿರ್ಮಾಲ್ಯದಾತಾರಃ ಸ್ಪರ್ಶಸ್ತೇಷಾಂ ಹ್ಯಪುಣ್ಯಕೃತ್ ॥ ೧೧೨ ॥
ವಿಷಮಾಲೋಡ್ಯ ವಾ ಪೇಯಂ ಶ್ರೇಯೋ ವಾಽನಶನಂ ಪರಂ ।
ಸೇವಿತವ್ಯಂ ಶಿವಸ್ವಂ ನ ಪ್ರಾಣೈಃ ಕಂಠಗತೈರಪಿ ॥ ೧೧೩ ॥
ಯೂಯಂ ಪ್ರಮಾಣಂ ಧರ್ಮೇಷು ಯಥಾ ನ ಚ ತಥಾ ವಯಂ ।
ಅಸ್ತಿಚೇದ್ಧರ್ಮಲೇಶೋಽಸ್ಯ ಗಣಾಸ್ತಚ್ಛೃಣುಮೋ ವಯಂ ॥ ೧೧೪ ॥
ಇತ್ಥಂ ತದ್ವಾಕ್ಯಮಾಕರ್ಣ್ಯ ಪ್ರೋಚುಃ ಪಾರಿಷದಾಸ್ತತಃ ।
ಕಿಂಕರಾಃ ಶಿವಧರ್ಮಾ ಯೇ ಸೂಕ್ಷ್ಮಾಸ್ತೇ ವೈ ಭವಾದೃಶೈಃ ॥ ೧೧೫ ॥
ಸ್ಥೂಲಲಕ್ಷ್ಯೈಃ ಕಥಂ ಲಕ್ಷ್ಯಾ ಲಕ್ಷ್ಯಾ ಯೇ ಸೂಕ್ಷ್ಮದೃಷ್ಟಿಭಿಃ ।
ಅನೇನಾನೇನ ಸಾ ಕರ್ಮ ಯತ್ಕೃತಂ ಶೃಣುತೇಹ ತತ್ ॥ ೧೧೬ ॥

---

ರನ್ನು ನೋಡಿ ಬೆದರಿ, ಅವರಿಗೆ ಮಣಿದು "ಎಲೈ ಶಿವಗಣಗಳೇ, ಇವನು ಪಾಪಿಷ್ಠನು, ಕುಲಾಚಾರಕ್ಕೆ ತೀರ ವ್ಯತಿರಿಕ್ತವಾಗಿ ನಡೆದವನು. ಪಿತೃವಾಕ್ಯ ಪರಾಙ್ಮುಖನು. ಸತ್ಯಶೌಚಗಳನ್ನು ತೊರೆದ ಭ್ರಷ್ಟನು. ಇವನು ಸ್ನಾನ ಸಂಧ್ಯಾವಂದನಾದಿಗಳನ್ನು ಮಾಡಿದವನಲ್ಲ. ಅದೂ ಅಂತಿರಲಿ. ಎಲ್ಲಕ್ಕೂ ಮೇಲಾಗಿ ಈ ಪಾಪಿಯು ಶಿವನಿಗಾಗಿ ಅರ್ಪಿಸಿದ್ದ ನೈವೇದ್ಯವನ್ನು ಅಪಹರಿಸಿದ್ದಾನೆ. ನೀವೇ ಪ್ರತ್ಯಕ್ಷವಾಗಿ ನೋಡಿರಿ. ಇವನು ನಿಮ್ಮಂಥವರಿಗೆ ಕೇವಲ ಅಸ್ಪೃಶ್ಯನು. ಶಿವನಿರ್ಮಾಲ್ಯವನ್ನು ಭುಜಿಸುವವರೂ, ಶಿವನಿರ್ಮಾಲ್ಯವನ್ನು ದಾಟುವವರೂ, ಅದನ್ನು ಮತ್ತೊಬ್ಬರಿಗೆ ಕೊಡುವವರೂ ಪಾಪಿಗಳು. ಅವರ ಸ್ಪರ್ಶವೂ ಪಾಪವನ್ನುಂಟುಮಾಡುತ್ತದೆ. ವಿಷವನ್ನಾದರೂ ಕುಡಿಯಬಹುದು. ಉಪವಾಸವಿದ್ದರೂ ಇರಬಹುದು. ಎಲೈ ಶಿವಭಕ್ತರೆ, ಧರ್ಮವಿಚಾರದಲ್ಲಿ ನೀವು ಪ್ರಮಾಣಭೂತರಾಗಿದ್ದೀರಿ. ನಿಮಗೆ ತಿಳಿದಿರುವ ಧರ್ಮಗಳು ನಮಗೆ ತಿಳಿದಿಲ್ಲ. ಆದುದರಿಂದ ಇವನಲ್ಲೇನಾದರೂ ಸ್ವಲ್ಪಮಟ್ಟಿಗಾದರೂ ಧರ್ಮವೆಂಬುದಿದ್ದರೆ ಹೇಳಿರಿ ಅದನ್ನು ಕೇಳುತ್ತೇವೆ" ಎಂದು ಅರಿಕೆಮಾಡಿಕೊಂಡರು.

೧೧೫–೧೧೬. ಹೀಗೆ ನುಡಿದ ಆ ಯಮಕಿಂಕರರ ಮಾತನ್ನು ಕೇಳಿ ಶಿವಗಣಗಳು ಅವರನ್ನು ಕುರಿತು, "ಅಯ್ಯಾ ಕಿಂಕರರೆ, ಸೂಕ್ಷ್ಮಾತಿಸೂಕ್ಷ್ಮಗಳಾದ ಶಿವಧರ್ಮಗಳನ್ನು ನಿಮ್ಮಂಥ ಸ್ಥೂಲದೃಷ್ಟಿಯುಳ್ಳವರು ತಿಳಿಯುವ ಬಗೆ ಹೇಗೆ? ಸೂಕ್ಷ್ಮದೃಷ್ಟಿಯುಳ್ಳ ಜ್ಞಾನಿಗಳಿಗೆ ಮಾತ್ರ ಅವು ವೇದ್ಯವಾಗತಕ್ಕವೇ ಹೊರತು

**ಪತಂತೀ ಲಿಂಗಶಿರಸಿ ದೀಪಚ್ಛಾಯಾ ನಿವಾರಿತಾ ।**
**ಸ್ವಚೈಲಾಂಚಲತೋಽನೇನ ದತ್ವಾ ದೀಪೇ ದಶಾಂ ನಿಶಿ ॥ ೧೧೭ ॥**
**ಅಪರೋಽಪಿ ಪರೋ ಧರ್ಮೋ ಜಾತಸ್ತತ್ರಾಽಸ್ಯ ಕಿಂಕರಾಃ ।**
**ಶೃಣ್ವತಾ ಶಿವನಾಮಾನಿ ಪ್ರಸಂಗಾದಪಿ ಗೃಹ್ಣತಃ ॥ ೧೧೮ ॥**
**ಭಕ್ತೇನ ವಿಧಿನಾ ಪೂಜಾ ಕ್ರಿಯಮಾಣಾ ನಿರೀಕ್ಷಿತಾ ।**
**ಉಪೋಷಿತೇ ನ ಭೂತಾಯಾಮನೇನ ಸ್ಥಿರಚೇತಸಾ ॥ ೧೧೯ ॥**
**ಕಲಿಂಗರಾಜೋ ಭವಿತಾಽಧುನಾ ವಿಧುತಕಲ್ಮಷಃ ।**
**ಏಷ ದ್ವಿಜವರೋ ದೂತಾ ಯೂಯಂ ಯಾತ ಯಥಾಽಽಗತಾಃ ॥ ೧೨೦ ॥**
**ಪಾರ್ಷದೈರ್ಯಮದೂತೇಭ್ಯೋ ಮೋಚಿತಸ್ತ್ವಿತಿ ಸದ್ವಿಜಃ ।**
**ಅರಿಂದಮಸ್ಯ ತನಯಃ ಕಲಿಂಗಾಧಿಪತೇರ್ದಮಃ ॥ ೧೨೧ ॥**

---

ನಿಮ್ಮಂಥವರಿಗಲ್ಲ. ಇವನು ಪಾಪಿಷ್ಠನೆಂದಿರಲ್ಲವೆ? ದಿಟವಾಗಿಯೂ ಇವನು ಪುಣ್ಯಾತ್ಮನು. ಇವನು ಮಾಡಿರುವ ಪುಣ್ಯಕರ್ಮದ ವಿಚಾರವನ್ನು ತಿಳಿಸುತ್ತೇವೆ ಕೇಳಿರಿ.

೧೧೭ ಈ ಪುಣ್ಯಾತ್ಮನು ಶಿವದೇವಾಲಯದಲ್ಲಿ ಇರುಳು ನಂದಾದೀಪವು ಕುಗ್ಗಿಹೋಗಿ ಶಿವಲಿಂಗದ ಮೇಲೆ ನೆರಳು ಬೀಳುವುದರಲ್ಲಿರಲು ತನ್ನ ಮೇಲು ಹೊದಿಕೆಯ ಬಟ್ಟೆಯ ಅಂಚನ್ನು ಹರಿದು ಬತ್ತಿಯನ್ನು ಹೊಸೆದು ಹಾಕಿ ದೀಪವನ್ನು ಉಜ್ಜ್ವಲವಾಗಿ ಬೆಳಗಿಸಿ ನೆರಳು ಬೀಳುವುದನ್ನು ತಪ್ಪಿಸಿದನು.

೧೧೮. ಈತನಿಗೆ ಮತ್ತೊಂದು ಪುಣ್ಯವೂ ಆ ಶಿವದೇವಾಲಯದಲ್ಲಿ ಲಭಿಸಿತು. ಎಲೈ ಕಿಂಕರರೆ, ಅದನ್ನೂ ಕೇಳಿರಿ. ಶಿವದೇವಾಲಯದಲ್ಲಿ ಭಕ್ತರು ಉಚ್ಚರಿಸುತ್ತಿದ್ದ ಶಿವನಾಮಗಳನ್ನು ಕೇಳುತ್ತಿದ್ದ ಈತನು ಅವುಗಳನ್ನು ಪ್ರಸಂಗ ವಶದಿಂದ ತಾನೂ ಉಚ್ಚರಿಸಿರುತ್ತಾನೆ.

೧೧೯. ಶಿವಭಕ್ತನು ವಿಧಿಪೂರ್ವಕವಾಗಿ ಶಿವಲಿಂಗಕ್ಕೆ ಸಮರ್ಪಿಸುತ್ತಿದ್ದ ಪೂಜೆಯನ್ನು ನಿರೀಕ್ಷಿಸಿ ಆ ಚತುರ್ದಶಿಯ ದಿವಸದಂದು ಸ್ಥಿರಚಿತ್ತನಾಗಿ ಉಪವಾಸವಿದ್ದನು.

೧೨೦. ಈ ಪುಣ್ಯದ ಪ್ರಭಾವದಿಂದ ಈ ಬ್ರಾಹ್ಮಣೋತ್ತಮನು ತನ್ನ ಪಾಪಗಳೆಲ್ಲವನ್ನೂ ಕಳೆದುಕೊಂಡು ನಿರ್ಮಲನಾಗಿದ್ದಾನೆ. ಮುಂದೆ ಇವನು ಕಳಿಂಗದೇಶದ ಅರಸನಾಗಿ ಹುಟ್ಟುತ್ತಾನೆ. ಆದುದರಿಂದ ನೀವು ಬಂದ ದಾರಿಯನ್ನು ಹಿಡಿದು ಹೊರಟುಹೋಗಿರಿ."

೧೨೧. ಎಲೈ ಶಿವಶರ್ಮನೆ, ಹೀಗೆ ಆ ವಿಪ್ರಕುಮಾರನನ್ನು ಶಿವಪಾರ್ಷದರು ಯಮದೂತರಿಂದ ಬಿಡಿಸಿದ ಮೇಲೆ ಅವನು ಕಳಿಂಗಾಧಿಪತಿಯಾದ ಅರಿಂದಮ ನೆಂಬ ರಾಜನ ಮಗನಾದ ದಮನಾಗಿ ಹುಟ್ಟಿದನು.

ಕ್ರಮಾದ್ರಾಜ್ಯಮವಾಪ್ಯಾಽಥ ಪಿತರ್ಯುಪರತೇ ಯುವಾ ।
ನಾಽನ್ಯಂ ಧರ್ಮಂ ವಿಜಾನಾತಿ ದುರ್ದಮೋ ಭೂಪತಿರ್ದಮಃ ॥ ೧೨೨ ॥
ಶಿವಾಲಯೇಷು ಸರ್ವೇಷು ದೀಪದಾನಾದೃತೇ ದ್ವಿಜ ।
ಗ್ರಾಮಾಧೀಶಾನ್ ಸಮಾಹೂಯ ಸರ್ವಾನ್ ಸ್ವವಿಷಯಸ್ಥಿತಾನ್ ॥೧೨೩॥
ಇತ್ಥಮಾಜ್ಞಾಪಯಾಮಾಸ ಸಮೋ ದಂಡ್ಯೋ ಭವಿಷ್ಯತಿ ।
ಯಸ್ಯ ಯಸ್ಯಾಽಭಿತೋ ಗ್ರಾಮಂ ಯಾವಂತಶ್ಚ ಶಿವಾಲಯಾಃ ॥ ೧೨೪ ॥
ತತ್ರ ತತ್ರ ಸದಾ ದೀಪೋ ದ್ಯೋತನೀಯೋಽವಿಚಾರಿತಂ ।
ಮಮಾಜ್ಞಾಭಂಗದೋಷೇಣ ಶಿರಶ್ಛೇತ್ಸ್ಯಾಮ್ಯಸಂಶಯಂ ॥ ೧೨೫ ॥
ಇತಿ ತದ್ಭಯತೋ ದೀಪ್ತಾ ದೀಪಾಃ ಪ್ರತಿಶಿವಾಲಯಂ ।
ಅನೇನೈವ ಸಧರ್ಮೇಣ ಯಾವಜ್ಜೀವಂ ದಮೋ ನೃಪಃ ॥ ೧೨೬ ॥
ಧರ್ಮರ್ಧಿಂ ಮಹತೀಂ ಪ್ರಾಪ್ಯ ಕಾಲಧರ್ಮವಶಂ ಗತಃ ।
ಸ ದೀಪವಾಸನಾಯೋಗಾದ್ಬಹೂನ್ದೀಪಾನ್ಪ್ರದೀಪ್ಯ ವೈ ॥ ೧೨೭ ॥
ಅಲಕಾಯಾಃ ಪತಿರಭೂದ್ರತ್ನದೀಪಶಿಖಾಶ್ರಯಃ ।
ಏವಂ ಫಲತಿ ಕಾಲೇನ ಶಿವೇಽಲ್ಪಮಪಿ ಯತ್ಕೃತಂ ॥ ೧೨೮ ॥

---

೧೨೨–೧೨೫. ತರುವಾಯ ಕಾಲಾನಂತರದಲ್ಲಿ ಈ ದಮನು ತಂದೆಯು ದಿವಂಗತನಾದ ಬಳಿಕ ಕಳಿಂಗದೇಶಕ್ಕೆ ಪೂರ್ವಾನುಕ್ರಮದಿಂದ ಅರಸನಾದನು. ಎಲೈ ಶಿವಶರ್ಮನೆ, ಅರಿಂದಮರಾಜನ ಮಗನೂ ಶತ್ರುಗಳಿಗೆ ಅತ್ಯಂತ ದುರ್ದಮನೂ ಆದ ಈ ದಮನು ಶಿವದೇವಾಲಯಗಳಲ್ಲೆಲ್ಲ ದೀಪದಾನಮಾಡುವುದೊಂದನ್ನುಳಿದು ಬೇರಾವ ಧರ್ಮವನ್ನೂ ತಿಳಿದಿರಲಿಲ್ಲ. ಅವನು ತನ್ನ ದೇಶದಲ್ಲಿದ್ದ ಗ್ರಾಮಾಧಿಕಾರಿಗಳನ್ನೆಲ್ಲ ಕರೆಯಿಸಿ ಈ ರೀತಿ ಆಜ್ಞಾಪಿಸಿದನು. "ಯಾವ ಯಾವನ ಗ್ರಾಮದಲ್ಲೇ ಅಲ್ಲದ ಸುತ್ತಮುತ್ತಲೂ ಎಷ್ಟು ಶಿವಾಲಯಗಳಿವೆಯೊ ಅಷ್ಟರಲ್ಲಿಯೂ ಯಾವ ವಿಚಾರವನ್ನೂ ಮಾಡದೆ ನಂದಾದೀಪಗಳನ್ನು ಬೆಳಗಿಸತಕ್ಕದ್ದು. ಹಾಗೆ ಮಾಡದೆ ಇರುವವನು ದಂಡನೆಗೆ ಅರ್ಹನಾಗುತ್ತಾನೆ. ಈ ನನ್ನ ಆಜ್ಞೆಗೆ ಭಂಗತಂದು ತಪ್ಪಿತಸ್ಥನಾದವನ ಶಿರಸ್ಸನ್ನು ನಾನೇ ಯಾವ ಸಂಶಯವೂ ಇಲ್ಲದೆ ಛೇದಿಸಿಬಿಡುತ್ತೇನೆ"

೧೨೬–೧೨೮. ದೊರೆಯಾದ ಅಮನ ಈ ಆಜ್ಞೆಯ ಭಯದಿಂದ ಅವನ ರಾಜ್ಯದ ಪ್ರತಿಯೊಂದು ಶಿವಾಲಯದಲ್ಲಿಯೂ ದೀಪಗಳು ಬೆಳಗಿಸಲ್ಪಟ್ಟುವು. ದಮರಾಜನು ಹೀಗೆ ತಾನು ಬದುಕಿರುವವರೆಗೂ ಇದೇ ಧರ್ಮವನ್ನೇ ನಡೆಸುತ್ತಿದ್ದು ಆ ಮೂಲಕ ಅಪರಿಮಿತವಾದ ಪುಣ್ಯವನ್ನು ಪಡೆದು ಕೆಲಕಾಲದಮೇಲೆ ಕಾಲಧರ್ಮವನ್ನು ಹೊಂದಿದನು. ಅವನು ಹಿಂದಿನ ಜನ್ಮದಲ್ಲಿ ಶಿವದೇವಾಲಯದ

ಇತಿ ಜ್ಞಾತ್ವಾ ಶಿವೇ ಕಾರ್ಯಂ ಭಜನಂ ಸ್ವಸುಖಾರ್ಥಿಭಿಃ ।
ಕ್ವ ಸ ದೀಕ್ಷಿತದಾಯಾದಃ ಸರ್ವಧರ್ಮಪರಾಙ್ಮುಖಃ ॥ ೧೨೯ ॥
ಸ್ವಾರ್ಥದೀಪದಶೋದ್ಯೋತಲಿಂಗಮೌಲಿತಮೋಹರಃ ।
ಕಲಿಂಗವಿಷಯೇ ರಾಜ್ಯಂ ಪ್ರಾಪ್ತೋದ್ಧರ್ಮರತಿಃ ಸದಾ ॥ ೧೩೦ ॥
ಶಿವಾಲಯೇ ಸಮುದ್ದೀಪ್ಯ ದೀಪಾನ್ ಪ್ರಾಗ್ವಾಸನೋದಯಾತ್ ।
ಕ್ವೈಷಾ ದಿಕ್ಪಾಲಪದವೀ ಶಿವಶರ್ಮನ್ವಿಲೋಕಯ ।
ಮನುಷ್ಯಧರ್ಮಣಾಽನೇನ ಸಾಂಪ್ರತಂ ಯೇಹ ಭುಜ್ಯತೇ ॥ ೧೩೧ ॥

ಗಣಾವೂಚತುಃ:—

ಸರ್ವದೈವ ಶಿವೇನಾಽಸೌ ಸಖಿತ್ವಂ ಚ ಯಥೇಯಿವಾನ್ ।
ತದಪ್ಯೇಕಮನಾ ವಿಪ್ರ ಸಂಶೃಣುಷ್ವ ಬ್ರವಾವಹೈ ॥ ೧೩೨ ॥

---

ನಂದಾದೀಪವನ್ನು ಉಜ್ಜ್ವಲಗೊಳಿಸಿದುದರ ಕರ್ಮವಾಸನೆಯಿಂದ ಈ ಜನ್ಮದಲ್ಲಿಯೂ ಅನೇಕ ದೇವಾಲಯಗಳಲ್ಲಿ ದೀಪಗಳನ್ನು ಬೆಳಗಿಸಿ ಅಲಕಾಪಟ್ಟಣದ ಒಡೆಯನಾಗಿ ರತ್ನದೀಪಗಳ ಆಶ್ರಯವನ್ನು ಪಡೆದನು. ಅಯ್ಯಾ ಶಿವಶರ್ಮನೆ, ಹೀಗೆ ಶಿವನಿಗೆ ಸಲ್ಲಿಸಿದ ಅಲ್ಪಸೇವೆಯು ಕಾಲಾನಂತರದಲ್ಲಿ ಬಹುವಾಗಿ ಫಲಿಸುತ್ತದೆ.

೧೨೯—೧೩೦ ಈ ವಿಷಯವನ್ನು ಅರಿತುಕೊಂಡು ಆತ್ಮಸುಖವನ್ನು ಬಯಸುವ ಮಾನವರೆಲ್ಲರೂ ಶಿವನನ್ನು ಸೇವಿಸತಕ್ಕದ್ದು, ಶಿವಭಜನೆಯನ್ನು ಮಾಡತಕ್ಕದ್ದು. ಯಜ್ಞದತ್ತದೀಕ್ಷಿತನ ಮಗನಾಗಿ ಹುಟ್ಟಿ ಸಮಸ್ತ ಧರ್ಮಗಳಿಗೂ ಪರಾಙ್ಮುಖನಾಗಿದ್ದ ಆ ಗುಣನಿಧಿಯೆಲ್ಲಿ? ಅವನು ಕೇವಲ ಸ್ವಾರ್ಥಕ್ಕಾಗಿ ದೀಪವನ್ನು ಬೆಳಗಿಸಿ ಲಿಂಗದ ಮೇಲಿದ್ದ ಅಂಧಕಾರವನ್ನು ತೊಲಗಿಸಿದುದರಿಂದ ಅವನು ಕಳಿಂಗ ದೇಶದಲ್ಲಿ ರಾಜ್ಯವನ್ನು ಪಡೆದು ಯಾವಾಗಲೂ ಧರ್ಮದಲ್ಲಿ ಪ್ರೇಮವುಳ್ಳವನಾಗಿದ್ದನು.

೧೩೧. ಅಯ್ಯಾ ಶಿವಶರ್ಮನೆ, ನೋಡಿದೆಯಾ? ಪೂರ್ವಜನ್ಮದ ವಾಸನೆಯಿಂದ ಶಿವಾಲಯಗಳಲ್ಲಿ ದೀಪವನ್ನು ಬೆಳಗಿಸುವುದೆತ್ತ, ಆ ಮೇಲೆ ಈ ದಿಕ್ಪಾಲಕ ಪದವಿಯೆತ್ತ? ಹೀಗೆ ಆ ಗುಣನಿಧಿಯು ತನ್ನ ಪುಣ್ಯಪರಿಪಾಕದ ದೆಸೆಯಿಂದ ಕೇವಲ ಮನುಷ್ಯಧರ್ಮವುಳ್ಳವನಾಗಿಯೇ ಈ ಪದವಿಯನ್ನು ಪಡೆದನು

೧೩೨. ಗಣಗಳು ಹೇಳುತ್ತಾರೆ:—ಅಯ್ಯಾ ಶಿವಶರ್ಮನೆ, ಈ ಕುಬೇರನು ಪರಮೇಶ್ವರನಿಗೆ ಅತ್ಯಂತ ಮಿತ್ರನಾದ ಸಂಗತಿಯನ್ನು ಈಗ ಹೇಳುತ್ತೇವೆ. ಒಮ್ಮನದಿಂದ ಕೇಳು.

ಪಾದ್ಮೇ ಕಲ್ಪೇ ಪುರಾ ವಿಪ್ರ ಬ್ರಹ್ಮಣೋ ಮಾನಸಾತ್ಸುತಾತ್ ।
ಪುಲಸ್ತ್ಯಾದ್ವಿಶ್ರವಾಜ್ಜಜ್ಞೇ ತಸ್ಯ ವೈಶ್ರವಣಃ ಸುತಃ ॥ ೧೩೩ ॥
ತೇನೇಯಮಲಕಾ ಭುಕ್ತಾ ಪುರೀ ವಿಶ್ವಕೃತಾ ಕೃತಾ ।
ಆರಾಧ್ಯಂ ತ್ರ್ಯಂಬಕಂ ದೇವಮತ್ಯುಗ್ರತಪಸಾ ಪುರಾ ॥ ೧೩೪ ॥
ವ್ಯತೀತೇ ತತ್ರ ಕಲ್ಪೇ ವೈ ಪ್ರವೃತ್ತೇ ಮೇಘವಾಹನೇ ।
ಯಾಜ್ಞದತ್ತಿರಸೌ ಶ್ರೀದಸ್ತಪಸ್ತೇಪೇ ಸುದುಃಸಹಂ ॥ ೧೩೫ ॥
ಭಕ್ತಿಪ್ರಭಾವಂ ವಿಜ್ಞಾಯ ಶಂಭೋಸ್ತದ್ದೀಪಮಾತ್ರತಃ ।
ಪುರೀಂ ಪುರಾರೇಃ ಸಂಪ್ರಾಪ್ಯ ಕಾಶಿಕಾಂ ಚಿತ್ತಕಾಶಿಕಾಂ ॥ ೧೩೬ ॥
ಶಿವೈಕದಶಮುದ್ಬೋಧ್ಯ ಚಿತ್ತರತ್ನಪ್ರದೀಪಕಂ ।
ಅನನ್ಯಭಕ್ತಿಸ್ನೇಹಾಢ್ಯಂ ತನ್ಮಹೋಧ್ಯಾನನಿಶ್ಚಲಂ ॥ ೧೩೭ ॥
ಶಿವೈಕ್ಯಸುಮಹಾಪಾತ್ರಂ ತಪೋಽಗ್ನಿಪರಿಬೃಂಹಿತಂ ।
ಕಾಮಕ್ರೋಧಮಹಾವಿಘ್ನಪತಂಗಾಘಾತವರ್ಜಿತಂ ॥ ೧೩೮ ॥
ಪ್ರಾಣಸಂರೋಧನಿರ್ವಾತಂ ನಿರ್ಮಲಂ ನಿರ್ಮಲೇಕ್ಷಣಾತ್ ।
ಸಂಸ್ಥಾಪ್ಯ ಶಾಂಭವಂ ಲಿಂಗಂ ಸದ್ಭಾವಕುಸುಮಾರ್ಚಿತಂ ॥ ೧೩೯ ॥

---

೧೩೩–೧೩೪ ಅಯ್ಯಾ ವಿಪ್ರನೆ. ಪೂರ್ವದ ಪಾದ್ಮಕಲ್ಪದಲ್ಲಿ ಬ್ರಹ್ಮ ಮಾನಸಪುತ್ರನಾದ ಪುಲಸ್ತ್ಯಬ್ರಹ್ಮನಿಂದ ವಿಶ್ರವಸ್ಸೆಂಬವನು ಜನಿಸಿದನು. ಅವನಿಗೆ ವೈಶ್ರವಣನು ಮಗನು. ಈ ವೈಶ್ರವಣನು ಪರಮೇಶ್ವರನನ್ನು ಅತ್ಯುಗ್ರವಾದ ತಪಸ್ಸಿನಿಂದ ಮೆಚ್ಚಿಸಿ. ಪೂರ್ವದಲ್ಲಿ ಈ ಅಲಕಾರಾಜ್ಯವನ್ನು ಅನುಭವಿಸಿದನು.

೧೩೫–೧೪೦. ಪಾದ್ಮಕಲ್ಪವು ಕಳೆದ ಮೇಲೆ ಈ ರೌದ್ರಕಲ್ಪದಲ್ಲಿ ಯಜ್ಞ ದತ್ತನ ಮಗನಾದ ಈ ಗುಣನಿಧಿಯು ಕುಬೇರನಾಗಿ ಆ ಪರಶಿವನನ್ನು ಕುರಿತು ದುಸ್ಸಹವಾದ ತಪಸ್ಸನ್ನು ಮಾಡಿದನು. ಅವನು ಶಿವದೇವಾಲಯದಲ್ಲಿ ಬೆಳಗಿಸಿದ ದೀಪಮಾತ್ರದಿಂದಲೆ ತನಗೆ ದೊರೆತ ಅಲಕಾಪುರಾಧಿಪತ್ಯವನ್ನು ಪರಿಭಾವಿಸಿ, ಅದರಿಂದ ಶಿವಭಕ್ತಿಪ್ರಭಾವವನ್ನು ಚೆನ್ನಾಗಿ ಅರಿತುಕೊಂಡು, ಕೈಲಾಸವನ್ನು ಸೇರಿದ ಬಳಿಕ ತಪಸ್ಸೆಂಬ ಜಾಜ್ವಲ್ಯಮಾನವಾದ ದೀಪವನ್ನು ಶಿವನ ಸನ್ನಿಧಿಯಲ್ಲಿ ಬೆಳಗಿಸಿದನು. ಶಿವನೆಂಬ ಒಂದೇ ಬತ್ತಿಯುಳ್ಳದ್ದಾಗಿ, ಅನನ್ಯವಾದ ಭಕ್ತಿಯೆಂಬ ತೈಲದಿಂದ ತುಂಬಿ, ಆತನ ಪ್ರಭಾವವನ್ನು ಕುರಿತ ಧ್ಯಾನದಿಂದ ನಿಶ್ಚಲವಾಗಿ, ಶಿವೈಕ್ಯಜ್ಞಾನವೆಂಬ ಮಹಾಪಾತ್ರದಲ್ಲಿ ತಪಸ್ಸೆಂಬ ಅಗ್ನಿಯಿಂದ ಹೊತ್ತಿಸದುದಾಗಿ, ಕಾಮಕ್ರೋಧಗಳೆಂಬ ಮಹಾ ವಿಘ್ನಕರ ಗಳಾದ ಪತಂಗದ ಹುಳುಗಳ ಹೊಡೆತವೇನೂ ಇಲ್ಲದೆ, ಪ್ರಾಣವಾಯು ವನ್ನು ನಿರೋಧಿಸಿದ್ದುದರಿಂದ ಗಾಳಿಯ ಬೀಸುವಿಕೆಯಿಲ್ಲದುಗಿ. ನಿರ್ಮಲವಾದ

ತಾವತ್ತತಾಪ ಸತಪಸ್ತ್ವಗಸ್ಥಿಪರಿಶೇಷಿತಂ ।
ಯಾವದಬ್ದಭೂವ ತದ್ವರ್ಷ್ಯ ವರ್ಷಾಣಾಮಯುತಂ ಶತಂ ॥ ೧೪೦ ॥
ತತಃ ಸಹವಿಶಾಲಾಕ್ಷ್ಯಾ ದೇವೋ ವಿಶ್ವೇಶ್ವರಃ ಸ್ವಯಂ ।
ಅಲಕಾಪತಿಮಾಲೋಕ್ಯ ಪ್ರಸನ್ನೇನಾಂತರಾತ್ಮನಾ ॥ ೧೪೧ ॥
ಲಿಂಗೇ ಮನಃ ಸಮಾಧಾಯ ಸ್ಥಿತಂ ಸ್ಥಾಣುಸ್ವರೂಪಿಣಂ ।
ಉವಾಚ ವರದೋಽಸ್ಮೀತಿ ತಪಸ್ತಾಽಲಮಲಕಾಪತೇ ॥ ೧೪೨ ॥
ಉನ್ಮೀಲ್ಯ ನಯನೇ ಯಾವತ್ಸ ಪಶ್ಯತಿ ತಪೋಧನಃ ।
ತಾವದುದ್ಯತ್ಸಹಸ್ರಾಂಶುಸಹಸ್ರಾಽಧಿಕತೇಜಸಂ ॥ ೧೪೩ ॥
ಪುರೋ ದದರ್ಶ ಶ್ರೀಕಂಠಂ ಚಂದ್ರಚೂಡಮುಮಾಧವಂ ।
ತತ್ತೇಜಃ ಪರಿಭೂತಾಕ್ಷಿತೇಜಾಃ ಸಂಮಿಾಲ್ಯಲೋಚನೇ ॥ ೧೪೪ ॥
ಉವಾಚ ದೇವದೇವೇಶಂ ಮನೋರಥಪಥಾತಿಗಂ ।
ನಿಜಾಂಘ್ರಿದರ್ಶನೇ ನಾಥ ದೃಕ್ಸಾಮರ್ಥ್ಯಂ ಪ್ರಯಚ್ಛ ಮೇ ॥ ೧೪೫ ॥

---

ಜ್ಞಾನದೃಷ್ಟಿಯ ದೆಸೆಯಿಂದ ನಿರ್ಮಲವಾಗಿ ಆ ತಪಸ್ಸೆಂಬ ಅವನ ಪರಮಾಶ್ಚರ್ಯಕರವಾದ ರತ್ನಪ್ರದೀಪವು ಬಹುವಾಗಿ ಬೆಳಗುತ್ತಿದ್ದಿತು. ಹೀಗೆ ತಪೋರತ್ನದೀಪವನ್ನು ಬೆಳಗಿಸಿದ ತರುವಾಯ, ಆ ಕುಬೇರನು ಸದ್ಭಾವಕುಸುಮಗಳಿಂದ ಸಂಪೂಜಿತವಾದ ಶಾಂಭವಲಿಂಗವನ್ನು ಸ್ಥಾಪಿಸಿ, ದೇಹದಲ್ಲಿ ಎಲುಬು ಚರ್ಮಗಳು ಮಾತ್ರ ಉಳಿದಿರಲು ಒಂದು ಲಕ್ಷ ಸಂವತ್ಸರಗಳಕಾಲ. ತಪಸ್ಸನ್ನೆಸಗಿದನು.

೧೪೧–೧೪೨. ಬಳಿಕ ಕೈಲಾಸಾಧಿಪತಿಯಾದ ವಿಶ್ವೇಶ್ವರನು ತನ್ನ ಮಡದಿಯಾದ ವಿಶಾಲಾಕ್ಷಿಯೊಡನೆ ಅಲ್ಲಿ ಪ್ರತ್ಯಕ್ಷನಾಗಿ, ಆ ಅಲಕಾಪತಿಯನ್ನು ಕಂಡು ಪ್ರಸನ್ನಾಂತರಂಗವುಳ್ಳವನಾಗಿ, ಶಿವಲಿಂಗದಲ್ಲಿಯೆ ನಟ್ಟಮನಸ್ಸುಳ್ಳವನಾಗಿ ಕಟ್ಟಕದಲದೆ ಕುಳಿತಿದ್ದ ಅವನನ್ನು ಕುರಿತು, "ಓ ಅಲಕೇಶ್ವರ, ಇನ್ನು ತಪಸ್ಸನ್ನು ಸಾಕುಮಾಡು. ಇದೊ ನಾನ್ ನಿನಗೆ ಪ್ರತ್ಯಕ್ಷನಾಗಿ ವರದನಾಗಿರುವೆನು" ಎಂದು ಹೇಳಿದನು.

೧೪೩–೧೪೬. ತಪೋಧನನಾದ ಆ ಕುಬೇರನು ಕಣ್ಣುಗಳನ್ನು ತೆರೆದು ನೋಡುವಷ್ಟರಲ್ಲಿಯೆ ಅವನ ಮುಂಗಡೆ ಒಂದೇ ತಡವೆಯೆ ಉದಿಸಿದ ಸಹಸ್ರ ಸೂರ್ಯರಿಗಿಂತಲೂ ಅಧಿಕವಾದ ತೇಜಸ್ಸುಳ್ಳವನಾಗಿ ಉಮಾದೇವಿಯೊಡಗೂಡಿದ ಶ್ರೀಕಂಠನೂ, ಚಂದ್ರಚೂಡನೂ ಆದ ಆ ಪರಶಿವನು ಕಾಣಿಸಿದನು. ಆ ತೇಜಸ್ಸಿನಿಂದ ಅವನ ಕಣ್ಣಿನ ತೇಜಸ್ಸು ತಿರಸ್ಕೃತವಾಗಿ ಹೋಗಲು ಅವನು ಕಣ್ಣುಗಳನ್ನು ಮುಗಿದುಕೊಂಡು ತನ್ನ ಮನೋರಥದ ದಾರಿಗೂ ನಿಲುಕದಿರುವ

ಅಯಮೇವ ವರೋ ನಾಥ ಯತ್ತ್ವಂ ಸಾಕ್ಷಾನ್ನಿರೀಕ್ಷ್ಯಸೇ ।
ಕಿಮನ್ಯೇನ ವರೇಣೇಶ ನಮಸ್ತೇ ಶಶಿಶೇಖರ ॥ ೧೪೬ ॥
ಇತಿ ತದ್ವಚನಂ ಶ್ರುತ್ವಾ ದೇವದೇವ ಉಮಾಪತಿಃ ।
ದದೌ ದರ್ಶನಸಾಮರ್ಥ್ಯಂ ಸ್ಪೃಷ್ಟ್ವಾ ಪಾಣಿತಲೇನ ತಂ ॥ ೧೪೭ ॥
ಪ್ರಸಾರ್ಯ ನಯನೇ ಪೂರ್ವಮುಮಾಮೇವ ವ್ಯಲೋಕಯತ್ ।
ಶಂಭೋಃ ಸಮೀಪೇ ಕಾ ಯೋಷಿದೇಷಾ ಸರ್ವಾಂಗಸುಂದರೀ ॥ ೧೪೮ ॥
ಅನಯಾ ಕಿಂ ತಪಸ್ತಪ್ತಂ ಮಮಾಽಪಿ ತಪಸೋಽಧಿಕಂ ।
ಅಹೋ ರೂಪಮಹೋ ಪ್ರೇಮ ಸೌಭಾಗ್ಯಶ್ರೀರಹೋ ಭೃಶಂ ॥ ೧೪೯ ॥
ಕ್ರೂರದೃಗ್ವೀಕ್ಷತೇ ಯಾವತ್ಪುನಃ ಪುನರಿದಂ ವದನ್ ।
ತಾವತ್ಪುಸ್ಫೋಟ ತನ್ನೇತ್ರಂ ವಾಮಂ ವಾಮಾವಿಲೋಕನಾತ್ ॥ ೧೫೦ ॥
ಅಥ ದೇವ್ಯಬ್ರವೀದ್ದೇವಂ ಕಿಮಸೌ ದುಷ್ಟತಾಪಸಃ ।
ಅಸಕೃದ್ವೀಕ್ಷ್ಯ ಮಾಂ ವಕ್ತಿ ನ್ಯಕ್ಕುರ್ವನ್ಮೇ ತಪಃ ಪ್ರಭಾಂ ॥ ೧೫೧ ॥

---

ಆ ದೇವದೇವೇಶ್ವರನನ್ನು ಕುರಿತು "ಓ ನನ್ನ ಪ್ರಭುವೆ, ನಿನ್ನ ಪಾದದರ್ಶನವನ್ನು ಮಾಡುವ ದೃಷ್ಟಿ ಸಾಮರ್ಥ್ಯವನ್ನು ನನಗೆ ದಯಪಾಲಿಸು. ನಾಥ! ಇದೇ ನನಗೆ ವರವಾಗಲಿ. ಸಾಕ್ಷಾತ್ತಾಗಿ ನೀನೇ ದೃಗ್ಗೋಚರನಾಗಿರುವಾಗ ಬೇರೊಂದು ವರದಿಂದ ಆಗುವ ಪ್ರಯೋಜನವೇನು? ಓ ಚಂದ್ರಮೌಳಿ, ಇದೊ ನಿನಗೆ ನಮಸ್ಕಾರವು" ಎಂದು ಹೇಳಿದನು.

೧೪೭. ಇಂತು ನುಡಿದ ಆ ಕುಬೇರನ ಮಾತುಗಳನ್ನು ಕೇಳಿ ಉಮಾಪತಿಯು ತನ್ನ ಪಾಣಿತಲದಿಂದ ಅವನನ್ನು ಸ್ಪರ್ಶಿಸಿ, ತನ್ನ ದಿವ್ಯಸ್ವರೂಪವನ್ನು ಸಂದರ್ಶಿಸುವ ಸಾಮರ್ಥ್ಯವನ್ನು ಅವನಿಗೆ ಅನುಗ್ರಹಿಸಿದನು

೧೪೮-೧೪೯. ಅವನಾದರೊ ಮುಗಿದಕಣ್ಣುಗಳನ್ನು ತೆರೆದು, ಮೊದಲು ಆ ಶಂಭುವಿನ ಸಮೀಪದಲ್ಲಿಯೇ ಇದ್ದ ಉಮಾದೇವಿಯನ್ನು ಕಂಡನು. "ಸ್ವಾಮಿಯ ಬಳಿ ಇರುವ ಈ ಸರ್ವಾಂಗಸುಂದರಿಯಾದ ಹೆಂಗಸಾರು? ಈಕೆಯು ಹೀಗೆ ನತತವೂ ಪರಶಿವನೊಡನೆಯೇ ಇರಲು ನನಗಿಂತಲೂ ಅಧಿಕವಾದ ಅದಾವ ತಪಸ್ಸನ್ನೆಸಗಿದಳು? ಆಹ! ಏನೀಕೆಯ ರೂಪ! ಈಕೆಯ ಪ್ರೇಮವೂ ಸೌಭಾಗ್ಯವೂ ತೇಜಸ್ಸಮೃದ್ಧಿಯೂ ಎಷ್ಟು ಅಪಾರವಾಗಿದೆ!" ಎಂದುಕೊಳ್ಳುತ್ತ ಅವನು ಆ ದೇವಿಯನ್ನೇ ನೋಡತೊಡಗಿದನು.

೧೫೦. ಅವನು ಈ ಮಾತನ್ನೇ ಅಡಿಗಡಿಗೂ ಹೇಳುತ್ತ ಕ್ರೂರದೃಷ್ಟಿಯಿಂದ ಆ ದೇವಿಯನ್ನು ನೋಡುತ್ತಿರುವಂತೆಯೇ, ಆ ಅನುಚಿತವೀಕ್ಷಣದ ಫಲವಾಗಿ ಅವನ ಎಡಗಣ್ಣು ಸಿಡಿದುಹೋಯಿತು

೧೫೧. ಆ ತರುವಾಯ ಉಮಾದೇವಿಯು ಪ್ರಭುವನ್ನು ಕುರಿತು, "ನಾಥ,

**ಅಸಕೃದ್ದಕ್ಷಿಣೇನಾಕ್ಷ್ಣಾ ಪುನರ್ವಾಮೇನ ಪಶ್ಯತಿ ।**
**ಅಸೂಯಮಾನೋ ಮೇ ರೂಪಂ ಪ್ರೇಮಸೌಭಾಗ್ಯಸಂಪದಃ ॥ ೧೫೨ ॥**
**ಇತಿ ದೇವೀಗಿರಂ ಶ್ರುತ್ವಾ ಪ್ರಹಸ್ಯ ಪ್ರಾಹ ತಾಂ ಪ್ರಭುಃ ।**
**ಉಮೇ ತ್ವದೀಯಃ ಪುತ್ರೋಽಯಂ ನ ಚ ಕ್ರೂರೇಣ ಚಕ್ಷುಷಾ॥ ೧೫೩ ॥**
**ಸಂಪಶ್ಯತೇ ತಪೋಲಕ್ಷ್ಮೀಂ ತವ ಕಿಂತ್ವಧಿವರ್ಣಯೇತ್ ।**
**ಇತಿ ದೇವೀಂ ಸಮಾಭಾಷ್ಯ ತಮೀಶಃ ಪುನರಬ್ರವೀತ್ ॥ ೧೫೪ ॥**
**ವರಾನ್ದದಾಮಿ ತೇ ವತ್ಸ ತಪಸಾಽನೇನ ತೋಷಿತಃ ।**
**ನಿಧೀನಾಮಧಿನಾಥಸ್ತ್ವಂ ಗುಹ್ಯಕಾನಾಂ ಭವೇಶ್ವರಃ ॥ ೧೫೫ ॥**
**ಯಕ್ಷಾಣಾಂ ಕಿನ್ನರಾಣಾಂ ಚ ರಾಜಾ ರಾಜ್ಞಾಂ ಚ ಸುವ್ರತ ।**
**ಪತಿಃ ಪುಣ್ಯಜನಾನಾಂ ಚ ಸರ್ವೇಷಾಂ ಧನದೋ ಭವ ॥ ೧೫೬ ॥**
**ಮಯಾ ಸಖ್ಯಂ ಚ ತೇ ನಿತ್ಯಂ ವತ್ಸ್ಯಾಮಿ ಚ ತವಾಂತಿಕೇ ।**
**ಅಲಕಾಂ ನಿಕಷಾಮಿತ್ರ ತವಪ್ರೀತಿವಿವೃದ್ಧಯೇ ॥ ೧೫೭ ॥**

---

ಈ ದುಷ್ಟತಾಪಸನು ನನ್ನ ತಪಃ ಪ್ರಭಾವವನ್ನು ತಿರಸ್ಕರಿಸುತ್ತ ಈ ರೀತಿ ಅಸಭ್ಯವಾಗಿ ನುಡಿಯುತ್ತ ಅಡಿಗಡಿಗೂ ನೋಡುತ್ತಿರುವನೇಕೆ'

೧೫೨. ಇವನು ನನ್ನ ರೂಪವನ್ನೂ ಸೌಭಾಗ್ಯವನ್ನೂ ಸಂಪತ್ತನ್ನೂ ನೋಡಿ ಅಸೂಯೆಪಡುತ್ತ ತನ್ನ ಎಡಗಣ್ಣು ಸಿಡಿದುಹೋಗಿದ್ದರೂ ಬಲಗಣ್ಣಿನಿಂದ ಹಾಗೆಯೇ ಮತ್ತೆ ಮತ್ತೆ ನೋಡುತ್ತಿದ್ದಾನೆ'' ಎಂದು ನುಡಿದಳು.

೧೫೩–೧೫೪. ದೇವಿಯಾಡಿದ ಈ ಮಾತುಗಳನ್ನು ಕೇಳಿ ಪ್ರಭುವು ನಸುನಗುತ್ತ ಅವಳನ್ನು ಕುರಿತು, ''ಎಲೌ ಉಮಾದೇವಿಯೆ, ಇವನು ನಿನ್ನ ಮಗನು. ಇವನು ಕ್ರೂರದೃಷ್ಟಿಯಿಂದ ನಿನ್ನನ್ನು ನೋಡುತ್ತಿಲ್ಲ. ಆದರೆ, ನಿನ್ನ ತಪಃಶ್ರೀಯು ಅದೆಂತಹ ಮಹತ್ತರವಾದುದೆಂಬುದನ್ನು ದೃಷ್ಟಿಯಿಂದಲೆ ವರ್ಣಿಸಿ ಹೇಳುತ್ತಿದ್ದಾನೆ'' ಎಂದು ನುಡಿದು ಸಮಾಧಾನಪಡಿಸಿ, ಅವನನ್ನು ಕುರಿತು ಮತ್ತಿಂತೆಂದನು.

೧೫೫. ವತ್ಸ, ನಿನ್ನ ಈ ತಪಸ್ಸಿನಿಂದ ಸಂತೋಷಗೊಂಡಿರುವ ನಾನು ನಿನಗೀಗ ವರಗಳನ್ನು ಕೊಡುತ್ತೇನೆ. ನೀನು ಸಮಸ್ತನಿಧಿಗಳಿಗೂ ಅಧೀಶ್ವರನಾಗಿರು. ಅಂತೆಯೆ ಗುಹ್ಯಕರಿಗೂ ಒಡೆಯನೆನಿಸು.

೧೫೬. ಯಕ್ಷರಿಗೂ ಕಿನ್ನರರಿಗೂ ಭೂಮಂಡಲದ ಸಮಸ್ತ ದೊರೆಗಳಿಗೂ ರಾಕ್ಷಸರಿಗೂ ಅರಸನೆನಿಸಿ, ಧನದನೆಂದು ಪ್ರಖ್ಯಾತನಾಗು.

೧೫೭. ಎಲೈ ಸುವ್ರತನೆ, ನಿನಗೆ ನನ್ನೊಡನೆ ಯಾವಾಗಲೂ ಸಖ್ಯವಿರಲಿ. ನಾನು ನಿನ್ನ ಸಮೀಪದಲ್ಲಿ ಈ ಅಲಕಾಪಟ್ಟಣದ ಬಳಿಯಲ್ಲಿಯೇ

ಆಗಚ್ಛ ಪಾದಯೋರಸ್ಯಾಃ ಪತ ತೇ ಜನನೀ ತ್ವಿಯಂ ।
ಇತಿ ದತ್ವಾ ವರಾನ್ದೇವಃ ಪುನರಾಹ ಶಿವಾಂ ಶಿವಃ ।
ಪ್ರಸಾದಂ ಕುರು ದೇವೇಶಿ ತಪಸ್ವಿನ್ಯಂಗಜೇಽತ್ರ ವೈ ॥ ೧೫೮ ॥

ದೇವ್ಯುವಾಚ :—

ವತ್ಸ ತೇ ನಿಶ್ಚಲಾಭಕ್ತಿರ್ಭವೇ ಭವತು ಸರ್ವದಾ ।
ಭವ್ಯೈಕಪಿಂಗೋ ನೇತ್ರೇಣ ವಾಮೇನ ಸ್ಫುಟಿತೇನ ಹ ॥ ೧೫೯ ॥
ದೇವೇನ ದತ್ತಾ ಯೇ ತುಭ್ಯಂ ವರಾಃ ಸಂತು ತಥೈವ ತೇ ।
ಕುಬೇರೋ ಭವ ನಾಮ್ನಾ ತ್ವಂ ಮಮ ರೂಪೇರ್ಷ್ಯಯಾ ಸುತ ॥ ೧೬೦ ॥
ತ್ವಯೇದಂ ಸ್ಥಾಪಿತಂ ಲಿಂಗಂ ತವ ನಾಮ್ನಾ ಭವಿಷ್ಯತಿ ।
ಸಿದ್ಧಿದಂ ಸಾಧಕಾನಾಂ ಚ ಸರ್ವಪಾಪಹರಂ ಪರಂ ॥ ೧೬೧ ॥
ನ ಧನೇನ ವಿಯುಜ್ಯೇತ ನ ಸಖ್ಯಾ ನ ಚ ಬಾಂಧವೈಃ ।
ಕುಬೇರೇಶ್ವರಲಿಂಗಸ್ಯ ಕುರ್ಯಾದ್ಯೋ ದರ್ಶನಂ ನರಃ ॥ ೧೬೨ ॥

---

ಯಾವಾಗಲೂ ನಿನಗೆ ಪ್ರೀತಿಯನ್ನು ಹೆಚ್ಚಿಸುವುದಕ್ಕಾಗಿ ವಾಸಮಾಡು ತ್ತಿರುತ್ತೇನೆ.

೧೫೮. ಅಯ್ಯಾ, ಇಲ್ಲಿ ಬಾ. ಈಕೆಯು ನಿನಗೆ ತಾಯಿಯು. ಈಕೆಯ ಅಡಿಗಳಿಗೆ ಬೀಳು'' ಎಂದು ವರವನ್ನು ಕೊಟ್ಟು ದೇವದೇವನಾದ ಆ ಪರಮೇಶ್ವರನು ಶಿವೆಯನ್ನು ಕುರಿತು, ''ದೇವಿ, ತಪಸ್ವಿನಿಯಾದ ನೀನು ನಿನ್ನ ಕುಮಾರಕನಾಗಿರುವ ಈತನನ್ನು ಅನುಗ್ರಹಿಸು'' ಎಂದು ಹೇಳಿದನು.

೧೫೯. ದೇವಿಯು ಹೇಳುತ್ತಾಳೆ —''ಮಗು, ನಿನಗೆ ಈ ಭವನಲ್ಲಿ ನಿಶ್ಚಲವಾದ ಸತತ ಭಕ್ತಿಯಿರಲಿ. ನಿನ್ನ ಎಡಗಣ್ಣು ಸಿಡಿದುಹೋಗಿರುವುದರಿಂದ ಇನ್ನು ಮುಂದೆ ನೀನು ಏಕಪಿಂಗನೆಂದು ಪ್ರಸಿದ್ಧನಾಗಿರು

೧೬೦–೧೬೧. ನನ್ನ ಸ್ವಾಮಿಯು ನಿನಗೆ ಅನುಗ್ರಹಿಸಿಕೊಟ್ಟಿರುವ ವರಗಳೆಲ್ಲವೂ ಅಂತೆಯೆ ಫಲಿಸಲಿ. ಮಗನೆ, ನೀನು ನನ್ನ ರೂಪವನ್ನು ಕಂಡು ಅಸೂಯೆ ಪಟ್ಟಿಯಾದಕಾರಣ ಡೊಂಕುಮೆಯುಳ್ಳವನಾಗಿ ಕುಬೇರನೆಂದು ಹೆಸರುಪಡೆ. ನೀನು ಸ್ಥಾಪಿಸಿ ಪೂಜಿಸಿದ ಈ ಲಿಂಗವು ನಿನ್ನ ಹೆಸರಿನಿಂದಲೆ ಕುಬೇರೇಶ್ವರವೆಂದು ಪ್ರಸಿದ್ಧವಾಗಿ, ಸಾಧಕರೆಲ್ಲರಿಗೂ ಸಿದ್ಧಿಪ್ರದವೂ, ಸಮಸ್ತ ಪಾಪಗಳನ್ನೂ ಕಳೆಯುವುದರಲ್ಲಿ ಉತ್ತಮೋತ್ತಮವೂ ಆಗಿರಲಿ.

೧೬೨. ಯಾವ ಮಾನವನು ಈ ಕುಬೇರೇಶ್ವರಲಿಂಗವನ್ನು ಸಂದರ್ಶಿಸುತ್ತಾನೆಯೊ ಅವನು ಧನದಿಂದಾಗಲಿ ಮಿತ್ರರಿಂದಾಗಲಿ ಬಾಂಧವರಿಂದಾಗಲಿ ಅಗಲುವುದಿಲ್ಲ.

ವಿಶ್ವೇಶಾದ್ದಕ್ಷಿಣೇ ಭಾಗೇ ಕುಬೇರೇಶಂ ಸಮರ್ಚಯೇತ್ ।
ನರೋ ಲಿಪ್ಯೇತ ನೋ ಪಾಪೈರ್ನ ದಾರಿದ್ರ್ಯೇಣ ನೋಽಸುಖೈಃ ॥ ೧೬೩ ॥
ಇತಿ ದತ್ವಾ ವರಾನ್ದೇವೋ ದೇವ್ಯಾ ಸಹ ಮಹೇಶ್ವರಃ ।
ಧನದಾಯಾ ವಿವೇಶಾಽಥ ಧಾಮ ವೈಶ್ವೇಶ್ವರಂ ಪರಂ ॥ ೧೬೪ ॥

ಗಣಾವೂಚತುಃ :—

ಇತ್ಥಂ ಸಖಿತ್ವಂ ಶ್ರೀಶಂಭೋಃ ಪ್ರಾಪೈಷ ಧನದಃ ಪರಂ ।
ಅಲಕಾಂ ನಿಕಷಾಚ್ಚೈಷ ಕೈಲಾಸಃ ಶಂಕರಾಲಯಃ ॥ ೧೬೫ ॥
ಪುರ್ಯಾ ಯಕ್ಷೇಶ್ವರಾಣಾಂ ತೇ ಸ್ವರೂಪಮಿತಿ ವರ್ಣಿತಂ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ನರೋ ಮುಚ್ಯೇದಸಂಶಯಂ ॥೧೬೬॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಗಂಧವತ್ಯಲಕಾವರ್ಣನಂ"
ನಾಮ ತ್ರಯೋದಶೋಽಧ್ಯಾಯಃ

---

೧೬೩. ವಿಶ್ವೇಶ್ವರನಿಗೆ ಬಲಭಾಗದಲ್ಲಿರುವ ಕುಬೇರೇಶ್ವರಲಿಂಗವನ್ನು ಪೂಜಿಸಿದ ಮಾನವನಿಗೆ ಪಾಪಲೇಪವಿರುವುದಿಲ್ಲ. ದಾರಿದ್ರ್ಯವಾಗಲಿ ದುಃಖಗಳಾಗಲಿ ಅವನನ್ನು ಪೀಡಿಸುವುದಿಲ್ಲ."

೧೬೪. ಎಲೈ ಶಿವಶರ್ಮನೆ, ಇಂತು ಪಾರ್ವತಿಯೊಡಗೂಡಿದ ಆ ಮಹೇಶ್ವರನು ಧನದನಿಗೆ ವರಗಳನ್ನು ಕೊಟ್ಟು ತನ್ನ ನಿವಾಸಸ್ಥಾನವಾದ ಕೈಲಾಸವನ್ನು ಸೇರಿದನು.

೧೬೫. ಗಣಗಳು ಹೇಳುತ್ತಾರೆ –"ಎಲೈ ಶಿವಶರ್ಮನೆ, ಈ ಪ್ರಕಾರವಾಗಿ ಧನದನಾದ ಈ ಕುಬೇರನು ಪರಮೇಶ್ವರನೊಡನೆ ಸಖ್ಯವನ್ನು ಪಡೆದನು. ಇದೇ ಅವನ ಅಲಕಾಪಟ್ಟಣವು. ಇದೂ ಅದರ ಸಮೀಪದಲ್ಲಿರುವುದೇ ಕೈಲಾಸವು.

೧೬೬. ಅಯ್ಯಾ ವಿಪ್ರನೆ, ಹೀಗೆ ನಿನಗೆ ಈ ಅಲಕಾಪಟ್ಟಣದ ಸ್ವರೂಪವನ್ನು ವರ್ಣಿಸಿ ಹೇಳಿದುದಾಯಿತು. ಇದನ್ನು ಕೇಳಿದ ಮಾನವನು ಸಮಸ್ತ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆಂಬುದರಲ್ಲಿ ಸಂಶಯವಿಲ್ಲವು."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಗಂಧವತೀ ಅಲಕಾಪುರಗಳವರ್ಣನ"ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಚತುರ್ದಶೋಽಧ್ಯಾಯಃ

## ಸೋಮಲೋಕವರ್ಣನಂ

**ಗಣಾವೂಚತುಃ :—**

**ಅಲಕಾಯಾಃ ಪುರೋಭಾಗೇ ಪೂರ್ವೈಶಾನೀ ಮಹೋದಯಾ ।**
**ಅಸ್ಯಾಂ ವಸಂತಿ ಸತತಂ ರುದ್ರಭಕ್ತಾಸ್ತಪೋಧನಾಃ ॥ ೧ ॥**
**ಶಿವಸ್ಮರಣಸಂಸಕ್ತಾಃ ಶಿವವ್ರತಪರಾಯಣಾಃ ।**
**ಶಿವಸಾತ್ಕೃತಕರ್ಮಾಣಃ ಶಿವಪೂಜಾರತಾಃ ಸದಾ ॥ ೨ ॥**
**ಸಾಽಭಿಲಾಷಾಸ್ತಪಸ್ಯಂತಿ ಸ್ವರ್ಗಭೋಗೋಸ್ತ್ವಿತೀಹ ನಃ ।**
**ತೇಽತ್ರ ರುದ್ರಪುರೇ ರಮ್ಯೇ ರುದ್ರರೂಪಧರಾ ನರಾಃ ॥ ೩ ॥**
**ಅಜೈಕಪಾದಹಿರ್ಬುಧ್ನ್ಯಮುಖ್ಯಾ ಏಕಾದಶಾಽಪಿ ವೈ ।**
**ರುದ್ರಾಃ ಪರಿವೃಢಾಶ್ಚಾಽತ್ರ ತ್ರಿಶೂಲೋದ್ಯತಪಾಣಯಃ ॥ ೪ ॥**
**ಪುರ್ಯಷ್ಟಕಂ ಚ ದುಷ್ಟೇಭ್ಯೋ ದೇವಧ್ರುಗ್ಭ್ಯೋಽಭ್ಯವಂತಿ ತೇ ।**
**ಪ್ರಯಚ್ಛಂತಿ ವರಾನ್ನಿತ್ಯಂ ಶಿವಭಕ್ತಜನೇ ವರಾಃ ॥ ೫ ॥**

---

## ಕನ್ನಡದ ಅನುವಾದ

### ಸೋಮಲೋಕವರ್ಣನ

೧. ಗಣಗಳು ಹೇಳುತ್ತಾರೆ.—"ಅಯ್ಯಾ ಶಿವಶರ್ಮನೆ, ಈ ಅಲಕಾ ಪಟ್ಟಣದ ಮುಂದೆ ಸಕಲ ಸಂಪತ್ಸಮೃದ್ಧಿಯಿಂದ ಶೋಭಿಸುತ್ತಿರುವ ಈ ಮಹಾ ಪಟ್ಟಣವೇ ಕೈಲಾಸವು. ಈ ಪಟ್ಟಣದಲ್ಲಿ ತಪೋಧನರಾದ ರುದ್ರಭಕ್ತರು ಸತತವೂ ವಾಸಮಾಡುತ್ತಿರುತ್ತಾರೆ.

೨. ಎಲ್ಲ ಕಾಲಗಳಲ್ಲಿಯೂ ಶಿವನಾಮಸ್ಮರಣೆಯನ್ನು ಮಾಡುವವರೂ ಶಿವನ ಸಂಬಂಧವಾದ ವ್ರತಗಳನ್ನು ನಡಸುವವರೂ ಶಿವನಲ್ಲಿಯೇ ಸಮಸ್ತ ಕರ್ಮಫಲಗಳನ್ನೂ ಸಮರ್ಪಿಸಿದವರೂ ಎಲ್ಲ ಕಾಲಗಳಲ್ಲಿಯೂ ಶಿವಪೂಜೆಯಲ್ಲಿಯೇ ತೊಡಗಿದವರೂ ಆದ ಮಹಾಶಿವಭಕ್ತರು ಇಲ್ಲಿ ವಾಸಿಸುತ್ತಿರುವರು.

೩. ಸ್ವರ್ಗಾದಿ ಭೋಗಗಳು ದೊರಕಬೇಕೆಂಬ ಬಯಕೆಯಿಂದ ಮಾನವರು ಮನೋಹರವಾದ ಈ ರುದ್ರಪುರದಲ್ಲಿ ರುದ್ರರೂಪಧರರಾಗಿ ತಪಸ್ಸನ್ನು ಮಾಡುವರು.

೪. ಅಜ, ಏಕಪಾದ, ಅಹಿರ್ಬುಧ್ನ್ಯ ಮೊದಲಾದ ಏಕಾದಶರುದ್ರರು ಎತ್ತಿಹಿಡಿದ ತ್ರಿಶೂಲಗಳುಳ್ಳವರಾಗಿ ಇಲ್ಲಿ ಮಹಾ ಪ್ರಭಾವಶೀಲರಾಗಿರುತ್ತಾರೆ.

೫. ಇವರು ಈ ಪಟ್ಟಣದ ಎಂಟು ಮೂಲೆಗಳನ್ನೂ ದೇವದ್ರೋಹಿಗಳಾದ ದುಷ್ಟರ ಕೋಟಲೆಯಿಲ್ಲದಂತೆ ರಕ್ಷಿಸುತ್ತಾರೆ. ಅಲ್ಲದೆ ಶಿವಭಕ್ತಿಸಂಪನ್ನರಾದ ಜನರಿಗೆ ವರಗಳನ್ನೂ ದಯಪಾಲಿಸುತ್ತಾರೆ.

ಏತೈರಪಿ ತಪಸ್ತಪ್ತಂ ಪ್ರಾಪ್ಯ ವಾರಾಣಸೀಂ ಪುರೀಂ ।
ಈಶಾನೇಶಂ ಮಹಾಲಿಂಗಂ ಪರಿಸ್ಥಾಪ್ಯ ಶುಭಪ್ರದಂ ॥ ೬ ॥
ಈಶಾನೇಶಪ್ರಸಾದೇನ ದಿಶ್ಯೈಶ್ಯಾಂ ಹಿ ದಿಗೀಶ್ವರಾಃ ।
ಏಕಾದಶಾಽಪ್ಯೇಕಚರಾ ಜಟಾಮುಕುಟಮುಂಡಿತಾಃ ॥ ೭ ॥
ಭಾಲನೇತ್ರಾ ನೀಲಗಲಾಃ ಶುದ್ಧಾಂಗಾ ವೃಷಭಧ್ವಜಾಃ ।
ಅಸಂಖ್ಯಾತಾಃ ಸಹಸ್ರಾಣಿ ಯೇ ರುದ್ರಾ ಅಧಿಭೂತಲಂ ॥ ೮ ॥
ತೇಽಸ್ಯಾಂ ಪುರಿ ವಸಂತ್ಯೈಶ್ಯಾಂ ಸರ್ವಭೋಗಸಮೃದ್ಧಯಃ ।
ಈಶಾನೇಶಂ ಸಮಭ್ಯರ್ಚ್ಯ ಕಾಶ್ಯಾಂ ದೇಶಾಂತರೇಷ್ವಪಿ ॥ ೯ ॥
ವಿಪನ್ನಾಸ್ತೇನ ಪುಣ್ಯೇನ ಜಾಯಂತೇಽತ್ರ ಪುರೋಹಿತಾಃ ।
ಅಷ್ಟಮ್ಯಾಂ ಚ ಚತುರ್ದಶ್ಯಾಮಿಶಾನೇಶಂ ಯಜಂತಿ ಯೇ ॥ ೧೦ ॥
ತ ಏವ ರುದ್ರಾ ವಿಜ್ಞೇಯಾ ಇಹಾಽಮುತ್ರಾಽಪ್ಯ ಸಂಶಯಂ ।
ಕೃತ್ವಾ ಜಾಗರಣಂ ರಾತ್ರಾವೀಶಾನೇಶ್ವರಸನ್ನಿಧೌ ॥ ೧೧ ॥
ಉಪೋಷ್ಯ ಭೂತಾಂ ಯಾಂ ಕಾಂಚಿನ್ನ ನರೋ ಗರ್ಭಭಾಕ್ಪುನಃ ।
ಸ್ವರ್ಗಮಾರ್ಗೇ ಕಥಾಮಿತ್ಥಂ ಶೃಣ್ವನ್ವಿಷ್ಣುಗಣೋದಿತಾಂ ॥ ೧೨ ॥

---

೬–೭. ಈ ಏಕಾದಶರುದ್ರರು ಸಹ ವಾರಾಣಸೀ ಪಟ್ಟಣವನ್ನು ಸೇರಿ ಪೂರ್ವದಲ್ಲಿ ಶುಭಪ್ರದವಾದ ಈಶಾನೇಶಮಹಾಲಿಂಗವನ್ನು ಸ್ಥಾಪಿಸಿ ತಪಸ್ಸನ್ನು ಮಾಡಿರುತ್ತಾರೆ. ಈಶಾನೇಶ್ವರನ ಪ್ರಸಾದದಿಂದಲೆ ಈ ರುದ್ರರು ಈ ಈಶಾನ ಪುರದಲ್ಲಿ ಈಶಾನ ದಿಗೀಶ್ವರರಾಗಿ ಜಟಾಮುಕುಟ ಮುಂಡಿತರಾಗಿ ಒಂದಿಗೆಯೆ ಸಂಚರಿಸುತ್ತಿರುತ್ತಾರೆ.

೮–೧೪. ಫಾಲನೇತ್ರವೂ ನೀಲಕಂಠವೂ ಶುದ್ಧ ಸ್ಫಟಿಕ ದೇಹವೂ ಉಳ್ಳವರಾಗಿ ವೃಷಭವಾಹನರಾಗಿ ಭೂಲೋಕದಲ್ಲಿರುವ ಅಸಂಖ್ಯ ಸಹಸ್ರಾಧಿಕರಾದ ಯಾವ ರುದ್ರರು ಇರುವರೊ ಅವರು ಸಹ ಈ ಈಶಾನಪುರಿಯಲ್ಲಿ ಸಕಲಭೋಗ ಸಮೃದ್ಧಿಯುಳ್ಳವರಾಗಿ ವಾಸಮಾಡುತ್ತಿರುತ್ತಾರೆ. ಕಾಶೀಕ್ಷೇತ್ರದಲ್ಲಿಯೂ ದೇಶಾಂತರಗಳಲ್ಲಿಯೂ ಈಶಾನೇಶ್ವರನನ್ನು ಪೂಜಿಸಿ ಕಾಲಕ್ರಮವಾಗಿ ಮೃತಿಪಟ್ಟವರು ಆ ಪುಣ್ಯದಿಂದ ಈ ಶಿವಪುರಿಯಲ್ಲಿ ಪುರೋಹಿತರಾಗಿ ಹುಟ್ಟುತ್ತಾರೆ. ಅಷ್ಟಮಿಯಲ್ಲಿಯೂ ಚತುರ್ದಶಿಯಲ್ಲಿಯೂ ಈಶಾನೇಶ್ವರನನ್ನು ಯಾರು ಪೂಜಿಸುತ್ತಾರೆಯೊ ಅವರು ಇಹಪರಗಳೆರಡರಲ್ಲಿಯೂ ನಿಸ್ಸಂಶಯವಾಗಿಯೂ ರುದ್ರರೆಂದೇ ತಿಳಿಯತಕ್ಕದ್ದು. ಚತುರ್ದಶಿಯ ದಿನದಂದು ಉಪವಾಸವನ್ನು ಮಾಡಿ ಈಶಾನೇಶ್ವರನ ಸನ್ನಿಧಿಯಲ್ಲಿ ಜಾಗರಣೆಯನ್ನುಮಾಡುವ ಮಾನವನು ಮತ್ತೆ ಗರ್ಭವಾಸದ ದುಃಖವನ್ನನುಭವಿಸುವುದಿಲ್ಲ.'' ಇಂತು ಆ ಸ್ವರ್ಗಮಾರ್ಗದಲ್ಲಿ ವಿಪ್ರೋತ್ತಮನಾದ ಶಿವಶರ್ಮನು ವಿಷ್ಣುಗಣಗಳು ವಿಸ್ತರಿಸಿ ಹೇಳಿದ

ಶಿವಶರ್ಮಾ ದಿವಾಽಪ್ಯುಚ್ಚೈರಪಶ್ಯಚ್ಚಂದ್ರಚಂದ್ರಿಕಾಂ ।
ಆಹ್ಲಾದಯಂತೀಂ ಬಹುಶಃ ಸಮಂ ಸರ್ವೇಂದ್ರಿಯೈರ್ಮನಃ ॥ ೧೩ ॥
ಚಮತ್ಕೃತ್ಯ ಚಮತ್ಕೃತ್ಯ ಕೋಽಯಂ ಲೋಕೋ ಹರೇರ್ಗಣೌ ।
ಪಪ್ರಚ್ಛ ಶಿವಶರ್ಮಾ ತೌ ಪ್ರೋಚತುಸ್ತೌ ಚ ತಂ ದ್ವಿಜಂ ॥ ೧೪ ॥
ಗಣಾವೂಚತುಃ:—
ಶಿವಶರ್ಮನ್ಮಹಾಭಾಗ ಲೋಕ ಏಷ ಕಲಾನಿಧೇಃ ।
ಪೀಯೂಷವರ್ಷಿಭಿರ್ಯಸ್ಯ ಕರೈರಾಪ್ಯಾಯ್ಯತೇ ಜಗತ್ ॥ ೧೫ ॥
ಪಿತಾ ಸೋಮಸ್ಯ ಭೋ ವಿಪ್ರ ಜಜ್ಞೇಽತ್ರಿರ್ಭಗವಾನ್ ಋಷಿಃ ।
ಬ್ರಹ್ಮಣೋ ಮಾನಸಾತ್ಪೂರ್ವಂ ಪ್ರಜಾಸರ್ಗಂ ವಿಧಿತ್ಸತಃ ॥ ೧೬ ॥
ಅನುತ್ತರಂ ನಾಮ ತಪೋ ಯೇನ ತಪ್ತಂ ಹಿ ತತ್ಪುರಾ ।
ತ್ರೀಣಿ ವರ್ಷಸಹಸ್ರಾಣಿ ದಿವ್ಯಾನೀತೀಹ ನಃ ಶ್ರುತಂ ॥ ೧೭ ॥
ಊರ್ಧ್ವಮಾಚಕ್ರಮೇ ತಸ್ಯ ರೇತಃ ಸೋಮತ್ವಮೀಯಿವತ್ ।
ನೇತ್ರಾಭ್ಯಾಂ ತಚ್ಚ ಸುಸ್ರಾವ ದಶಧಾ ದ್ಯೋತಯನ್ದಿಶಃ ॥ ೧೮ ॥

---

ಪುಣ್ಯಕಥೆಯನ್ನು ಕೇಳುತ್ತ ಆ ಈಶಾನ ಲೋಕಕ್ಕೂ ಮೇಲ್ಭಾಗದಲ್ಲಿ ಸರ್ವೇಂದ್ರಿಯಗಳನ್ನೂ ಮನಸ್ಸನ್ನೂ ಒಂದೇ ತಡವೆಯೆ ಬಹುವಾಗಿ ಆಹ್ಲಾದಗೊಳಿಸುತ್ತ ಆ ಹಗಲಲ್ಲಿಯೂ ಹೊಳೆಹೊಳೆಯುತ್ತಿರುವ ಚಂದ್ರಕಾಂತಿಯನ್ನು ಕಂಡು, "ಎಲೈ ಪಾರ್ಷದರೆ, ಅತ್ಯಾಶ್ಚರ್ಯಕರವಾಗಿ ಮನಸ್ಸನ್ನು ಆಹ್ಲಾದಗೊಳಿಸುತ್ತಿರುವ ಈ ಲೋಕವಾವುದು?" ಎಂದು ಕೇಳಿದನು. ವಿಷ್ಣುಕಿಂಕರರು ಅವನನ್ನು ಕುರಿತು ಹೀಗೆಂದರು

೧೫—೧೬. ಗಣಗಳು ಹೇಳುತ್ತಾರೆ:—ಎಲೈ ಮಹಾಭಾಗನಾದ ಶಿವಶರ್ಮನೆ, ಈ ಪಟ್ಟಣವು ಅಮೃತವನ್ನು ಮಳೆಗರೆವ ಕಿರಣಗಳಿಂದ ಜಗತ್ತನ್ನೇ ಆಪ್ಯಾಯನಗೊಳಿಸುವ ಚಂದ್ರನದು. ಈತನ ತಂದೆಯಾದ ಭಗವಾನ್ ಅತ್ರಿ ಮುನಿಯು ಪ್ರಜಾಸೃಷ್ಟಿಯನ್ನು ಮಾಡಬಯಸಿದ ಬ್ರಹ್ಮನ ಮನಸ್ಸಿನಿಂದ ಜನಿಸಿದನು.

೧೭. ಅತ್ರಿಮಹರ್ಷಿಯು ಮೂರು ಸಾವಿರ ದಿವ್ಯವರ್ಷಗಳಕಾಲ ಅನುತ್ತರವೆಂಬ ತಪಸ್ಸನ್ನೆಸಗಿದನೆಂದು ನಾವು ಕೇಳಿದ್ದೇವೆ.

೧೮. ಆಗ ಆತನ ರೇತಸ್ಸೆಲ್ಲವೂ ನೆತ್ತಿಗೆ ಏರಿಬಂದು ಅಮೃತವಾಗಿ ಪರಿಣಮಿಸಿ ಎರಡು ಕಣ್ಣುಗಳಿಂದಲೂ ಹತ್ತು ಬಗೆಯಾಗಿ ಹರಿದು ದಶದಿಶೆಗಳನ್ನೂ ಬೆಳಗಿಸಿತು.

ತಂ ಗರ್ಭಂ ವಿಧಿನಾದಿಷ್ಟಾ ದಶದೇವ್ಯೋ ದಧುಸ್ತತಃ ।
ಸಮೇತ್ಯ ಧಾರಯಾಮಾಸುರ್ನೈವ ತಾಃ ಸಮಶಕ್ನುವನ್ ॥ ೧೯ ॥
ಯದಾ ನ ಧಾರಣೇ ಶಕ್ತಾಸ್ತಸ್ಯ ಗರ್ಭಸ್ಯ ತಾ ದಿಶಃ ।
ತತಸ್ತಾಭಿಃ ಸಹೋಃ ಸೋಮೋ ನಿಪಪಾತ ವಸುಂಧರಾಂ ॥ ೨೦ ॥
ಪತಿತಂ ಸೋಮಮಾಲೋಕ್ಯ ಬ್ರಹ್ಮಾ ಲೋಕಪಿತಾಮಹಃ ।
ರಥಮಾರೋಪಯಾಮಾಸ ಲೋಕಾನಾಂ ಹಿತಕಾಮ್ಯಯಾ ॥ ೨೧ ॥
ಸ ತೇನ ರಥಮುಖ್ಯೇನ ಸಾಗರಾಂತಾಂ ವಸುಂಧರಾಂ ।
ತ್ರಿಃ ಸಪ್ತಕೃತ್ವೋ ದ್ರುಹಿಣಶ್ಚಕಾರಾಽಮುಂ ಪ್ರದಕ್ಷಿಣಂ ॥ ೨೨ ॥
ತಸ್ಯ ಯತ್ಪ್ಲಾವಿತಂ ತೇಜಃ ಪೃಥಿವೀಮನ್ವಪದ್ಯತ ।
ತಥೌಷಧ್ಯಃ ಸಮುದ್ಭೂತಾ ಯಾಭಿಃ ಸಂಧಾರ್ಯತೇ ಜಗತ್ ॥ ೨೩ ॥
ಸ ಲಬ್ಧತೇಜಾ ಭಗವಾನ್ ಬ್ರಹ್ಮಣಾ ವರ್ಧಿತಃ ಸ್ವಯಂ ।
ತಪಸ್ತೇಪೇ ಮಹಾಭಾಗ ಪದ್ಮಾನಾಂ ದಶತೀರ್ದಶ ॥ ೨೪ ॥
ಅವಿಮುಕ್ತಂ ಸಮಾಸಾದ್ಯ ಕ್ಷೇತ್ರಂ ಪರಮಪಾವನಂ ।
ಸಂಸ್ಥಾಪ್ಯ ಲಿಂಗಮಮೃತಂ ಚಂದ್ರೇಶಾಖ್ಯಂ ಸ್ವನಾಮತಃ ॥ ೨೫ ॥

---

೧೯. ಆ ಸಮಯದಲ್ಲಿ ದಶದಿಗಂಗನೆಯರೂ ಬ್ರಹ್ಮನಿಂದ ಆಜ್ಞಪ್ತರಾಗಿ ಆ ಗರ್ಭವನ್ನು ಧರಿಸಿದರು. ಆದರೆ, ಅವರು ಅದನ್ನು ಧಾರಣೆಮಾಡಿರಲು ಸಮರ್ಥರಾಗದೆ ಹೋದರು.

೨೦. ಆ ದಿಗಂಗನೆಯರು ಅತ್ರಿಮುನಿಯ ಗರ್ಭವನ್ನು ಧಾರಣೆಮಾಡಲು ಅಶಕ್ತರಾಗುತ್ತಲೆ ಅವರೊಡನೆ ಸೋಮರೂಪವಾಗಿದ್ದ ಆ ಗರ್ಭವು ಭೂಮಿಗೆ ಬಿದ್ದಿತು.

೨೧. ಹೀಗೆ ಭೂಮಿಗೆ ಬಿದ್ದುಹೋದ ಸೋಮನನ್ನುಕಂಡು ಲೋಕಪಿತಾಮಹನಾದ ಬ್ರಹ್ಮನು ಅವನನ್ನು ಒಡನೆಯೆ ಸಮಸ್ತಲೋಕಗಳಿಗೂ ಹಿತವನ್ನು ಉಂಟುಮಾಡುವ ಅಪೇಕ್ಷೆಯಿಂದ ರಥವೇರಿಸಿದನು.

೨೨. ಉತ್ತಮವಾದ ಆ ರಥದಲ್ಲಿ ಕುಳ್ಳಿರಿಸಿ ಆ ಬ್ರಹ್ಮದೇವನು ಅವನನ್ನು ಇಪ್ಪತ್ತೊಂದುಬಾರಿ ಆಸಮುದ್ರಾಂತವಾದ ಈ ಭೂಮಂಡಲಕ್ಕೆ ಪ್ರದಕ್ಷಿಣೆ ಮಾಡಿಸಿದನು.

೨೩. ಆತನ ಯಾವ ತೇಜಸ್ಸು ಜಾರಿ ನೆಲವನ್ನು ಸೇರಿತೊ ಅದರಿಂದಲೆ ಔಷಧಿಗಳೆಲ್ಲ ಉದಿಸಿದುವು. ಅವುಗಳಿಂದಲೆ ಜಗತ್ತು ಪೋಷಿಸಲ್ಪಡುತ್ತಿದೆ.

೨೪–೨೬. ಪೂಜ್ಯನಾದ ಆ ಸೋಮನು ಈ ರೀತಿಯಾದ ತೇಜಸ್ಸನ್ನುಪಡೆದು, ಸಾಕ್ಷಾತ್ ಬ್ರಹ್ಮನಿಂದಲೆ ಬೆಳಸಲ್ಪಟ್ಟು ಆದ್ಯವೂ ಪರಮಪಾವನವೂ ಆದ ಅವಿಮುಕ್ತಕ್ಷೇತ್ರವನ್ನು ಸೇರಿ ಚಂದ್ರೇಶ್ವರನೆಂಬ ಅಮೃತಲಿಂಗವನ್ನು ಸ್ಥಾಪಿಸಿ,

ಬೀಜೌಷಧೀನಾಂ ತೋಯಾನಾಂ ರಾಜಾಽಭೂದಗ್ರಜನ್ಮನಾಂ ।
ಪ್ರಸಾದಾದ್ದೇವದೇವಸ್ಯ ವಿಶ್ವೇಶಸ್ಯ ಪಿನಾಕಿನಃ ॥ ೨೬ ॥
ತತ್ರ ಕೂಪಂ ವಿಧಾಯೈಕಮಮೃತೋದಮಿತಿ ಸ್ಮೃತಂ ।
ಯಸ್ಯಾಂಬುಪಾನಸ್ನಾನಾಭ್ಯಾಂ ನರೋಽಜ್ಞಾನಾತ್ಪ್ರಮುಚ್ಯತೇ ॥ ೨೭ ॥
ತುಷ್ಟೇನ ದೇವದೇವೇನ ಸ್ವಮೌಲೌ ಯೋ ಧೃತಃ ಸ್ವಯಂ ।
ಆದಾಯ ತಾಂ ಕಲಾಮೇಕಾಂ ಜಗತ್ಸಂಜೀವನೀಂ ಪರಾಂ ॥ ೨೮ ॥
ಪಶ್ಚಾದ್ದಕ್ಷೇಣ ಶಪ್ತೋಽಪಿ ಮಾಸೇನೇ ಕ್ಷಯಮಾಪ್ಯ ಚ ।
ಆಪ್ಯಾಯ್ಯತೇಽಸೌ ಕಲಯಾ ಪುನರೇವ ತಯಾ ಶಶೀ ॥ ೨೯ ॥
ಸ ತತ್ಪ್ರಾಪ್ಯ ಮಹಾರಾಜ್ಯಂ ಸೋಮಃ ಸೋಮವತಾಂ ವರಃ ।
ರಾಜಸೂಯಂ ಸಮಾಜಹ್ರೇ ಸಹಸ್ರಶತದಕ್ಷಿಣಂ ॥ ೩೦ ॥
ದಕ್ಷಿಣಾಮದದತ್ತೋಮಸ್ತ್ರೀಂಲ್ಲೋಕಾನಿತಿ ನೌ ಶ್ರುತಂ ।
ತೇಭ್ಯೋ ಬ್ರಹ್ಮರ್ಷಿಮುಖ್ಯೇಭ್ಯಃ ಸದಸ್ಯೇಭ್ಯಶ್ಚ ಭೋ ದ್ವಿಜ ॥ ೩೧ ॥

---

ನೂರು ಪದ್ಮಗಳ ಕಾಲ ತಪಸ್ಸನ್ನುಮಾಡಿ ದೇವದೇವನೂ ಪಿನಾಕಪಾಣಿಯೂ ಆದ ವಿಶ್ವೇಶ್ವರನ ಅನುಗ್ರಹದಿಂದ ಬೀಜೌಷಧಿಗಳಿಗೂ ಜಲಗಳಿಗೂ ಬ್ರಾಹ್ಮಣರಿಗೂ ದೊರೆಯಾದನು.

೨೭. ಎಲೈ ಶಿವಶರ್ಮನೆ, ಈ ಸೋಮನು ಅವಿಮುಕ್ತ ಕ್ಷೇತ್ರದಲ್ಲಿ ಒಂದು ಕೂಪವನ್ನು ನಿರ್ಮಿಸಿದ್ದಾನೆ. ಅದಕ್ಕೆ ಅಮೃತೋದ ಎಂದು ಹೆಸರು. ಆ ಕೂಪದ ಜಲವನ್ನು ಪಾನಮಾಡುವುದರಿಂದಲೂ ಸ್ನಾನಮಾಡುವುದರಿಂದಲೂ ಮಾನವನಿಗೆ ಅಜ್ಞಾನವು ತೊಲಗಿ ಹೋಗುತ್ತದೆ.

೨೮. ಪರಮೇಶ್ವರನು ಈ ಸೋಮನ ತಪಸ್ಸಿಗೆ ಮೆಚ್ಚಿ ಜಗತ್ತನ್ನೇ ಸಂಜೀವನಗೊಳಿಸುವ ಉತ್ತಮೋತ್ತಮವಾದ ಅವನೊಂದು ಕಲೆಯನ್ನು ತಾನಾಗಿಯೆ ಸ್ವೀಕರಿಸಿ ತಲೆಯಲ್ಲಿ ಧರಿಸಿದನು.

೨೯. ಇದಾದ ತರುವಾಯ ಒಮ್ಮೆ ಈ ಚಂದ್ರನು ದಕ್ಷ ಪ್ರಜಾಪತಿಯ ಶಾಪಕ್ಕೊಳಗಾಗಿ ತಿಂಗಳಲ್ಲಿ ಹದಿನೈದು ದಿನಗಳಕಾಲ ಕ್ಷಯಿಸಿದರೂ ಮತ್ತೆ ವೃದ್ಧಿಯನ್ನು ಪಡೆದು ಜಗತ್ತನ್ನೇ ಆಪ್ಯಾಯನಗೊಳಿಸುತ್ತಿರುವನು.

೩೦. ಎಲೈ ವಿಪ್ರನೆ, ಸೋಮಯಾಗವನ್ನು ಮಾಡಿದವರಲ್ಲಿ ಅಗ್ರಣಿಯನಾದ ಈ ಸೋಮನು ಮಹಾರಾಜಾಧಿಪತ್ಯವನ್ನು ಪಡೆದು ಲಕ್ಷಗಟ್ಟಲೆ ದಕ್ಷಿಣೆಯನ್ನೊಳಗೊಂಡ ರಾಜಸೂಯಯಾಗವನ್ನು ಮಾಡಿದನು.

೩೧. ಅಯ್ಯಾ ಬ್ರಾಹ್ಮಣನೆ, ಈತನು ಆ ರಾಜಸೂಯಯಾಗದ ಸಮಯದಲ್ಲಿ ಸದಸ್ಯರಾಗಿದ್ದ ಬ್ರಹ್ಮರ್ಷಿಮುಖ್ಯರಿಗೆ ಮೂರು ಲೋಕಗಳನ್ನೇ ದಕ್ಷಿಣೆಯಾಗಿ ಕೊಟ್ಟನೆಂದು ನಾವು ಕೇಳಿದ್ದೇವೆ.

ಹಿರಣ್ಯಗರ್ಭೋऽತ್ರಿರ್ಭೃಗುರ್ಯತ್ರರ್ತ್ವಿಜೋऽಭವನ್ ।
ಸದಸ್ಯೋऽಭೂದ್ಧರಿಸ್ತತ್ರ ಮುನಿಭಿರ್ಬಹುಭಿರ್ವೃತಃ ॥ ೩೨ ॥
ತಂ ಸಿನೀಚ ಕುಹೂಶ್ಚೈವ ದ್ಯುತಿಃ ಪುಷ್ಟಿಃ ಪ್ರಭಾವಸುಃ ।
ಕೀರ್ತಿರ್ಧೃತಿಶ್ಚ ಲಕ್ಷ್ಮೀಶ್ಚ ನವದೇವ್ಯಃ ಸಿಷೇವಿರೇ ॥ ೩೩ ॥
ಉಮಯಾ ಸಹಿತಂ ರುದ್ರಂ ಸಂತರ್ಪ್ಯಾಧ್ವರಕರ್ಮಣಾ ।
ಪ್ರಾಪ ಸೋಮ ಇತಿ ಖ್ಯಾತಿಂ ದತ್ತಾಂ ಸೋಮೇನ ಶಂಭುನಾ ॥ ೩೪ ॥
ತತ್ರೈವ ತಪ್ತವಾನ್ಸೋಮಸ್ತಪಃ ಪರಮದುಷ್ಕರಂ ।
ತತ್ರೈವ ರಾಜಸೂಯಂ ಚ ಚಕ್ರೇ ಚಂದ್ರೇಶ್ವರಾಗ್ರತಃ ॥ ೩೫ ॥
ತತ್ರೈವ ಬ್ರಾಹ್ಮಣೈಃ ಪ್ರೀತೈರಿತ್ಯುಕ್ತೋऽಸೌ ಕಲಾನಿಧಿಃ ।
ಸೋಮೋऽಸ್ಮಾಕಂ ಬ್ರಾಹ್ಮಣಾನಾಂ ರಾಜಾ ತ್ರೈಲೋಕ್ಯದಕ್ಷಿಣಃ ॥ ೩೬ ॥
ತತ್ರೈವ ದೇವದೇವಸ್ಯ ವಿಲೋಚನಪಥಂ ಗತಃ ।
ದೇವೇನ ಪ್ರೀತಮನಸಾ ತ್ರೈಲೋಕ್ಯಾಹ್ಲಾದಹೇತವೇ ॥ ೩೭ ॥
ತ್ವಂ ಮಮಾಸ್ಯ ಪರಾಮೂರ್ತಿರಿತ್ಯುಕ್ತಸ್ತತ್ರಪೋಬಲಾತ್ ।
ಜಗತ್ತ್ರಯೋದಯಂ ಪ್ರಾಪ್ಯ ಭವಿಷ್ಯತಿ ಸುಖೋದಯಂ ॥ ೩೮ ॥

---

೩೨. ಹಿರಣ್ಯಗರ್ಭನಾದ ಬ್ರಹ್ಮ, ಭಗವಾನ್ ಅತ್ರಿಮಹರ್ಷಿ, ಭೃಗು ಮೊದಲಾದವರು ಆ ಸೋಮಯಾಗದಲ್ಲಿ ಋತ್ವಿಜರಾಗಿದ್ದರು. ಸಾಕ್ಷಾತ್ ಶ್ರೀಮನ್ನಾರಾಯಣನು ಅನೇಕ ಮುನಿಗಳೊಡಗೂಡಿ ಸದಸ್ಯನಾಗಿದ್ದನು.

೩೩. ಆ ಸಮಯದಲ್ಲಿ ಸಿನೀ, ವಾಲೀ, ಕುಹು, ದ್ಯುತಿ, ಪುಷ್ಟಿ, ಪ್ರಭಾ, ವಸು, ಕೀರ್ತಿ, ಧೃತಿ, ಲಕ್ಷ್ಮಿ ಎಂಬ ಒಂಬತ್ತುಮಂದಿ ದೇವಿಯರು ಈ ಸೋಮನನ್ನು ಸೇವಿಸುತ್ತಿದ್ದರು.

೩೪. ಈ ಯಜ್ಞಕರ್ಮದಿಂದ ಅವನು ಉಮಾಸಹಿತನಾದ ರುದ್ರನನ್ನು ತೃಪ್ತಿಗೊಳಿಸಿ, ಸೋಮನಾದ ಆ ಶಂಭುವಿನ ಅನುಗ್ರಹದಿಂದಲೆ ಸೋಮನೆಂಬ ಪ್ರಖ್ಯಾತಿಯನ್ನು ಪಡೆದನು.

೩೫. ಅಯ್ಯಾ ಶಿವಶರ್ಮನೆ, ಈ ಸೋಮನು ಆ ಅವಿಮುಕ್ತಕ್ಷೇತ್ರದಲ್ಲಿಯೆ ಪರಮ ದುಷ್ಕರವಾದ ತಪಸ್ಸನ್ನೆಸಗಿದನು. ಅಲ್ಲಿಯೆ ಚಂದ್ರೇಶ್ವರನ ಮುಂಗಡೆ ರಾಜಸೂಯಯಾಗವನ್ನು ಮಾಡಿದನು.

೩೬. ಇವನಿತ್ತ ದಕ್ಷಿಣೆಗಳಿಂದ ಪ್ರೀತರಾದ ಬ್ರಾಹ್ಮಣರು, ''ಅಯ್ಯಾ ಕಲಾನಿಧಿಯೆ, ಮೂರು ಲೋಕಗಳನ್ನೇ ದಕ್ಷಿಣೆಯನ್ನಾಗಿ ಕೊಟ್ಟ ನೀನು ಬ್ರಾಹ್ಮಣರಿಗೆಲ್ಲ ದೊರೆಯಾಗಿರು'' ಎಂದು ಹೇಳಿದುದೂ ಅಲ್ಲಿಯೆ.

೩೭–೩೯. ಆ ಪ್ರದೇಶದಲ್ಲಿಯೆ ಅವನು ದೇವದೇವನಾದ ವಿರೂಪಾಕ್ಷನ ದೃಷ್ಟಿಗೆ ಬಿದ್ದನು. ಪ್ರೀತಮನಸ್ಕನಾದ ಆ ಪರಮೇಶ್ವರನು ಮೂರು ಲೋಕ

ತ್ವತ್ಪೀಯೂಷಮಯೈರ್ಹಸ್ತೈಃ ಸ್ಪೃಷ್ಟಮೇತಚ್ಚರಾಚರಂ ।
ಭಾನುತಾಪಪರೀತಂ ಚ ಪರಾಂ ಗ್ಲಾನಿಂ ವಿಹಾಸ್ಯತಿ ॥ ೩೯ ॥
ಏತದುಕ್ತ್ವಾ ಮಹೇಶಾನೋ ವರಾನನ್ಯಾನದಾನ್ಮುದಾ ।
ದ್ವಿಜರಾಜ ತಪಸ್ತಪ್ತಂ ಯದತ್ಯುಗ್ರಂ ತ್ವಯಾಽತ್ರ ವೈ ॥ ೪೦ ॥
ಯಚ್ಚ ಕ್ರತುಕ್ರಿಯೋತ್ಸರ್ಗಸ್ತ್ವಯಾ ಮಹ್ಯಂ ನಿವೇದಿತಃ ।
ಸ್ಥಾಪಿತಂ ಯತ್ತ್ವಿದಂ ಲಿಂಗಂ ಮಮ ಚಂದ್ರೇಶ್ವರಾಽಭಿಧಂ ॥ ೪೧ ॥
ತತೋಽತ್ರ ಲಿಂಗೇ ತ್ವನ್ನಾಮ್ನಿ ಸೋಮ ಸೋಮಾಽರ್ಧರೂಪಧೃಕ್ ।
ಪ್ರತಿಮಾಸಂ ಪಂಚದಶ್ಯಾಂ ಶುಕ್ಲಾಯಾಂ ಸರ್ವಗೋಽಪ್ಯಹಂ ॥ ೪೨ ॥
ಅಹೋರಾತ್ರಂ ವಸಿಷ್ಯಾಮಿ ತ್ರೈಲೋಕ್ಯೈಶ್ವರ್ಯಸಂಯುತಃ ।
ತತೋಽತ್ರ ಪೂರ್ಣಿಮಾಯಾಂ ತು ಕೃತಾ ಸ್ವಲ್ಪಾಽಪಿ ಸತ್ಕ್ರಿಯಾ ॥ ೪೩ ॥
ಜಪಹೋಮಾಽರ್ಚನ ಧ್ಯಾನ ದಾನ ಬ್ರಾಹ್ಮಣಭೋಜನಂ ।
ಮಹಾಪೂಜಾ ಚ ಸಾ ನೂನಂ ಮಮ ಪ್ರೀತ್ಯೈ ಭವಿಷ್ಯತಿ ॥ ೪೪ ॥

---

ಗಳಿಗೂ ಆಹ್ಲಾದವನ್ನುಂಟುಮಾಡಲೋಸುಗ ಅವನ ತಪೋಬಲದ ಪ್ರಭಾವದಿಂದ, "ಅಯ್ಯಾ ಸೋಮನೆ, ನೀನು ನನ್ನ ಮತ್ತೊಂದು ಮೂರ್ತಿಸ್ವರೂಪನು. ಜಗತ್ತು ನೀನುದಿಸಿದೊಡನೆಯೆ ಆನಂದಿಸುತ್ತದೆ. ಸೂರ್ಯನ ತಾಪಕ್ಕೊಳಗಾಗಿ ತಳಮಳಗೊಂಡ ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ಅಮೃತಪೂರ್ಣವಾದ ನಿನ್ನ ಕರಗಳ ಸ್ಪರ್ಶವನ್ನು ತಳೆದೊಡನೆಯೇ ಆ ತಾಪವನ್ನು ತೊರೆದು ಶಾಂತಿಯನ್ನು ಪಡೆಯುತ್ತದೆ.''

೪೦–೪೪. ಎಲೈ ಶಿವಶರ್ಮನೆ, ಆ ಮಹೇಶ್ವರನು ಹೀಗೆ ಹೇಳಿದ ಬಳಿಕ ಅವನ ವಿಷಯದಲ್ಲಿ ಬಹಳವಾಗಿ ಸಂತೋಷಗೊಂಡು ಇನ್ನೂ ಅನೇಕ ವರಗಳನ್ನು ಕೊಟ್ಟನು. "ಎಲೈ ದ್ವಿಜರಾಜನೆ, ನೀನು ಈ ಪ್ರದೇಶದಲ್ಲಿ ಮಾಡಿದ ಅತ್ಯುಗ್ರವಾದ ತಪಸ್ಸೂ, ನನಗೆ ನಿವೇದಿಸಿದ ಯಜ್ಞಕ್ರಿಯೆಯೂ ಇಲ್ಲಿ ಸ್ಥಾಪಿಸಿದ ಚಂದ್ರೇಶ್ವರವೆಂಬ ಶಿವಲಿಂಗವೂ ಬಹು ಪವಿತ್ರವಾದುವು. ಅಯ್ಯಾ ಸೋಮನೆ, ನಾನು ನಿನ್ನ ಹೆಸರಿನ ಈ ಲಿಂಗದಲ್ಲಿ ಪ್ರತಿತಿಂಗಳ ಪೂರ್ಣಿಮೆಯಲ್ಲಿಯೂ ಸರ್ವಾಂತರ್ಯಾಮಿಯಾಗಿದ್ದರೂ ಮೂರು ಲೋಕದ ಐಶ್ವರ್ಯದಿಂದೊಡಗೂಡಿ ಹಗಲಿರುಳೂ ವಾಸಮಾಡುತ್ತೇನೆ. ಆದುದರಿಂದ ಪೂರ್ಣಿಮೆಯಂದು ಇಲ್ಲಿ ಮಾನವರೆಸಗುವ ಜಪ ಹೋಮ ಅರ್ಚನೆ ಧ್ಯಾನ ದಾನ ಬ್ರಾಹ್ಮಣಭೋಜನ ಮಹಾಪೂಜೆ ಇವೆಲ್ಲವೂ ಎಷ್ಟೇ ಸ್ವಲ್ಪವಾಗಿದ್ದರೂ ನನಗೆ ಅತ್ಯಂತ ಪ್ರೀತಿಕರವಾಗುತ್ತದೆ.

ಜೀರ್ಣೋದ್ಧಾರಾದಿಕರಣಂ ನೃತ್ಯವಾದ್ಯಾದಿಕಾರ್ಪಣಂ ।
ಧ್ವಜಾರೋಪಣಕರ್ಮಾದಿ ತಪಸ್ವಿಯತಿತರ್ಪಣಂ ॥ ೪೫ ॥
ಚಂದ್ರೇಶ್ವರೇ ಕೃತಂ ಸರ್ವಂ ತದಾನಂತ್ಯಾಯ ಜಾಯತೇ ।
ಅನ್ಯಚ್ಚ ತೇ ಪ್ರವಕ್ಷ್ಯಾಮಿ ಶೃಣು ಗುಹ್ಯಂ ಕಲಾನಿಧೇ ॥ ೪೬ ॥
ಅಭಕ್ತಾಯ ಚ ನಾಖ್ಯೇಯಂ ನಾಸ್ತಿಕಾಯ ಶ್ರುತಿದ್ರುಹೇ ।
ಅಮಾವಾಸ್ಯಾ ಯದಾ ಸೋಮ ಜಾಯತೇ ಸೋಮವಾಸರೇ ॥ ೪೭ ॥
ತದೋಪವಾಸಃ ಕರ್ತವ್ಯೋ ಭೂತಾಯಾಂ ಸದ್ಭಿರಾದರಾತ್ ।
ಕೃತನಿತ್ಯಕ್ರಿಯಃ ಸೋಮ ತ್ರಯೋದಶ್ಯಾಂ ನಿಶಾಮಯ ॥ ೪೮ ॥
ಶನಿಪ್ರದೋಷೇ ಸಂಪೂಜ್ಯ ಲಿಂಗಂ ಚಂದ್ರೇಶ್ವರಾಹ್ವಯಂ ।
ನಕ್ತಂ ಕೃತ್ವಾ ತ್ರಯೋದಶ್ಯಾಂ ನಿಯಮಂ ಪರಿಗೃಹ್ಯ ಚ ॥ ೪೯ ॥
ಉಪೋಷ್ಯ ಚ ಚತುರ್ದಶ್ಯಾಂ ಕೃತ್ವಾ ಜಾಗರಣಂ ನಿಶಿ ।
ಪ್ರಾತಃ ಸೋಮಕುಹೂಯೋಗೇ ಸ್ನಾತ್ವಾ ಚಂದ್ರೋದವಾರಿಭಿಃ ॥ ೫೦ ॥
ಉಪಾಸ್ಯ ಸಂಧ್ಯಾಂ ವಿಧಿವತ್ಕೃತಸರ್ವೋದಕಕ್ರಿಯಃ ।
ಉಪಚಂದ್ರೋದತೀರ್ಥೇಷು ಶ್ರಾದ್ಧಂ ವಿಧಿವದಾಚರೇತ್ ॥ ೫೧ ॥

---

೪೫. ಇಷ್ಟೇ ಅಲ್ಲದೆ ಭಕ್ತಜನರು ಈ ಪ್ರದೇಶದಲ್ಲಿ ಜೀರ್ಣೋದ್ಧಾರಾದಿ ಕಾರ್ಯಗಳನ್ನು ಮಾಡುವುದೂ, ನೃತ್ಯಗಳನ್ನು ನಡಸಿ ನನಗೆ ನಿವೇದಿಸುವುದೂ, ಧ್ವಜಾರೋಹಣದಿಂದ ಮೊದಲುಗೊಂಡು ರಥಾರೋಹಣದವರೆಗಣ ಕಾರ್ಯಗಳನ್ನು ಮಾಡಿ ತಪಸ್ವಿಗಳನ್ನೂ, ಯತಿಗಳನ್ನೂ ತೃಪ್ತಿಗೊಳಿಸುವುದೂ ಈ ಎಲ್ಲ ಸತ್ಕರ್ಮಗಳೂ ನನಗೆ ಅತ್ಯಂತ ಪ್ರೀತಿಯನ್ನುಂಟುಮಾಡುತ್ತವೆ.

೪೬. ಚಂದ್ರೇಶ್ವರನ ಸನ್ನಿಧಿಯಲ್ಲಿ ಮಾಡಿದ ಯಾವುದೇ ಕಾರ್ಯವಾದರೂ ಅನಂತವಾಗುತ್ತದೆ. ಎಲೈ ಕಲಾನಿಧಿಯೆ, ನಿನಗೆ ಮತ್ತೊಂದು ರಹಸ್ಯವನ್ನು ಹೇಳುತ್ತೇನೆ, ಕೇಳು.

೪೭. ಈ ರಹಸ್ಯವನ್ನು ಭಕ್ತರಲ್ಲದವರಿಗೂ, ನಾಸ್ತಿಕರಿಗೂ, ವೇದದೂಷಕರಿಗೂ ಹೇಳಬಾರದು. ಎಲೈ ಸೋಮನೆ, ಸೋಮವಾರ ಅಮಾವಾಸ್ಯೆ ಎರಡೂ ಕೂಡಿದಂದು ಬಹು ಪವಿತ್ರವಾದ ದಿನವೆನಿಸುವುದು.

೪೮–೫೧ ಆ ಹಿಂದಿನ ದಿನವಾದ ಚತುರ್ದಶಿಯಂದು ಸತ್ಪುರುಷರು ಉಪವಾಸವ್ರತವನ್ನು ಬಹು ಅಕ್ಕರೆಯಿಂದ ಮಾಡಬೇಕು. ಎಲೈ ಸೋಮನೆ, ಆಲಿಸು. ಆ ಹಿಂದಿನ ತ್ರಯೋದಶಿಯ ದಿನ ನಿತ್ಯಕ್ರಿಯೆಗಳನ್ನೆಲ್ಲ ನಿರ್ವಹಿಸಿಯಾದ ಮೇಲೆ, ಶನಿಪ್ರದೋಷಸಮಯದಲ್ಲಿ ಚಂದ್ರೇಶ್ವರ ಲಿಂಗವನ್ನು ಪೂಜಿಸಿ ಒಪ್ಪೊತ್ತು ಊಟಮಾಡಿ ನಿಯಮವನ್ನು ತೊಟ್ಟು ಮಾರನೆಯ ಚತುರ್ದಶಿಯ ದಿನ ಉಪವಾಸವನ್ನು ಮಾಡಿ ರಾತ್ರಿ ಜಾಗರಣೆಯಿಂದಿದ್ದು ಪ್ರಾತಃಕಾಲಕ್ಕೆದ್ದು

ಆವಾಹನಾಽರ್ಘ್ಯರಹಿತಂ ಪಿಂಡಾನ್ದದ್ಯಾತ್ಪ್ರಯತ್ನತಃ ।
ವಸುರುದ್ರಾಽದಿತಿಸುತಸ್ವರೂಪಪುರುಷತ್ರಯಂ ॥ ೫೨ ॥
ಮಾತಾಮಹಾಂಸ್ತಥೋದ್ದಿಶ್ಯ ತಥಾಽನ್ಯಾನಪಿ ಗೋತ್ರಜಾನ್ ।
ಗುರುಶ್ವಶುರಬಂಧೂನಾಂ ನಾಮಾನ್ಯುಚ್ಚಾರ್ಯ ಪಿಂಡದಃ ॥ ೫೩ ॥
ಕುರ್ವಂಛ್ರಾದ್ಧಂ ಚ ತೀರ್ಥೇಽಸ್ಮಿಂಛ್ರದ್ಧಯೋದ್ಧರತೇಽಖಿಲಾನ್ ।
ಗಯಾಯಾಂ ಪಿಂಡದಾನೇನ ಯಥಾ ತುಷ್ಯಂತಿ ಪೂರ್ವಜಾಃ ॥ ೫೪ ॥
ತಥಾ ಚಂದ್ರೋದಕುಂಡೇಽತ್ರ ಶ್ರಾದ್ಧೈಸ್ತೃಪ್ಯಂತಿ ಪೂರ್ವಜಾಃ ।
ಗಯಾಯಾಂ ಚ ಯಥಾ ಮುಚ್ಯೇತ್ಸರ್ವಣಾತ್ಪಿತೃಜಾನ್ನರಃ ॥ ೫೫ ॥
ತಥಾ ಪ್ರಮುಚ್ಯತೇ ಚರ್ಣಾಚ್ಚಂದ್ರೋದೇ ಪಿಂಡದಾನತಃ ।
ಯದಾ ಚಂದ್ರೇಶ್ವರಂ ದ್ರಷ್ಟುಂ ಯಾಯಾತ್ಕೋಽಪಿ ನರೋತ್ತಮಃ ॥೫೬॥
ತದಾ ನೃತ್ಯಂತಿ ಮುದಿತಾಸ್ತತ್ಪೂರ್ವಪ್ರಪಿತಾಮಹಾಃ ।
ಅಯಂ ಚಂದ್ರೋದತೀರ್ಥೇಽಸ್ಮಿಂಸ್ತರ್ಪಣಂ ನಃ ಕರಿಷ್ಯತಿ ॥ ೫೭ ॥
ಅಸ್ಮಾಕಂ ಮಂದಭಾಗ್ಯತ್ವಾದ್ಯದಿ ನೈವ ಕರಿಷ್ಯತಿ ।
ತದಾ ತತ್ತೀರ್ಥಸಂಸ್ಪರ್ಶಾದಸ್ಮತ್ತೃಪ್ತಿರ್ಭವಿಷ್ಯತಿ ॥ ೫೮ ॥

---

ಸೋಮಕುಹೂಯೋಗದಲ್ಲಿ ಚಂದ್ರೋದ ಕೂಪದಲ್ಲಿ ಸ್ನಾನಮಾಡಿ, ಶಾಸ್ತ್ರೋಕ್ತವಾಗಿ ಸಂಧ್ಯಾದಿಸಮಸ್ತಕರ್ಮಗಳನ್ನೂ ಮುಗಿಸಿಕೊಂಡು ಚಂದ್ರೋದಕೂಪದ ಸಮೀಪದಲ್ಲಿರುವ ಸಮಸ್ತ ತೀರ್ಥಗಳಲ್ಲಿಯೂ ವಿಧಿಯನ್ನನುಸರಿಸಿ ತೀರ್ಥಶ್ರಾದ್ಧವನ್ನು ಮಾಡಬೇಕು.

೫೨–೫೩. ಈ ತೀರ್ಥಶ್ರಾದ್ಧವನ್ನು ಮಾಡುವಾಗ ಆವಾಹನ ಅರ್ಘ್ಯಗಳನ್ನು ಬಿಟ್ಟು ವಸುರುದ್ರಾದಿತ್ಯ ಪುರುಷತ್ರಯವನ್ನೂ ಮಾತಾಮಹರು ಅಂತೆಯೇ ಪಿತೃಗೋತ್ರಜರು, ಗುರುಗಳು, ಮಾವ, ಇತರ ಬಂಧುಗಳು—ಇವರ ಹೆಸರುಗಳನ್ನೂ ಹೇಳಿಕೊಂಡು ಪಿಂಡದಾನವನ್ನು ಮಾಡತಕ್ಕದ್ದು.

೫೪. ಹೀಗೆ ಚಂದ್ರೋದತೀರ್ಥದಲ್ಲಿ ಶ್ರದ್ಧೆಯಿಂದ ಆಚರಿಸಿದ ಶ್ರಾದ್ಧಕರ್ಮದಿಂದ ಸಮಸ್ತಪಿತೃದೇವತೆಗಳೂ ಗಯೆಯಲ್ಲಿ ಶ್ರಾದ್ಧವನ್ನು ಮಾಡಿ ಪಿಂಡಪ್ರದಾನಮಾಡಿದುದರಿಂದ ಎಂತೊ ಅಂತು ಸಂತೋಷಗೊಳ್ಳುತ್ತಾರೆ.

೫೫–೫೮. ಈ ಚಂದ್ರೋದ ತೀರ್ಥದಲ್ಲಿ ತೀರ್ಥಶ್ರಾದ್ಧವನ್ನೆಸಗಿದ ಮಾನವನು ಗಯಾಶ್ರಾದ್ಧದಿಂದೆಂತೊ ಅಂತು ಪಿತೃಋಣದಿಂದ ವಿಮುಕ್ತನಾಗುತ್ತಾನೆ. ಮಾನವನು ಚಂದ್ರೇಶ್ವರನ ಸಂದರ್ಶನಕ್ಕಾಗಿ ಬಂದೊಡನೆಯೆ ಅವನ ಪೂರ್ವಪಿತಾಮಹರೆಲ್ಲರೂ "ಇವನು ಚಂದ್ರೋದ ತೀರ್ಥದಲ್ಲಿ ನಮಗೆ ತರ್ಪಣವನ್ನು ಕೊಡುತ್ತಾನೆ. ಒಂದು ವೇಳೆ ನಮ್ಮ ದುರದೃಷ್ಟದಿಂದ ಇವನೇನಾದರೂ

ಸ್ಪೃಶೇನ್ನಾಽಪಿ ಯದಾ ಮಂದಸ್ತದಾ ದ್ರಕ್ಷ್ಯತಿ ತೃಪ್ತಯೇ ।
ಏವಂ ಶ್ರಾದ್ಧಂ ವಿಧಾಯಾಽಥ ಸ್ಪೃಷ್ಟ್ವಾ ಚಂದ್ರೇಶ್ವರಂ ವ್ರತೀ ।
ಸಂತರ್ಪ್ಯ ವಿಪ್ರಾಂಶ್ಚ ಯತೀನ್ಕುರ್ಯಾದ್ವೈ ಪಾರಣಂ ತತಃ ॥ ೫೯ ॥
ಏವಂ ವ್ರತೇ ಕೃತೇ ಕಾಶ್ಯಾಂ ಸದರ್ಶೇ ಸೋಮವಾಸರೇ ।
ಭವೇದೃಣತ್ರಯಾನ್ಮುಕ್ತೋ ಮೃಗಾಂಕ ಮದನುಗ್ರಹಾತ್ ॥ ೬೦ ॥
ಅತ್ರ ಯಾತ್ರಾ ಮಹಾಚೈತ್ರ್ಯಾಂ ಕಾರ್ಯಾ ಕ್ಷೇತ್ರನಿವಾಸಿಭಿಃ ।
ತಾರಕಜ್ಞಾನಲಾಭಾಯ ಕ್ಷೇತ್ರವಿಘ್ನನಿವರ್ತಿನೀ ॥ ೬೧ ॥
ಚಂದ್ರೇಶ್ವರಂ ಸಮಭ್ಯರ್ಚ್ಯ ಯದ್ಯನ್ಯತ್ರಾಽಪಿ ಸಂಸ್ಥಿತಃ ।
ಅಘೌಘಪಟಲೀಂ ಭಿತ್ವಾ ಸೋಮಲೋಕಮವಾಪ್ಸ್ಯತಿ ॥ ೬೨ ॥
ಕಲೌ ಚಂದ್ರೇಶಮಹಿಮಾ ನಾಽಭಾಗ್ಯೈರವಗಮ್ಯತೇ ।
ಅನ್ಯಚ್ಚ ತೇ ಪ್ರವಕ್ಷ್ಯಾಮಿ ಪರಂ ಗುಹ್ಯಂ ನಿಶಾಪತೇ ॥ ೬೩ ॥

---

ತರ್ಪಣವನ್ನು ಕೊಡದಿದ್ದರೂ ಇವನು ಆ ಚಂದ್ರೋದ ತೀರ್ಥವನ್ನು ಸ್ಪರ್ಶಿಸುವುದರಿಂದಾದರೂ ನಮಗೆ ತೃಪ್ತಿಯುಂಟಾಗುತ್ತದೆ. ಒಂದು ವೇಳೆ ಇವನು ಆ ತೀರ್ಥಸ್ಪರ್ಶನವನ್ನೂ ಮಾಡದೆ ಅದನ್ನು ಸಂದರ್ಶಿಸಿದರೂ ಸಾಕು, ನಮಗೆ ತೃಪ್ತಿಯಾದೀತು" ಎಂದು ಸಂತುಷ್ಟರಾಗಿ ಆ ಸಂತೋಷಭರದಿಂದ ನರ್ತಿಸುತ್ತಾರೆ. ಅಯ್ಯಾ ಚಂದ್ರನೆ, ಹೀಗೆ ತೀರ್ಥಯಾತ್ರೆಯ ವ್ರತವನ್ನು ತೊಟ್ಟ ಮಾನವೋತ್ತಮನು ಚಂದ್ರೋದ ತೀರ್ಥದಲ್ಲಿ ಶ್ರಾದ್ಧವನ್ನು ಮಾಡಿ, ಚಂದ್ರೇಶ್ವರನನ್ನು ದರ್ಶನ ಸ್ಪರ್ಶನಾದಿಗಳಿಂದ ಸೇವಿಸಿ, ವಿಪ್ರರನ್ನೂ ಯತಿಗಳನ್ನೂ ತೃಪ್ತಿಗೊಳಿಸಿ ಆ ತರುವಾಯ ಪಾರಣೆಯನ್ನು ಮಾಡಬೇಕು.

೬೦. ಹೀಗೆ ಕಾಶೀಕ್ಷೇತ್ರದಲ್ಲಿ ಅಮಾಸೋಮವಾರದಂದು ಚಂದ್ರೇಶ್ವರನ ಸನ್ನಿಧಿಯಲ್ಲಿ ವ್ರತವನ್ನು ಮಾಡಿದ್ದಾದರೆ, ಎಲೈ ಚಂದ್ರನೆ, ಮಾನವನು ನನ್ನ ಅನುಗ್ರಹದಿಂದ ಋಣತ್ರಯವಿಮುಕ್ತನಾಗುತ್ತಾನೆ.

೬೧ ಈ ಚಂದ್ರೇಶ್ವರ ದೇವಾಲಯದಲ್ಲಿ ಕಾಶೀಕ್ಷೇತ್ರ ನಿವಾಸಿಗಳೆಲ್ಲರೂ ತಾರಕಮಂತ್ರಜ್ಞಾನಲಾಭಕ್ಕಾಗಿಯೂ ಕ್ಷೇತ್ರ ವಿಘ್ನಗಳ ನಿವಾರಣೆಗಾಗಿಯೂ ಚೈತ್ರಮಾಸದ ಚಿತ್ತಾನಕ್ಷತ್ರಯುಕ್ತವಾದ ಮಹಾ ಪೂರ್ಣಿಮೆಯಲ್ಲಿ ಯಾತ್ರೆಯನ್ನು ನಡೆಸತಕ್ಕದ್ದು.

೬೨. ಚಂದ್ರೇಶ್ವರನನ್ನು ಪೂಜಿಸಿದವನು ಎಲ್ಲಿಯೇ ವಾಸಮಾಡುತ್ತಿದ್ದರೂ ಪಾಪಸಮೂಹಗಳನ್ನು ಭೇದಿಸಿಕೊಂಡು ಕಾಲಾನಂತರದಲ್ಲಿ ಸೋಮಲೋಕವನ್ನು ಸೇರುತ್ತಾನೆ.

೬೩–೬೪. ಕಲಿಯುಗದಲ್ಲಿ ಚಂದ್ರೇಶ್ವರನ ಮಹಿಮೆಯು ಪುಣ್ಯಶಾಲಿಗಳಲ್ಲದವರಿಗೆ ತಿಳಿಯುವುದಿಲ್ಲ. ಇದಂತಿರಲಿ ಎಲೈ ನಿಶಾಪತಿಯೆ, ನಿನಗೆ

ಸಿದ್ಧಯೋಗೀಶ್ವರಂ ಪೀಠಮೇತತ್ಸಾಧಕಸಿದ್ಧಿದಂ ।
ಸುರಾಽಸುರೇಷು ಗಂಧರ್ವನಾಗವಿದ್ಯಾಧರೇಷ್ವಪಿ ॥ ೬೪ ॥
ರಕ್ಷೋಗುಹ್ಯಕಯಕ್ಷೇಷು ಕಿನ್ನರೇಷು ನರೇಷು ಚ ।
ಸಪ್ತಕೋಟ್ಯಸ್ತು ಸಿದ್ಧಾನಾಮತ್ರ ಸಿದ್ಧಾ ಮಮಾಽಗ್ರತಃ ॥ ೬೫ ॥
ಷಣ್ಮಾಸಂ ನಿಯತಾಹಾರೋ ಧ್ಯಾಯನ್ವಿಶ್ವೇಶ್ವರೀಮಿಹ ।
ಚಂದ್ರೇಶ್ವರಾರ್ಚನಾಯಾತಾನ್ಸಿದ್ಧಾನ್ಪಶ್ಯತಿ ಸೋಽಗ್ರಗಾನ್ ॥ ೬೬ ॥
ಸಿದ್ಧಯೋಗೀಶ್ವರೀ ಸಾಕ್ಷಾದ್ವರದಾ ತಸ್ಯ ಜಾಯತೇ ।
ತವಾಽಪಿ ಮಹತೀಸಿದ್ಧಿಃ ಸಿದ್ಧಯೋಗೀಶ್ವರೀಕ್ಷಣಾತ್ ॥ ೬೭ ॥
ಸಂತಿ ಪೀಠಾನ್ಯನೇಕಾನಿ ಕ್ಷಿತೌ ಸಾಧಕಸಿದ್ಧಯೇ ।
ಪರಂ ಯೋಗೀಶ್ವರೀಪೀಠಾದ್ಭೂಪೃಷ್ಠೇನಾಶು ಸಿದ್ಧಿದಂ ॥ ೬೮ ॥
ಯತ್ರ ಚಂದ್ರೇಶ್ವರಂ ಲಿಂಗಂ ತ್ವಯೇದಂ ಸ್ಥಾಪಿತಂ ಶಶಿನ್ ।
ಇದಮೇವ ಹಿ ತತ್ಪೀಠಮದೃಶ್ಯಮಕೃತಾತ್ಮಭಿಃ ॥ ೬೯ ॥

ಉತ್ತಮೋತ್ತಮವಾದ ಮತ್ತೊಂದು ರಹಸ್ಯವನ್ನು ಹೇಳುತ್ತೇನೆ. ಈ ಚಂದ್ರೇಶ್ವರನ ಸನ್ನಿಧಿಯಲ್ಲಿಯೆ ವಿರಾಜಿಸುತ್ತಿರುವ ಸಿದ್ಧಯೋಗೀಶ್ವರ ಪೀಠವು ಸಮಸ್ತರಿಗೂ ಸಿದ್ಧಿಪ್ರದವಾದುದು. ಸುರಾಸುರ ಗಂಧರ್ವ ನಾಗ ವಿದ್ಯಾಧರ ರಾಕ್ಷಸ ಗುಹ್ಯಕ ಯಕ್ಷ ಕಿನ್ನರ ನರವೃಂದಗಳಲ್ಲಿ ಏಳು ಕೋಟಿಗಳು ಇಲ್ಲಿ ನೆಲಸಿರುವ ಚಂದ್ರೇಶ್ವರನಾದ ನನ್ನ ಮುಂಗಡೆ ಸಿದ್ಧಿಯನ್ನು ಪಡೆದರು.

೬೬. ಯಾವ ಮಾನವನು ಆರು ತಿಂಗಳಕಾಲ ನಿಯತಾಹಾರಿಯಾಗಿ ಇಲ್ಲಿರುವ ವಿಶ್ವೇಶ್ವರಿಯನ್ನು ಧ್ಯಾನಮಾಡುತ್ತ ಕಾಲಕಳೆಯುವನೊ ಅವನು ಚಂದ್ರೇಶ್ವರನ ಅರ್ಚನೆಗಾಗಿ ಬರುವ ಸಿದ್ಧರನ್ನು ತನ್ನ ಮುಂಗಡೆಯೆ ಕಾಣುತ್ತಾನೆ.

೬೭. ಸಾಕ್ಷಾತ್ ಯೋಗೀಶ್ವರಿಯಾದ ವಿಶ್ವೇಶ್ವರಿಯೆ ಅವನಿಗೆ ಸಿದ್ಧಿದಾಯಕಳಾಗುತ್ತಾಳೆ. ಎಲೈ ಸೋಮನೆ, ಈ ಸಿದ್ಧಯೋಗಿಶ್ವರಿಯ ಕಟಾಕ್ಷವೀಕ್ಷಣದಿಂದಲೆ ನಿನಗೂ ಈ ಸಿದ್ಧಿಯುಂಟಾಯಿತು.

೬೮. ಭೂಲೋಕದಲ್ಲಿ ಸಾಧಕನಿಗೆ ಸಿದ್ಧಿಯನ್ನು ದೊರಕಿಸಿಕೊಡುವ ಸಿದ್ಧಪೀಠಗಳು ಅನೇಕವಿರುವುವು. ಆದರೂ ಬಹು ಬೇಗನೆಯ ಸಿದ್ಧಿಯನ್ನು ದೊರಕಿಸುವ ಈ ಯೋಗೀಶ್ವರೀಪೀಠಕ್ಕೆ ಸಮಾನವಾದುದು ಯಾವುದೂ ಇಲ್ಲ.

೬೯. ಎಲೈ ಚಂದ್ರನೆ, ನೀನೇ ಸಾಕ್ಷಾತ್ತಾಗಿ ನಿನ್ನ ಹೆಸರಿನಿಂದ ಚಂದ್ರೇಶ್ವರಲಿಂಗವನ್ನು ಸ್ಥಾಪಿಸಿರುವ ಈ ಪ್ರದೇಶದಲ್ಲಿ ಬೆಳಗುತ್ತಿರುವ ಈ ಮಹಾ ಪೀಠವು ಪುಣ್ಯಶಾಲಿಗಳಲ್ಲದ ಮಾನವರಿಗೆ ಗೋಚರವಾಗುವುದಿಲ್ಲ.

ಜಿತಕಾಮಾ ಜಿತಕ್ರೋಧಾ ಜಿತಲೋಭಸ್ಪೃಹಾಸ್ಮಿತಾಃ ।
ಯೋಗೀಶ್ವರೀಂ ಪ್ರಪಶ್ಯಂತಿ ಮಮ ಶಕ್ತಿಂ ಪರಾಂ ಹಿತಾಂ ॥ ೭೦ ॥
ಯೇ ತು ಪ್ರತ್ಯಷ್ಟಮಿ ಜನಾಸ್ತಥಾ ಪ್ರತಿಚತುರ್ದಶಿ ।
ಸಿದ್ಧಯೋಗೀಶ್ವರೀಪೀಠೇ ಪೂಜಯಿಷ್ಯಂತಿ ಭಾವಿತಾಃ ॥ ೭೧ ॥
ಅದೃಷ್ಟರೂಪಾಂ ಸುಭಗಾಂ ಪಿಂಗಲಾಂ ಸರ್ವಸಿದ್ಧಿದಾಂ ।
ಧೂಪನೈವೇದ್ಯ ದೀಪಾದ್ಯೈಸ್ತೇಷಾಮಾವಿರ್ಭವಿಷ್ಯತಿ ॥ ೭೨ ॥
ಇತಿ ದತ್ವಾ ವರಾಂಛಂಭುಸ್ತಸ್ಮೈ ಚಂದ್ರಮಸೇದ್ವಿಜ ।
ಅಂತರ್ಹಿತೋ ಮಹೇಶಾನಸ್ತತ್ರ ನೈಶ್ವೇಶ್ವರೇ ಪುರೇ ॥ ೭೩ ॥
ತದಾರಭ್ಯ ಚ ಲೋಕೇಽಸ್ಮಿನ್ ದ್ವಿಜರಾಜೋಽಧಿಪೋಽಭವತ್ ।
ದಿಶೋ ವಿತಿಮಿರಾಃ ಕುರ್ವನ್ ನಿಜೈಃ ಪ್ರಸೃಮರೈಃ ಕರೈಃ ॥ ೭೪ ॥
ಸೋಮವಾರವ್ರತಕೃತಃ ಸೋಮಪಾನರತಾ ನರಾಃ ।
ಸೋಮಪ್ರಭೇಣ ಯಾನೇನ ಸೋಮಲೋಕಂ ವ್ರಜಂತಿ ಹಿ ॥ ೭೫ ॥

೭೦. ಜಿತಕಾಮರೂ ಕ್ರೋಧ ಲೋಭಗಳನ್ನು ತೊರೆದವರೂ ಸ್ಪೃಹೆಯಿಲ್ಲದವರೂ ಅಹಂಕಾರವಿವರ್ಜಿತರೂ ಆದ ಮಾನವೋತ್ತಮರು ಮಾತ್ರ ಅತ್ಯುತ್ತಮಳೂ ಹಿತಕರಳೂ ನನ್ನ ಶಕ್ತಿ ಸ್ವರೂಪಿಣಿಯೂ ಆದ ಈ ಯೋಗೀಶ್ವರಿಯನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾರೆ.

೭೧–೭೨. ಎಲೈ ಶಶಿಯೆ, ಪ್ರತಿ ಅಷ್ಟಮಿ ಚತುರ್ದಶಿಯ ದಿನಗಳಲ್ಲಿ ಯಾವ ಭಕ್ತಮಹಾಜನರು ಇಲ್ಲಿ ಅಗೋಚರವಾದ ರೂಪವನ್ನೊಳಗೊಂಡು ಸೌಭಾಗ್ಯದೇವತೆಯಾಗಿ ಪಿಂಗಳೆಯೆಂಬ ಹೆಸರಿನಿಂದ ಸರ್ವಸಿದ್ಧಿಪ್ರದಳಾಗಿರುವ ಸಿದ್ಧಯೋಗೀಶ್ವರೀದೇವಿಯು ಮಂಡಿಸಿರುವ ಪೀಠವನ್ನು ಧೂಪ ದೀಪ ನೈವೇದ್ಯಾದಿಗಳಿಂದಲೂ ಅರ್ಘ್ಯಪಾದ್ಯಗಳಿಂದಲೂ ಪೂಜಿಸುತ್ತಾರೆಯೊ ಅವರಿಗೆ ಆ ಮಹಾದೇವಿಯು ಪ್ರತ್ಯಕ್ಷಳಾಗುತ್ತಾಳೆ.

೭೩. ಎಲೈ ಶಿವಶರ್ಮನೆ, ಈ ಪ್ರಕಾರವಾಗಿ ಆ ಶಂಭುವು ಚಂದ್ರನಿಗೆ ವರಗಳನ್ನಿತ್ತು ಅದೇ ಕೈಲಾಸಪುರದಲ್ಲಿಯೆ ಅಂತರ್ಧಾನವಾದನು.

೭೪. ಅದು ಮೊದಲುಗೊಂಡು ದ್ವಿಜರಾಜನಾದ ನಿಶಾಕರನು ಈ ಲೋಕದಲ್ಲಿ ತನ್ನ ಸರ್ವವ್ಯಾಪಕವಾದ ಕಾರಣಗಳಿಂದ ದಶದಿಶೆಗಳನ್ನೂ ತಮಸ್ಸು ಮುತ್ತದಂತೆ ಮಾಡಿ ಬೆಳಗುತ್ತಿದ್ದಾನೆ.

೭೫. ಅಯ್ಯಾ ಬ್ರಾಹ್ಮಣನೆ, ಯಾರು ಅಮಾಸೋಮವಾರ ವ್ರತಗಳನ್ನು ಮಾಡಿದವರೊ ಆ ಪುಣ್ಯಾತ್ಮರೇ ಸೋಮಪಾನಮಾಡಿದ ಸೋಮಯಾಜಿಗಳಿಗೆ ಸಮಾನರಾದವರು. ಅವರು ಸೋಮಪ್ರಭೆಯೊಡಗೂಡಿದ ವಿಮಾನಗಳಲ್ಲಿ

**ಚಂದ್ರೇಶ್ವರಸಮುತ್ಪತ್ತಿಂ ತಥಾ ಚಾಂದ್ರಮಸಂ ತಪಃ ।**
**ಯಃ ಶ್ರೋಷ್ಯತಿ ನರೋ ಭಕ್ತ್ಯಾ ಚಂದ್ರಲೋಕೇ ಸ ಇಜ್ಯತೇ ॥ ೭೬ ॥**

**ಅಗಸ್ತಿರುವಾಚ :—**

**ಶಿವಶರ್ಮಣಿ ಶರ್ಮಕಾರಿಣೇಂ**
**ಪಥಿ ದಿವ್ಯೇ ಶ್ರಮಹಾರಿಣೇಂ ಗಣೌ ।**
**ಕಥಯಂತೌ ತು ಕಥಾಮಿಮಾಂ ಶುಭಾ**
**ಮುಡುಲೋಕಂ ಪರಿಜಗ್ಮತುಸ್ತತಃ ॥ ೭೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಸೋಮಲೋಕವರ್ಣನಂ" ನಾಮ ಚತುರ್ದಶೋಽಧ್ಯಾಯಃ**

---

೭೬. ಹೀಗೆ ನಿನಗೆ ನಾವು ನಿರೂಪಿಸಿದ ಈ ಚಂದ್ರೇಶ್ವರನ ಆವಿರ್ಭಾವ ವೃತಾಂತವನ್ನೂ ಅಂತೆಯೆ ಚಂದ್ರನೆಸಗಿದ ತಪೋವಿಚಾರವನ್ನೂ ಯಾವ ಮಾನವನು ಭಕ್ತಿಶ್ರದ್ಧೆಗಳಿಂದ ಕೇಳುತ್ತಾನೆಯೊ ಅವನು ಚಂದ್ರಲೋಕದಲ್ಲಿ ಪೂಜ್ಯನೆನಿಸುತ್ತಾನೆ.

೭೭. ಅಗಸ್ತ್ಯನು ಹೇಳುತ್ತಾನೆ :–ಎಲೌ ಲೋಪಾಮುದ್ರೆಯೆ, ಈ ಪ್ರಕಾರ ವಾಗಿ ಆ ವಿಷ್ಣುಪಾರ್ಷದರು ಆ ಸ್ವರ್ಗಮಾರ್ಗದಲ್ಲಿ ಶಿವಶರ್ಮನಿಗೆ ಶ್ರಮಾಪ ಹಾರಕವೂ ಸುಖಕರವೂ ಶುಭಕರವೂ ಆದ ಪುಣ್ಯಕಥೆಯನ್ನು ಹೇಳುತ್ತಾ ಆ ಚಂದ್ರಲೋಕವನ್ನು ದಾಟಿ ಮುಂದುವರಿದರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಸೋಮಲೋಕವರ್ಣನ"ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಪಂಚದಶೋಽಧ್ಯಾಯಃ

### ನಕ್ಷತ್ರಬುಧಲೋಕಯೋರ್ವರ್ಣನಂ

ಅಗಸ್ತಿರುವಾಚ :—

ಶೃಣು ಪತ್ನಿ ಮಹಾಭಾಗೇ ಲೋಪಾಮುದ್ರೇ ಸಧರ್ಮಿಣಿ ।
ಕಥಾಂ ವಿಷ್ಣುಗಣಾಭ್ಯಾಂ ಚ ಕಥಿತಾಂ ಶಿವಶರ್ಮಣೇ ॥ ೧ ॥

ಶಿವಶರ್ಮೋವಾಚ :—

ಅಹೋ ಗಣೌ ವಿಚಿತ್ರೇಯಂ ಶ್ರುತಾ ಚಾಂದ್ರಮಸೀ ಕಥಾ ।
ಉಡುಲೋಕಕಥಾಂ ಖ್ಯಾತಂ ವಿಷ್ವಗಾಖ್ಯಾನಕೋವಿದೌ ॥ ೨ ॥

ಗಣಾವೂಚತುಃ :—

ಪುರಾ ಸಿಸೃಕ್ಷತಃ ಸೃಷ್ಟಿಂ ಸ್ರಷ್ಟುರಂಗುಷ್ಠಪೃಷ್ಠತಃ ।
ದಕ್ಷಃ ಪ್ರಜಾವಿನಿರ್ಮಾಣೇ ದಕ್ಷೋ ಜಾತಃ ಪ್ರಜಾಪತಿಃ ॥ ೩ ॥
ಷಷ್ಟಿರ್ದುಹಿತರಸ್ತಸ್ಯ ತಪೋಲಾವಣ್ಯಭೂಷಣಾಃ ।
ಸರ್ವಲಾವಣ್ಯ ರೋಹಿಣ್ಯೋ ರೋಹಿಣೀಪ್ರಮುಖಾಃ ಶುಭಾಃ ॥ ೪ ॥

---

### ಕನ್ನಡದ ಅನುವಾದ

#### ನಕ್ಷತ್ರಲೋಕ ಬುಧಲೋಕಗಳ ವರ್ಣನ

೧. ಅಗಸ್ತ್ಯನು ಹೇಳುತ್ತಾನೆ:—ಮಹಾಭಾಗ್ಯಶಾಲಿನಿಯೂ ನನ್ನ ಸಹಧರ್ಮಿಣಿಯೂ ಆದ ಓ ಲೋಪಾಮುದ್ರೆಯೆ, ಆ ವಿಷ್ಣುಪಾರ್ಷದರು ಶಿವಶರ್ಮನಿಗೆ ಹೇಳಿದ ಪುಣ್ಯಕಥೆಯನ್ನು ಮತ್ತೂ ಕೇಳುವವಳಾಗು.

೨. ಶಿವಶರ್ಮನು ಕೇಳುತ್ತಾನೆ:—ಎಲೈ ವಿಷ್ಣುಪಾರ್ಷದರೆ, ನೀವು ಕೃಪೆಯಿಟ್ಟು ಹೇಳಿದ ಪರಮಾಶ್ಚರ್ಯಕರದಾದ ಚಂದ್ರನ ದಿವ್ಯಕಥೆಯನ್ನು ಕೇಳಿದುದಾಯಿತು. ಇನ್ನೂ, ಪ್ರತಿಯೊಂದು ಕಥಾನಕವನ್ನೂ ಹೇಳುವುದರಲ್ಲಿ ಕೋವಿದರಾದ ನೀವು ನಕ್ಷತ್ರಲೋಕದ ಕಥೆಯನ್ನು ನನಗೆ ಹೇಳಿರಿ.

೩. ಗಣಗಳು ಹೇಳುತ್ತಾರೆ:—ಅಯ್ಯಾ ಶಿವಶರ್ಮನೆ, ಪೂರ್ವದಲ್ಲಿ ಸೃಷ್ಟಿಕಾರ್ಯದಲ್ಲಿ ತೊಡಗಿದ್ದ ಬ್ರಹ್ಮನ ಅಂಗುಷ್ಠದ ಹಿಂಭಾಗದಿಂದ ಪ್ರಜಾನಿರ್ಮಾಣಕಾರ್ಯದಲ್ಲಿ ದಕ್ಷನಾದ ದಕ್ಷಪ್ರಜಾಪತಿಯು ಜನಿಸಿದನು.

೪. ಆಗ ತಪೋಲಾವಣ್ಯಭೂಷಿತೆಯರೂ ಒಟ್ಟು ಲಾವಣ್ಯಕ್ಕೇ ಆಕರವೆನಿಸಿದವರೂ ಆದ ರೋಹಿಣಿ ಮುಂತಾದ ಅರುವತ್ತು ಮಂದಿ ಮಂಗಳಕರೆಯರಾದ ಕುಮಾರಿಯರು ಜನಿಸಿದರು.

ತಾಭಿಸ್ತ್ತಪ್ತ್ವಾ ತಪಸ್ತೀವ್ರಂ ಪ್ರಾಪ್ಯ ವೈಶ್ವೇಶ್ವರೀಂ ಪುರೀಂ
ಆರಾಧಿತೋ ಮಹಾದೇವಃ ಸೋಮಃ ಸೋಮವಿಭೂಷಣಃ ॥ ೫ ॥
ಯದಾ ತುಷ್ಟೋಽಯಮೀಶಾನೋ ದಾತುಂ ವರಮಥಾಽಽಯಯೌ ।
ಉವಾಚ ಚ ಪ್ರಸನ್ನಾತ್ಮಾ ಯಾಚಧ್ವಂ ವರಮುತ್ತಮಂ ॥ ೬ ॥
ಶಂಭೋರ್ವಾಕ್ಯಮಥಾಕರ್ಣ್ಯ ಊಚುಸ್ತಾಶ್ಚ ಕುಮಾರಿಕಾಃ ।
ಯದಿ ದೇಯೋ ವರೋಽಸ್ಮಾಕಂ ವರಯೋಗ್ಯಾಸ್ಮ ಶಂಕರ ॥ ೭ ॥
ಭವತೋಽಪಿ ಮಹಾದೇವ ಭವತಾಪಹರೋ ಹಿ ಯಃ ।
ರೂಪೇಣ ಭವತಾ ತುಲ್ಯಃ ಸ ನೋ ಭರ್ತಾ ಭವತ್ವಿತಿ ॥ ೮ ॥
ಲಿಂಗಂ ಸಂಸ್ಥಾಪ್ಯ ಸುಮಹನ್ನಕ್ಷತ್ರೇಶ್ವರ ಸಂಜ್ಞಯಾ ।।
ವಾರಣಾಯಾಸ್ತಟೇ ರಮ್ಯೇ ಸಂಗಮೇಶ್ವರಸನ್ನಿಧೌ ॥ ೯ ॥
ದಿವ್ಯಂ ವರ್ಷಸಹಸ್ರಂ ತು ಪುರುಷಾಯಿತಸಂಜ್ಞಿತಂ ।
ತಪಸ್ತಪ್ತಂ ಮಹಾತ್ಮಾಭಿಃ ಪುರುಷೈರಪಿ ದುಷ್ಕರಂ ॥ ೧೦ ॥

---

೫. ಆ ಅರುವತ್ತು ಮಂದಿ ಕುಮಾರಿಯರೂ, ವಿಶ್ವೇಶ್ವರನ ಕೈಲಾಸವನ್ನು ಸೇರಿ ಆ ಮಹಾದೇವನನ್ನು ಕುರಿತು ತೀವ್ರವಾದ ತಪಸ್ಸನ್ನುಮಾಡಿ ಸಂತೋಷಗೊಳಿಸಿದರು.

೬. ಈ ತಪಸ್ಸಿನಿಂದ ಈಶಾನನು ಸಂತುಷ್ಟನಾಗಿ ಬಳಿಗೈದಿ ವರವನ್ನು ಕೊಡುವವನಾಗಿ, ಪ್ರಸನ್ನಾಂತಃಕರಣದಿಂದ ''ಎಲೈ, ನೀವೆಲ್ಲರೂ ಉತ್ತಮವಾದ ವರವನ್ನು ಕೇಳಿಕೊಳ್ಳಿರಿ'' ಎಂದು ನುಡಿದನು.

೭–೮. ಶಂಭುವಿನ ಈ ಮಾತನ್ನು ಕೇಳಿ ಆ ಅರುವತ್ತು ಮಂದಿ ಕುಮಾರಿಯರೂ ''ಎಲೈ ಶಂಕರನೆ, ನೀನು ನಮಗೆ ವರವನ್ನು ಕೊಡುವುದಾದರೆ ನಾವು ವರಯೋಗ್ಯರಾಗಿರುವುದಾದರೆ, ಸಂಸಾರದ ತಾಪಗಳನ್ನು ಪರಿಹರಿಸುವುದರಲ್ಲಿ ನಿನಗಿಂತಲೂ ಯಾವನು ಶಕ್ತನೊ, ಯಾವನು ನಿನಗೆ ಸಮಾನವಾದ ರೂಪವುಳ್ಳವನೊ ಅವನು ನಮಗೆ ಭರ್ತನಾಗಲಿ'' ಎಂದು ಕೇಳಿದರು.

೯–೧೦. ಎಲೌ ಲೋಪಾಮುದ್ರೆಯೆ, ಪೂರ್ವದಲ್ಲಿ ಈ ಅರುವತ್ತುಮಂದಿ ಕುಮಾರಿಯರೂ ವಾರಣಾನದೀತೀರದಲ್ಲಿ ಮನೋಹರವಾದ ಸಂಗಮೇಶ್ವರನ ಸನ್ನಿಧಿಯಲ್ಲಿ ನಕ್ಷತ್ರೇಶ್ವರವೆಂಬ ಮಹಾಶಿವಲಿಂಗವೊಂದನ್ನು ಸ್ಥಾಪಿಸಿ, ಯಾವ ಪುರುಷರಿಂದಲೂ ಸಾಧ್ಯವಲ್ಲದ ಮತ್ತು ಪುರುಷರಿಂದ ಸಾಧ್ಯವಾಗುವುದಕ್ಕಿಂತಲೂ ಉತ್ತಮವಾದ ಪುರುಷಾಯಿತವೆಂಬ ತಪಸ್ಸನ್ನು ಒಂದು ದಿವ್ಯವರ್ಷ ಸಹಸ್ರಗಳಕಾಲ ಮಾಡಿದ್ದರು.

ತತಸ್ತುಷ್ಟೋ ಹಿ ವಿಶ್ವೇಶೋ ವ್ಯತರದ್ವರಮುತ್ತಮಮ್ ।
ಸರ್ವಾಸಾಮೇಕಪತ್ನೀನಾಮೇಕತ್ರ ಸ್ಥಿರಚೇತಸಾಂ ॥ ೧೧ ॥

ಶ್ರೀ ವಿಶ್ವೇಶ್ವರ ಉವಾಚ :—

ನ ಕ್ವಾಂತಂ ಹಿ ತಪೋಽತ್ಯುಗ್ರಮೇತದನ್ಯಾಭಿರೀದೃಶಂ ।
ಪುರಾಽಬಲಾಭಿಸ್ತಸ್ಮಾದ್ವೋ ನಾಮ ನಕ್ಷತ್ರ ಮತ್ರ ವೈ ॥ ೧೨ ॥
ಪುರುಷಾಯಿತಸಂಜ್ಞೇನ ತಪ್ತಂ ಯತ್ತಪಸಾಽಧುನಾ ।
ಭವತೀಭಿಸ್ತತಃ ಪುಂಸ್ತ್ವಮಿಚ್ಛಯಾ ವೋ ಭವಿಷ್ಯತಿ ॥ ೧೩ ॥
ಜ್ಯೋತಿಶ್ಚಕ್ರೇ ಸಮಸ್ತೇಽಸ್ಮಿನ್ನಗ್ರಗಣ್ಯಾ ಭವಿಷ್ಯಥ ।
ಮೇಷಾದೀನಾಂ ಚ ರಾಶೀನಾಂ ಯೋನಯೋ ಯೂಯಮುತ್ತಮಾಃ ॥
ಓಷಧೀನಾಂ ಸುಧಾಯಾಶ್ಚ ಬ್ರಾಹ್ಮಣಾನಾಂ ಚ ಯಃ ಪತಿಃ ।
ಪತಿಮತ್ಯೋ ಭವತ್ಯೋಽಪಿ ತೇನ ಪತ್ಯಾ ಶುಭಾನನಾಃ ॥ ೧೫ ॥
ಭವತೀನಾಮಿದಂ ಲಿಂಗಂ ನಕ್ಷತ್ರೇಶ್ವರಸಂಜ್ಞಿತಂ ।
ಪೂಜಯಿತ್ವಾ ನರೋ ಗಂತಾ ಭವತೀಲೋಕಮುತ್ತಮಂ ॥ ೧೬ ॥

---

೧೧. ಒಬ್ಬ ಭರ್ತನಿಗೆ ಪತ್ನಿಯರಾಗುವವರೂ, ಒಂದೆಡೆಯೆ ನೆಲಸಿದ ಮನಸ್ಸುಳ್ಳವರೂ ಆದ ಆ ಕುಮಾರಿಯರೆಸಗಿದ ಆ ತಪಸ್ಸಿನಿಂದ ಸಂತುಷ್ಟನಾದ ವಿಶ್ವೇಶ್ವರನು ಅವರಿಗೆ ಉತ್ತಮವಾದ ವರವನ್ನು ಅನುಗ್ರಹಿಸಿದನು.

೧೨. ಶ್ರೀ ವಿಶ್ವೇಶ್ವರನು ಹೇಳುತ್ತಾನೆ.—ಎಲೌ ಕನ್ಯೆಯರೆ, ನೀವೆಸಗಿದ ಇಂತಹ ಉಗ್ರತಪಸ್ಸನ್ನು ಪೂರ್ವದಲ್ಲಿ ಯಾವ ಅಬಲೆಯರೂ ಮಾಡಿ ಸಹಿಸಿಲ್ಲವಾದುದರಿಂದ, ನೀವು ಈ ಅರ್ಥವನ್ನು ಹೊರಗೆಡಹುವ ನಕ್ಷತ್ರವೆಂಬ ಹೆಸರನ್ನು ಪಡೆಯಿರಿ.

೧೩. ಈಗ ಪುರುಷಾಯಿತವೆಂಬ ಯಾವ ತಪಸ್ಸನ್ನು ನೀವು ಮಾಡಿದಿರೊ ಅದರಿಂದ ನಿಮ್ಮ ಇಚ್ಛೆಬಂದಾಗ ನಿಮಗೆ ಪುಂಸ್ತ್ವವುಂಟಾಗುತ್ತದೆ.

೧೪. ನೀವು ಅಖಂಡವಾದ ಈ ಜ್ಯೋತಿಶ್ಚಕ್ರದಲ್ಲಿ ಅಗ್ರಗಣ್ಯೆಯರೆನಿಸುವಿರಿ. ಅಲ್ಲದೆ, ಉತ್ತಮೆಯರಾದ ನೀವೆಲ್ಲರೂ ಮೇಷಾದಿ ರಾಶಿಗಳಿಗೆ ಉತ್ಪತ್ತಿಸ್ಥಾನಭೂತರಾಗುವಿರಿ.

೧೫. ಓಷಧಿಗಳಿಗೂ ಸುಧೆಗೂ ಬ್ರಾಹ್ಮಣರಿಗೂ ಒಡೆಯನಾಗಿರುವ ಈ ಚಂದ್ರನು ಶುಭಾನನೆಯರಾದ ನಿಮಗೆ ಪತಿಯಾಗುತ್ತಾನೆ.

೧೬. ನೀವು ಪೂಜಿಸಿದ ನಕ್ಷತ್ರೇಶ್ವರಸಂಜ್ಞೆಯನ್ನೊಳಗೊಂಡ ಈ ಶಿವಲಿಂಗವನ್ನು ಅರ್ಚಿಸಿದ ಮಾನವನು ಉತ್ತಮವಾದ ನಿಮ್ಮ ಲೋಕವನ್ನು ಸೇರುತ್ತಾನೆ.

ಉಪರಿಷ್ಟಾನ್ಮೃಗಾಂಕಸ್ಯ ಲೋಕೋ ವಸ್ತು ಭವಿಷ್ಯತಿ ।
ಸರ್ವಾಸಾಂ ತಾರಕಾಣಾಂ ಚ ಮಧ್ಯೇ ಮಾನ್ಯಾ ಭವಿಷ್ಯಥ ॥ ೧೭ ॥
ನಕ್ಷತ್ರಪೂಜಕಾ ಯೇ ಚ ನಕ್ಷತ್ರವ್ರತ ಚಾರಿಣಃ ।
ತೇ ವೋ ಲೋಕೇ ವಸಿಷ್ಯಂತಿ ನಕ್ಷತ್ರಸದೃಶಪ್ರಭಾಃ ॥ ೧೮ ॥
ನಕ್ಷತ್ರಗ್ರಹರಾಶೀನಾಂ ಬಾಧಾಸ್ತೇಷಾಂ ಕದಾಚನ ।
ನ ಭವಿಷ್ಯಂತಿ ಯೇ ಕಾಶ್ಯಾಂ ನಕ್ಷತ್ರೇಶ್ವರವೀಕ್ಷಕಾಃ ॥ ೧೯ ॥

ಅಗಸ್ತ್ಯ ಉವಾಚ :—

ಅತಿಥಿತ್ವಮುವಾಪ ನೇತ್ರಯೋ
ರ್ಬುಧಲೋಕಃ ಶಿವಶರ್ಮಣಸ್ತ್ವಥ ।
ಗಣಯೋರ್ಭಗಣಸ್ಯ ಸಂಕಥಾಂ
ಕಥಯಿತ್ರೋರಿತಿ ವಿಷ್ಣುಚೇತಸೋಃ ॥ ೨೦ ॥

ಶಿವಶರ್ಮೋವಾಚ :—

ಕಸ್ಯ ಲೋಕೋಽಯಮತುಲೋ ಬ್ರೂತಂ ಶ್ರೀಭಗವದ್ಗಣೌ ।
ಪೀಯೂಷಭಾನೋರಿವ ಮೇ ಮನಃ ಪ್ರೀಣಯತೀತರಾಂ ॥ ೨೧ ॥

ಗಣಾವೂಚತುಃ :—

ಶಿವಶರ್ಮಂಛೃಣು ಕಥಾಮೇತಾಂ ಪಾಪಾಪಹಾರಿಣೀಂ ।
ಸ್ವರ್ಗಮಾರ್ಗವಿನೋದಾಯ ತಾಪತ್ರಯವಿನಾಶಿನೀಂ ॥ ೨೨ ॥

---

೧೭. ನಿಮ್ಮ ಲೋಕವು ಚಂದ್ರಲೋಕಕ್ಕಿಂತಲೂ ಮೇಲಿರುವುದಾಗಿ ನೀವು ಸಮಸ್ತ ನಕ್ಷತ್ರಗಳಿಗೂ ಮಾನ್ಯರಾಗುವಿರಿ.

೧೮–೧೯. ನಕ್ಷತ್ರಗಳನ್ನು ಅರ್ಚಿಸುವವರೂ ನಕ್ಷತ್ರ ವ್ರತವನ್ನಾಚರಿಸುವವರೂ ನಿಮ್ಮ ಲೋಕವನ್ನು ಸೇರಿ, ನಕ್ಷತ್ರಗಳಿಗೆ ಸಮಾನವಾದ ಕಾಂತಿಯುಳ್ಳವರಾಗಿ ಬೆಳಗುತ್ತಾರೆ. ಕಾಶೀಕ್ಷೇತ್ರದಲ್ಲಿ ನೆಲಸಿರುವ ನಕ್ಷತ್ರೇಶ್ವರನನ್ನು ಸಂದರ್ಶಿಸುವ ಮಾನವರಿಗೆ ನಕ್ಷತ್ರಗಳ, ಗ್ರಹಗಳ ಮತ್ತು ರಾಶಿಗಳ ಮೂಲಕವಾಗಿ ಎಂದಿಗೂ ಯಾವ ಬಾಧೆಯೂ ಉಂಟಾಗುವುದಿಲ್ಲ.

೨೦. ಅಗಸ್ತ್ಯನು ಹೇಳುತ್ತಾನೆ:—ವಿಷ್ಣುಗಣಗಳು ಈ ಪ್ರಕಾರವಾಗಿ ನಕ್ಷತ್ರಲೋಕದ ಕಥೆಯನ್ನು ಹೇಳುತ್ತಿರುವಂತೆಯೆ, ವಿಪ್ರನಾದ ಆ ಶಿವಶರ್ಮನು ಅಲ್ಲಿಯೆ ಬುಧಲೋಕವನ್ನು ಕಂಡನು.

೨೧ ಶಿವಶರ್ಮನು ಕೇಳುತ್ತಾನೆ:—ಎಲೈ ಭಗವದ್ಭಕ್ತರೆ, ಇದು ಯಾರ ಲೋಕವೆಂಬುದನ್ನು ಹೇಳಿರಿ. ಈ ಲೋಕವು ಚಂದ್ರಲೋಕದಂತೆಯೆ ನನ್ನ ಮನಸ್ಸನ್ನು ಬಹುವಾಗಿ ಸಂತೋಷಗೊಳಿಸುತ್ತದೆ.

೨೨. ಗಣಗಳು ಹೇಳುತ್ತಾರೆ:—ಎಲೈ ಶಿವಶರ್ಮನೆ, ಪಾಪಪರಿಹಾರಕವೂ

ಯೋಽಸೌ ಪೂರ್ವಂ ಮಹಾಕಾಂತಿರಾವಾಭ್ಯಾಂ ಪರಿವರ್ಣಿತಃ ।
ಸಾಮ್ರಾಜ್ಯಪದಮಾಪನ್ನೋ ದ್ವಿಜರಾಜಸ್ತ್ವಯಾಽಗ್ರತಃ ॥ ೨೩ ॥
ದಕ್ಷಿಣಾ ರಾಜಸೂಯಸ್ಯ ಯೇನ ತ್ರಿಭುವನಂ ಕೃತಾ ।
ತಪಸ್ತ್ವತಾಪ ಯೋಽತ್ಯುಗ್ರಂ ಪದ್ಮಾನಾಂ ದಶತೀರ್ದಶ ॥ ೨೪ ॥
ಅತ್ರಿನೇತ್ರಸಮುದ್ಭೂತಃ ಪೌತ್ರೋ ವೈ ದ್ರುಹಿಣಸ್ಯ ಸಃ ।
ನಾಥಃ ಸರ್ವೌಷಧೀನಾಂ ಚ ಜ್ಯೋತಿಷಾಂ ಪತಿರೇವ ಚ ॥ ೨೫ ॥
ನಿರ್ಮಲಾನಾಂ ಕಲಾನಾಂ ಚ ಶೇವಧಿರ್ಯಸ್ಯ ಗೀಯತೇ ।
ಉದ್ಯನ್ನಪರೋಪತಾಪಂ ಯಃ ಸ್ವಕರೈರ್ಗಲಹಸ್ತಯೇತ್ ॥ ೨೬ ॥
ಮುದಂ ಕುಮುದಿನೀನಾಂ ಯಸ್ತನೋತಿ ಜಗತಾ ಸಹ ।
ದಿಗ್ವಧೂಚಾರುಶೃಂಗಾರದರ್ಶನಾದರ್ಶಮಂಡಲಃ ॥ ೨೭ ॥
ಕಿಮನ್ಯೈರ್ಗುಣಸಂಭಾರೈರತೋಽಪಿ ನ ಸಮಂ ವಿಧೋಃ ।
ನಿಜೋತ್ತಮಾಂಗೇ ಸರ್ವಜ್ಞಃ ಕಲಾಂ ಯಸ್ಯಾಽವತಂಸಯೇತ್ ॥ ೨೮ ॥

---

ತಾಪತ್ರಯವಿನಾಶಕವೂ ಸ್ವರ್ಗಮಾರ್ಗದಲ್ಲಿ ಹೋಗುತ್ತಿರುವ ನಿನಗೆ ಅತ್ಯಂತ ವಿನೋದಕರವೂ ಆದ ಈ ಕಥೆಯನ್ನು ಕೇಳು.

೨೩. ನಿನಗೆ ವರ್ಣಿಸಿ ಹೇಳಿದ ಮಹಾ ಕಾಂತಿಶಾಲಿಯೂ ದ್ವಿಜರಾಜನೂ ಆದ ಚಂದ್ರನು ಮಹಾ ಸಾಮ್ರಾಜ್ಯ ಪದವಿಯನ್ನು ಪಡೆದುದನ್ನು ಈ ಹಿಂದೆಯೆ ನಾವು ಹೇಳಿರುವೆವಷ್ಟೆ.

೨೪–೨೭. ರಾಜಸೂಯಯಾಗವನ್ನು ಮಾಡಿ ಮೂರು ಲೋಕಗಳನ್ನೂ ಬ್ರಹ್ಮರ್ಷಿಗಳಿಗೆ ದಕ್ಷಿಣೆಯಾಗಿ ಕೊಟ್ಟು ನೂರು ಪದ್ಮಗಳ ಕಾಲ ಉಗ್ರವಾದ ತಪಸ್ಸನ್ನು ಮಾಡಿದವನೂ, ಅತ್ರಿಮುನಿಯ ನೇತ್ರದಿಂದ ಉದಿಸಿದವನೂ ಬ್ರಹ್ಮನ ಮೊಮ್ಮಗನೂ ಸಕಲ ಓಷಧಿಗಳಿಗೂ ಜ್ಯೋತಿಗಳಿಗೂ ಒಡೆಯನೂ, ನಿರ್ಮಲವಾದ ಶೋಡಷ ಕಲೆಗಳಿಗೆ ಆಶ್ರಯಭೂತನೂ ಉದಿಸುತ್ತಲೆ ಸಮಸ್ತ ತಾಪಗಳನ್ನೂ ತನ್ನ ಕಿರಣಗಳಿಂದ ತಳ್ಳಿಹಾಕುವವನೂ, ಜಗತ್ತಿಗೂ ಕನ್ನೈದಿಲೆಗಳಿಗೂ ಸಂತೋಷವನ್ನುಂಟುಮಾಡುವವನೂ ಆಗಿ, ದಿಗಂಗನೆಯರು ತಮ್ಮ ಶೃಂಗಾರವನ್ನು ನೋಡಿಕೊಳ್ಳಲು ಗುಂಡುಕನ್ನಡಿಯೆನಿಸಿದವನೆಂದು ಯಾವನು ಕವಿಗಳಿಂದ ಹಾಡಲ್ಪಡುವನೊ ಆ ಚಂದ್ರನ ಆಹ್ಲಾದಕಗುಣಗಳನ್ನು ಎಷ್ಟೆಂದು ವರ್ಣಿಸುವುದು !

೨೮. ಅಯ್ಯಾ ಶಿವಶರ್ಮನೆ, ಈ ಎಲ್ಲ ಗುಣಗಳೂ ಅಂತಿರಲಿ. ಇದಕ್ಕಿಂತಲೂ ಮತ್ತೊಂದು ಮೋಹಕಗುಣವು ಈತನಲ್ಲಿರುವುದು. ಸಾಕ್ಷಾತ್ ಪರಮೇಶ್ವರನೇ ಈತನ ಆಹ್ಲಾದಕತ್ವಗುಣವನ್ನು ಕಂಡು ಈತನನ್ನು ತನ್ನ ಉತ್ತಮಾಂಗದಲ್ಲಿ ಧರಿಸಿರುವನು.

ಬೃಹಸ್ಪತೇಸ್ಸ್ವವ್ಯೈ ಭಾರ್ಯಾಮೈಶ್ವರ್ಯಮದಮೋಹಿತಃ ।
ಪುರೋಹಿತಸ್ಯಾಽಪಿ ಗುರೋರ್ಭ್ರಾತುರಾಂಗಿರಸಸ್ಯ ವೈ ॥ ೨೯ ॥
ಜಹಾರ ತರಸಾ ತಾರಾಂ ರೂಪವಾನ್ರೂಪಶಾಲಿನೀಂ ।
ವಾರ್ಯಮಾಣೋಽಪಿ ಗೀರ್ವಾಣೈರ್ಬಹುದೇವರ್ಷಿಭಿಃ ಪುನಃ ॥ ೩೦ ॥
ನಾಽಯಂ ಕಲಾನಿಧೇರ್ದೋಷೋ ದ್ವಿಜರಾಜಸ್ಯ ತಸ್ಯ ವೈ ।
ಹಿತ್ವಾ ತ್ರಿನೇತ್ರಂ ಕಾಮೇನ ಕಸ್ಯ ನೋ ಖಂಡಿತಂ ಮನಃ ॥ ೩೧ ॥

ಧ್ವಾಂತಮೇತದಭಿತಃ ಪ್ರಸಾರಿ ಯ
ತ್ತಚ್ಛಮಾಯ ವಿಧಿನಾ ವಿನಿರ್ಮಿತಂ ।
ದೀಪಭಾಸ್ಕರಕರಾ ಮಹೌಷಧಂ
ನಾಽಽಧಿಪತ್ಯತಮಸಸ್ತು ಕಿಂಚನ ॥ ೩೨ ॥
ಆಧಿಪತ್ಯಮದಮೋಹಿತಂ ಹಿತಂ
ಶಂಸಿತಂ ಸ್ಪೃಶತಿ ನೋ ಹರೇರ್ಹಿತಂ ।
ದುರ್ಜನಂ ವಿಹಿತತೀರ್ಥಮಜ್ಜನೈಃ
ಶುದ್ಧಧೀರಿವ ವಿರುದ್ಧಮಾನಸಂ ॥ ೩೩ ॥

---

೨೯–೩೦. ಇಂತಹ ಸುಂದರರೂಪನಾದ ಚಂದ್ರನು ಐಶ್ವರ್ಯಮದ ಮೋಹಿತನಾಗಿ, ಪುರೋಹಿತನೇ ಅಲ್ಲದೆ ಗುರುವೂ ಆಂಗಿರಸನೂ ಅತ್ರಿ ಮಹಾ ಮುನಿಯ ಭ್ರಾತೃವೂ ಆದ ಬೃಹಸ್ಪತ್ಯಾಚಾರ್ಯನ ಮಡದಿಯಾದ ತಾರೆಯನ್ನು ಸಮಸ್ತ ಗೀರ್ವಾಣರೂ ದೇವರ್ಷಿಗಳೂ ಬೇಡ ಬೇಡವೆಂದು ತಡೆದರೂ ಲಕ್ಷಿಸದೆ ಅಪಹರಿಸಿಕೊಂಡು ಹೋದನು.

೩೧. ಅಯ್ಯಾ ಶಿವಶರ್ಮನೆ, ಇದು ದ್ವಿಜರಾಜನಾದ ಆ ಕಲಾನಿಧಿಯ ದೋಷವಲ್ಲ. ತ್ರಿಣೇತ್ರನೊಬ್ಬನನ್ನುಳಿದು ಮನ್ಮಥನಿಂದ ಅದಾವನ ಮನಸ್ಸು ತಾನೆ ಚಲಿಸಿಹೋಗುವುದಿಲ್ಲ?

೩೨–೩೩. ಈ ಜಗತ್ತನ್ನೇ ಸುತ್ತಮುತ್ತಿ ಹರಡಿರುವ ಕಗ್ಗತ್ತಲೆಯೆಂಬ ರೋಗವನ್ನು ನಿವಾರಿಸಲು ಬ್ರಹ್ಮದೇವನು ಉಜ್ಜ್ವಲವಾಗಿ ಪ್ರಕಾಶಿಸುವ ಸೂರ್ಯಕಿರಣಗಳೆಂಬ ಮಹಾಔಷಧವನ್ನು ನಿರ್ಮಿಸಿದನು. ಆದರೆ, ಪ್ರಭುತ್ವದ ಪ್ರಭಾವದಿಂದ ಉದಿಸುವ ತಮೋರೋಗಕ್ಕೆ ಆತನು ಯಾವ ಔಷಧವನ್ನೂ ನಿರ್ಮಿಸಲಿಲ್ಲ ಆಧಿಪತ್ಯಮದದಿಂದ ಮೋಹಿತನಾದ ಆ ಚಂದ್ರನಿಗೆ ಸಾಕ್ಷಾತ್ ಮಹೇಂದ್ರನೇ ಹೇಳಿದ ಹಿತವಾಕ್ಯಗಳು ಅವನ ಕಿವಿ ಮುಟ್ಟಲಿಲ್ಲ. ಆ ಮಾತುಗಳು ದುರ್ಜನನನ್ನು ತೀರ್ಥಗಳಲ್ಲಿ ಮುಳುಗಿಸಿ ಶುದ್ಧ ಬುದ್ಧಿಯುಳ್ಳ ವನನ್ನಾಗಿ ಮಾಡಿ ಅವನ ಮನಸ್ಸನ್ನು ಒಂದು ನೆಲೆಗೆ ನಿಲ್ಲುವಂತೆ ಮಾಡಲು ಪ್ರಯತ್ನಿಸಿದಂತೆಯೇ ಸರಿ. ಮಹದೈಶ್ವರ್ಯಸಂಪನ್ನರಾದವರ ನಡತೆಗಿಷ್ಟು

ಧಿಗ್ಧಿಗೇತದಧಿಕರ್ಧಿಚೇಷ್ಟಿತಂ
ಚಂಕ್ರಮೇಕ್ಷಣವಿಲಕ್ಷಿತಂ ಯತಃ ।
ವೀಕ್ಷತೇ ಕ್ಷಣಮುಚಾರುಚಕ್ಷುಷಾ
ಘಾತಿತೇನ ವಿಪದಃ ಪದೇನ ಚ ॥ ೩೪ ॥

ಕಃ ಕಾಮೇನ ನ ನಿರ್ಜಿತಸ್ತ್ರಿಜಗತಾಂ ಪುಷ್ಪಾಯುಧೇನಾಪ್ಯಹೋ
ಕಃ ಕ್ರೋಧಸ್ಯವಶಂ ಗತೋ ನ ನಚ ಕೋ ಲೋಭೇನ ಸಂಮೋಹಿತಃ ।
ಯೋಷಿಲ್ಲೋಚನ ಭಲ್ಲಭಿನ್ನಹೃದಯಃ ಕೋ ನಾಽಽಪ್ತವಾನಾಪದಂ
ಕೋ ರಾಜ್ಯಶ್ರಿಯಮಾಪ್ಯ ನಾಂಧಪದವೀಂ ಯಾತೋಽಪಿ ಸಲ್ಲೋಚನಃ॥

ಅಧಿಪತ್ಯಕಮಲಾಽತಿ ಚಂಚಲಾ
ಪ್ರಾಪ್ಯ ತಾಂ ಚ ಯದಿ ಹಾರ್ಜಿತಂ ಕಿಲ ।
ನಿಶ್ಚಲಂ ಸದಸದುಚ್ಚಕೈರ್ಹಿತಂ
ಕಾರ್ಯಮಾರ್ಯಚರಿತೈಃ ಸದೈವ ತತ್ ॥ ೩೬ ॥

ನ ಯದಾಂಗಿರಸೇ ತಾರಾಂ ಸ ವ್ಯಸರ್ಜಯದುಲ್ಬಣಃ ।
ರುದ್ರೋಽಥ ಪಾರ್ಷ್ಣಿಂ ಜಗ್ರಾಹ ಗೃಹೀತ್ವಾಽಜಗವಂ ಧನುಃ ॥ ೩೭ ॥

---

ಧಿಕ್ಕಾರವಿರಲಿ. ಇವರು ಚಂಚಂಲವಾದ ಮತ್ತು ವಿಪರೀತವಾದ ದೃಷ್ಟಿಯಿಂದ ಅಹಿತವನ್ನೇ ಹಿತವನ್ನಾಗಿ ಭಾವಿಸಿ ಅವಿವೇಕದಿಂದ ಒಂದು ಕ್ಷಣಮಾತ್ರದಲ್ಲಿಯೆ ತಮ್ಮೊಂದು ಪದವಿಯಿಂದ ಅನೇಕ ವಿಪತ್ತುಗಳಿಗೆ ಆಸರೆ ಕೊಡುತ್ತಾರೆ.

೩೫. ಅಯ್ಯಾ ಶಿವಶರ್ಮನೆ, ಆಹ! ಪುಷ್ಪಾಯುಧನಾದ ಮನ್ಮಥನಿಂದ ಜಿತರಾಗದಿರುವವರು ಈ ಮೂರು ಲೋಕಗಳಲ್ಲಿ ಯಾರುತಾನೆ ಇರುವರು? ಕ್ರೋಧಕ್ಕೆ ತುತ್ತಾಗದವರೂ ಲೋಭಕ್ಕೆ ಒಳಗಾಗದವರೂ ಹೆಣ್ಣಿನ ಕಣ್ ನೋಟವೆಂಬ ಭಲ್ಲಾಯುಧದಿಂದ ಭಿನ್ನವಾದ ಹೃದಯವುಳ್ಳವರೂ ಒಳ್ಳೆಯ ಧರ್ಮದೃಷ್ಟಿಯುಳ್ಳವರಾದರೂ ಸಂಪತ್ಸಮೃದ್ಧವಾದ ರಾಜ್ಯಪದವಿಯನ್ನು ಪಡೆದು ಆಪತ್ತಿಗೆ ಒಳಗಾಗದವರೂ ಯಾರುತಾನೆ ಇರುವರು?

೩೬. ರಾಜ್ಯಲಕ್ಷ್ಮಿಯು ಅತಿಚಂಚಲಳು. ಆಕೆಯನ್ನು ಪಡೆದೂ ಈ ಲೋಕದಲ್ಲಿ ಆರ್ಜಿಸಿದ ಪುಣ್ಯಪಾಪಗಳು ಮಾತ್ರ ಸ್ಥಿರಗಳಾಗಿ ಸುಖದುಃಖ ಗಳನ್ನು ದೊರಕಿಸುತ್ತವೆ. ಆದುದರಿಂದ ಸನಾತನ ಸತ್ಪುರುಷರ ನಡೆವಳಿಕೆ ಯನ್ನನುಸರಿಸಿ ಪದವೀಧರರು ದೊಡ್ಡಮಾರ್ಗದಲ್ಲಿ ನಡೆದು ಸತ್ಕರ್ಮಗಳನ್ನು ಮಾತ್ರವೇ ಅನುಷ್ಠಿಸುತ್ತಿರಬೇಕು.

೩೭. ಎಲೈ ದ್ವಿಜನೆ, ಹೀಗೆ ಚಂದ್ರನು ತಾರಾದೇವಿಯನ್ನು ಅಪಹರಿಸಿ ಮಿತಿಮೀರಿ ದುರ್ಮಾರ್ಗದಲ್ಲಿ ನಡೆದೂ ಅವಳನ್ನು ಮತ್ತೆ ಬೃಹಸ್ಪತಿಗೆ

ತೇನ ಬ್ರಹ್ಮಶಿರೋ ನಾಮ ಪರಮಾಸ್ತ್ರಂ ಮಹಾತ್ಮನಾಂ ।
ಉತ್ಸೃಷ್ಟಂ ದೇವದೇವಾಯ ತೇನ ತನ್ನಾಶಿತಂ ತತಃ ॥ ೩೮ ॥
ತಯೋಸ್ತದ್ಯುದ್ಧಮಭವದ್ಘೋರಂ ವೈ ತಾರಕಾಮಯಂ ।
ತತಸ್ತ್ವಕಾಂಡಬ್ರಹ್ಮಾಂಡಭಂಗಾದ್ಭೀತೋಽಭವದ್ವಿಧಿಃ ॥ ೩೯ ॥
ನಿವಾರ್ಯ ರುದ್ರಂ ಸಮರಾತ್ಸಂವರ್ತಾನಲವರ್ಚಸಂ ।
ದದಾವಾಂಗಿರಸೇ ತಾರಾಂ ಸ್ವಯಮೇವ ಪಿತಾಮಹಃ ॥ ೪೦ ॥
ಅಥಾಂತರ್ಗರ್ಭಮಾಲೋಕ್ಯ ತಾರಾಂ ಪ್ರಾಹ ಬೃಹಸ್ಪತಿಃ ।
ಮದೀಯಾಯಾಂ ನ ತೇ ಯೋನೌ ಗರ್ಭೋ ಧಾರ್ಯಃ ಕಥಂಚನ ॥ ೪೧ ॥
ಇಷೀಕಾಸ್ತಂಬಮಾಸಾದ್ಯ ಗರ್ಭಂ ಸಾ ಚೋತ್ಸಸರ್ಜ ಹ ।
ಜಾತಮಾತ್ರಃ ಸ ಭಗವಾನ್ ದೇವಾನಾಮಾಕ್ಷಿಪದ್ವಪುಃ ॥ ೪೨ ॥
ತತಃ ಸಂಶಯಮಾಪನ್ನಾಸ್ತಾರಾಮೂಚುಃ ಸುರೋತ್ತಮಾಃ ।
ಸತ್ಯಂ ಬ್ರೂಹಿ ಸುತಃ ಕಸ್ಯ ಸೋಮಸ್ಯಾಽಥ ಬೃಹಸ್ಪತೇಃ ॥ ೪೩ ॥

---

ಹಿಂತಿರುಗಿಸದಿರಲು, ಮಹಾರುದ್ರನು ಪಾಶುಪತಾಸ್ತ್ರವನ್ನು ಹಿಡಿದು ಅವನನು ಹಿಂಬಾಲಿಸಿದನು.

೩೮. ಆಗ ಮಹಾಧೀರನಾದ ಆ ಚಂದ್ರನು ಬ್ರಹ್ಮಶಿರವೆಂಬ ಪರಮಾಸ್ತ್ರವನ್ನು ಆ ರುದ್ರನ ಮೇಲೆ ಪ್ರಯೋಗಿಸಿದನು. ಆತನು ಒಡನೆಯೆ ಅದನ್ನು ನಾಶಗೊಳಿಸಿದನು.

೩೯. ತರುವಾಯ ಬೃಹಸ್ಪತಿಯ ಮಡದಿಯಾದ ಆ ತಾರಾದೇವಿಗೋಸ್ಕರವಾಗಿ ರುದ್ರನಿಗೂ, ಚಂದ್ರನಿಗೂ ಬಹು ಭಯಂಕರವಾದ ಕಾಳಗವು ನಡೆಯಿತು. ಆ ಸಮಯದಲ್ಲಿ ಇದ್ದಕ್ಕಿದ್ದಂತೆಯೆ ಬ್ರಹ್ಮಾಂಡವೆಲ್ಲವೂ ಎಲ್ಲಿ ಭೇದಿಸಿಹೋಗುತ್ತದೆಯೊ ಎಂದು ಸಾಕ್ಷಾತ್ ಬ್ರಹ್ಮದೇವನು ಭೀತಿಗೊಂಡನು.

೪೦. ಆ ಪಿತಾಮಹನು ಪ್ರಳಯಾಗ್ನಿಗೆಣೆಯಾದ ಮಹಾ ರೌದ್ರತೇಜಸ್ಸುಳ್ಳ ಆ ರುದ್ರನನ್ನು ಕಾಳಗದಿಂದ ಹಿಂತಿರುಗಿಸಿ, ತಾನೇ ಸಾಕ್ಷಾತ್ತಾಗಿ ಹೋಗಿ ತಾರಾದೇವಿಯನ್ನು ಚಂದ್ರನಿಂದ ಬಿಡಿಸಿಕೊಂಡು ಬಂದು ಬೃಹಸ್ಪತಿಗೊಪ್ಪಿಸಿದನು.

೪೧. ಆ ಬೃಹಸ್ಪತಿಯಾದರೊ ಆ ಹೊತ್ತಿಗೆ ಗರ್ಭವನ್ನು ಧರಿಸಿದ್ದ ಆ ತಾರೆಯನ್ನು ಕಂಡು, "ಎಲೌ, ನೀನು ನನ್ನ ಈ ಕ್ಷೇತ್ರದಲ್ಲಿ ಬೇರೊಬ್ಬನ ಗರ್ಭವನ್ನು ಧರಿಸಕೂಡದು" ಎಂದು ಹೇಳಿದನು.

೪೨. ಈ ಮಾತನ್ನು ಕೇಳಿ ಅವಳು ಕೂರ್ಚೆಯಿಂದ ಆ ಗರ್ಭವನ್ನು ಉತ್ಸರ್ಜನೆಮಾಡಿದಳು. ಒಡನೆಯೆ ಒಬ್ಬ ಕುಮಾರನುದಿಸಿದನು. ಅವನು ಹುಟ್ಟಿದೊಡನೆಯೆ ದೇವಶರೀರಿಯಾಗಿ ನಿಂತನು.

೪೩. ಅವನನ್ನು ಕಂಡು ದೇವೋತ್ತಮರೆಲ್ಲರೂ ಸಂಶಯಗ್ರಸ್ತರಾಗಿ

ಪೃಚ್ಛಮಾನಾ ಯದಾ ದೇವೈರ್ನಾಽಽಹ ತಾರಾಽತಿಸತ್ರಪಾ ।
ತದಾ ಸಾ ಶಪ್ತುಮಾರಬ್ಧಾ ಕುಮಾರೇಣಾಽತಿತೇಜಸಾ ॥ ೪೪ ॥
ತಂ ನಿವಾರ್ಯ ತದಾ ಬ್ರಹ್ಮಾ ತಾರಾಂ ಪಪ್ರಚ್ಛ ಸಂಶಯಂ ।
ಪ್ರೋವಾಚ ಪ್ರಾಂಜಲಿಃ ಸಾ ತಂ ಸೋಮಸ್ಯೇತಿ ಪಿತಾಮಹಂ ॥ ೪೫ ॥
ತದಾ ಸ ಮೂರ್ಧ್ನ್ಯುಪಾಘ್ರಾಯ ತಾರಾಗರ್ಭಂ ಪ್ರಜಾಪತಿಃ ।
ಬುಧ ಇತ್ಯಕರೋನ್ನಾಮ ತಸ್ಯ ಬಾಲಸ್ಯ ಧೀಮತಃ ॥ ೪೬ ॥
ತತಶ್ಚ ಸರ್ವದೇವೇಭ್ಯಸ್ತೇಜೋರೂಪಬಲಾಧಿಕಃ ।
ಬುಧಃ ಸೋಮಂ ಸಮಾಪೃಚ್ಛ್ಯ ತಪಸೇ ಕೃತನಿಶ್ಚಯಃ ॥ ೪೭ ॥
ಜಗಾಮ ಕಾಶೀಂ ನಿರ್ವಾಣರಾಶಿಂ ವಿಶ್ವೇಶಪಾಲಿತಾಂ ।
ತತ್ರ ಲಿಂಗಂ ಪ್ರತಿಷ್ಠಾಪ್ಯ ಸ ಸ್ವನಾಮ್ನಾ ಬುಧೇಶ್ವರಂ ॥ ೪೮ ॥
ತಪಶ್ಚಚಾರ ಚಾಽತ್ಯುಗ್ರಮುಗ್ರಂ ಸಂಶೀಲಯನ್ ಹೃದಿ ।
ವರ್ಷಾಣಾಮಯುತಂ ಬಾಲೋ ಬಾಲೇಂದುತಿಲಕಂ ಶಿವಂ ॥ ೪೯ ॥

---

ತಾರೆಯನ್ನು ಕುರಿತು, "ಎಲೌ ತಾರೆ, ಸತ್ಯವನ್ನು ಹೇಳು. ಇವನು ಚಂದ್ರನ ಮಗನೆ, ಬೃಹಸ್ಪತಿಯ ಮಗನೆ?" ಎಂದು ಕೇಳಿದರು.

೪೪. ಅವರ ಈ ಪ್ರಶ್ನೆಯನ್ನು ಕೇಳಿ ತಾರೆಯು ನಾಚಿ ಯಾವ ಉತ್ತರವನ್ನೂ ಹೇಳಲಿಲ್ಲ. ಆಗ ಆ ಕುಮಾರನು ಅಪರಿಮಿತವಾದ ತನ್ನ ತೇಜಸ್ಸಿನ ಪ್ರಭಾವದಿಂದ ಅವಳನ್ನು ಶಪಿಸತೊಡಗಿದನು.

೪೫. ಅದನ್ನು ಕಂಡು ಬ್ರಹ್ಮದೇವನು ಅವನನ್ನು ತಡೆದು, ತಾನೇ ಆ ತಾರೆಯನ್ನು ಆ ಸಂಶಯದ ವಿಷಯವಾಗಿ ಪ್ರಶ್ನಿಸಿದನು. ಅವಳು ಆಗ ಕೈ ಜೋಡಿಸಿಕೊಂಡು, "ಕುಮಾರನು ಚಂದ್ರನ ಮಗನು" ಎಂದು ಹೇಳಿದಳು.

೪೬. ಇದನ್ನು ಕೇಳಿ ಬ್ರಹ್ಮದೇವನು ಆ ಚಂದ್ರನ ಮಗನ ಶಿರಸನ್ನಾಘ್ರಾಣಿಸಿ ಮಹಾಬುದ್ಧಿಶಾಲಿಯಾದ ಆ ಬಾಲಕನಿಗೆ ಬುಧನೆಂದು ನಾಮಕರಣ ಮಾಡಿದನು.

೪೭–೫೦. ತರುವಾಯ ಬುಧನು ತೇಜಸ್ಸಿನಲ್ಲಿಯೂ ರೂಪದಲ್ಲಿಯೂ ಸಮಸ್ತದೇವತೆಗಳನ್ನೂ ಮೀರಿಸಿದವನಾಗಿ, ತಂದೆಯಾದ ಸೋಮನ ಅಪ್ಪಣೆಯನ್ನು ಪಡೆದು ತಪಸ್ಸುಮಾಡಲು ನಿಶ್ಚಯಿಸಿ, ಮುಕ್ತಿಕ್ಷೇತ್ರವೆಂದು ಪ್ರಸಿದ್ಧವಾಗಿ ವಿಶ್ವೇಶ್ವರನೇ ಒಡೆಯನಾಗಿ ಪರಿಪಾಲಿಸುತ್ತಿರುವ ಕಾಶೀಕ್ಷೇತ್ರಕ್ಕೆ ಬಂದು ಬುಧೇಶ್ವರನೆಂಬ ಹೆಸರಿನಿಂದ ಶಿವಲಿಂಗವೊಂದನ್ನು ಪ್ರತಿಷ್ಠಿಸಿ, ನಿಜಹೃದಯದಲ್ಲಿ ಆ ಪರಮೇಶ್ವರನನ್ನು ನೆಲೆಗೊಳಿಸಿಕೊಂಡು ನಿರೀಕ್ಷಿಸುತ್ತ, ಹತ್ತು ಸಾವಿರ ವರ್ಷಗಳಕಾಲ ಅತ್ಯುಗ್ರವಾದ ತಪಸ್ಸನ್ನು ಆಚರಿಸಿದನು. ಬಾಲಕನಾದ

ತತೋ ವಿಶ್ವಪತಿಃ ಶ್ರೀಮಾನ್ ವಿಶ್ವೇಶೋ ವಿಶ್ವಭಾವನಃ ।
ಬುಧೇಶ್ವರಾನ್ಮಹಾಲಿಂಗಾದಾವಿರಾಸೀನ್ಮಹೋದಯಃ ॥ ೫೦ ॥
ಉವಾಚ ಚ ಪ್ರಸನ್ನಾತ್ಮಾ ಜ್ಯೋತೀರೂಪೋ ಮಹೇಶ್ವರಃ ।
ವರಂ ಬ್ರೂಹಿ ಮಹಾಬುದ್ಧೇ ಬುಧಾನ್ಯವಿಬುಧೋತ್ತಮಃ ॥ ೫೧ ॥
ತವಾಽನೇನಾತಿತಪಸಾ ಲಿಂಗಸಂಶೀಲನೇನ ಚ ।
ಪ್ರಸನ್ನೋಽಸ್ಮಿ ಮಹಾಸೌಮ್ಯ ನಾಽದೇಯಂ ತ್ವಯಿ ವಿದ್ಯತೇ ॥ ೫೨ ॥
ಇತಿ ಶ್ರುತ್ವಾ ವಚಃ ಸೋಽಥ ಮೇಘಗಂಭೀರನಿಃಸ್ವನಂ ।
ಅವಗ್ರಹಪರಿಮ್ಲಾನಸಸ್ಯಸಂಜೀವನೋಪಮಂ ॥ ೫೩ ॥
ಉನ್ಮೀಲ್ಯ ಲೋಚನೇ ಯಾವತ್ಪುರಃ ಪಶ್ಯತಿ ಬಾಲಕಃ ।
ತಾವಲ್ಲಿಂಗೇ ದದರ್ಶಾಽಥ ತ್ರ್ಯಂಬಕಂ ಶಶಿಶೇಖರಂ ॥ ೫೪ ॥

ಬುಧ ಉವಾಚ :—

ನಮಃ ಪೂತಾತ್ಮನೇ ತುಭ್ಯಂ ಜ್ಯೋತೀರೂಪ ನಮೋಽಸ್ತು ತೇ ।
ವಿಶ್ವರೂಪ ನಮಸ್ತುಭ್ಯಂ ರೂಪಾತೀತಾಯ ತೇ ನಮಃ ॥ ೫೫ ॥

---

ಆ ಬುಧನು ಬಾಲೇಂದುಶೇಖರನಾದ ಮಹೇಶ್ವರನನ್ನು ಕುರಿತು ತಪಸ್ಸನ್ನೆಸಗಲು ಷಡ್ಗುಣೈಶ್ವರ್ಯಸಂಪನ್ನನೂ ವಿಶ್ವಪತಿಯೂ ವಿಶ್ವಾಂತರ್ಯಾಮಿಯೂ ಆದ ಆ ಪ್ರಭುವು ಅದೇ ಬುಧೇಶ್ವರಲಿಂಗದಿಂದಲೇ ಮಹೋದಯನಾಗಿ ಆವಿರ್ಭವಿಸಿದನು.

೫೧–೫೨. ಇಂತು ಆ ಸ್ವಾಮಿಯು ಆವಿರ್ಭವಿಸಿದೊಡನೆಯೆ ಪ್ರಸನ್ನಾಂತರಂಗನಾಗಿ, ಆ ಬಾಲಕನಿಗೆ ಕೇವಲ ಜ್ಯೋತಿಸ್ಸ್ವರೂಪದಿಂದ ಕಾಣುತ್ತ, "ಅಯ್ಯಾ ಮಹಾ ಬುದ್ಧಿಶಾಲಿಯೂ ಇತರ ದೇವತೆಗಳಿಗಿಂತಲೂ ಉತ್ತಮನೂ ಆದ ಬುಧನೆ, ವರವನ್ನು ಬೇಡು. ಅಯ್ಯಾ ಸೌಮ್ಯನೆ, ನಿನ್ನ ನಿರತಿಶಯವಾದ ತಪಸ್ಸಿನಿಂದಲೂ ಹೃದಯದಲ್ಲಿಯೆ ನೀನೆಸಗಿದ ಲಿಂಗಸ್ವರೂಪದ ಪರಿಭಾವನೆಯಿಂದಲೂ ಸುಪ್ರಸನ್ನನಾಗಿರುವ ನಾನು ಭಕ್ತಾಗ್ರಗಣ್ಯನಾದ ನಿನಗೆ ಕೊಡಬಾರದುದು ಏನೂ ಇರುವುದಿಲ್ಲ" ಎಂದು ಹೇಳಿದನು.

೫೩–೫೪. ಈ ಪ್ರಕಾರ ಮೇಘಗಂಭೀರಧ್ವನಿಯುಳ್ಳದ್ದಾಗಿ, ನೀರಿಲ್ಲದೆ ಸೊರಗಿಹೋದ ಎಳಸಸಿಗೆ ಸಂಜೀವನವಾದ ಅಮೃತಧಾರೆಯನ್ನು ಹೋಲಿರುವ ಆ ಪರಮೇಶ್ವರನ ನುಡಿಗಳನ್ನು ಕೇಳಿ ಬಾಲಕನಾದ ಆ ಬುಧನು ಕಣ್ಣುಗಳನ್ನು ತೆರೆದು ಮುಂಗಡೆ ನೋಡುವಷ್ಟರಲ್ಲಿಯೆ, ತಾನು ಪ್ರತಿಷ್ಠಿಸಿದ್ದ ಆ ಶಿವಲಿಂಗದಲ್ಲಿ ಶಶಿಶೇಖರನಾದ ಆ ತ್ರ್ಯಂಬಕನನ್ನು ಸಾಕ್ಷಾತ್ಕರಿಸಿಕೊಂಡನು.

೫೫. ಬುಧನು ಹೇಳುತ್ತಾನೆ.—"ವಾಯುರೂಪದಿಂದ ಜಗತ್ತಿನ ಪ್ರಾಣಸ್ವರೂಪನಾಗಿ ಬೆಳಗಿ ಪೂತಾತ್ಮನೆನಿಸಿ, ಅಖಂಡಜ್ಯೋತಿಸ್ಸ್ವರೂಪನಾಗಿ ಬೆಳಗ-

**ನಮಃ ಸರ್ವಾರ್ತಿನಾಶಾಯ ಪ್ರಣತಾನಾಂ ಶಿವಾತ್ಮನೇ ।**
**ಸರ್ವಜ್ಞಾಯ ನಮಸ್ತುಭ್ಯಂ ಸರ್ವಕರ್ತ್ರೇ ನಮೋಽಸ್ತುತೇ ॥ ೫೬ ॥**
**ಕೃಪಾಲವೇ ನಮಸ್ತುಭ್ಯಂ ಭಕ್ತಿಗಮ್ಯಾಯ ತೇ ನಮಃ ।**
**ಫಲದಾತ್ರೇ ಚ ತಪಸಾಂ ತಪೋರೂಪಾಯ ತೇ ನಮಃ ॥ ೫೭ ॥**
**ಶಂಭೋ ಶಿವ ಶಿವಾಕಾಂತ ಶಾಂತ ಶ್ರೀಕಂಠಶೂಲಭೃತ್ ।**
**ಶಶಿಶೇಖರ ಶರ್ವೇಶ ಶಂಕರೇಶ್ವರ ಧೂರ್ಜಟೇ ॥ ೫೮ ॥**
**ಪಿನಾಕಪಾಣೇ ಗಿರಿಶ ಶಿತಿಕಂಠ ಸದಾಶಿವ ।**
**ಮಹಾದೇವ ನಮಸ್ತುಭ್ಯಂ ದೇವದೇವ ನಮೋಽಸ್ತು ತೇ ॥ ೫೯ ॥**
**ಸ್ತುತಿಂ ಕರ್ತುಂ ನ ಜಾನಾಮಿ ಸ್ತುತಿಪ್ರಿಯ ಮಹೇಶ್ವರ ।**
**ತವ ಪಾದಾಂಬುಜದ್ವಂದ್ವೇ ನಿರ್ದ್ವಂದ್ವಾ ಭಕ್ತಿರಸ್ತು ಮೇ ॥ ೬೦ ॥**

---

ತ್ತಿರುವ ಓ ಪರಮೇಶ್ವರ, ನಿನಗಿದೊ ನಮಸ್ಕಾರವು. ಬ್ರಹ್ಮಾಂಡಸ್ವರೂಪನಾಗಿ ಎಲ್ಲ ರೂಪಗಳನ್ನೂ ಮೀರಿದ ಅನಿರ್ವಚನೀಯ ಸ್ವರೂಪವನ್ನೊಳಗೊಂಡ ಓ ಪ್ರಭುವೆ, ನಿನಗೆ ನಮಸ್ಕಾರವು.

೫೬. ಆಧ್ಯಾತ್ಮಿಕ ಅಧಿದೈವಿಕ ಅಧಿಭೌತಿಕಗಳೆಂಬ ತಾಪತ್ರಯಗಳನ್ನು ಸಮೂಲವಾಗಿ ನಾಶಗೊಳಿಸಿ, ಪ್ರಣತರಾದ ಭಕ್ತರ ಯೋಗಕ್ಷೇಮವನ್ನು ನೋಡಿಕೊಳ್ಳುವವನೂ ಪರಮಮಂಗಳಸ್ವರೂಪನೂ ಆದ ಓ ಜಗದೀಶ್ವರ, ನಿನಗೆ ನಮಸ್ಕಾರವು. ಸಮಸ್ತವನ್ನೂ ಅರಿತವನಾಗಿ, ಸಮಸ್ತವನ್ನೂ ಬೆಳಗಿಸುವವನಾಗಿ, ವಿಶ್ವಸಾಕ್ಷಿಯೆನಿಸಿ, ಬ್ರಹ್ಮಾದಿ ಸ್ತಂಭಪರ್ಯಂತವಾದ ಅಖಿಲ ಜಗತ್ತನ್ನು ನಿರ್ಮಿಸಿದವನಾಗಿ, ವಿರಾಜಿಸುತ್ತಿರುವ ಓ ಸ್ವಾಮಿಯೆ, ನಿನಗೆ ನಮಸ್ಕಾರವು.

೫೭. ಅಪಾರ ಕರುಣಾಮೂರ್ತಿಯೂ ಭಕ್ತಿಯೊಂದರಿಂದಲೆ ದೊರಕುವಾತನೂ ಸಮಸ್ತ ಕರ್ಮಗಳಿಗೂ ಫಲವನ್ನು ನೀಡುವ ಪ್ರಭುವೂ ತಪಸ್ವಿಗಳ ತಪಸ್ಸಿಗೂ ತಪೋರೂಪನೆನಿಸಿದವನೂ ಆದ ನಿನಗೆ ನಮೋನಮಃ.

೫೮. ಹೇ ಶಂಭೋ, ಶಿವ, ಪಾರ್ವತೀರಮಣ, ಶಾಂತಸ್ವರೂಪ, ಶ್ರೀಕಂಠ, ತ್ರಿಶೂಲಧಾರಿ, ಚಂದ್ರಶೇಖರ, ಸರ್ವೇಶ್ವರ, ಶಂಕರ, ನನ್ನೊಡೆಯ, ಧೂರ್ಜಟಿ ನಿನಗೆ ನಮಸ್ಕಾರವು.

೫೯. ಓ ಪಿನಾಕಪಾಣಿಯೆ, ಕೈಲಾಸಶೈಲವಿಹಾರಿಯೂ, ನೀಲಗ್ರೀವನೂ ಸರ್ವಕಾಲಗಳಲ್ಲಿಯೂ ಭಕ್ತಮಹಾಜನರಿಗೆ ಮಂಗಳವನ್ನುಂಟುಮಾಡುವವನೂ, ಸುಖಸ್ವರೂಪಿಯೂ, ಮಹಾ ದೇವನೂ ಆದ ಓ ದೇವದೇವ! ನಿನಗೆ ನಮಸ್ಕಾರವಿರಲಿ.

೬೦. ಎಲೈ ಸ್ತೋತ್ರಪ್ರಿಯನಾದ ಮಹೇಶ್ವರನೆ, ನಿನ್ನನ್ನು ಹೇಗೆ ಸ್ತೋತ್ರ

ಅಯಮೇವ ವರೋ ನಾಥ ಪ್ರಸನ್ನೋಽಸಿ ಯದೀಶ್ವರ ।
ನಾಽನ್ಯಂ ವರಂ ವೃಣೇ ತ್ವತ್ತಃ ಕರುಣಾಽಮೃತವಾರಿಧೇ ॥ ೬೧ ॥
ತತಃ ಪ್ರಾಹ ಮಹೇಶಾನಸ್ತತ್‌ಸ್ತುತ್ಯಾ ಪರಿತೋಷಿತಃ ।
ರೌಹಿಣೇಯ ಮಹಾಭಾಗ ಸೌಮ್ಯ ಸೌಮ್ಯವಚೋನಿಧೇ ॥ ೬೨ ॥
ನಕ್ಷತ್ರಲೋಕಾದುಪರಿ ತವಲೋಕೋ ಭವಿಷ್ಯತಿ ।
ಮಧ್ಯೇ ಸರ್ವಗ್ರಹಾಣಾಂ ಚ ಸಪರ್ಯಾಂ ಲಪ್ಸ್ಯಸೇ ಪರಾಂ ॥ ೬೩ ॥
ತ್ವಯೇದಂ ಸ್ಥಾಪಿತಂ ಲಿಂಗಂ ಸರ್ವೇಷಾಂ ಬುದ್ಧಿದಾಯಕಂ ।
ದುರ್ಬುದ್ಧಿಹರಣಂ ಸೌಮ್ಯ ತ್ವಲ್ಲೋಕೇ ವಸತಿ ಧ್ರುವಂ ॥ ೬೪ ॥
ಇತ್ಯುಕ್ತ್ವಾ ಭಗವಾಂಛಂಭುಸ್ತತ್ರೈವಾಽಂತರಧೀಯತ ।
ಬುಧಃ ಸ್ವಲೋಕಮಗಮದ್ದೇವದೇವಪ್ರಸಾದತಃ ॥ ೬೫ ॥

ಮಾಡಬೇಕೆಂಬುದನ್ನೇ ಅರಿಯಲಾರದವನಾಗಿದ್ದೇನೆ ನಿನ್ನನ್ನು ನಾನು ಬೇಡುವುದಿಷ್ಟೆ. ಪ್ರಭುವೆ, ನಿನ್ನ ಪಾದಕಮಲಗಳಲ್ಲಿ ನಿಶ್ಚಲವಾದ ಭಕ್ತಿಯೊಂದೇ ನನಗೆ ಶಾಶ್ವತವಾಗಿರಲಿ

೬೧ ಓ ಸ್ವಾಮಿ, ಪರಮೇಶ್ವರನಾದ ನೀನು ನನ್ನ ವಿಷಯದಲ್ಲಿ ಪ್ರಸನ್ನನಾಗಿರುವುದೇ ದಿಟವಾದರ. ಈ ಒಂದು ವರವೇ ನನಗೆ ಸಾಕು. ಎಲೈ ಕರುಣಾಸಮುದ್ರನೆ, ನಾನು ಬೇರೊಂದು ವರವನ್ನು ಬೇಡುವುದಿಲ್ಲ.''

೬೨–೬೩. ಎಲೈ ಶಿವಶರ್ಮನೆ, ಆ ತರುವಾಯ ಮಹೇಶ್ವರನು ಈ ಪ್ರಕಾರವಾಗಿ ಸ್ತುತಿಸಿದ ಆ ಬುಧನ ವಿಷಯದಲ್ಲಿ ಸಂತುಷ್ಟನಾಗಿ, ''ಎಲೈ ಮಹಾಭಾಗ್ಯಶಾಲಿಯೂ, ರೋಹಿಣಿಯ ಮಗನೂ ಆದ ಸೌಮ್ಯನೆ, ನಕ್ಷತ್ರಲೋಕದ ಮೇಲ್ಭಾಗದಲ್ಲಿ ನಿನ್ನ ಲೋಕವು ಪ್ರತಿಷ್ಠಿತವಾಗುತ್ತದೆ. ನೀನು ಸಮಸ್ತ ಗ್ರಹಗಳ ಮಧ್ಯದಲ್ಲಿರುವವನಾಗಿ, ಉತ್ತಮೋತ್ತಮವಾದ ಸತ್ಕಾರವನ್ನು ಪಡೆಯುವೆ.

೬೪. ಎಲೈ ಚಂದ್ರನ ಮಗನಾದ ಬುಧನೆ, ನೀನು ಸ್ಥಾಪಿಸಿರುವ ಈ ಬುಧೇಶ್ವರಲಿಂಗವು ಅರ್ಚಿಸಿದ ಸಮಸ್ತ ಮಾನವರಿಗೂ ದುರ್ಬುದ್ಧಿಯನ್ನು ಕಳೆದು ಸದ್ಬುದ್ಧಿಯನ್ನು ಅನುಗ್ರಹಿಸಿ, ನಿನ್ನ ಲೋಕದ ವಾಸವನ್ನು ಉಂಟು ಮಾಡಿಕೊಡುವುದಾಗಲಿ.

೬೫. ಈ ಪ್ರಕಾರವಾಗಿ ಭಗವಂತನಾದ ಶಂಭುವು ಆ ಬುಧನಿಗೆ ವರಗಳನ್ನನುಗ್ರಹಿಸಿ ಅಲ್ಲಿಯೆ ಅಂತರ್ಧಾನವಾದನು. ಬುಧನು ಸಹ ಆ ಪರಮೇಶ್ವರನ ಪ್ರಸಾದವನ್ನು ಕೈಕೊಂಡು ಸ್ವಲೋಕವನ್ನು ಸೇರಿದನು.

ಗಣಾವೂಚತುಃ:—

ಕಾಶ್ಯಾಂ ಬುಧೇಶ್ವರಸಮರ್ಚನಲಬ್ಧಬುದ್ಧಿಃ
ಸಂಸಾರಸಿಂಧುಮಧಿಗಮ್ಯ ನರೋಽಹ್ಯಗಾಧಂ ।
ಮಜ್ಜೇನ್ನ ಸಜ್ಜನವಿಲೋಚನಚಂದ್ರಕಾಂತಿಃ
ಕಾಂತಾನನಸ್ತ್ವಧಿವಸೇಚ್ಚ ಬುಧೇಽತ್ರ ಲೋಕೇ ॥ ೬೬ ॥
ಚಂದ್ರೇಶ್ವರಾತ್ಪೂರ್ವಭಾಗೇ ದೃಷ್ಟ್ವಾ ಲಿಂಗಂ ಬುಧೇಶ್ವರಂ ।
ನ ಬುದ್ಧ್ಯಾ ಹೀಯತೇ ಜಂತುರಂತಕಾಲೇಽಪಿ ಜಾತುಚಿತ್ ॥ ೬೭ ॥
ಗಣೌ ಯಾವತ್ಕಥಾಮಿತ್ಥಂ ಚಕ್ರಾತೇ ಬುಧಲೋಕಗಾಂ ।
ತಾವದ್ವಿಮಾನಂ ಸಂಪ್ರಾಪ್ತಂ ಶುಕ್ರಲೋಕಮನುತ್ತಮಂ ॥ ೬೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ನಕ್ಷತ್ರಬುಧಲೋಕಯೋರ್ವರ್ಣನಂ" ನಾಮ ಪಂಚದಶೋಽಧ್ಯಾಯಃ

---

೬೬. ಗಣಗಳು ಹೇಳುತ್ತಾರೆ.—ಅಯ್ಯಾ ಶಿವಶರ್ಮನೆ, ಮಾನವನು ಕಾಶೀಕ್ಷೇತ್ರದಲ್ಲಿ ನೆಲಸಿರುವ ಬುಧೇಶ್ವರಲಿಂಗವನ್ನು ಪೂಜಿಸಿದುದರ ಫಲವಾಗಿ ಅದ್ವೈತಜ್ಞಾನವನ್ನು ಪಡೆದು, ಅಗಾಧವಾದ ಈ ಸಂಸಾರಮಹಾಸಾಗರವನ್ನು ದಾಟಿ, ಸತ್ಪುರುಷರ ದೃಷ್ಟಿಗೆ ಚಂದ್ರನಂತೆಯೆ ಕಾಂತಿಯುಳ್ಳವನಾಗಿ ಕಾಣುತ್ತ, ಕಮನೀಯವಾದ ಮುಖಸ್ವರೂಪವುಳ್ಳವನಾಗಿ ಈ ಬುಧಲೋಕದಲ್ಲಿ ವಾಸ ಮಾಡುತ್ತಾನೆ.

೬೭. ಚಂದ್ರೇಶ್ವರನ ಪೂರ್ವಭಾಗದಲ್ಲಿರುವ ಬುಧೇಶ್ವರನನ್ನು ಸಂದರ್ಶಿಸಿದ ಜೀವಿಯು ಮರಣಕಾಲದಲ್ಲಿಯೂ ಅಜ್ಞಾನವನ್ನು ಪಡೆಯುವುದಿಲ್ಲ.

೬೮. ಹೀಗೆ ಆ ವಿಷ್ಣುಭಕ್ತರೀರ್ವರೂ ಶಿವಶರ್ಮನಿಗೆ ಬುಧಲೋಕದ ಕಥೆಯನ್ನು ಹೇಳುತ್ತಿರುವಂತೆಯೆ ಆ ದೇವವಿಮಾನವು ಶುಕ್ರಲೋಕದ ಬಳಿಗೈದಿತು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ನಕ್ಷತ್ರಲೋಕ ಬುಧಲೋಕಗಳವರ್ಣನ"ವೆಂಬ ಹದಿನೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಷೋಡಶೋಽಧ್ಯಾಯಃ

## ಶುಕ್ರಲೋಕವರ್ಣನಂ

**ಗಣಾವೂಚತುಃ :—**

**ಶಿವಶರ್ಮನ್ಮಹಾಬುದ್ಧೇ ಶುಕ್ರಲೋಕೋಽಯಮುದ್ಭುತಃ ।**
**ದಾನವಾನಾಂ ಚ ದೈತ್ಯಾನಾಂ ಗುರುರತ್ರ ವಸೇತ್ಕವಿಃ ॥ ೧ ॥**
**ಪೀತ್ವಾ ವರ್ಷಸಹಸ್ರಂ ವೈ ಕಣಧೂಮಂ ಸುದುಃಸಹಂ ।**
**ಯಃ ಪ್ರಾಪ್ತವಾನ್ಮಹಾವಿದ್ಯಾಂ ಮೃತ್ಯುಸಂಜೀವಿನೀಂ ಹರಾತ್ ॥ ೨ ॥**
**ಇಮಾಂ ವಿದ್ಯಾಂ ನ ಜಾನಾತಿ ದೇವಾಚಾರ್ಯೋಽತಿದುಷ್ಕರಾಂ ।**
**ಋತೇ ಮೃತ್ಯುಂಜಯಾತ್ ಸ್ಕಂದಾತ್ಪಾರ್ವತ್ಯಾ ಗಜವಕ್ತ್ರತಃ ॥ ೩ ॥**

**ಶಿವಶರ್ಮೋವಾಚ :—**

**ಕೋಽಸೌ ಶುಕ್ರ ಇತಿ ಖ್ಯಾತೋ ಯಸ್ಯಾಽಯಂ ಲೋಕ ಉತ್ತಮಃ ।**
**ಕಥಂ ತೇನ ಚ ವಿದ್ಯಾಪ್ತಾ ಮೃತ್ಯುಸಂಜೀವಿನೀ ಹರಾತ್ ॥ ೪ ॥**
**ಆಚಕ್ಷ್ವಾಥಾಮಿದಂ ದೇವೌ ಯದಿ ಪ್ರೀತಿರ್ಮಯಿ ಪ್ರಭೂ ।**
**ತತಸ್ತೌ ಸ್ಮಾಽಽಹತುರ್ದೇವೌ ಶುಕ್ರಸ್ಯ ಪರಮಾಂ ಕಥಾಂ ॥ ೫ ॥**

---

## ಕನ್ನಡದ ಅನುವಾದ

### ಶುಕ್ರಲೋಕವರ್ಣನ

೧. ಗಣಗಳು ಹೇಳುತ್ತಾರೆ.—ಎಲೈ ಮಹಾಬುದ್ಧಿಶಾಲಿಯಾದ ಶಿವಶರ್ಮನೆ, ಇದೊ ಇದೇ ಅದ್ಭುತವಾದ ಶುಕ್ರಲೋಕವು ದೈತ್ಯದಾನವರಿಗೆ ಗುರುವಾದ ಶುಕ್ರನು ಈ ಲೋಕದಲ್ಲಿಯೆ ವಾಸಮಾಡುತ್ತಿದ್ದಾನೆ.

೨. ಈ ಮಹಾತ್ಮನು ಒಂದು ದಿವ್ಯ ಸಹಸ್ರ ವರ್ಷಗಳಕಾಲ ಬತ್ತದ ಹೊಟ್ಟಿನ ದುಸ್ಸಹವಾದ ಹೊಗೆಯನ್ನು ಸೇದುತ್ತ ತಪಸ್ಸನ್ನು ಮಾಡಿ ಪರಮೇಶ್ವರನಿಂದ ಮೃತಸಂಜೀವಿನೀ ಮಹಾವಿದ್ಯೆಯನ್ನು ಅನುಗ್ರಹವಾಗಿ ಪಡೆದನು.

೩. ಅಯ್ಯಾ ವಿಪ್ರನೆ, ಮಹಾ ದುಷ್ಕರವೆನಿಸಿದ ಈ ಮೃತಸಂಜೀವಿನೀ ವಿದ್ಯೆಯನ್ನು ದೇವಗುರುವಾದ ಬೃಹಸ್ಪತ್ಯಾಚಾರ್ಯನೂ ಅರಿತಿರುವುದಿಲ್ಲ. ಮೃತ್ಯುಂಜಯನಾದ ಪರಮೇಶ್ವರ, ಅವನ ಮಕ್ಕಳಾದ ಗಜವಕ್ತ್ರ ಷಣ್ಮುಖರು, ಅವನ ಹೆಂಡತಿಯಾದ ಪಾರ್ವತಿ ಇಷ್ಟು ಮಂದಿಯನ್ನುಳಿದು ಮತ್ತಾರಿಗೂ ಈ ವಿದ್ಯೆಯು ತಿಳಿದಿರುವುದಿಲ್ಲ.

೪–೫. ಶಿವಶರ್ಮನು ಕೇಳುತ್ತಾನೆ –ಎಲೈ ವಿಷ್ಣುಭಕ್ತರೆ, ಉತ್ತಮವಾದ ಈ ಲೋಕಕ್ಕೆ ಒಡೆಯನಾದ ಶುಕ್ರನೆಂಬುವನಾರು? ಪರಮೇಶ್ವರನಿಂದ ಮೃತ

ಯಾಂ ಶ್ರುತ್ವಾ ಚಾಽಪಮೃತ್ಯುಭ್ಯೋ ಹೀಯಂತೇ ಶ್ರದ್ಧಯಾ ಯುತಾಃ ।
ಭೂತಪ್ರೇತಪಿಶಾಚೇಭ್ಯೋ ನ ಭಯಂ ಚಾಽಪಿ ಜಾಯತೇ ॥ ೬ ॥
ಆಜೌ ಪ್ರವರ್ತಮಾನಾಯಾಮಂಧಕಾಂಧಕವೈರಿಣೋಃ ।
ಅನಿರ್ಭೇದ್ಯಗಿರಿವ್ಯೂಹವಜ್ರವ್ಯೂಹಾಽಧಿನಾಥಯೋಃ ॥ ೭ ॥
ಅಪಸೃತ್ಯ ತತೋ ಯುದ್ಧಾದಂಧಕಃ ಶುಕ್ರಸನ್ನಿಧಿಂ ।
ಅಧಿಗಮ್ಯ ಬಭಾಷೇದಮವರುಹ್ಯ ರಥಾತ್ತತಃ ॥ ೮ ॥
ಭಗವಂಸ್ತ್ವಾಮುಪಾಶ್ರಿತ್ಯ ವಯಂ ದೇವಾಂಶ್ಚ ಸಾನುಗಾನ್ ।
ಮನ್ಯಾಮಹೇ ತೃಣೈಸ್ತುಲ್ಯಾನ್ ರುದ್ರೋಪೇಂದ್ರಾದಿಕಾನಪಿ ॥ ೯ ॥
ಕುಂಜರಾ ಇವ ಸಿಂಹೇಭ್ಯೋ ಗರುಡೇಭ್ಯ ಇವೋರಗಾಃ ।
ಅಸ್ಮತ್ತೋ ಬಿಭ್ಯತಿ ಸುರಾ ಗುರೋ ಯುಷ್ಮದನುಗ್ರಹಾತ್ ॥ ೧೦ ॥
ವಜ್ರವ್ಯೂಹಮನಿರ್ಭೇದ್ಯಂ ವಿವಿಶುರ್ದೈತ್ಯದಾನವಾಃ ।
ವಿಧೂಯ ಪ್ರಮಥಾಽನೀಕಂ ಹ್ರದಂ ತಾಪಾರ್ದಿತಾ ಇವ ॥ ೧೧ ॥

---

ಸಂಜೀವಿನೀವಿದ್ಯೆಯನ್ನು ಪಡೆದುದೆಂತು? ನನ್ನಲ್ಲಿ ವಿಶ್ವಾಸವಿರುವುದಾದರೆ ನನಗೆ ಈ ವಿಚಾರವನ್ನು ತಿಳಿಸಿರಿ. ವಿಪ್ರನು ಈ ಪ್ರಕಾರವಾಗಿ ಕೇಳಲು ಆ ವಿಷ್ಣು ಪಾರ್ಷದರು ಉತ್ತಮೋತ್ತಮವಾದ ಶುಕ್ರನ ಆ ಕಥೆಯನ್ನು ಅವನಿಗೆ ಹೇಳ ತೊಡಗಿದರು.

೬. ಈ ಕಥೆಯನ್ನು ಭಕ್ತಿಶ್ರದ್ಧೆಗಳೊಡಗೂಡಿ ಕೇಳಿದ ಮಾನವರು ಅಪಮೃತ್ಯುವಿಗೆ ತುತ್ತಾಗುವುದಿಲ್ಲವಲ್ಲದೆ ಅವರಿಗೆ ಭೂತಪ್ರೇತ ಪಿಶಾಚಗಳ ಭಯವೂ ಇರುವುದಿಲ್ಲವು.

೭–೮. ಅಯ್ಯಾ ಶಿವಶರ್ಮನೆ, ಅಭೇದ್ಯವಾದ ಗಿರಿವ್ಯೂಹವನ್ನೊಡಗೂಡಿದ ಅಂಧಕಾಸುರನಿಗೂ ವಜ್ರವ್ಯೂಹಾಧಿಪತಿಯಾದ ಪರಮೇಶ್ವರನಿಗೂ ಭಯಂಕರವಾದ ಯುದ್ಧವು ನಡೆಯುತ್ತಿರಲು, ಅಂಧಕಾಸುರನು ರಣರಂಗದಿಂದ ಸರಿದು ಬಂದು ಶುಕ್ರನ ಸನ್ನಿಧಾನವನ್ನು ಸೇರಿ ರಥದಿಂದ ಕೆಳಕ್ಕಿಳಿದು ಇಂತೆಂದನು.

೯. "ಎಲೈ ಪೂಜ್ಯನೆ, ನಾವು ನಿನ್ನನ್ನು ಆಶ್ರಯಿಸಿ ಪರಿವಾರದವರೊಡಗೂಡಿದ ದೇವತೆಗಳನ್ನೂ ರುದ್ರ ಮಹೇಂದ್ರಾದಿಗಳನ್ನೂ ಹುಲ್ಲುಕಡ್ಡಿಗೆ ಸಮಾನವಾಗಿ ಕಾಣುತ್ತಿದ್ದೇವೆ.

೧೦. ಗುರುವೆ, ನಿನ್ನ ಅನುಗ್ರಹದಿಂದ ಆ ದೇವತೆಗಳು ಸಿಂಹಗಳಿಗೆ ಆನೆಗಳಂತೆಯೂ, ಗರುಡನಿಗೆ ಹಾವುಗಳಂತೆಯೂ ಅಂತು ಬೆದರಿ ಬೆಂಡಾಗಿ ಹೋಗಿದ್ದಾರೆ.

೧೧. ಬಾಯಾರಿ ಬಳಲಿದ ದಾರಿಗರಂತೆ ನಮ್ಮ ದೈತ್ಯದಾನವರೆಲ್ಲರೂ ಪ್ರಮಥಗಣಗಳೆಲ್ಲವನ್ನೂ ಅತ್ತ ಕೊಡವಿ, ಅನಿರ್ಭೇದ್ಯವಾದ ವಜ್ರವ್ಯೂಹವನ್ನು ಒಳಹೊಕ್ಕಿರುತ್ತಾರೆ.

ವಯಂ ತ್ವಚ್ಛರಣಂ ಭೂತ್ವಾ ಪರ್ವತಾ ಇವ ನಿಶ್ಚಲಾಃ ।
ಸ್ಥಿತ್ವಾ ಚರಾಮ ನಿಃಶಂಕಾ ಬ್ರಾಹ್ಮಣೇಂದ್ರ ಮಹಾಹವೇ ॥ ೧೨ ॥
ಆಪ್ತಭಾವೇನ ಚ ವಯಂ ಪಾದೌ ತವ ಸುಖಪ್ರದೌ ।
ಸದಾರಾಃ ಸಸುತಾಶ್ಚೈವ ಶುಶ್ರೂಷಾಮೋ ದಿವಾನಿಶಂ ॥ ೧೩ ॥
ಅಭಿರಕ್ಷಾಽಭಿತೋ ವಿಪ್ರ ಪ್ರಸನ್ನಃ ಶರಣಾಗತಾನ್ ।
ಪಶ್ಯ ಹುಂಡಂ ತುಹುಂಡಂ ಚ ಕುಜಂಭಂ ಜಂಭಮೇವ ಚ ॥ ೧೪ ॥
ಪಾಕಂ ಕಾರ್ತಸ್ವನಂ ಚೈವ ವಿಪಾಕಂ ಪಾಕಹಾರಿಣಂ ।
ತಂ ಚಂದ್ರದಮನಂ ಶೂರಂ ಶೂರಾಽಮರವಿದಾರಣಂ ॥ ೧೫ ॥
ಪ್ರಮಥೈರ್ಭೀಮವಿಕ್ರಾಂತೈಃ ಕ್ರಾಂತಂ ಮೃತ್ಯುಪ್ರಮಾಥಿಭಿಃ ।
ಸೂದಿತಾನ್ಪತಿತಾಂಶ್ಚೈವ ದ್ರಾವಿಡೈರಿವ ಚಂದನಾನ್ ॥ ೧೬ ॥
ಯಾ ಪೀತ್ವಾ ಕಣಧೂಮಂ ವೈ ಸಹಸ್ರಂ ಶರದಾಂ ಪುರಾ ।
ವರಾ ವಿದ್ಯಾ ತ್ವಯಾ ಪ್ರಾಪ್ತಾ ತಸ್ಯಾಃ ಕಾಲೋಽಯಮಾಗತಃ ॥ ೧೭ ॥
ಅಥ ವಿದ್ಯಾಫಲಂ ತತ್ತೇ ದೈತ್ಯಾನ್ಸಂಜೀವಯಿಷ್ಯತಃ ।
ಪಶ್ಯಂತು ಪ್ರಮಥಾಃ ಸರ್ವೇ ತ್ವಯಾ ಸಂಜೀವಿತಾನಿಮಾನ್ ॥ ೧೮ ॥

---

೧೨. ಎಲೈ ಬ್ರಾಹ್ಮಣೇಂದ್ರನೆ, ನೀನು ನಮಗೆ ಶರಣ್ಯನಾಗಿರುವುದರಿಂದ ನಾವೆಲ್ಲರೂ ಯಾವ ಸಂಶಯವೂ ಇಲ್ಲದೆ ರಣಾಂಗಣದಲ್ಲಿ ನಿಶ್ಚಲಗಳಾದ ಪರ್ವತಗಳಂತೆ ನಿಂತು ಲಕ್ಷ್ಯವಿಲ್ಲದೆ ನಾವೇ ನಾವಾಗಿ ಸಂಚರಿಸುತ್ತಿದ್ದೇವೆ.

೧೩. ನೀನು ನಮಗೆ ಅತ್ಯಂತ ಆಪ್ತನಾದವನೆಂಬ ನಂಬುಗೆಯಿಂದ ಸುಖಪ್ರದವಾದ ನಿನ್ನಡಿಗಳನ್ನು ಹೆಂಡತಿ ಮಕ್ಕಳೊಡಗೂಡಿ ಹಗಲಿರುಳೂ ಸೇವಿಸುತ್ತಿದ್ದೇವೆ.

೧೪–೧೬. ಆದುದರಿಂದ ಎಲೈ ವಿಪ್ರನೆ, ಶರಣಾಗತರಾಗಿ ಬಂದಿರುವ ನಮ್ಮೆಲ್ಲರನ್ನೂ ಪ್ರಸನ್ನನಾಗಿ ನೀನು ಕಾಪಾಡಬೇಕು. ಇದೊ ನೋಡು, ಹುಂಡ ತುಹುಂಡ, ಕುಜಂಭ, ಜಂಭ, ಪಾಕ, ಕಾರ್ತಸ್ವನ, ವಿಪಾಕ, ಪಾಕಹಾರಿ, ಚಂದ್ರದಮನ, ಶೂರರಾದ ದೇವತೆಗಳನ್ನು ಸಿಗಿದೊಗೆವ ಶೂರಾಸುರನೇ ಮೊದಲಾದವರೆಲ್ಲರನ್ನೂ ಮೃತ್ಯುದೇವತೆಯನ್ನೇ ಕಳೆದುಬಿಡುವ ಮಹಾಸಮರ್ಥರೂ ಪರಾಕ್ರಮಿಗಳೂ ಆದ ಪ್ರಮಥಗಣಗಳು ಸುತ್ತಮುತ್ತಿ ದ್ರಾವಿಡರು ಚಂದನ ವೃಕ್ಷಗಳನ್ನೆಂತೊ ಅಂತು ಹೊಡೆದು ಕೆಡುವುತ್ತಿದ್ದಾರೆ.

೧೭. ಗುರುವೆ, ನೀನು ಪೂರ್ವದಲ್ಲಿ ಒಂದು ದಿವ್ಯ ಸಹಸ್ರ ವರ್ಷಗಳಕಾಲ ಕಣಧೂಮವನ್ನು ಪಾನಮಾಡಿ ಸಂಪಾದಿಸಿರುವ ಆ ಮಹಾ ವಿದ್ಯೆಯ ಪ್ರಭಾವವನ್ನು ಪ್ರಯೋಗಿಸಿ ತೋರಿಸಲು ಇದೀಗ ಒಳ್ಳೆಯ ಸಮಯವು ಒದಗಿ ಬಂದಿದೆ.

೧೮. ಗುರುವೆ, ಆ ವಿದ್ಯೆಯ ಫಲವಾಗಿ ಈಗ ಕಾಳೆಗದಲ್ಲಿ ಮಡಿದಿರುವ

ಇತ್ಯಂಧಕವಚಃ ಶ್ರುತ್ವಾ ಸ್ಥಿರಧೀರ್ಭಾರ್ಗವೋ ಮುನಿಃ ।
ಕಿಂಚಿತ್ ಸ್ಮಿತಂ ತದಾ ಕೃತ್ವಾ ದಾನವಾಽಧಿಪಮಬ್ರವೀತ್ ॥ ೧೯ ॥
ದಾನವಾಽಧಿಪತೇ ಸರ್ವಂ ತಥ್ಯಂ ಯದ್ಭಾಷಿತಂ ತ್ವಯಾ ।
ವಿದ್ಯೋಽಪಾರ್ಜನಮೇತದ್ಧಿ ದಾನವಾರ್ಥಂ ಮಯಾ ಕೃತಂ ॥ ೨೦ ॥
ಪೀತ್ವಾ ವರ್ಷಸಹಸ್ರಂ ವೈ ಕಣಧೂಮಂ ಸುದುಃಸಹಂ ।
ಏಷಾ ಪ್ರಾಪ್ತೇಶ್ವರಾದ್ವಿದ್ಯಾ ಬಾಂಧವಾನಾಂ ಸುಖಾವಹಾ ॥ ೨೧ ॥
ಏತಯಾ ವಿದ್ಯಯಾ ಸೋಽಹಂ ಪ್ರಮಥೈರ್ಮಥಿತಾನ್ರಣೇ ।
ಉತ್ಥಾಪಯಿಷ್ಯೇ ಗ್ಲಾನಾನಿ ಧಾನ್ಯಾನ್ಯಂಬುದರೋ ಯಥಾ ॥ ೨೨ ॥
ನಿರ್ವ್ರಣಾನ್ನೀರುಜಃ ಸ್ವಸ್ಥಾನ್ ಸುಪ್ತ್ವೇವ ಪುನರುತ್ಥಿತಾನ್ ।
ಅಸ್ಮಿನ್ಮುಹೂರ್ತೇ ದ್ರಷ್ಟಾಽಸಿ ದಾನವಾನುತ್ಥಿತಾನ್ನೃಪ ॥ ೨೩ ॥
ಇತ್ಯುಕ್ತ್ವಾ ದಾನವಪತಿಂ ವಿದ್ಯಾಮಾವರ್ತಯತ್ಕವಿಃ ।
ಏಕೈಕಂ ದೈತ್ಯಮುದ್ದಿಶ್ಯ ತ ಉತ್ತಸ್ಥುರ್ಧೃತಾಯುಧಾಃ ॥ ೨೪ ॥

---

ನಮ್ಮವರೆಲ್ಲರನ್ನೂ ಬದುಕಿಸು. ಹೀಗೆ ನಿನ್ನಿಂದ ಮತ್ತೆ ಜೀವಿಸುವ ದೈತ್ಯ ದಾನವರನ್ನು ಪ್ರಮಥರೆಲ್ಲರೂ ಕಾಣಲಿ.''

೧೯. ಈ ಪ್ರಕಾರವಾಗಿ ನುಡಿದ ಅಂಧಕಾಸುರನ ಮಾತುಗಳನ್ನು ಕೇಳಿ ಸ್ಥಿರಮತಿಯಾದ ಆ ಭಾರ್ಗವಮುನಿಯು ಸ್ವಲ್ಪವಾಗಿ ನಕ್ಕು ಆ ದಾನವಾಧಿಪತಿಯನ್ನು ಕುರಿತು ಹೀಗೆಂದನು.

೨೦. ''ದಾನವೇಶ್ವರ, ನೀನು ಹೇಳಿದುದೆಲ್ಲವೂ ದಿಟವೇ ಸರಿ. ನಾನು ದಾನವರಾದ ನಿಮ್ಮ ಪ್ರಯೋಜನಕ್ಕಾಗಿಯೆ ಈ ವಿದ್ಯೆಯನ್ನು ಆರ್ಜಿಸಿದೆನು.

೨೧–೨೩. ಒಂದು ದಿವ್ಯ ವರ್ಷ ಸಹಸ್ರಗಳಕಾಲ ಕಣಧೂಮವನ್ನು ಪಾನ ಮಾಡಿಕೊಂಡು ಸುದುಸ್ಸಹವಾದ ತಪಸ್ಸನ್ನೆಸಗಿ ಬಂಧುಗಳಾದ ನಿಮ್ಮೆಲ್ಲರಿಗೂ ಸುಖವನ್ನು ಕೊಡುವ ಈ ಮೃತಸಂಜೀವಿನೀ ವಿದ್ಯೆಯನ್ನು ನಾನು ಪರಮೇಶ್ವರನಿಂದ ಪಡೆದಿದ್ದೇನೆ. ಈಗ ಆ ವಿದ್ಯೆಯ ಪ್ರಭಾವದಿಂದ ನಾನು ರಣರಂಗದಲ್ಲಿ ಪ್ರಮಥಗಣಗಳಿಂದ ಮಥಿತರಾಗಿ ಬಿದ್ದಿರುವ ದೈತ್ಯದಾನವರನ್ನು ಮೋಡವು ಉತ್ತುಬಿತ್ತಿದ ಬೀಜಗಳನ್ನೆಂತೊ ಅಂತು ಎಬ್ಬಿಸಿ ನಿಲ್ಲಿಸುತ್ತೇನೆ. ಅವರೆಲ್ಲರೂ ಗಾಯಗಳಿಲ್ಲದೆ ಯಾವ ರೋಗಗಳೂ ಇಲ್ಲದೆ ನಿದ್ರಿಸಿ ಮತ್ತೆ ಎದ್ದು ಕುಳಿತವರಂತೆ ಸುಖವಾಗಿ ಕಾಳಗದಲ್ಲಿ ಎದ್ದು ನಿಲ್ಲುವುದನ್ನು ನೀನು ಇದೇ ಮುಹೂರ್ತದಲ್ಲಿಯೇ ಕಾಣುವೆ.''

೨೪. ಆ ದೈತ್ಯಗುರುವು ಈ ಪ್ರಕಾರವಾಗಿ ಹೇಳಿ, ಕಾಳಗದಲ್ಲಿ ಮಡಿದ ಪ್ರತಿಯೊಬ್ಬ ದೈತ್ಯನನ್ನೂ ಉದ್ದೇಶಿಸಿ ಮಂತ್ರವನ್ನು ಪ್ರಯೋಗಿಸಿದನು. ಒಡನೆಯೆ ಅವರೆಲ್ಲರೂ ಆಯುಧಗಳನ್ನು ಹಿಡಿದು ಎದ್ದುನಿಂತರು.

ವೇದಾ ಇವ ಸದಭ್ಯಸ್ತಾಃ ಸಮಯೇ ವಾ ಯಥಾಂಬುದಾಃ ।
ಬ್ರಾಹ್ಮಣೇಭ್ಯೋ ಯಥಾ ದತ್ತಾಃ ಶ್ರದ್ಧಯಾರ್ತಾ ಮಹಾಪದಿ ॥ ೨೫ ॥
ಉಜ್ಜೀವಿತಾಂಸ್ತು ತಾನ್ದೃಷ್ಟ್ವಾ ತುಹುಂಡಾದ್ಯಾನ್ಮಹಾಽಸುರಾನ್ ।
ವಿನೇದುಃ ಪೂರ್ವದೇವಾಸ್ತೇ ಜಲಪೂರ್ಣಾ ಇವಾಂಬುದಾಃ ॥ ೨೬ ॥
ಶುಕ್ರೇಣೋಜ್ಜೀವಿತಾನ್ ದೃಷ್ಟ್ವಾ ದಾನವಾಂಸ್ತಾನ್ಗಣೇಶ್ವರಾಃ ।
ವಿಜ್ಞಾಪ್ಯಮೇವ ದೇವೇಶೇಹ್ಯೇವಂ ತೇಽನ್ಯೋನ್ಯಮಬ್ರುವನ್ ॥ ೨೭ ॥

ಆಶ್ಚರ್ಯರೂಪೇ ಪ್ರಮಥೇಶ್ವರಾಣಾಂ
ತಸ್ಮಿಂಸ್ತಥಾ ವರ್ತತಿ ಯುದ್ಧಯಜ್ಞೇ ।
ಅಮರ್ಷಿತೋ ಭಾರ್ಗವಕರ್ಮ ದೃಷ್ಟ್ವಾ
ಶಿಲಾದಪುತ್ರೋಽಭ್ಯಗಮನ್ಮಹೇಶಂ ॥ ೨೮ ॥
ಜಯೇತಿ ಚೋಕ್ತ್ವಾ ಜವಯೋನಿಮುಗ್ರ
ಮುವಾಚ ನಂದೀ ಕನಕಾವದಾತಂ ।
ಗಣೇಶ್ವರಾಣಾಂ ರಣಕರ್ಮ ದೇವ
ದೇವೈಶ್ಚ ಸೇಂದ್ರೈರಪಿ ದುಷ್ಕರಂ ಯತ್ ॥ ೨೯ ॥
ತದ್ಭಾರ್ಗವೇಣಾಽದ್ಯ ಕೃತಂ ವೃಥಾ ನಃ
ಸಂಜೀವ್ಯ ತಾನಾಜಿ ಮೃತಾನ್ವಿಪಕ್ಷಾನ್ ।
ಆವರ್ತ್ಯ ವಿದ್ಯಾಂ ಮೃತಜೀವದಾತ್ರೀ
ಮೇಕೈಕಮುದ್ದಿಶ್ಯ ಸಹೇಲಮೀಶ ॥ ೩೦ ॥

---

೨೫–೨೬. ಚೆನ್ನಾಗಿ ಅಭ್ಯಾಸಮಾಡಿದ ವೇದಗಳಂತೆ, ವರ್ಷಾಸಮಯದಲ್ಲಿ ಕವಿದೆದ್ದ ಮುಗಿಲುಗಳಂತೆ, ಶ್ರದ್ಧೆಯಿಂದ ಬ್ರಾಹ್ಮಣರಿಗೆ ದಾನಮಾಡಿ ಆಪತ್ಸಮಯದಲ್ಲಿ ಉಪಯುಕ್ತವಾದ ದ್ರವ್ಯದಂತೆ ಪುನರುಜ್ಜೀವನಗೊಂಡ ತುಹುಂಡನೇ ಮೊದಲಾದ ಆ ಮಹಾಸುರರನ್ನು ಕಂಡು ಸುರಶತ್ರುಗಳೆಲ್ಲರೂ ತುಂಬುಮುಗಿಲುಗಳಂತೆ ಭಯಂಕರ ಧ್ವನಿಯನ್ನು ಮಾಡಿದರು.

೨೭. ಹೀಗೆ ಅಸುರಗುರುವಾದ ಶುಕ್ರಾಚಾರ್ಯನಿಂದ ಉಜ್ಜೀವಿತರಾದ ಆ ದಾನವರನ್ನು ಕಂಡು ಪ್ರಮಥಗಣಾಧೀಶರೆಲ್ಲರೂ ಈ ವಿಚಾರವನ್ನು ಪರಮೇಶ್ವರನಿಗೆ ತಿಳಿಸಬೇಕೆಂದು ಪರಸ್ಪರವಾಗಿ ಮಾತನಾಡಿಕೊಂಡರು.

೨೮–೩೦. ಅಯ್ಯಾ ಶಿವಶರ್ಮನೆ, ಹೀಗೆ ಆ ಯುದ್ಧಯಜ್ಞದಲ್ಲಿ ಪ್ರಮಥರೆಲ್ಲರೂ ಆಶ್ಚರ್ಯಭರಿತರಾಗಿ ಹೋಗಿರಲು ಶಿಲಾದಪುತ್ರನಾದ ನಂದಿಕೇಶ್ವರನು ಶುಕ್ರಾಚಾರ್ಯನ ಈ ಕಾರ್ಯವನ್ನು ಕಂಡು ರೋಷಗೊಂಡು ಮಹೇಶ್ವರನಿದ್ದೆಡೆಗೆ ಬಂದು ಜಯಕ್ಕೆ ಕಾರಣಭೂತನಾದ ಆ ಉಗ್ರಶಂಕರನಿಗೆ ಜಯಕಾರದೊಡನೆ ಪರಾಕನ್ನು ಹೇಳಿ, "ದೇವಾ, ಗಣೇಶ್ವರರೂ ಇಂದ್ರಾದಿ ಸಮಸ್ತ

ತುಹುಂಡ ಹುಂಡಾದಿ ಕುಜಂಭಜಂಭ
ವಿಪಾಕಪಾಕಾದಿ ಮಹಾಸುರೇಂದ್ರಾಃ ।
ಯಮಾಲಯಾದದ್ಯ ಪುನರ್ನಿವೃತ್ತಾ
ವಿದ್ರಾವಯಂತಃ ಪ್ರಮಥಾಂಶ್ಚರಂತಿ ॥ ೩೧ ॥
ಯದಿ ಹ್ಯಸೌ ದೈತ್ಯವರಾನ್ನಿರಸ್ತಾನ್
ಸಂಜೀವಯೇದತ್ರ ಪುನಃ ಪುನಸ್ತಾನ್ ।
ಜಯಃ ಕುತೋ ನೋ ಭವಿತಾ ಮಹೇಶ
ಗಣೇಶ್ವರಾಣಾಂ ಕುತ ಏವ ಶಾಂತಿಃ ॥ ೩೨ ॥
ಇತ್ಯೇವಮುಕ್ತಃ ಪ್ರಮಥೇಶ್ವರೇಣ
ಸನಂದಿನಾ ವೈ ಪ್ರಮಥೇಶ್ವರೇಶಃ ।
ಉವಾಚ ದೇವಃ ಪ್ರಹಸಂಸ್ತದಾನೀಂ
ತಂ ನಂದಿನಂ ಸರ್ವಗಣೇಶರಾಜಂ ॥ ೩೩ ॥
ನಂದಿನ್ಪ್ರಯಾಹಿ ತ್ವರಿತೋಽತಿಮಾತ್ರಂ
ದ್ವಿಜೇಂದ್ರವರ್ಯಂ ದಿತಿನಂದನಾನಾಂ ।
ಮಧ್ಯಾತ್ಸಮುದ್ಧೃತ್ಯ ತಥಾನಯಾಶು
ಶ್ಯೇನೋ ಯಥಾ ಲಾವಕಮಂಡಜಾತಂ ॥ ೩೪ ॥

ದೇವತೆಗಳೂ ಎಸಗಿದ ಅದ್ಭುತವಾದ ರಣಕರ್ಮವನ್ನು ಆ ಶುಕ್ರಾಚಾರ್ಯನು ಮಡಿದುರುಳಿದ ದಾನವರೊಬ್ಬೊಬ್ಬರನ್ನೂ ಕುರಿತು ಮೃತಸಂಜೀವಿನೀ ಮಂತ್ರವನ್ನು ಪುರಶ್ಚರಣೆಮಾಡಿ ಬಹು ಲೀಲೆಯಿಂದಲೆ ಪುನರುಜ್ಜೀವನಗೊಳಿಸಿ ವ್ಯರ್ಥವಾಗಿಸುತ್ತಿರುವನು.

೩೧–೩೨. ತುಹುಂಡ, ಹುಂಡ, ಕುಜಂಭ, ಜಂಭ, ವಿಪಾಕ, ಪಾಕಾದಿ ಮೊದಲಾದ ಮಹಾ ಸುರೇಂದ್ರರೆಲ್ಲರೂ ಈಗ ಯಮಾಲಯದಿಂದ ಹಿಂತಿರುಗಿ ಬಂದು ಪ್ರಮಥರೆಲ್ಲರನ್ನೂ ಪಲಾಯನಗೊಳಿಸಿ ರಣಭೂಮಿಯಲ್ಲೆಲ್ಲ ಸಂಚರಿಸುತ್ತಿದ್ದಾರೆ. ಎಲೈ ಮಹೇಶ್ವರನೆ, ಹೀಗೆ ಮಡಿದುಹೋದ ದೈತ್ಯರೆಲ್ಲರನ್ನೂ ಪುನಃ ಪುನಃ ಬದುಕಿಸುತ್ತಿದ್ದರೆ ನಮಗೆ ಜಯವೆತ್ತಣದು? ಶಾಂತಿಯು ಹೇಗುಂಟಾದೀತು?

೩೩. ಪ್ರಮಥೇಶ್ವರನಾದ ನಂದಿಕೇಶ್ವರನು ಈ ರೀತಿ ಹೇಳಲು ಪ್ರಮಥೇಶ್ವರೇಶ್ವರನಾದ ಪರಮೇಶ್ವರನು ಆಗ ನಗುತ್ತಲೆ ಸಮಸ್ತ ಗಣೇಶ್ವರರಿಗೂ ಒಡೆಯನಾದ ಆ ನಂದಿಯನ್ನು ಕುರಿತು ಹೀಗೆಂದನು.

೩೪. "ಎಲೈ ನಂದಿಯೆ, ನೀನು ಈಗಲೆ ಜಾಗ್ರತೆಯಾಗಿ ಆ ದೈತ್ಯಗುರುವಾದ ಆ ಶುಕ್ರಾಚಾರ್ಯನಲ್ಲಿಗೆ ಹೋಗು. ಹೋಗಿ ಗಿಡುಗನು ಲಾವೆಯು

ಸ ಏವಮುಕ್ತೋ ವೃಷಭಧ್ವಜೇನ
ನನಾದ ನಂದೀ ವೃಷಸಿಂಹನಾದಃ ।
ಜಗಾಮ ತೂರ್ಣಂ ಚ ವಿಗಾಹ್ಯ ಸೇನಾಂ
ಯತ್ರಾಽಭವದ್ಭಾರ್ಗವವಂಶದೀಪಃ ॥ ೩೫ ॥
ತಂ ರಕ್ಷ್ಯಮಾಣಂ ದಿತಿಜೈಃ ಸಮಸ್ತೈಃ
ಪಾಶಾಽಸಿವೃಕ್ಷೋಪಲಶೈಲಹಸ್ತೈಃ ।
ವಿಕ್ಷೋಭ್ಯ ದೈತ್ಯಾನ್ಬಲವಾನ್ಜಹಾರ
ಕಾವ್ಯಂ ಸ ನಂದೀ ಶರಭೋ ಯಥೇಭಂ ॥ ೩೬ ॥
ಸ್ರಸ್ತಾಽಂಬರಂ ವಿಚ್ಯುತಭೂಷಣಂ ಚ
ವಿಮುಕ್ತಕೇಶಂ ಬಲಿನಾ ಗೃಹೀತಂ ।
ವಿಮೋಚಯಿಷ್ಯಂತ ಇವಾಽನುಜಗ್ಮುಃ
ಸುರಾಽರಯಃ ಸಿಂಹರವಾನ್ ಸೃಜಂತಃ ॥ ೩೭ ॥
ದಂಭೋಲಿಶೂಲಾಽಸಿಪರಶ್ವಧಾನಾ
ಮುದ್ದಂಡ ಚಕ್ರೋಪಲಕಂಪನಾನಾಂ ।
ನಂದೀಶ್ವರಸ್ಯೋಪರಿ ದಾನವೇಂದ್ರಾ
ವರ್ಷಂ ವವರ್ಷುರ್ಜಲದಾ ಇವೋಗ್ರಂ ॥ ೩೮ ॥

ಹಕ್ಕಿಗಳ ತತ್ತಿಗಳನ್ನೆಂತೊ ಅಂತು ಆ ದೈತ್ಯಗುರುವನ್ನು ಅಲ್ಲಿಂದ ಹೊತ್ತು ತರುವವನಾಗು.''

೩೫. ಆ ವೃಷಭಧ್ವಜನಿಂತು ನುಡಿಯಲು ವೃಷಸಿಂಹದಂತೆ ಮಹಾಧ್ವನಿಯುಳ್ಳ ನಂದಿಯು, ಭಯಂಕರವಾಗಿ ಒಂದು ಸಲ ಕೂಗುಹಾಕಿ ಬಹು ಬೇಗನೆಯೆ ಸೇನೆಯನ್ನು ದಾಟಿ, ಭಾರ್ಗವವಂಶಪ್ರದೀಪನಾದ ಆ ಶುಕ್ರಾಚಾರ್ಯನಿದ್ದೆಡೆಗೆ ಬಂದನು.

೩೬. ಪಾಶ, ಖಡ್ಗ, ವೃಕ್ಷ, ತಿರುಗಲ್ಲು, ಬೆಟ್ಟಗುಡ್ಡಗಳನ್ನೇ ಆಯುಧಗಳನ್ನಾಗಿ ಹಿಡಿದು ದೈತ್ಯರೆಲ್ಲರೂ ಆ ಶುಕ್ರಾಚಾರ್ಯನನ್ನು ಸುತ್ತಗಟ್ಟಿ ಸಂರಕ್ಷಿಸುತ್ತಿರುವುದನ್ನು ಕಂಡು ಆ ನಂದಿಕೇಶ್ವರನು, ಶರಭವು ಆನೆಯನ್ನೆಂತೊ ಅಂತು ತಟಕ್ಕನೆ ಹಾರಿಹೋಗಿ ಹಿಡಿದು ಅಪಹರಿಸಿದನು.

೩೭. ಸಡಿಲಿಹೋದ ವಸ್ತ್ರವುಳ್ಳವನೂ, ಧರಿಸಿದ್ದ ಒಡವೆಗಳೆಲ್ಲವೂ ಮುರಿದುಬಿದ್ದು ಬಿಚ್ಚಿಹೋದ ತಲೆಗೂದಲುಳ್ಳವನೂ ಆದ ಶುಕ್ರಾಚಾರ್ಯನು ನಂದಿಕೇಶ್ವರನಿಂದ ಹಿಡಿಯಲಾದುದನ್ನು ಕಂಡು ದೈತ್ಯರೆಲ್ಲರೂ ಸಿಂಹಗರ್ಜನೆ ಮಾಡುತ್ತ, ಅವನನ್ನು ಹಿಡಿದುತರಲೊ ಎಂಬಂತೆ ಹಿಂಬಾಲಿಸಿದರು.

೩೮. ಆಗಲಾ ದೈತ್ಯರು ವಜ್ರ, ಶೂಲ, ಖಡ್ಗ, ಗಂಡುಗೊಡಲಿ, ಚಕ್ರ,

ತಂ ಭಾರ್ಗವಂ ಪ್ರಾಪ್ಯ ಗಣಾಧಿರಾಜೋ
ಮುಖಾಗ್ನಿನಾ ಶಸ್ತ್ರಶತಾನಿ ದಗ್ಧ್ವಾ ।
ಆಯಾತ್ರ್ಯವೃದ್ಧೋಽಸುರದೇವಯುದ್ಧೇ
ಭವಸ್ಯ ಪಾರ್ಶ್ವೇ ವ್ಯಥಿತಾಽರಿಸೈನ್ಯಃ ॥ ೩೯ ॥
ಅಯಂ ಸ ಶುಕ್ರೋ ಭಗವನ್ನಿತೀದಂ
ನಿವೇದಯಾಮಾಸ ಭವಾಯ ಶೀಘ್ರಂ ।
ಜಗ್ರಾಹ ಶುಕ್ರಂ ಸ ಚ ದೇವದೇವೋ
ಯಥೋಪಹಾರಂ ಶುಚಿನಾ ಪ್ರದತ್ತಂ ॥ ೪೦ ॥
ನ ಕಿಂಚಿದುಕ್ತ್ವಾ ಸಹಿ ಭೂತಗೋಪ್ತಾ
ಚಿಕ್ಷೇಪ ವಕ್ತ್ರೇ ಫಲವತ್ಕವೀಂದ್ರಂ ।
ಹಾಹಾರವಸ್ತೈರಸುರೈಃ ಸಮಸ್ತೈ
ರುಚ್ಚೈರ್ವಿಮುಕ್ತೋಽಹಹಹೇತಿ ಭೂರಿ ॥ ೪೧ ॥
ಕಾವ್ಯೇ ನಿಗೀರ್ಣೇ ಗಿರಿಜೇಶ್ವರೇಣ
ದೈತ್ಯಾ ಜಯಾಶಾರಹಿತಾ ಬಭೂವುಃ ।
ಹಸ್ತೈರ್ವಿಮುಕ್ತಾ ಇವ ವಾರಣೇಂದ್ರಾಃ
ಶೃಂಗೈರ್ವಿಹೀನಾ ಇವ ಗೋವೃಷಾಶ್ಚ ॥ ೪೨ ॥

---

ತಿರುಕಲ್ಲುಗಳು ಮೊದಲಾದುವುಗಳನ್ನು ಆ ನಂದಿಕೇಶ್ವರನ ಮೇಲೆ ಭಯಂಕರ ವಾದ ಮುಗಿಲುಗಳಂತೆ ಮಳೆಗರೆದರು.

೩೯. ಆ ನಂದಿಕೇಶ್ವರನಾದರೊ ಇಷ್ಟಾದರೂ ಭಾರ್ಗವನನ್ನು ಅಪಹರಿಸಿ ಕೊಂಡು, ತನ್ನ ಮುಖದಿಂದ ಹೊರಹೊಮ್ಮಿದ ಅಗ್ನಿಜ್ವಾಲೆಗಳಿಂದ ಆ ದೈತ್ಯರ ನೂರಾರು ಶಸ್ತ್ರಗಳನ್ನು ಸುಟ್ಟು, ಆ ದೈತ್ಯದಿವಿಜರ ರಣರಂಗದಲ್ಲಿ ಬಹಳವಾಗಿ ವಿಜೃಂಭಿಸಿ ಶತ್ರುಸೇನೆಯನ್ನು ಬಹುಮಟ್ಟಿಗೆ ವ್ಯಥೆಗೊಳಿಸಿ ಶಿವನಬಳಿಗೈತಂದನು.

೪೦. "ಪ್ರಭುವೆ, ಇದೊ ಇವನೇ ಶುಕ್ರಾಚಾರ್ಯನು" ಎಂದು ಹೇಳಿ ಆ ನಂದಿಯು ಆ ದೈತ್ಯಗುರುವನ್ನು ಒಪ್ಪಿಸಲು ಆ ದೇವದೇವನು ಪವಿತ್ರ ಹೃದಯನಾದ ಭಕ್ತನು ಅರ್ಪಿಸಿದ ಉಪಹಾರವನ್ನೆಂತೊ ಅಂತು ಬಹು ಶೀಘ್ರವಾಗಿ ಆ ಭಾರ್ಗವನನ್ನು ಹಿಡಿದುಕೊಂಡನು.

೪೧. ಆ ಭೂತಗೋಪ್ತೃವು ಯಾವ ಮಾತನ್ನೂ ಆಡದೆ ಫಲವನ್ನೆಂತೊ ಅಂತು ಆ ಕವೀಂದ್ರನನ್ನು ಬಾಯಲ್ಲಿ ಎತ್ತಿಹಾಕಿಕೊಂಡನು. ಆ ಸಮಯದಲ್ಲಿ ಅಸುರರೆಲ್ಲರೂ ಬಹುವಾಗಿ ಹಾಹಾಕಾರವನ್ನು ಮಾಡಿ ಗೋಳಿಟ್ಟರು.

೪೨. ಹೀಗೆ ಗಿರಿಜೇಶ್ವರನು ಅಸುರಗುರುವನ್ನು ನುಂಗಿಹಾಕಲು,

ಶರೀರಹೀನಾ ಇವ ಜೀವಸಂಘಾ
ದ್ವಿಜಾ ಯಥಾ ಚಾಽಧ್ಯಯನೇನ ಹೀನಾಃ ।
ನಿರುದ್ಯಮಾಃ ಸತ್ವಗುಣಾ ಯಥಾ ವೈ
ಯಥೋದ್ಯಮಾ ಭಾಗ್ಯವಿವರ್ಜಿತಾಶ್ಚ ॥ ೪೩ ॥
ಪತ್ಯಾ ವಿಹೀನಾಶ್ಚ ಯಥೈವ ಯೋಷಾ
ಯಥಾ ವಿಪಕ್ಷಾ ಇವ ಮಾರ್ಗಣೌಘಾಃ ।
ಆಯೂಂಷಿ ಹೀನಾನಿ ಯಥೈವ ಪುಣ್ಯೈ
ರ್ವ್ಯರ್ಥಶ್ರುತೀನ ಹೀನಾನಿ ಯಥಾ ಶ್ರುತಾನಿ ॥ ೪೪ ॥
ವಿನಾ ಯಥಾ ಪೈ ಭವಶಕ್ತಿಮೀಶಾಂ
ಭವಂತಿ ಹೀನಾಃ ಸ್ವಫಲೈಃ ಕ್ರಿಯೌಘಾಃ ।
ತಥಾ ವಿನಾ ತಂ ದ್ವಿಜವರ್ಯಮೀಶಂ
ದೈತ್ಯಾ ಜಯಾಶಾಪಿಮುಖಾ ಬಭೂವುಃ ॥ ೪೫ ॥
ನಂದಿನಾಽಪಹೃತೇ ಶುಕ್ರೇ ಗಿಲಿತೇ ಚ ವಿಷಾದಿನಾ ।
ವಿಷಾದಮಗಮನ್ ದೈತ್ಯಾ ಹೀಯಮಾನಾ ರಣೋತ್ಸವಾಃ ॥ ೪೬ ॥
ತಾನ್ವೀಕ್ಷ್ಯ ವಿಗತೋತ್ಸಾಹಾನಂಧಕಃ ಪ್ರತ್ಯಭಾಷತ ।
ಕವಿಂ ವಿಕ್ರಮ್ಯ ನಯತಾ ನಂದಿನಾ ವಂಚಿತಾ ವಯಂ ॥ ೪೭ ॥

---

ಸೊಂಡಿಲನ್ನು ಕತ್ತರಿಸಿ ಕೆಡವಿದ ಆನೆಗಳಂತೆಯೂ, ಕೊಂಬುಗಳನ್ನು ಕಿತ್ತಿಸಿದ ಗೂಳಿಗಳಂತೆಯೂ ದೈತ್ಯರು ಜಯದ ಆಶೆಯೇ ಇಲ್ಲದವರಾದರು.

೪೩–೪೫. ಶರೀರವಿಲ್ಲದ ಜೀವಸಂಘವಂತೆಯೂ, ಅಧ್ಯಯನವಿಲ್ಲದ ಬ್ರಾಹ್ಮಣರಂತೆಯೂ, ನಿರುದ್ಯಮರಾದ ಸಾತ್ತ್ವಿಕರಂತೆಯೂ, ಉದ್ಯಮ ಶೀಲರಾದ ದರಿದ್ರರಂತೆಯೂ, ಪತಿವಿಹೀನರಾದ ನಾರಿಯರಂತೆಯೂ, ರೆಕ್ಕೆ ಗಳಿಲ್ಲದ ಸರಳುಗಳಂತೆಯೂ, ಅಲ್ಪಾಯುಷ್ಯವಂತರ ಪುಣ್ಯಕರ್ಮಗಳಂತೆಯೂ, ಸದಾಚಾರಸಂಪತ್ತಿಯಿಲ್ಲದ ಅಧ್ಯಯನದಂತೆಯೂ, ಆ ಪರಮೇಶ್ವರನ ಕೃಪೆ ಯಿಲ್ಲದೆ ಫಲವಿಲ್ಲದೆ ವ್ಯರ್ಥವಾಗಿ ಹೋಗುವ ಸತ್ಕ್ರಿಯೆಗಳಂತೆಯೂ ಅವರ ಜಯದ ಆಶೆಯು ನಿರರ್ಥಕವಾಗಿ ಹೋಯಿತು.

೪೬. ಹೀಗೆ ನಂದಿಯು ಶುಕ್ರಾಚಾರ್ಯನನ್ನು ಅಪಹರಿಸಿ ತಂದ ಬಳಿಕ ವಿಷವನ್ನೇ ಪಾನಮಾಡಿದ ಆ ಶಿವನು ಅವನನ್ನು ನುಂಗಿದ ತರುವಾಯ ದೈತ್ಯ ರೆಲ್ಲರೂ ಕಾಳಗದಲ್ಲಿ ಉತ್ಸಾಹವನ್ನು ತೊರೆದು ವಿಷಾದಕ್ಕೊಳಗಾದರು.

೪೭–೫೨. ಹೀಗೆ ನಿರುತ್ಸಾಹಿಗಳಾಗಿ ನಿಂತ ಅವರೆಲ್ಲರನ್ನೂ ಕಂಡು ರಣ ರಂಗದಲ್ಲಿದ್ದ ಅಂಧಕಾಸುರನು ಅವರನ್ನು ಕುರಿತು, "ಅಯ್ಯಾ ದೈತ್ಯರೆ,

ತನೂರ್ವಿನಾ ಹೃತಾಃ ಪ್ರಾಣಾಃ ಸರ್ವೇಷಾಮದ್ಯ ತೇನ ನಃ ।
ಧೈರ್ಯಂ ವೀರ್ಯಂ ಗತಿಃ ಕೀರ್ತಿಃ ಸತ್ವಂ ತೇಜಃ ಪರಾಕ್ರಮಃ ॥ ೪೮ ॥
ಯುಗಪನ್ನೋ ಹೃತಂ ಸರ್ವಮೇಕಸ್ಮಿನ್ಭಾರ್ಗವೇ ಹೃತೇ ।
ಧಿಗಸ್ಮಾನ್ಕುಲಪೂಜ್ಯೋ ಯೈರೇಕೋಽಪಿ ಕುಲಸತ್ತಮಃ ।
ಗುರುಃ ಸರ್ವಸಮರ್ಥಶ್ಚ ತ್ರಾತಾ ತ್ರಾತೋ ನ ಚಾಪದಿ ॥ ೪೯ ॥
ತದ್ಧೈರ್ಯಮವಲಂಬ್ಯೇಹ ಯುಧ್ಯಧ್ವಮರಿಭಿಃ ಸಹ ।
ಸೂದಯಿಷ್ಯಾಮ್ಯಹಂ ಸರ್ವಾನ್ಪ್ರಮಥಾನ್ ಸಹನಂದಿನಾ ॥ ೫೦ ॥
ಅದ್ಯೈತಾನ್ವಿವಶಾನ್ ಹತ್ವಾ ಸಹದೇವೈಃ ಸವಾಸವೈಃ ।
ಭಾರ್ಗವಂ ಮೋಚಯಿಷ್ಯಾಮಿ ಜೀವಂ ಯೋಗೀವ ಕರ್ಮತಃ ॥ ೫೧ ॥
ಸ ಚಾಽಪಿ ಯೋಗೀ ಯೋಗೇನ ಯದಿ ನಾಮ ಸ್ವಯಂ ಪ್ರಭುಃ ।
ಶರೀರಾತ್ತಸ್ಯ ನಿರ್ಗಚ್ಛೇದಸ್ಮಾಕಂ ಶೇಷಪಾಲಿತಾ ॥ ೫೨ ॥
ಇತ್ಯಂಧಕವಚಃ ಶ್ರುತ್ವಾ ದಾನವಾ ಮೇಘನಿಸ್ವನಾಃ ।
ಪ್ರಮಥಾನರ್ದಯಾಮಾಸುರ್ಮರ್ತವ್ಯೇ ಕೃತ ನಿಶ್ಚಯಾಃ ॥ ೫೩ ॥

---

ನಂದಿಯು ನಮ್ಮ ಮೇಲೆ ಪರಾಕ್ರಮವನ್ನು ವಿಜೃಂಭಿಸಿ ನಮ್ಮನ್ನು ಬಹುಮಟ್ಟಿಗೆ ಮೋಸಗೊಳಿಸಿದನು. ನಮ್ಮ ದೇಹಗಳನ್ನು ಮಾತ್ರ ಬಿಟ್ಟು ನಮ್ಮ ಪ್ರಾಣಗಳನ್ನೇ ಸೂರೆಗೊಂಡು ಹೋದನು. ಈಗ ನಮ್ಮ ಧೈರ್ಯ, ನಮ್ಮ ವೀರ್ಯ, ನಮ್ಮ ಪದವಿ ಪ್ರತಿಷ್ಠೆಗಳು, ನಮ್ಮ ಕೀರ್ತಿ ನಮ್ಮ ಸತ್ತ್ವ ತೇಜಸ್ಸು ಪರಾಕ್ರಮಗಳು—ಇವೆಲ್ಲವೂ ಕುಲಗುರುವಾದ ಭಾರ್ಗವನ ಅಪಹಾರದೊಡನೆಯೆ ಅಪಹೃತವಾಗಿ ಹೋದುವು. ಕುಲಕ್ಕೆಲ್ಲ ಏಕೈಕಗುರುವೆನಿಸಿ ಸರ್ವಸಮರ್ಥನಾಗಿ ಪೂಜ್ಯನೆನಿಸಿದ್ದ ಆಚಾರ್ಯನನ್ನು ಆಪತ್ತಿನಲ್ಲಿ ಸಂರಕ್ಷಿಸಲಾರದೆ ಹೋದ ನಮಗಷ್ಟು ಧಿಕ್ಕಾರವಿರಲಿ. ಆದುದರಿಂದ ಏಳಿರಿ, ಧೈರ್ಯವನ್ನು ತಾಳಿರಿ, ಶತ್ರುಗಳೊಡನೆ ಹೋರಾಡಿರಿ. ನಾನು ಈ ನಂದಿಯೊಡಗೂಡಿದ ಪ್ರಮಥರೆಲ್ಲರನ್ನೂ ಸಂಹರಿಸುತ್ತೇನೆ. ಇದೊ ಈಗಲೆ ರಣಾಂಗಣದಲ್ಲಿ ಮುನ್ನುಗ್ಗಿ ಹೋಗಿ, ಇಂದ್ರಾದಿ ದೇವತೆಗಳೊಡಗೂಡಿದ ದುರ್ಬಲರಾದ ಈ ಪ್ರಮಥರೆಲ್ಲರನ್ನೂ ಒಕ್ಕಲಿಕ್ಕಿ ಯೋಗಿಯು ಕರ್ಮದ ತೊಡಕಿನಿಂದ ಜೀವನನ್ನೆಂತೊ ಅಂತು ನಮ್ಮ ಗುರುವರ್ಯನನ್ನು ಬಿಡಿಸಿ ತರುತ್ತೇನೆ. ಆ ಗುರುವು ಯೋಗಿಯು; ಯೋಗಬಲದಿಂದ ಆತನೇ ಆ ವಿಷಕಂಠನ ಹೊಟ್ಟೆಯಿಂದ ಹೊರಬರಲು ಸಮರ್ಥನಾಗಿದ್ದರೆ ಬರಲಿ; ಅಳಿದುಳಿದಿರುವ ನಮ್ಮೆಲ್ಲರನ್ನೂ ಕಾಪಾಡಲಿ" ಎಂದು ಹೇಳಿದನು.

೫೩. ಇಂತು ನುಡಿದ ಅಂಧಕದೈತ್ಯನ ನುಡಿಗಳನ್ನು ಕೇಳಿ, ದೈತ್ಯರೆಲ್ಲರೂ ಪ್ರಾಣಗಳ ಮೇಲಣ ಆಶೆಯೆಲ್ಲವನ್ನೂ ತೊರೆದು ತುಂಬುಮುಗಿಲುಗಳಂತೆ ಗರ್ಜಿಸುತ್ತ ಮುಂದೆ ಹೋಗಿ, ಪ್ರಮಥರನ್ನೆಲ್ಲ ಮರ್ದಿಸತೊಡಗಿದರು.

ಸತ್ಯಾಯುಷಿ ನ ನೋ ಜಾತು ಶಕ್ತಾಃ ಸ್ಯುಃ ಪ್ರಮಥಾ ಬಲಾತ್ ।
ಅಸತ್ಯಾಯುಷಿ ಕಿಂ ಗತ್ವಾ ತ್ಯಕ್ತ್ವಾ ಸ್ವಾಮಿನಮಾಹವೇ ॥ ೫೪ ॥
ಯೇ ಸ್ವಾಮಿನಂ ವಿಹಾಯಾಜೌ ಬಹುಮಾನಧನಾ ಜನಾಃ ।
ಯಾಂತಿ ತೇ ಯಾಂತಿ ನಿಯತಮಂಧತಾಮಿಸ್ರಮಾಲಯಂ ॥ ೫೫ ॥
ಅಯಶಸ್ತಮಸಾ ಖ್ಯಾತಿಂ ಮಲಿನೀಕೃತ್ಯ ಭೂರಿಶಃ ।
ಇಹಾಽಮುತ್ರಾಽಪಿ ಸುಖಿನೋ ನಸ್ಯುರ್ಭಗ್ನಾ ರಣಾಜಿರಾತ್ ॥ ೫೬ ॥
ಕಿಂ ದಾನೈಃ ಕಿಂ ತಪೋಭಿಶ್ಚ ಕಿಂ ತೀರ್ಥಪರಿಮಜ್ಜನೈಃ ।
ಧರಾತೀರ್ಥೇ ಯದಿ ಸ್ನಾತಂ ಪುನರ್ಭವಮಲಾಽಪಹೇ ॥ ೫೭ ॥
ಸಂಪ್ರಧಾರ್ಯೇತಿ ತೇಽನ್ಯೋನ್ಯಂ ದೈತ್ಯಾಸ್ತೇ ದನುಜಾಸ್ತಥಾ ।
ಮಮಂಥುಃ ಪ್ರಮಥಾನಾಜೌ ರಣಭೇರೀರ್ನಿನಾದ್ಯ ಚ ॥ ೫೮ ॥
ತತ್ರ ಬಾಣಾಽಸಿವಜ್ರೌಘೈಃ ಕಟಂಕಟಶಿಲಾಮಯೈಃ ।
ಭುಶುಂಡೀ ಭಿಂದಿಪಾಲೈಶ್ಚ ಶಕ್ತಿಭಲ್ಲಪರಶ್ವಧೈಃ ॥ ೫೯ ॥
ಖಾಟ್ವಾಂಗೈಃ ಪಟ್ಟಿಶೈಃ ಶೂಲೈರ್ಲಕುಟೈರ್ಮುಸಲೈರಲಂ ।
ಪರಸ್ಪರಮಭಿಘ್ನಂತಃ ಪ್ರಚಕ್ರುಃ ಕದನಂ ಮಹತ್ ॥ ೬೦ ॥

---

೫೪—೫೭. "ಅಯ್ಯಾ ದೈತ್ಯರೆ, ನಮಗೆ ಆಯುಸ್ಸೇನಾದರೂ ಇದ್ದರೆ ಈ ಪ್ರಮಥರು ನಮ್ಮನ್ನು ಕೊಲ್ಲಲು ಎಂದಿಗೂ ಸಮರ್ಥರಾಗರು. ಒಂದು ವೇಳೆ ನಾವು ಕ್ಷೀಣಾಯುಗಳಾಗಿದ್ದರೂ ಸ್ವಾಮಿಯನ್ನು ಕಾಳೆಗದಲ್ಲಿ ತೊರೆದು ಪಲಾಯನವಾಗಿ ಪ್ರಯೋಜನವೇನು ? ಯಾವ ಜನರು ಬಹುಮಾನ ಧನರಾಗಿ ಸ್ವಾಮಿಯೊಬ್ಬನನ್ನೇ ಕಾಳೆಗದ ನೆಲದಲ್ಲಿ ತೊರೆದು ಓಡಿಹೋಗುವರೊ ಅವರು ಖಂಡಿತವಾಗಿಯೂ ಅಂಧತಾಮಿಸ್ರನರಕದಲ್ಲಿ ಬೀಳುತ್ತಾರೆ. ಅಯಶಸ್ಸೆಂಬ ಕತ್ತಲೆಯಿಂದ ತಮ್ಮ ಕೀರ್ತಿಜ್ಯೋತಿಯನ್ನು ಬಹಳವಾಗಿ ಮಲಿನಗೊಳಿಸಿ ಕೊಂಡು ರಣಭೂಮಿಯನ್ನು ಬಿಟ್ಟು ಓಡಿಹೋಗುವ ಭೀರುಗಳು ಇಹಪರಗಳಲ್ಲಿ ಸುಖವನ್ನೆಂದಿಗೂ ಪಡೆಯರು. ಇನ್ನೊಮ್ಮೆ ಹುಟ್ಟುವುದನ್ನೇ ತಪ್ಪಿಸುವ ಕಾಳೆಗದ ಖಡ್ಗಧಾರೆಯೆಂಬ ತೀರ್ಥದಲ್ಲಿ ಮಿಾಯದವರು ದಾನ ತಪಸ್ಸುಗಳನ್ನು ಮಾಡು ವುದರಿಂದ ಏನು ಪ್ರಯೋಜನ? ಯಾತ್ರೆಗಳನ್ನು ಮಾಡಿ ತೀರ್ಥಗಳಲ್ಲಿ ಮುಳುಗು ವುದರಿಂದೇನು ?"

೫೮. ಎಲೈ ಶಿವಶರ್ಮನೆ, ಆ ದೈತ್ಯರು ಈ ರೀತಿ ಪರಸ್ಪರವಾಗಿ ಮಾತ ನಾಡಿಕೊಳ್ಳುತ್ತ ರಣಭೇರಿಗಳನ್ನು ಮೊಳಗಿಸಿ ಪ್ರಮಥರನ್ನು ಮಥಿಸತೊಡಗಿದರು.

೫೯—೬೦. ಅವರು ಬಾಣ, ಕತ್ತಿ, ವಜ್ರಾಯುಧಗಳು, ಯಂತ್ರ ಪಾಷಾಣ ಗಳು ಭುಶುಂಡಿ, ಭಿಂದಿಪಾಲ, ಶಕ್ತಿ, ಭಲ್ಲ, ಗಂಡುಗೊಡಲಿ, ಖಟ್ವಾಂಗ, ಪಟ್ಟಿಶ,

ಕಾರ್ಮುಕಾಣಾಂ ವಿಕೃಷ್ಟಾನಾಂ ಪತತಾಂ ಚ ಪತತ್ರಿಣಾಂ ।
ಭಿಂದಿಪಾಲಭುಶುಂಡೀನಾಂ ಕ್ಷ್ವೇಡಿತಾನಾಂ ರವೋಽಭವತ್ ॥ ೬೧ ॥
ರಣತೂರ್ಯನಿನಾದೈಶ್ಚ ಗಜಾನಾಂ ಬಹುಬೃಂಹಿತೈಃ ।
ಹೇಷಾರವೈರ್ಹಯಾನಾಂ ಚ ಮಹಾನ್ಕೋಲಾಹಲೋಽಭವತ್ ॥ ೬೨ ॥
ಪ್ರತಿಸ್ವನೈರವಾಪೂರಿ ದ್ಯಾವಾಭೂಮ್ಯೋರ್ಯದಂತರಂ ।
ಅಭೀರೂಣಾಂ ಚ ಭೀರೂಣಾಂ ಮಹಾರೋಮೋದ್ಗಮೋಽಭವತ್ ॥ ೬೩ ॥
ಗಜವಾಜಿ ಮಹಾರಾವ ಸ್ಫುಟಚ್ಛಬ್ದಗ್ರಹಾಣಿ ಚ ।
ಭಗ್ನಧ್ವಜಪತಾಕಾನಿ ಕ್ಷೀಣಪ್ರಹರಣಾನಿ ಚ ॥ ೬೪ ॥
ರುಧಿರೋದ್ಗಾರ ಚಿತ್ರಾಣಿ ಹ್ಯಶ್ವಹಸ್ತಿರಥಾನಿ ಚ ।
ಪಿಪಾಸಿತಾನಿ ಸೈನ್ಯಾನಿ ಮುಮೂರ್ಛುರುಭಯತ್ರ ವೈ ॥ ೬೫ ॥
ದೃಷ್ಟ್ವಾ ಸೈನ್ಯಂ ಚ ಪ್ರಮಥೈರ್ಭಜ್ಯಮಾನಮಿತಸ್ತತಃ ।
ದುದ್ರಾವ ರಥಮಾಸ್ಥಾಯ ಸ್ವಯಮೇವಾಽಂಧಕೋ ಗಣಾನ್ ॥ ೬೬ ॥

ಶೂಲ, ದೊಣ್ಣೆ, ಒನಕೆ ಮೊದಲಾದ ಆಯುಧಗಳಿಂದ ಪರಸ್ಪರವಾಗಿ ಘಾತಿಸುತ್ತ ಮಹತ್ತರವಾದ ಯುದ್ಧವನ್ನು ಮಾಡಿದರು.

೬೧. ಎಳೆದು ಬಿಡುತ್ತಿರುವ ಬಿಲ್ಲುಗಳ ಟಂಕಾರಧ್ವನಿಯೂ, ತಾನೇ ತಾನಾಗಿ ಬಂದು ಬೀಳುತ್ತಿರುವ ಬಾಣಗಳ, ಭಿಂದಿಪಾಲ ಭುಶುಂಡಿಗಳ ಧ್ವನಿಯೂ ದೈತ್ಯರ ಸಿಂಹಧ್ವನಿಯೂ ಭಯಂಕರವಾಗಿ ಪರಿಣಮಿಸಿತು.

೬೨. ಮದದಾನೆಗಳ ಘೀಂಕಾರಧ್ವನಿಗಳಿಂದಲೂ, ಕುದುರೆಗಳ ಹೇಷಾರವದಿಂದಲೂ ಭಯಂಕರವಾದ ಕೋಲಾಹಲವುಂಟಾಯಿತು.

೬೩. ಭೂಮ್ಯಂತರಿಕ್ಷಗಳೆರಡೂ ಪ್ರತಿಧ್ವನಿಗಳಿಂದ ತುಂಬಿ ಭೀರುಗಳಿಗೂ ವೀರರಿಗೂ ರೋಮಾಂಚವನ್ನುಂಟುಮಾಡಿತು.

೬೪. ಆನೆ ಕುದುರೆಗಳ ಮಹಾಧ್ವನಿಗಳಿಂದ ಕರ್ಣಕುಹರಗಳೇ ಒಡೆದು ಹೋಗುತ್ತಿದ್ದುವಲ್ಲದೆ, ಉಭಯಸೇನೆಗಳ ರಥಧ್ವಜಗಳೂ, ಪತಾಕೆಗಳೂ ಮುರಿದುಬಿದ್ದು, ಯೋಧರ ಕೈಗಳಲ್ಲಿದ್ದ ಆಯುಧಗಳೆಲ್ಲವೂ ಕ್ಷೀಣವಾಗುತ್ತಿದ್ದವು.

೬೫. ಉಭಯ ಸೇನೆಗಳಲ್ಲಿಯೂ ಆನೆ, ಕುದುರೆ, ರಥಗಳು ನೆಲಕ್ಕುರಗಲು ಯೋಧರು ಬಾಯಾರಿ ಮೂರ್ಛೆಗೊಳ್ಳುತ್ತಿದ್ದರು.

೬೬. ಹೀಗೆ ತನ್ನ ದೈತ್ಯಸೇನೆಯೆಲ್ಲವನ್ನೂ ಪ್ರಮಥರು ಅಲ್ಲಲ್ಲಿಯೇ ನಾಶಗೊಳಿಸುತ್ತಿರಲು ಅಂಧಕಾಸರನು ತಾನೇ ರಥವೇರಿ ಕುಳಿತು ಯುದ್ಧಭೂಮಿಯಲ್ಲಿ ನುಗ್ಗಿ ಹೊರಟು ಗಣಗಳನ್ನು ಅಟ್ಟಬಂದನು.

ಶರವಜ್ರಪ್ರಹಾರೈಸ್ತೈರ್ವಜ್ರಾಘಾತೈರ್ನಗಾ ಇವ ।
ಪ್ರಮಥಾ ನೇಶಿರೇ ವಾತೈರ್ನಿಸ್ತೋಯಾ ಇವ ತೋಯದಾಃ ॥ ೬೭ ॥
ಯಾಂತಮಾಯಾಂತಮಾಲೋಕ್ಯ ದೂರಸ್ಥಂ ನಿಕಟಸ್ಥಿತಂ ।
ಪ್ರತ್ಯೇಕಂ ರೋಮಸಂಖ್ಯಾಭಿರ್ವ್ಯಧಾದ್ಬಾಣೈಸ್ತದಾಽಂಧಕಃ ॥ ೬೮ ॥
ವಿನಾಯಕೇನ ಸ್ಕಂದೇನ ನಂದಿನಾ ಸೋಮನಂದಿನಾ ।
ನೈಗಮೇಯೇನ ಶಾಖೇನ ವಿಶಾಖೇನ ಬಲೀಯಸಾ ॥ ೬೯ ॥
ಇತ್ಯಾದ್ಯೈಸ್ತು ಗಣೈರುಗ್ರೈರಂಧಕೋಽಪ್ಯಂಧಕೀ ಕೃತಃ ।
ತ್ರಿಶೂಲಶಕ್ತಿಬಾಣೌಘ ಧಾರಾಸಂಪಾತಪಾತಿಭಿಃ ॥ ೭೦ ॥
ತತಃ ಕೋಲಾಹಲೋ ಜಾತಃ ಪ್ರಮಥಾಽಸುರಸೈನ್ಯಯೋಃ ।
ತೇನ ಶಬ್ದೇನ ಮಹತಾ ಶುಕ್ರಃ ಶಂಭೂದರೇ ಸ್ಥಿತಃ ॥ ೭೧ ॥
ಛಿದ್ರಾನ್ವೇಷೀ ಭ್ರಮನ್ಸೋಽಥ ವಿನಿಃಕೇತೋ ಯಥಾಽನಿಲಃ ।
ಸಪ್ತಲೋಕಾನ್ ಸಪಾಲಾನ್ ಸ ರುದ್ರದೇಹೇ ವ್ಯಲೋಕಯತ್ ॥ ೭೨ ॥
ಬ್ರಹ್ಮನಾರಾಯಣೇಂದ್ರಾಣಾಮಾದಿತ್ಯಾಽಪ್ಸರಸಾಂ ತಥಾ ।
ಭುವನಾನಿ ವಿಚಿತ್ರಾಣಿ ಯುದ್ಧಂ ಚ ಪ್ರಮಥಾಽಸುರಂ ॥ ೭೩ ॥

---

೬೭. ಆಗಲಾ ಅಸುರೇಂದ್ರನ ಬಾಣ ವಜ್ರಗಳ ಹೊಡೆತದಿಂದ ದೇವೇಂದ್ರನ ವಜ್ರಾಯುಧದಿಂದ ಪರ್ವತಗಳಂತೂ ಅಂತು, ಪ್ರಬಲವಾದ ಬಿರುಗಾಳಿಯಿಂದ ನೀರಿಲ್ಲದ ಮೋಡಗಳಂತೂ ಅಂತು ಪ್ರಮಥರೆಲ್ಲರೂ ನಾಶವಾಗತೊಡಗಿದರು.

೬೮. ಆ ಅಂಧಕನು ದೂರದಲ್ಲಿಯೂ ಹತ್ತಿರದಲ್ಲಿಯೂ ಬಂದೆರಗುತ್ತಿದ್ದ ಪ್ರಮಥರ ಮೇಲೆ ಒಂದೊಂದು ರೋಮಕ್ಕೂ ಒಂದೊಂದು ಬಾಣವನ್ನು ಪ್ರಯೋಗಿಸಿ ಘಾತಿಸಿದನು.

೬೯–೭೦. ತರುವಾಯ ಆ ಅಸುರನು ಸಹ ವಿನಾಯಕ, ಷಣ್ಮುಖ, ನಂದಿ, ಸೋಮನಂದಿ, ನೈಗಮೇಯ, ಶಂಖ, ಮಹಾ ಬಲಾಢ್ಯನಾದ ವಿಶಾಖ ಮೊದಲಾದ ಭಯಂಕರವಾದ ಶಿವಗಣಗಳ ತ್ರಿಶೂಲ ಶಕ್ತಿ ಬಾಣಸಮೂಹಗಳ ಸಂತತವಾದ ಸುರಿಮಳೆಯಿಂದ ಕುರುಡಾಗಿಸಲ್ಪಟ್ಟನು

೭೧–೭೩. ಆಗ ಇತ್ತಂಡದ ಸೇನೆಯಲ್ಲಿಯೂ ಮಹತ್ತರವಾದ ಕೋಲಾಹಲ ಧ್ವನಿಯೆದ್ದಿತು. ಆ ಧ್ವನಿಯನ್ನು ಕೇಳಿ ಶಂಭುವಿನ ಉದರದಲ್ಲಿದ್ದ ಶುಕ್ರಾಚಾರ್ಯನು ಹೊರಬರಬೇಕೆಂದು ಅಲ್ಲಿಯೇ ಛಿದ್ರವನ್ನು ಹುಡುಕುತ್ತ ಹೊರಬರಲು ಮಾರ್ಗವೇ ಇಲ್ಲದ ವಾಯುವಿನಂತೆ ಅಲ್ಲಿಯೇ ಸುತ್ತಾಡುತ್ತ ಆ ರುದ್ರನ ಉದರದಲ್ಲಿಯೇ ಪಾಲಕರೊಡಗೂಡಿದ ಸಪ್ತಲೋಕಗಳನ್ನೂ ಬ್ರಹ್ಮ,

ಸ ವರ್ಷಾಣಾಂ ಶತಂ ಕುಕ್ಷೌ ಭವಸ್ಯ ಪರಿತೋ ಭ್ರಮನ್ ।
ನ ತಸ್ಯ ದದೃಶೇ ರಂಧ್ರಂ ಶುಚೇ ರಂಧ್ರಂ ಖಲೋ ಯಥಾ ॥ ೭೪ ॥
ಶಾಂಭವೇನಾಽಥ ಯೋಗೇನ ಶುಕ್ರರೂಪೇಣ ಭಾರ್ಗವಃ ।
ಚಸ್ಕಂದಾಽಥ ನ ನಾಮಾಽಪಿ ತತೋ ದೇವೇನ ಭಾಷಿತಃ ॥ ೭೫ ॥
ಶುಕ್ರವನ್ನಿಃಸೃತೋ ಯಸ್ಮಾತ್ತಸ್ಮಾತ್ತ್ವಂ ಭೃಗುನಂದನ ।
ಕರ್ಮಣಾಽನೇನ ಶುಕ್ರಸ್ತ್ವಂ ಮಮ ಪುತ್ರೋಽಸಿ ಗಮ್ಯತಾಂ ॥ ೭೬ ॥
ಜಠರಾನ್ನಿರ್ಗತೇ ಶುಕ್ರೇ ದೇವೋಽಪಿ ಮುಮುದೇತರಾಂ ।
ಭ್ರಮಂಛ್ರೇಯೋಽಭವದ್ಯನ್ಮೇ ನ ಮೃತೋ ಜಠರೇ ದ್ವಿಜಃ ॥ ೭೭ ॥
ಇತ್ಯೇವಮುಕ್ತೋ ದೇವೇನ ಶುಕ್ರೋಽರ್ಕಸದೃಶದ್ಯುತಿಃ ।
ವಿವೇಶ ದಾನವಾಽನೀಕಂ ಮೇಘಮಾಲಾಂ ಯಥಾ ಶಶೀ ॥ ೭೮ ॥
ಶುಕ್ರೋದಯಾನ್ಮುದಂ ಲೇಭೇ ಸದಾನವಮಹಾರ್ಣವಃ ।
ಯಥಾ ಚಂದ್ರೋದಯೇ ಹರ್ಷಮೂರ್ಮಿಮಾಲೀ ಮಹೋದಧಿಃ ॥ ೭೯ ॥

---

ನಾರಾಯಣ, ಇಂದ್ರ, ಆದಿತ್ಯ, ಅಪ್ಸರರು ಮೊದಲಾದವರ ವಿಚಿತ್ರವಾದ ಲೋಕಗಳನ್ನೂ ದೈತ್ಯಪ್ರಮುಖರ ಯುದ್ಧವನ್ನೂ ನೋಡಿದನು.

೭೪. ಹೀಗೆ ಅವನು ಆ ಪರಮೇಶ್ವರನ ಉದರದಲ್ಲಿ ನೂರು ವರ್ಷಗಳ ಕಾಲ ಅಲೆಯುತ್ತಿದ್ದರೂ ಶುಚಿಯಾದ ಪುರುಷನ ವಿಷಯದಲ್ಲಿ ಯಾವ ಲೋಪವನ್ನೂ ಕಾಣದ ಖಲನಂತೆ ಮಾರ್ಗವನ್ನೇ ಕಾಣಲಿಲ್ಲವು.

೭೫–೭೬. ತರುವಾಯ ಆ ಭಾರ್ಗವನು ಶಂಭುವಿನ ಅನುಗ್ರಹದಿಂದ ದೊರೆತ ಯೋಗಬಲದಿಂದ ವೀರ್ಯರೂಪವನ್ನು ತಾಳಿ ಆ ಪರಮೇಶ್ವರನ ಉಪವಸ್ಥೆಯ ಛಿದ್ರದಿಂದ ಹೊರಬಂದು ಆತನನ್ನು ನಮಸ್ಕರಿಸಿದನು. ಅವನನ್ನು ಕಂಡು ಶಂಭುವು, "ಅಯ್ಯಾ ಭೃಗುನಂದನನೆ, ನೀನು ಶುಕ್ರದಂತೆ ನನ್ನ ದೇಹದಿಂದ ಹೊರ ಬಂದೆಯಾಗಿ ನೀನು ಶುಕ್ರನೆನಿಸಿ ನನ್ನ ಮಗನಾಗಿರುವೆ. ಹೋಗಿಬಾ" ಎಂದು ಹೇಳಿದನು.

೭೭. ಶುಕ್ರಾಚಾರ್ಯನು ಜಠರದಿಂದ ಹೊರಬಂದು ಹೊರಟುಹೋಗುತ್ತಲೆ ಪರಮೇಶ್ವರನು ಸಹ "ಉದರದಲ್ಲಿಯೇ ಭ್ರಮಿಸುತ್ತಿದ್ದ ಈ ಬ್ರಾಹ್ಮಣನು ಮಡಿಯದಿದ್ದುದರಿಂದ ನನಗೆ ಶ್ರೇಯಸ್ಸೇ ಆಯಿತು, ಹೋಗಲಿ" ಎಂದು ಬಹಳವಾಗಿ ಸಂತೋಷಿಸಿದನು.

೭೮. ಶಂಕರನು ಈ ರೀತಿ ನುಡಿಯಲು ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ ಆ ಶುಕ್ರನೂ ಸಮಾಧಾನಗೊಂಡು, ಮೇಘಮಾಲೆಯನ್ನು ಹೊಗುವ ಚಂದ್ರನಂತೆ ಆ ದೈತ್ಯಸೇನೆಯನ್ನು ಹೊಕ್ಕನು.

೭೯. ಹೀಗೆ ಶುಕ್ರನು ದಿಸಿಬಂದೊಡನೆಯೆ ಆ ದೈತ್ಯಮಹಾರ್ಣವವು

ಅಂಧಕಾಂಧಕಹಂತ್ರೋರ್ವೈ ವರ್ತಮಾನೇ ಮಹಾಹವೇ ।
ಇತ್ಥಂ ನಾಮ್ನಾಭವಚ್ಛುಕ್ರಃ ಸ ವೈ ಭಾರ್ಗವನಂದನಃ ॥ ೮೦ ॥
ಯಥಾ ಚ ವಿದ್ಯಾಂ ತಾಂ ಪ್ರಾಪ ಮೃತಸಂಜೀವಿನೀಂ ಪರಾಂ ।
ಶಂಭೋರನುಗ್ರಹಾತ್ಕಾವ್ಯಸ್ತನ್ನಿಶಾಮಯ ಸುವ್ರತ ॥ ೮೧ ॥

ಗಣಾವೂಚತುಃ :—

ಪುರಾಽಸೌ ಭೃಗುದಾಯಾದೋ ಗತ್ವಾ ವಾರಾಣಸೀಂ ಪುರೀಂ ।
ಅಂಡಜಸ್ವೇದಜೋದ್ಭಿಜ್ಜ ಜರಾಯುಜ ಗತಿಪ್ರದಾಂ ॥ ೮೨ ॥
ಸಂಸ್ಥಾಪ್ಯ ಲಿಂಗಂ ಶ್ರೀಶಂಭೋಃ ಕೂಪಂ ಕೃತ್ವಾ ತದಗ್ರತಃ ।
ಬಹುಕಾಲಂ ತಪಸ್ತೇಪೇ ಧ್ಯಾಯನ್ವಿಶ್ವೇಶ್ವರಂ ಪ್ರಭುಂ ॥ ೮೩ ॥
ರಾಜಚಂಪಕಧತ್ತೂರಕರವೀರಕುಶೇಶಯೈಃ ।
ಮಾಲತೀ ಕರ್ಣಿಕಾಕಾರೈಶ್ಚ ಕದಂಬೈರ್ಬಕುಲೋತ್ಪಲೈಃ ॥ ೮೪ ॥
ಮಲ್ಲಿಕಾ ಶತಪತ್ರೀಭಿಃ ಸಂದುವಾರೈಃ ಸಕಿಂಶುಕೈಃ ।
ಅಶೋಕೈಃ ಕರುಣೈಃ ಪುಷ್ಪೈಃ ಪುನ್ನಾಗೈರ್ನಾಗಕೇಸರೈಃ ॥ ೮೫ ॥

---

ಚಂದ್ರೋದಯ ಕಾಲದಲ್ಲಿ ಮಹೋದಧಿಯಂತೊ ಅಂತು ಸಂತೋಷದಿಂದ ಉಬ್ಬಿಹೋಯಿತು

೮೦. ಹೀಗೆ ಅಂಧಕಾಸುರನಿಗೂ ಅಂಧಕವೈರಿಯಾದ ಪರಮೇಶ್ವರನಿಗೂ ಕಾಳಗವು ನಡೆಯುತ್ತಿರಲು ಆ ಭೃಗುನಂದನನು ಶುಕ್ರನೆಂಬ ಹೆಸರನ್ನು ಪಡೆದನು.

೮೧. ಎಲೈ ಶಿವಶರ್ಮನೆ, ಆ ಶುಕ್ರಾಚಾರ್ಯನು ಪರಮೇಶ್ವರನ ಅನುಗ್ರಹದಿಂದ ಮೃತಸಂಜೀವಿನಿಯೆಂಬ ಉತ್ತಮ ವಿದ್ಯೆಯನ್ನು ಪಡೆದುದೆಂತೆಂಬುದನ್ನು ಹೇಳುತ್ತೇವೆ ಕೇಳು.

೮೨–೮೩. ಗಣಗಳು ಹೇಳುತ್ತಾರೆ:—ಪೂರ್ವದಲ್ಲಿ ಭೃಗುನಂದನನಾದ ಈ ಶುಕ್ರಾಚಾರ್ಯನು ವಾರಾಣಸೀ ಪಟ್ಟಣಕ್ಕೆ ಹೋಗಿ ಅಂಡಜ, ಸ್ವೇದಜ, ಜರಾಯುಜ, ಉದ್ಭಿಜ್ಜಗಳೆಂಬ ಚತುರ್ವಿಧ ಭೂತಗಳಿಗೂ ಗತಿಯನ್ನು ಅನುಗ್ರಹಿಸುವ ಆ ಕ್ಷೇತ್ರದಲ್ಲಿ ಶಿವಲಿಂಗವನ್ನು ಸ್ಥಾಪಿಸಿ, ಒಂದು ಕೊಳವನ್ನು ತೋಡಿ ಆ ಲಿಂಗದ ಮುಂಗಡೆ ಪ್ರಭುವಾದ ವಿಶ್ವೇಶ್ವರನನ್ನೇ ಧ್ಯಾನಿಸುತ್ತಾ ಬಹುಕಾಲ ತಪಸ್ಸನ್ನು ಮಾಡಿದನು.

೮೪–೯೩. ರಾಜಚಂಪಕ, ದತ್ತೂರ, ಕರವೀರ, ಕಮಲ, ಮಾಲತಿ, ಕರ್ಣಿಕಾರ, ಕದಂಬ, ಕನ್ನೈದಿಲೆ, ಮಲ್ಲಿಗೆ, ಶತಪತ್ರಕಮಲ, ಸಿಂದುವಾರ, ಮುತ್ತುಗ, ಅಶೋಕ, ಕರುಣ, ಪುನ್ನಾಗ, ನಾಗಕೇಸರ, ಮಾಧವಿ, ಪಾಟಲ, ಬಿಲ್ವ, ಕೆಂಡಸಂಪಿಗೆ, ನವಮಲ್ಲಿಕೆ, ವಿಚಿಕಿಲ, ಕುಂದ, ಪಾಲಂಕಿ, ಮಂದಾರ

ಕ್ಷುದ್ರಾಭಿರ್ಮಾಧವೀಭಿಶ್ಚ ಪಾಟಲಾಬಿಲ್ವಚಂಪಕೈಃ ।
ನವಮಲ್ಲೀ ವಿಚಿಕಿಲೈಃ ಕುಂದೈಃ ಸಮುಚುಕುಂದಕೈಃ ॥ ೮೬ ॥
ಮಂದಾರೈರ್ಬಿಲ್ವಪತ್ರೈಶ್ಚ ದ್ರೋಣೈರ್ಮರುವಕೈರ್ಬಕೈಃ ।
ಗ್ರಂಥಿಪರ್ಣೈರ್ದಮನಕೈಃ ಸುರಭೂಚೂತಪಲ್ಲವೈಃ ॥ ೮೭ ॥
ತುಲಸೀ ದೇವಗಂಧಾರೀ ಬೃಹತ್ಪತ್ರೀ ಕುಶಾಂಕುರೈಃ ।
ನಂದ್ಯಾವರ್ತೈರಗಸ್ತ್ಯೈಶ್ಚ ಸಶಾಲೈರ್ದೇವದಾರುಭಿಃ ॥ ೮೮ ॥
ಕಾಂಚನಾರೈಃ ಕುರಬಕೈರ್ದೂರ್ವಾಂಕುರಕುರಂಟಕೈಃ ।
ಪ್ರತ್ಯೇಕಮೇಭಿಃ ಕುಸುಮೈಃ ಪಲ್ಲವೈರಪರೈರಪಿ ॥ ೮೯ ॥
ಪತ್ರೈಃ ಶತಸಹಸ್ರೈಶ್ಚ ಸ ಸಮಾನರ್ಚ ಶಂಕರಂ ।
ಪಂಚಾಮೃತೈರ್ದ್ರೋಣಮಿತೈರ್ಲಕ್ಷಕೃತ್ವಃ ಪ್ರಯತ್ನತಃ ॥ ೯೦ ॥
ಸ್ನಪಯಾಮಾಸ ದೇವೇಶಂ ಸುಗಂಧಸ್ನಪನೈರ್ಬಹು ।
ಸಹಸ್ರಕೃತ್ವೋ ದೇವೇಶಂ ಚಂದನೈರ್ಯಕ್ಷಕರ್ದಮೈಃ ॥ ೯೧ ॥
ಸಮಾಲಿಲಿಂಪ ದೇವೇಶಂ ಸುಗಂಧೋದ್ವರ್ತನಾನ್ಯನು ।
ಗೀತನೃತ್ಯೋಪಹಾರೈಶ್ಚ ಶ್ರುತ್ಯುಕ್ತಸ್ತುತಿಭಿರ್ಬಹು ॥ ೯೨ ॥
ನಾಮ್ನಾಂ ಸಹಸ್ರೈರನ್ಯೈಶ್ಚ ಸ್ತೋತ್ರೈಸ್ತುಷ್ಟಾವ ಶಂಕರಂ ।
ಸಹಸ್ರಂ ಪಂಚಶರದಾಮಿತ್ಥಂ ಶುಕ್ರಃ ಸಮರ್ಚಯನ್ ॥ ೯೩ ॥
ಯದಾ ದೇವಂ ನಾಲುಲೋಕೇ ಮನಾಗಪಿ ವರೋನ್ಮುಖಂ ।
ತದಾನ್ಯಂ ನಿಯಮಂ ಘೋರಂ ಜಗ್ರಾಹಾತೀವ ದುಃಸಹಂ ॥ ೯೪ ॥

---

ಮೊದಲಾದ ಪುಷ್ಪಗಳಿಂದಲೂ ಬಿಲ್ವಪತ್ರೆ, ದ್ರೋಣಪತ್ರೆ, ಮರುಗ, ಬಕ, ದವನ, ಎಳಮಾವಿನ ಚಿಗುರು, ತುಲಸಿ, ದೇವಗಂಧಾರಿ, ಬೃಹತಿ, ಕುಶಾಂಕುರ, ನಂದ್ಯಾವರ್ತ, ಅಗಸ್ತ್ಯ, ಸಾಲ, ದೇವದಾರು, ಕಾಂಚನಾರ, ಕುರವಕ, ದೂರ್ವಾಂಕುರ, ಗೊರಟೆ ಮೊದಲಾದ ಪತ್ರಗಳಿಂದಲೂ, ಆ ಪರಮೇಶ್ವರನಿಗೆ ಲಕ್ಷಪೂಜೆಯನ್ನು ಅರ್ಪಿಸಿ ಒಂದು ಲಕ್ಷ ಆವೃತ್ತಿ ಪ್ರಯತ್ನಪೂರ್ವಕವಾಗಿ ಕೊಳಗ ಗಟ್ಟಲೆ ಪಂಚಾಮೃತಗಳ ಸ್ನಾನವನ್ನು ಮಾಡಿಸಿ, ಆ ತರುವಾಯ ಗಂಧಸ್ನಾನಗೈಸಿ, ಒಂದು ಸಾವಿರ ಬಾರಿ ಶ್ರೀಗಂಧದಿಂದ ಲೇಪನಗೊಳಿಸಿ, ಇತರ ಸುಗಂಧ ದ್ರವ್ಯಗಳನ್ನು ಪೂಸಿ, ಗೀತ ನೃತ್ಯ ನೈವೇದ್ಯಗಳನ್ನು ಅರ್ಪಿಸಿ, ಶ್ರುತ್ಯುಕ್ತವಾದ ಅನೇಕ ಸ್ತೋತ್ರಗಳಿಂದ ಸ್ತುತಿಸಿ ಸಹಸ್ರ ನಾಮಸ್ತೋತ್ರಗಳನ್ನೂ ಹೇಳಿ ಐದು ಸಾವಿರ ವರ್ಷಗಳಕಾಲ ಹೀಗೆಯೆ ಆ ಪರಮೇಶ್ವರನನ್ನು ಅರ್ಚಿಸಿ ಸಂತೋಷಗೊಳಿಸಿದನು.

೯೪. ಇಷ್ಟಾದರೂ ಆ ಸ್ವಾಮಿಯು ವರೋನ್ಮುಖನಾಗಿ ಪ್ರತ್ಯಕ್ಷವಾಗ

ಪ್ರಕ್ಷಾಲ್ಯ ಚೇತಸೋಽತ್ಯಂತಂ ಚಾಂಚಲಾಖ್ಯಂ ಮಹಾಮಲಂ ।
ಭಾವನಾವಾರ್ಭಿರಸಕೃದಿಂದ್ರಿಯೈಃ ಸಹಿತಸ್ಯ ಚ ॥ ೯೫ ॥
ನಿರ್ಮಲೀಕೃತ್ಯ ತಚ್ಚೇತೋರತ್ನಂ ದತ್ವಾ ಪಿನಾಕಿನೇ ।
ಪ್ರಪಪೌ ಕಣಧೂಮೌಘಂ ಸಹಸ್ರಂ ಶರದಾಂ ಕವಿಃ ॥ ೯೬ ॥
ಪ್ರಸಸಾದ ತದಾ ದೇವೋ ಭಾರ್ಗವಾಯ ಮಹಾತ್ಮನೇ ।
ತಸ್ಮಾಲ್ಲಿಂಗಾದ್ವಿನಿರ್ಗತ್ಯ ಸಹಸ್ರಾರ್ಕಾಽಧಿಕದ್ಯುತಿಃ ॥ ೯೭ ॥
ಉವಾಚ ಚ ವಿರೂಪಾಕ್ಷಃ ಸಾಕ್ಷಾದ್ದಾಕ್ಷಾಯಣೀಪತಿಃ ।
ತಪೋನಿಧೇ ಪ್ರಸನ್ನೋಽಸ್ಮಿ ವರಂ ವರಯ ಭಾರ್ಗವ ॥ ೯೮ ॥
ನಿಶಮ್ಯೇತಿ ವಚಃ ಶಂಭೋರಂಭೋಜನಯನೋ ದ್ವಿಜಃ ।
ಉದ್ಯದಾನಂದಸಂದೋಹರೋಮಾಂಚಾಂಚಿತ ವಿಗ್ರಹಃ ॥ ೯೯ ॥
ತುಷ್ಟಾವಾಽಷ್ಟತನುಂ ತುಷ್ಟಃ ಪ್ರಫುಲ್ಲನಯನಾಂಚಲಃ ।
ಮೌಲಾವಂಜಲಿಮಾಧಾಯ ವದಂಜಯ ಜಯೇತಿ ಚ ॥ ೧೦೦ ॥

---

ದಿರಲು ಆ ಭೃಗುನಂದನನು ಅತಿ ದುಸ್ಸಹವಾದ ಬೇರೊಂದು ಘೋರನಿಯಮವನ್ನು ಕೈಕೊಂಡನು.

೯೫–೯೬. ಅವನು ಚಿತ್ತಚಾಂಚಲ್ಯವೆಂಬ ಮಹಾಮಲವನ್ನು ಇಂದ್ರಿಯ ಸಹಿತವಾದ ಭಾವನಾಜಲದಿಂದ ಅನೇಕಾವೃತ್ತಿ ತೊಳೆದು, ಶುದ್ಧವಾದ ಆ ಚಿತ್ತ ರತ್ನವನ್ನು ಪಿನಾಕಧರನಾದ ಪರಮೇಶ್ವರನಿಗೆ ಅರ್ಪಿಸಿ, ಒಂದು ಸಾವಿರ ವರ್ಷಗಳ ಕಾಲ ಬತ್ತದ ಹೊಟ್ಟಿನ ಹೊಗೆಯನ್ನು ಪಾನಮಾಡತೊಡಗಿದನು.

೯೭. ಆಗ, ಮಹಾದೇವನು ಸಹಸ್ರ ಸೂರ್ಯರಿಗೂ ಮೀರಿದ ತೇಜಸ್ಸಿನಿಂದ ವಿರಾಜಿಸುತ್ತ ಆ ಶಿವಲಿಂಗದಿಂದ ಆವಿರ್ಭವಿಸಿ, ಮಹಾತ್ಮನಾದ ಆ ಭಾರ್ಗವನಿಗೆ ಪ್ರಸನ್ನನಾದನು.

೯೮. ಆ ದಾಕ್ಷಾಯಣೀ ಪತಿಯು ಭೃಗುನಂದನನ್ನು ಕುರಿತು ಸಾಕ್ಷಾತ್ತಾಗಿಯೆ, "ಅಯ್ಯಾ ತಪೋನಿಧಿಯೆ, ಭಾರ್ಗವ! ಇದೊ ನಿನ್ನ ತಪಸ್ಸಿಗೆ ಮೆಚ್ಚಿ ಪ್ರಸನ್ನನಾಗಿದ್ದೇನೆ. ವರವನ್ನು ಬೇಡು" ಎಂದು ಹೇಳಿದನು.

೯೯–೧೦೦. ಇಂತೆಂದ ಆ ವಿರೂಪಾಕ್ಷನ ಮಾತುಗಳನ್ನು ಕೇಳಿ, ಕಮಲೇಕ್ಷಣನಾದ ಆ ಬ್ರಾಹ್ಮಣನು, ಉಕ್ಕಿಬರುತ್ತಿರುವ ಆನಂದೋದ್ರೇಕದಿಂದ ಮೈಯೆಲ್ಲವೂ ರೋಮಾಂಚಗೊಳ್ಳುತ್ತಿರಲು, ಅರಳುಗಂಗಳಿಂದ ಆ ಸ್ವಾಮಿಯನ್ನೇ ನೋಡುತ್ತ ತಲೆಯಲ್ಲಿ ಅಂಜಲಿಬಂಧವನ್ನು ಮಾಡಿ ಜಯ ಜಯಕಾರಗಳನ್ನು ಮಾಡಿ ಸ್ತುತಿಸತೊಡಗಿದನು.

ಭಾರ್ಗವ ಉವಾಚ :—

ತ್ವಂ ಭಾಭಿರಾಭಿರಭಿಭೂಯ ತಮಃಸಮಸ್ತ
ಮಸ್ತಂ ನಯಸ್ಯಭಿಮತಾನಿ ನಿಶಾಚರಾಣಾಂ ।
ದೇದೀಪ್ಯಸೇ ದಿನಮಣೇ ಗಗನೇ ಹಿತಾಯ
ಲೋಕತ್ರಯಸ್ಯ ಜಗದೀಶ್ವರ ತನ್ನಮಸ್ತೇ ॥ ೧೦೧ ॥
ಲೋಕೇಽತಿವೇಲಮತಿವೇಲಮಹಾಮಹೋಭಿ
ರ್ನಿರ್ಮಾಸಿ ಕೌಮುದಮುದಂ ಚ ಸಮುತ್ಸಮುದ್ರಂ ।
ನಿದ್ರಾಽಖಿಲತಮಾಃ ಸುತನೋಽಹಿಮಾಂಶೋ
ಪೀಯೂಷಪೂರಪರಿಪೂರಿತ ತನ್ನಮಸ್ತೇ ॥ ೧೦೨ ॥
ತ್ವಂ ಪಾವನೇ ಪಥಿ ಸದಾ ಗತಿರಸ್ಯುಪಾಸ್ಯಃ
ಕಸ್ತ್ವಾಂ ವಿನಾ ಭುವನಜೀವನಜೀವತೀಹ ।
ಸ್ತಬ್ಧಪ್ರಭಂಜನ ವಿವರ್ಧಿತ ಸರ್ವಜಂತೋ
ಸಂತೋಷಿತಾಹಿಕುಲಸರ್ವಗತನ್ನಮಸ್ತೇ ॥ ೧೦೩ ॥

---

೧೦೧. ಭಾರ್ಗವನು ಹೇಳುತ್ತಾನೆ:—ಎಲೈ ಶಂಭುವೆ, ನೀನು ಈ ನಿನ್ನ ದಿವ್ಯತೇಜಃಕಿರಣಗಳಿಂದ ಜಗತ್ತಿನ ಅಂಧಕಾರವೆಲ್ಲವನ್ನೂ ಕಳೆದು ನಿಶಾಚರರ ಅಭೀಷ್ಟಗಳೆಲ್ಲವನ್ನೂ ಅಸ್ತಗೊಳಿಸಿ ಲೋಕಹಿತಕ್ಕಾಗಿ ಗಗನಾಂಗಣದಲ್ಲಿ ದಿನ ಮಣಿಯಾಗಿ ಬೆಳಗುತ್ತಿರುವೆ. ಓ ಜಗದೀಶ್ವರ, ಅಂಥ ನಿನಗೆ ನಮಸ್ಕಾರವು.

೧೦೨. ಲೋಕದಲ್ಲಿ ಹಲವು ಬಾರಿ ಎಲ್ಲೆ ಮೀರಿ ಹೋಗುವ ಅಧಿಕಾಧಿಕ ವಾದ ನಿನ್ನ ತೇಜಸ್ಸುಗಳಿಂದ ಸಮುದ್ರಕ್ಕೂ ಭಕ್ತಜನಗಳಿಗೂ ಕನ್ನೈದಿಲೆಗಳಿಗೂ ಆನಂದವನ್ನುಂಟುಮಾಡುತ್ತ, ಸಮಸ್ತವಾದ ತಮಸ್ಸನ್ನೂ ಕಳೆದು ಅತ್ಯುತ್ತಮ ನಾದ ಮತ್ತು ಅಮೃತಪ್ರವಾಹಪೂರಿತನಾದ ಶೀತಲಕಿರಣನಾದ ಚಂದ್ರನೆನಿಸಿ ರುವೆ. ಓ ಜಗದೀಶ್ವರ, ನಿನಗೆ ನಮಸ್ಕಾರವು.

೧೦೩. ಎಲೈ ಚತುರ್ದಶಭುವನ ಜೀವನನಾದ ಮಹೇಶ್ವರನೆ, ಪವಿತ್ರ ವಾದ ಗಗನಮಾರ್ಗದಲ್ಲಿ ಸದಾಗಮನವುಳ್ಳವನಾಗಿ ವಾಯುರೂಪದಿಂದ ಬೆಳಗುತ್ತಿರುವ ನಿನ್ನನ್ನುಳಿದು ಯಾವನು ತಾನೆ ಜೀವಿಸಿಯಾನು? ನೀನು ಸಮಸ್ತರಿಗೂ ಉಪಾಸ್ಯನಾಗಿದ್ದೀಯೆ. ಮಹಾಗರ್ವಿಗಳಾದವರನ್ನೂ ದಮನ ಮಾಡಬಲ್ಲವನಾಗಿ, ಸಮಸ್ತ ಜಂತುಗಳನ್ನೂ ವೃದ್ಧಿಗೊಳಿಸುವವನಾಗಿ, ಕೇವಲ ವಾಯುವೇ ಆಹಾರವಾಗಿ ಉಳ್ಳ ಸರ್ಪಗಳಿಗೆ ಸಂತೋಷವನ್ನು ಕೊಡುತ್ತ, ಸರ್ವವ್ಯಾಪಕನಾಗಿ ವಾಯುಸ್ವರೂಪದಿಂದ ಪ್ರಕಾಶಿಸುತ್ತಿರುವ ಓ ಸ್ವಾಮಿಯೆ, ನಿನಗೆ ನಮಸ್ಕಾರವು.

ವಿಶ್ವೈಕಪಾವಕ ನ ತಾವಕಪಾವಕೈಕ
ಶಕ್ತೇಋರ್ತೇಽನ್ಮೃತ ಬತಾಮೃತದಿವ್ಯಕಾರ್ಯಂ ।
ಪ್ರಾಣಿತ್ಯಹೋ ಜಗದಹೋ ಜಗದಂತರಾತ್ಮಂ
ಸ್ತತ್ಪಾವಕಪ್ರತಿಪದಂ ಶಮುದಂ ನಮಸ್ತೇ ॥ ೧೦೪ ॥
ಪಾನೀಯರೂಪ ಪರಮೇಶ ಜಗತ್ಪವಿತ್ರ
ಚಿತ್ರಂ ವಿಚಿತ್ರಸುಚರಿತ್ರ ಕರೋಷಿ ನೂನಂ ।
ವಿಶ್ವಂ ಪವಿತ್ರಮಮಲಂ ಕಿಲ ವಿಶ್ವನಾಥ
ಪಾನಾಽವಗಾಹನತ ಏತದತೋ ನತೋಽಸ್ಮಿ ॥ ೧೦೫ ॥
ಆಕಾಶರೂಪ ಬಹಿರಂತರುತಾಽವಕಾಶ
ದಾನಾದ್ವಿಕಸ್ವರಮಿಹೇಶ್ವರ ವಿಶ್ವಮೇತತ್ ।
ತ್ವತ್ತಃ ಸದಾ ಸದಯಸಂ ಶ್ವಸಿತಿ ಸ್ವಭಾವಾ
ತ್ಸಂಕೋಚಮೇತಿ ಭವತೋಽಸ್ಮಿ ನತಸ್ತತಸ್ತ್ವಾಂ ॥೧೦೬॥

---

೧೦೪. ಜಗತ್ತನ್ನೆಲ್ಲ ಪಾವನಗೊಳಿಸುವ ಏಕಪಾವಕಸ್ವರೂಪನಾಗಿರುವ ಓ ಪರಮೇಶ್ವರನೆ, ಪವಿತ್ರಗೊಳಿಸುವ ಆ ನಿನ್ನ ಶಕ್ತಿಯನ್ನುಳಿದು ಜಗತ್ತಿನ ಆಧಿಭೌತಿಕ ಆಧಿದೈವಿಕ ಆಧ್ಯಾತ್ಮಿಕಗಳೆಂಬ ಕಾರ್ಯಗಳು ನಡೆಯಲಾರವು. ನೀನು ಗಾರ್ಹಪತ್ಯ ಆಹವನೀಯ ದಾಕ್ಷಿಣೇಯಗಳೆಂಬ ಅಗ್ನಿಯ ಸ್ವರೂಪ ನಾಗಿರುವೆ. ನಿನ್ನನ್ನು ಆಶ್ರಯಿಸುವ ಭಕ್ತರನ್ನು ರಕ್ಷಿಸುವವನೂ ಆಗಿರುವೆ. ಎಲೈ ಜಗದಂತರಾತ್ಮನಾದ ಪಾವಕಸ್ವರೂಪನೆ, ನೀನು ಜಗತ್ತಿಗೇ ಸಂಜೀವನ ಸ್ವರೂಪನಾಗಿರುವೆ. ಸಮಸ್ತರಿಗೂ ಶಾಂತಿಯನ್ನು ಕರುಣಿಸುವ ನಿನಗೆ ಅಡಿಗಡಿಗೂ ಮಣಿಯುತ್ತೇನೆ.

೧೦೫. ಎಲೈ ಜಲಸ್ವರೂಪನಾದ ಪರಮೇಶ್ವರನೆ, ನೀನು ಜಗತ್ತನ್ನೇ ಪವಿತ್ರಗೊಳಿಸಿರುವವನು ವಿಚಿತ್ರವಾದ ಪವಿತ್ರಚರಿತ್ರೆಯುಳ್ಳ ನೀನು, ಚಿತ್ರವಾದ ಈ ಜಗತ್ತಿನ ಸಕಲ ಪ್ರಾಣಿಗಳನ್ನೂ ಸ್ನಾನಪಾನಾದಿಗಳಿಂದ ಪಾಪ ಗಳನ್ನು ಕಳೆದು ಪವಿತ್ರಗೊಳಿಸುತ್ತೀಯೆ. ಎಲೈ ವಿಶ್ವನಾಥನೆ, ಇಂಥ ನಿನಗೆ ನಮಸ್ಕಾರವು.

೧೦೬. ಎಲೈ ಆಕಾಶಸ್ವರೂಪನಾದ ಜಗದೀಶ್ವರನೆ, ಓ ದಯಾಮಯ, ಅಜ್ಞಾನದಶೆಯಲ್ಲಿ ದೃಶ್ಯಮಾನವಾದುದೂ, ವಿಕಾಸೋನ್ಮುಖವಾದುದೂ ಆದ ಈ ಜಗತ್ತಿನ ಒಳಗೂ ಹೊರಗೂ ವ್ಯಾಪಿಸಿ, ಅವಕಾಶವನ್ನಿತ್ತು ಉಜ್ಜೀವಿಸುವಂತೆ ಮಾಡುವವನು ನೀನು. ಇಂತಹ ನೀನು ಸಂಕೋಚಗೊಂಡುದಾದರೆ ಈ ಜಗತ್ತು ಜೀವಿಸಲಾರದು. ಇಂಥ ಸ್ವಭಾವವುಳ್ಳವನಾದ ನಿನಗೆ ನಮೋ ನಮಃ.

ವಿಶ್ವಂಭರಾತ್ಮಕ ಬಿಭರ್ಷಿ ವಿಭೋಽತ್ರ ವಿಶ್ವಂ
ಕೋ ವಿಶ್ವನಾಥ ಭವತೋಽನ್ಯತಮಸ್ತಮೋಽರೇ ।
ತತ್ತ್ವಾಂ ವಿನಾ ನ ಶಮಿನಾಂ ಹಿಮಜಾಹಿಭೂಷ
ಸ್ತವ್ಯೋಽಪರಃ ಪರ ಪರಪ್ರಣತಸ್ತತಸ್ತ್ವಾಂ ॥ ೧೦೭ ॥
ಆತ್ಮಸ್ವರೂಪ ತವರೂಪ ಪರಂಪರಾಭಿ
ರಾಭಿಸ್ತತಂ ಹರ ಚರಾಚರ ರೂಪಮೇತತ್ ।
ಸರ್ವಾಂತರಾತ್ಮನಿಲಯ ಪ್ರತಿರೂಪ ರೂಪ
ನಿತ್ಯಂ ನತೋಽಸ್ಮಿ ಪರಮಾತ್ಮತನೋಽಷ್ಟಮೂರ್ತೇ॥೧೦೮॥
ಇತ್ಯಷ್ಟಮೂರ್ತಿಭಿರಿಮಾಭಿರುಮಾಽಭವಂದ್ಯ
ವಂದ್ಯಾಽತಿವಂದ್ಯ ಭವ ವಿಶ್ವಜನೀನಮೂರ್ತೇ ।
ಏತತ್ತತಂ ಸುವಿತತಂ ಪ್ರಣತ ಪ್ರಣೀತ
ಸರ್ವಾರ್ಥ ಸಾರ್ಥ ಪರಮಾರ್ಥ ತತೋ ನತೋಽಸ್ಮಿ॥೧೦೯॥
ಅಷ್ಟಮೂರ್ತ್ಯಷ್ಟಕೇನೇಷ್ಟ್ವಂ ಪರಿಷ್ಟೂಯೇತಿ ಭಾರ್ಗವಃ ।
ಭರ್ಗಂ ಭೂಮಿಮಿಲನ್ಮೌಲಿಃ ಪ್ರಣನಾಮ ಪುನಃ ಪುನಃ ॥ ೧೧೦ ॥

---

೧೦೭. ಎಲೈ ವಿಶ್ವಂಭರನೆ, ವಿಭುವೆ, ಈ ಭೂಮಿಯನ್ನು ಭರಿಸಿ ವಿಶ್ವನಾಥ ನೆನಿಸಿರುವವನು ಅಜ್ಞಾನನಾಶಕನಾದ ನಿನ್ನನ್ನುಳಿದು ಬೇರಾವನಿರುವನು? ಪಾರ್ವತಿಗೂ ಸರ್ಪಗಳಿಗೂ ಅಲಂಕಾರಪ್ರಾಯನಾಗಿರುವವನೂ, ಬ್ರಹ್ಮಾದಿ ಸಮಸ್ತ ದೇವತೆಗಳಿಗೂ ಶ್ರೇಷ್ಠನಾದವನೂ ಸಂಯಮಧನರಾದ ಮುನಿಗಳಿಗೆ ಸ್ವಾಮಿಯೂದವನೂ ಆದ ನಿನ್ನನ್ನು ನಮಸ್ಕರಿಸುತ್ತೇನೆ

೧೦೮. ಎಲೈ ಪರಮಾತ್ಮಸ್ವರೂಪನಾಗಿರುವ ಪರಶಿವನೆ, ನೀನು ನಿನ್ನ ಅನಂತ ರೂಪ ಪರಂಪರೆಗಳಿಂದ ಚರಾಚರಸ್ವರೂಪವಾದ ಈ ಜಗತ್ತಿನಲ್ಲಿ ಸಮಸ್ತ ಜೀವಿಗಳ ಅಂತರಾತ್ಮನಿಲಯನೆನಿಸಿ, ಅದರ ಪ್ರತಿರೂಪದ ರೂಪನೂ ಆಗಿ (ಬಿಂಬ ಪ್ರತಿಬಿಂಬಗಳೆರಡೂ ನೀನೇ ಆಗಿ), ಪರಬ್ರಹ್ಮಸ್ವರೂಪನೆನಿಸಿ ಅಷ್ಟ ಮೂರ್ತಿಯಾಗಿ ವಿರಾಜಿಸುತ್ತಿರುವೆ, ನಿನಗೆ ನಮಸ್ಕಾರವು.

೧೦೯. ಹೀಗೆ ಎಂಟು ಮೆಯ್ಯುಳ್ಳವನಾಗಿ, ಉಮಾದೇವಿಯಿಂದ ನಮಸ್ಕೃತ ನಾಗಿ, ಜಗತ್ತಿನ ಸರ್ವ ಪ್ರಾಣಿಗಳಿಗೂ ಅತ್ಯಂತ ವಂದ್ಯನಾಗಿ ವಿಶ್ವಮೂರ್ತಿ ಯೆನಿಸಿ, ಪ್ರಣತರೆಲ್ಲರೂ ಹೊಂದಬೇಕಾದ ಏಕೈಕ ಪ್ರಾಪ್ಯವಸ್ತುವಾಗಿ, ಸಮಸ್ತರೂ ಬಯಸುವ ಸರ್ವಾರ್ಥಗಳಲ್ಲಿಯೂ ಪರಮಾರ್ಥಸ್ವರೂಪನಾಗಿರುವೆ ನಿನ್ನಿಂದಲೆ ಈ ಜಗತ್ತೆಲ್ಲವೂ ಓತಪ್ರೋತವಾಗಿ (ಹಾಸುಹೊಕ್ಕಾಗಿ) ವ್ಯಾಪ್ತವಾಗಿದೆ. ಇಂಥ ವಿಶ್ವವ್ಯಾಪಕನಾದ ವಿಶ್ವೇಶ್ವರನೆ, ನಿನಗೆ ನಮಸ್ಕಾರವು.''

೧೧೦. ಅಯ್ಯಾ ಶಿವಶರ್ಮನೆ, ಈ ಪ್ರಕಾರವಾಗಿ ಭೃಗುನಂದನನಾದ

ಇತಿ ಸ್ತುತೋ ಮಹಾದೇವೋ ಭಾರ್ಗವೇಣಾಽತಿತೇಜಸಾ ।
ಉತ್ಥಾಪ್ಯ ಭೂಮೇರ್ಬಾಹುಭ್ಯಾಂ ಧೃತ್ವಾ ತಂ ಪ್ರಣತಂ ದ್ವಿಜಂ ॥ ೧೧೧ ॥
ಉವಾಚ ದಶನಜ್ಯೋತ್ಸ್ನಾ ಪ್ರದ್ಯೋತಿತದಿಗಂತರಃ ।
ಅನೇನಾಽತ್ಯುಗ್ರತಪಸಾ ಹ್ಯನನ್ಯಾಚರಿತೇನ ಚ ॥ ೧೧೨ ॥
ಲಿಂಗಸ್ಥಾಪನಪುಣ್ಯೇನ ಲಿಂಗಸ್ಯಾರಾಧನೇನ ಚ ।
ಚಿತ್ತರತ್ನೋಪಹಾರೇಣ ಶುಚಿನಾ ನಿಶ್ಚಲೇನ ಚ ॥ ೧೧೩ ॥
ಅವಿಮುಕ್ತಮಹಾಕ್ಷೇತ್ರೇ ಪವಿತ್ರಾಚರಣೇನ ಚ ।
ತ್ವಾಂ ಸುತಾಭ್ಯಾಂ ಪ್ರಪಶ್ಯಾಮಿ ತವಾಽದೇಯಂ ನ ಕಿಂಚನ ॥ ೧೧೪ ॥
ಅನೇನೈವ ಶರೀರೇಣ ಮಮೋದರದರೀಂ ಗತಃ ।
ಮದ್ವರೇಂದ್ರಿಯಮಾರ್ಗೇಣ ಪುತ್ರಜನ್ಮ ತ್ವಮೇಷ್ಯಸಿ ॥ ೧೧೫ ॥
ಅನ್ಯಂ ವರಂ ಪ್ರಯಚ್ಛಾಮಿ ದುಷ್ಪ್ರಾಪಂ ಪಾರ್ಷದೈರಪಿ ।
ಹರೌ ಹಿರಣ್ಯಗರ್ಭೇಽಪಿ ಪ್ರಾಯಶೋಽಹಂ ಜುಗೋಪ ಯಾಂ ॥ ೧೧೬ ॥

---

ಆ ಶುಕ್ರಾಚಾರ್ಯನು ಅಷ್ಟಮೂರ್ತ್ಯಷ್ಟಕ ಸ್ತೋತ್ರದಿಂದ ಇಷ್ಟದೈವವಾದ ಆ ಪರಮೇಶ್ವರನನ್ನು ಸಂತುಷ್ಟಿಗೊಳಿಸಿ, ಪುನಃ ಪುನಃ ಸಾಷ್ಟಾಂಗ ಪ್ರಣಾಮ ಮಾಡಿದನು.

೧೧೧–೧೧೪. ಮಹಾ ತೇಜಸ್ವಿಯಾದ ಭಾರ್ಗವನೀಪ್ರಕಾರವಾಗಿ ಸ್ತುತಿಸಲು ಆ ಮಹಾದೇವನು, ಅವನನ್ನು ತನ್ನೆರಡೂ ತೋಳುಗಳಿಂದ ಮೇಲಕ್ಕೆತ್ತಿ ಹಿಡಿದು, ತನ್ನ ರದನಕಾಂತಿಯಿಂದಲೆ ದಿಗಂತರಗಳನ್ನೂ ಬೆಳಗಿ, "ಅಯ್ಯಾ, ಶುಕ್ರ, ಇತರರಾರೂ ಆಚರಿಸದ ಉಗ್ರವಾದ ಈ ನಿನ್ನ ತಪಸ್ಸಿನಿಂದಲೂ, ನೀನೆಸಗಿದ ಶಿವಲಿಂಗಸ್ಥಾಪನ ಆರಾಧನಗಳಿಂದಲೂ ನಿಶ್ಚಲವಾದ ಚಿತ್ತರತ್ನಸಮರ್ಪಣದಿಂದಲೂ, ಅವಿಮುಕ್ತವೆನಿಸಿದ ಈ ಮಹಾ ಕ್ಷೇತ್ರದಲ್ಲಿ ನೀನು ನಡೆಸಿದ ಪವಿತ್ರಾಚರಣದಿಂದಲೂ ನೀನು ನನಗೆ ಗಣೇಶಷಣ್ಮುಖರಿಗೆ ಸಮಾನನಾದ ಪುತ್ರನೆನಿಸಿದ್ದೀಯ. ಇಂಥ ನಿನಗೆ ಕೊಡಬಾರದುದು ಏನೂ ಇರುವುದಿಲ್ಲ.

೧೧೫. ಎಲೈ ಶುಕ್ರಾಚಾರ್ಯನೆ, ನೀನು ಇದೇ ಶರೀರದಿಂದಲೆ ನನ್ನ ಉದರವನ್ನು ಪ್ರವೇಶಿಸಿ ಶ್ರೇಷ್ಠವಾದ ನನ್ನ ಜನನೇಂದ್ರಿಯ ಮಾರ್ಗದಿಂದ ಹೊರಬಂದು, ನನ್ನ ಸ್ವಂತ ಮಗನಾಗು.

೧೧೬–೧೧೮. ಇಷ್ಟೇ ಅಲ್ಲದೆ ನಿನಗೆ ಮತ್ತೊಂದು ವರವನ್ನು ಕೊಡುತ್ತೇನೆ. ನನ್ನ ಪಾರ್ಷದರಿಂದಲೂ ಅರಿಯಲಾಗದಿರುವುದಾಗಿ, ಅಮಿತವಾದ ತಪೋಬಲದಿಂದ ನಾನೇ ನಿರ್ಮಿಸಿರುವುದಾಗಿ ನಿರ್ಮಲವೂ ಆಗಿರುವ ಮೃತಸಂಜೀವಿನೀ ವಿದ್ಯೆಯನ್ನು ಹರಿಬ್ರಹ್ಮಾದಿಗಳಿಗೂ ಗೋಚರವಾಗದಂತೆ ಗುಪ್ತವಾಗಿ ಸಂರಕ್ಷಿಸಿ

ಮೃತಸಂಜೀವಿನೀ ನಾಮ ವಿದ್ಯಾ ಯಾ ಮಮ ನಿರ್ಮಲಾ ।
ತಪೋಬಲೇನ ಮಹತಾ ಮಯೈವ ಪರಿನಿರ್ಮಿತಾ ॥ ೧೧೭ ॥
ತ್ವಾಂ ತಾಂ ತು ಪ್ರಾಪಯಾಮ್ಯದ್ಯ ಮಂತ್ರರೂಪಾಂ ಮಹಾಶುಚೇ ।
ಯೋಗ್ಯತಾ ತೇಽಸ್ತಿ ವಿದ್ಯಾಯಾಸ್ತಸ್ಯಾಃ ಶುಚಿ ತಪೋನಿಧೇ ॥ ೧೧೮ ॥
ಯಂ ಯಮುದ್ದಿಶ್ಯ ನಿಯತಮೇತಾಮಾವರ್ತಯಿಷ್ಯಸಿ ।
ವಿದ್ಯಾಂ ವಿದ್ಯೇಶ್ವರಶ್ರೇಷ್ಠ ಸ ಸ ಪ್ರಾಣಿಷ್ಯತಿ ಧ್ರುವಂ ॥ ೧೧೯ ॥
ಅತ್ಯರ್ಕಮತ್ಯಗ್ನಿಚ ತೇ ತೇಜೋ ವ್ಯೋಮ್ನ್ಯತಿತಾರಕಂ ।
ದೇದೀಪ್ಯಮಾನಂ ಭವಿತಾ ಗ್ರಹಾಣಾಂ ಪ್ರವರೋ ಭವ ॥ ೧೨೦ ॥
ಅಭಿತ್ವಾಂ ಯೇ ಕರಿಷ್ಯಂತಿ ಯಾತ್ರಾಂ ನಾರ್ಯೋ ನರೋಽಪಿ ವಾ ।
ತೇಷಾಂ ತ್ವದ್ದೃಷ್ಟಿಪಾತೇನ ಸರ್ವಕಾರ್ಯಂ ಪ್ರಣಂಕ್ಷ್ಯತಿ ॥ ೧೨೧ ॥
ತವೋದಯೇ ಭವಿಷ್ಯಂತಿ ವಿವಾಹಾದೀನಿ ಸುವ್ರತ ।
ಸರ್ವಾಣಿ ಧರ್ಮಕಾರ್ಯಾಣಿ ಫಲವಂತಿ ನೃಣಾಮಿಹ ॥ ೧೨೨ ॥
ಸರ್ವಾಶ್ಚ ತಿಥಯೋ ನಂದಾಸ್ತವ ಸಂಯೋಗತಃ ಶುಭಾಃ ।
ತವ ಭಕ್ತಾ ಭವಿಷ್ಯಂತಿ ಬಹುಶುಕ್ರಾ ಬಹುಪ್ರಜಾಃ ॥ ೧೨೩ ॥

---

ರುತ್ತೇನೆ. ಎಲೈ ತಪೋನಿಧಿಯೆ, ಮಂತ್ರರೂಪವಾದ ಆ ಮೃತಸಂಜೀವಿನೀ ವಿದ್ಯೆಯನ್ನು ನಿನಗೆ ಈಗ ಅನುಗ್ರಹಿಸುತ್ತೇನೆ. ಅದನ್ನು ಪರಿಗ್ರಹಿಸು ನಿನಗೆ ಅರ್ಹತೆಯುಂಟು.

೧೧೯. ಸಮಸ್ತ ವಿದ್ಯೆಗಳಿಗೂ ಒಡೆಯನಾಗಿರುವ ಓ ಶುಕ್ರಾಚಾರ್ಯನೆ, ಶ್ರೇಷ್ಠನಾದ ನೀನು ಯಾರಾರನ್ನು ಕುರಿತು ಈ ವಿದ್ಯೆಯನ್ನು ಪುರಶ್ಚರಣ ಮಾಡುವೆಯೊ ಅವರೆಲ್ಲರೂ ಮತ್ತೆ ಜೀವಿಸುತ್ತಾರೆಂಬುದು ನಿಶ್ಚಯವು.

೧೨೦. ಇಷ್ಟೇ ಅಲ್ಲದೆ ನೀನು ಸೂರ್ಯಾಗ್ನಿಗಳ ತೇಜಸ್ಸನ್ನೂ ಮೀರಿದ ತೇಜಸ್ವಿಯಾಗಿ ಸಮಸ್ತಗ್ರಹಗಳಿಗೂ ಮೇಲಿನ ಸ್ಥಾನವನ್ನು ಪಡೆದು ಗ್ರಹ ಶ್ರೇಷ್ಠನೆನಿಸಿ ದೇದೀಪ್ಯಮಾನವಾಗಿ ಬೆಳಗುವೆ

೧೨೧. ಎಲೈ ಶುಕ್ರನೆ, ಯಾವ ನರನಾರಿಯರು ನಿನಗೆ ಅಭಿಮುಖವಾಗಿ ಯಾತ್ರಾದಿಗಳನ್ನು ಮಾಡುವರೊ ಅವರ ಕಾರ್ಯವೆಲ್ಲವೂ ನಿನ್ನ ದೃಷ್ಟಿಪಾತ ಮಾತ್ರದಿಂದಲೆ ನಾಶವಾಗಿ ಹೋಗುತ್ತದೆ.

೧೨೨. ನಿನ್ನ ಉದಯಸಮಯದಲ್ಲಿ ಮಾಡಿದ ವಿವಾಹಾದಿ ಸಮಸ್ತ ಸತ್ಕರ್ಮಗಳೂ ಮಾನವರಿಗೆ ಸತ್ಫಲಪ್ರದಗಳೆನಿಸುತ್ತವೆ.

೧೨೩. ಸಮಸ್ತತಿಥಿಗಳೂ ಅಮಂಗಳಪ್ರಾಯವಾದವು. ಅವೆಲ್ಲವೂ ನಿನ್ನ ಸಂಯೋಗವನ್ನು ಪಡೆದು ಮಂಗಳಕರವೆನಿಸುತ್ತವೆ. ನಿನ್ನಲ್ಲಿ ಯಾವ ಮಾನವರು

ತ್ವಯೇದಂ ಸ್ಥಾಪಿತಂ ಲಿಂಗಂ ಶುಕ್ರೇಶಮಿತಿ ಸಂಜ್ಞಿತಂ ।
ಯೇಽರ್ಚಯಿಷ್ಯಂತಿ ಮನುಜಾಸ್ತೇಷಾಂ ಸಿದ್ಧಿರ್ಭವಿಷ್ಯತಿ ॥ ೧೨೪ ॥
ಆವರ್ಷಂ ಪ್ರತಿಶುಕ್ರಂ ಯೇ ನಕ್ತವ್ರತಪರಾ ನರಾಃ ।
ತ್ವದ್ವಿನೇ ಶುಕ್ರಕೂಪೇ ಯೇ ಕೃತಸರ್ವೋದಕಕ್ರಿಯಾಃ ॥ ೧೨೫ ॥
ಶುಕ್ರೇಶಮರ್ಚಯಿಷ್ಯಂತಿ ಶೃಣು ತೇಷಾಂ ತು ಯತ್ಫಲಂ ।
ಅವಂಧ್ಯಶುಕ್ರಾಸ್ತೇ ಮರ್ತ್ಯಾಃ ಪುತ್ರವಂತೋಽತಿರೇತಸಃ ॥ ೧೨೬ ॥
ಪುಂಸ್ತ್ವಸೌಭಾಗ್ಯಸಂಪನ್ನಾ ಭವಿಷ್ಯಂತಿ ನ ಸಂಶಯಃ ।
ವ್ಯಪೇತವಿಘ್ನಾಸ್ತೇ ಸರ್ವೇ ಜನಾಃ ಸ್ಯುಃ ಸುಖವಾಸಿನಃ ।
ಇತಿ ದತ್ವಾ ವರಾನ್ ಶಂಭುಸ್ತತ್ರಲಿಂಗೇ ಲಯಂ ಯಯೌ ॥ ೧೨೭ ॥

ಗಣಾವೂಚತುಃ :—

ಶುಕ್ರೇಶ್ವರಸ್ಯ ಯೇ ಭಕ್ತಾಃ ಶುಕ್ರಲೋಕೇ ವಸಂತಿ ತೇ ।
ವಿಶ್ವೇಶ್ವರಾದ್ದಕ್ಷಿಣತಃ ಶುಕ್ರೇಶೋಽಸ್ತಿ ಪರಂತಪ ॥ ೧೨೮ ॥
ತಸ್ಯ ದರ್ಶನಮಾತ್ರೇಣ ಶುಕ್ರಲೋಕೇ ಮಹೀಯತೇ ।
ಇತ್ಯೇಷಾ ಶುಕ್ರಲೋಕಸ್ಯ ಸ್ಥಿತಿರುಕ್ತಾ ಮಹಾಮತೇ ॥ ೧೨೯ ॥

---

ಭಕ್ತಿಯನ್ನಿಟ್ಟುಕೊಂಡಿರುವರೊ ಅವರು ವೀರ್ಯಪಟುಗಳೂ, ಬಹುಪ್ರಜರೂ ಆಗುವರು.

೧೨೪ ನೀನು ಪ್ರತಿಷ್ಠಿಸಿರುವ ನಿನ್ನ ಹೆಸರಿನದೆ ಆದ ಈ ಶುಕ್ರೇಶ್ವರ ಲಿಂಗವನ್ನು ಯಾವ ಮಾನವರು ಪೂಜಿಸುತ್ತಾರೆಯೊ ಅವರಿಗೆ ಸಮಸ್ತ ಸಿದ್ಧಿಗಳೂ ಲಭಿಸುತ್ತವೆ.

೧೨೫–೧೨೭. ಒಂದುವರ್ಷ ಪೂರ್ತಿಯಾಗಿ ನೀನು ಸ್ಥಾಪಿಸಿರುವ ಶುಕ್ರ ಕೂಪದಲ್ಲಿ ಸ್ನಾನಾಹ್ನಿಕಾದಿಗಳನ್ನೂ ಪಿತೃತರ್ಪಣವನ್ನೂ ಮಾಡಿ, ಪ್ರತಿ ಶುಕ್ರವಾರವೂ ನಕ್ತವ್ರತವನ್ನು ಮಾಡುವುದರಲ್ಲಿ ಶ್ರದ್ಧೆವಹಿಸಿ ಶುಕ್ರೇಶ್ವರನನ್ನು ಅರ್ಚಿಸುವ ಮಾನವರಿಗೆ ಯಾವ ಫಲವು ದೊರಕುವುದೆಂಬುದನ್ನು ಹೇಳುತ್ತೇನೆ ಕೇಳು. ಅವರು ಸಫಲವೀರ್ಯರಾಗಿ ಪುತ್ರವಂತರೂ, ಅತಿರೇತಸ್ಕರೂ ಪೌರುಷ ಸೌಭಾಗ್ಯಗಳೊಡಗೂಡಿದವರೂ ಎಲ್ಲ ವಿಘ್ನಗಳಿಂದಲೂ ದೂರವಾದವರೂ ಸುಖ ಜೀವಿಗಳೂ ಆಗುವರೆಂಬುದರಲ್ಲಿ ಸಂಶಯವಿಲ್ಲವು.'' ಅಯ್ಯಾ, ಶಿವಶರ್ಮನೆ, ಪರಮೇಶ್ವರನು ಈ ರೀತಿ ಶುಕ್ರನಿಗೆ ವರಗಳನ್ನು ಕೊಟ್ಟು ಆ ಶುಕ್ರೇಶ್ವರಲಿಂಗ ದಲ್ಲಿಯೆ ಅಂತರ್ಧಾನವಾದನು.

೧೨೮–೧೨೯. ಗಣಗಳು ಹೇಳುತ್ತಾರೆ—ಶುಕ್ರೇಶ್ವರನ ಭಕ್ತರೆಲ್ಲರೂ ಶುಕ್ರಲೋಕದಲ್ಲಿ ವಾಸಮಾಡುವರು. ಈ ಶುಕ್ರೇಶ್ವರಲಿಂಗವು ವಿಶ್ವೇಶ್ವರ ಲಿಂಗದ ದಕ್ಷಿಣಭಾಗದಲ್ಲಿದೆ. ಆ ಲಿಂಗದ ದರ್ಶನಮಾತ್ರದಿಂದಲೆ ಮಾನವನು

ಅಗಸ್ತ್ಯ ಉವಾಚ :—

ಇತ್ಥಂ ಸಧರ್ಮಿಣಿ ಕಥಾಂ ಶುಕ್ರಲೋಕಸ್ಯ ಸುವ್ರತೇ ।
ಶೃಣ್ವನ್ನಂಗಾರಕಂ ಲೋಕಮಾಲುಲೋಕೇಽಥ ಸದ್ವಿಜಃ ॥ ೧೩೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಶುಕ್ರಲೋಕವರ್ಣನಂ" ನಾಮ ಷೋಡಶೋಽಧ್ಯಾಯಃ

---

ಶುಕ್ರಲೋಕದಲ್ಲಿ ಗೌರವಿಸಲ್ಪಡುತ್ತಾನೆ. ಎಲೈ ಮಹಾಮತಿಯು! ಹೀಗೆ ನಿನಗೆ ಶುಕ್ರಲೋಕದ ಸ್ಥಿತಿಯನ್ನು ಹೇಳಿದ್ದಾಯಿತು.

೧೩೦. ಅಗಸ್ತ್ಯನು ಹೇಳುತ್ತಾನೆ—ಎಲೌ ಲೋಪಾಮುದ್ರೇ ಹೀಗೆ ಆ ವಿಷ್ಣುಪಾರ್ಷದರು ಶುಕ್ರಲೋಕದ ಕಥೆಯನ್ನು ಹೇಳುತ್ತಿರಲು ಆ ಶಿವಶರ್ಮ ದ್ವಿಜನು ಮುಂದುವರಿಯುತ್ತ ಅಂಗಾರಕಲೋಕವನ್ನು ಕಂಡನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಶುಕ್ರಲೋಕವರ್ಣನ"ವೆಂಬ ಹದಿನಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ಸಪ್ತದಶೋಽಧ್ಯಾಯಃ

### ಅಂಗಾರಕ ಗುರು ಶನಿಲೋಕ ವರ್ಣನಂ

ಶಿವಶರ್ಮೋವಾಚ :—

ಶುಕ್ರಸಂಬಂಧಿನೀ ದೇವೌ ಕಥಾಶ್ರಾವಿ ಮಯಾ ಶುಭಾ ।
ಯಸ್ಯಾಃ ಶ್ರವಣಮಾತ್ರೇಣ ಪ್ರೀಣಿತೇ ಶ್ರವಣೇ ಮಮ ॥ ೧ ॥
ಕಸ್ಯ ಪುಣ್ಯನಿಧೇರ್ಲೋಕಃ ಶೋಕಹೃತ್ಸೋಽಷ ನಿರ್ಮಲಃ ।
ಏತದಾಖ್ಯಾತುಮುದ್ಯುಕ್ತೌ ಭವಂತೌ ಭವತಾಂ ಮಮ ॥ ೨ ॥
ಧಯಿತ್ವಾ ಶ್ರೋತ್ರಪಾತ್ರಾಭ್ಯಾಂ ವಾಣೀಮಮೃತರೂಪಿಣೀಂ ।
ನ ತೃಪ್ತಿಮಧಿಗಚ್ಛಾಮಿ ಭವನ್ಮುಖಸುಖೋದ್ಗತಾಂ ॥ ೩ ॥

ಗಣಾವೂಚತುಃ :—

ಲೋಹಿತಾಂಗಸ್ಯ ಲೋಕೋಽಯಂ ಶಿವಶರ್ಮನ್ನಿಬೋಧ ಹ ।
ಉತ್ಪತ್ತಿಂ ಚಾಸ್ಯ ವಕ್ಷ್ಯಾವೋ ಭೂಸುತೋಽಯಂ ಯಥಾಽಭವತ್ ॥ ೪ ॥
ಪುರಾ ತಪಸ್ಯತಃ ಶಂಭೋರ್ದಾಕ್ಷಾಯಣ್ಯಾ ವಿಯೋಗತಃ ।
ಭಾಲಸ್ಥಲಾತ್ಪಪಾತೈಕಃ ಸ್ವೇದಬಿಂದುರ್ಮಹೀತಲೇ ॥ ೫ ॥

---

## ಕನ್ನಡದ ಅನುವಾದ

### ಅಂಗಾರಕ ಗುರು ಶನಿಲೋಕಗಳವರ್ಣನ

೧. ಶಿವಶರ್ಮನು ಕೇಳುತ್ತಾನೆ:—ಎಲೈ ವಿಷ್ಣುಪಾರ್ಷದರೆ, ನಾನು ಮಂಗಳಕರವಾದ ಶುಕ್ರಲೋಕದ ಕಥೆಯನ್ನು ಕೇಳಿದೆನು. ಅದನ್ನು ಕೇಳಿ ನನ್ನ ಕಿವಿಗಳೆರಡೂ ಪಾವನಗಳಾದುವು. ನನಗೂ ಸಂತೋಷವಾಯಿತು.

೨. ಶೋಕವನ್ನು ಕಳೆದು ಸಂತೋಷವನ್ನುಂಟುಮಾಡುತ್ತಿರುವ ನಿರ್ಮಲವಾದ ಈ ಲೋಕವು ಯಾವ ಪುಣ್ಯಾತ್ಮನದು ? ಈ ವಿಷಯವನ್ನು ನೀವೀರ್ವರೂ ನನಗೆ ಅಪ್ಪಣೆಕೊಡಿಸಬೇಕು.

೩. ಅಮೃತ ರೂಪವಾಗಿ ನಿಮ್ಮ ಮುಖದಿಂದ ಹೊರಬರುತ್ತಿರುವ ವಾಣಿಯನ್ನು ನನ್ನ ಶ್ರೋತ್ರಗಳೆಂಬ ಪಾತ್ರೆಗಳಿಂದ ಪಾನಮಾಡುತ್ತಿದ್ದರೂ ಇನ್ನೂ ನನಗೆ ತೃಪ್ತಿಯು ಆಗಿರುವುದಿಲ್ಲ.

೪. ಗಣಗಳು ಹೇಳುತ್ತಾರೆ —ಎಲೈ ಶಿವಶರ್ಮನೆ, ಇದು ಅಂಗಾರಕ ಲೋಕವೆಂದು ತಿಳಿ. ಇವನ ಉತ್ಪತ್ತಿಯು ವಿಚಾರವನ್ನೂ, ಇವನು ಭೂಮಿಯ ಮಗನಾದುದೆಂತೆಂಬುದನ್ನೂ ಹೇಳುವೆವು ಕೇಳು.

೫. ಪೂರ್ವದಲ್ಲಿ ಪರಮೇಶ್ವರನು ದಾಕ್ಷಾಯಣಿಯ ವಿಯೋಗವಾದುದ

ತತಃ ಕುಮಾರಃ ಸಂಜಜ್ಞೇ ಲೋಹಿತಾಂಗೋ ಮಹೀತಲಾತ್ ।
ಸ್ನೇಹ ಸಂವರ್ಧಿತಃ ಸೋಽಥ ಧಾತ್ರ್ಯಾ ಧಾತ್ರೀಸ್ವರೂಪಯಾ ॥ ೬ ॥
ಮಾಹೇಯ ಇತ್ಯತಃ ಖ್ಯಾತಿಂ ಪರಾಮೇಷ ಗತಃ ಸದಾ ।
ತತಸ್ತೇಪೇ ತಪೋಽತ್ಯುಗ್ರಮುಗ್ರಪುರ್ಯಾಂ ಪುರಾಽನಘ ॥ ೭ ॥
ಅಸಿಶ್ಚ ವರಣಾ ಚಾಽಪಿ ಸರಿತೌ ಯತ್ರ ಶೋಭನೇ ।
ದ್ಯುನದ್ಯೋತ್ತರವಾಹಿನ್ಯಾ ಮಿಲಿತೇಽತ್ರ ಜಗದ್ಧಿತೇ ॥ ೮ ॥
ಸರ್ವಗೋಽಪಿ ಹಿ ವಿಶ್ವೇಶೋ ಯತ್ರ ನಿತ್ಯಂ ಪ್ರಕಾಶತೇ ।
ಮುಕ್ತಯೇ ಸರ್ವಜಂತೂನಾಂ ಕಾಲೋಜ್ಝಿತಸ್ವವರ್ಷ್ಮಣಾಂ ॥ ೯ ॥
ಅಮೃತಂ ಹಿ ಭವಂತ್ಯೇವ ಮೃತಾ ಯತ್ರ ಶರೀರಿಣಃ ।
ಅನುಗ್ರಹಂ ಸಮಾಸಾದ್ಯ ಪರಂ ವಿಶ್ವೇಶ್ವರಸ್ಯ ಹ ॥ ೧೦ ॥
ಅಪುನರ್ಭವದೇಹಾಸ್ತೇ ಯೇಽವಿಮುಕ್ತೇ ತನುತ್ಯಜಃ ।
ವಿನಾ ಸಾಂಖ್ಯೇನ ಯೋಗೇನ ವಿನಾ ನಾನಾವ್ರತಾದಿಭಿಃ ॥ ೧೧ ॥

---

ರಿಂದ ಉಗ್ರವಾದ ತಪಸ್ಸನ್ನೆಸಗುತ್ತಿರಲು ಅವನ ಹಣೆಯಿಂದ ಒಂದು ಬೆವರ ತೊಟ್ಟು ಭೂಮಿಯಲ್ಲಿ ಬಿದ್ದಿತು.

೬. ತರುವಾಯ, ಆ ಸ್ವೇದಬಿಂದುವೇ ಒರ್ವ ಕುಮಾರನಾಗಿ ಪರಿಣಮಿಸಿತು. ಮೆಯ್ಯೆಲ್ಲವೂ ಕೆಂಪಾಗಿದ್ದುದರಿಂದ ಇವನಿಗೆ ಲೋಹಿತಾಂಗನೆಂದು ಹೆಸರಾಯಿತು. ಇವನನ್ನು ಭೂಮಿಯು ಉಪಮಾತೆಯೆನಿಸಿ ವಿಶ್ವಾಸದಿಂದ ಬೆಳಸಿದಳು.

೭. ಇದರಿಂದ ಈ ಲೋಹಿತಾಂಗನು ಮಾಹೇಯ (ಮಹಿಯ ಮಗ) ಎಂದು ಪ್ರಸಿದ್ಧಿಯನ್ನು ಪಡೆದನು. ಇದಾದ ಮೇಲೆ ಈ ಅಂಗಾರಕನು ತ್ರಿಪುರ ಸಂಹಾರಿಯ ವಾರಾಣಸೀಪುರದಲ್ಲಿ ಅತ್ಯುಗ್ರವಾದ ತಪಸ್ಸನ್ನು ಮಾಡಿದನು.

೮. ಅಸೀ, ವರಣಾ ಎಂಬ ಶುಭಕರವಾದ ನದಿಗಳೆರಡೂ ಉತ್ತರವಾಹಿನಿಯಾದ ಗಂಗೆಯನ್ನು ಕೂಡುವ ತ್ರಿಜಗದ್ಧಿತಕರವಾದ ಸ್ಥಳದಲ್ಲಿ ಈತನು ತಪಸ್ಸು ಮಾಡಿದನು.

೯. ಈ ಪ್ರದೇಶದಲ್ಲಿಯೆ ಉಚಿತ ಕಾಲದಲ್ಲಿ ತನುವನ್ನು ತೊರೆಯುವ ಸಮಸ್ತ ಜಂತುಗಳಿಗೂ ಮುಕ್ತಿಯನ್ನು ದೊರೆಯಿಸುವುದಕ್ಕಾಗಿ ಸಾಕ್ಷಾತ್ ವಿಶ್ವೇಶ್ವರನು ಸರ್ವಾಂತರ್ಯಾಮಿಯಾಗಿದ್ದರೂ ಸತತವೂ ಪ್ರಕಾಶಿಸುತ್ತಿರುತ್ತಾನೆ.

೧೦. ಇಲ್ಲಿ ಮೃತರಾಗುವ ಶರೀರಿಗಳು ಉತ್ತಮೋತ್ತಮವಾದ ವಿಶ್ವೇಶ್ವರನ ಅನುಗ್ರಹವನ್ನು ಪಡೆದು ಅಮೃತರಾಗಿ ಕೈವಲ್ಯವನ್ನು ಪಡೆಯುತ್ತಾರೆ.

೧೧. ಅವಿಮುಕ್ತಕ್ಷೇತ್ರದಲ್ಲಿ ದೇಹವನ್ನು ತೊರೆಯುವ ಮಾನವರು

ಸಂಸ್ಥಾಪ್ಯ ಲಿಂಗಂ ವಿಧಿನಾ ಸ್ವನಾಮ್ನಾಂಽಗಾರಕೇಶ್ವರಂ ।
ಪಾಂಚಮುದ್ರೇ ಮಹಾಸ್ಥಾನೇ ಕಂಬಲಾಶ್ವತರೋತ್ತರೇ ॥ ೧೨ ॥
ಜ್ವಲದಂಗಾರವತ್ತೇಜೋ ಯಾವತ್ತಸ್ಯ ಶರೀರತಃ ।
ವಿನಿರ್ಯಯೌ ತಪಸ್ತಾವತ್ತೇನ ತಪ್ತಂ ಮಹಾತ್ಮನಾ ॥ ೧೩ ॥
ತತೋಽಂಗಾರಕನಾಮ್ನಾ ಸ ಸರ್ವಲೋಕೇಷು ಗೀಯತೇ ।
ತಸ್ಯ ತುಷ್ಟೋ ಮಹಾದೇವೋ ದದೌ ಗ್ರಹಪ್ರದಂ ಮಹತ್ ॥ ೧೪ ॥
ಅಂಗಾರಕಚತುರ್ಥ್ಯಾಂ ಯೇ ಸ್ನಾತ್ವೋತ್ತರವಹಾಂಭಸಿ ।
ಅಭ್ಯರ್ಚ್ಯಾಂಗಾರಕೇಶಾನಂ ನಮಸ್ಯಂತಿ ನರೋತ್ತಮಾಃ ॥ ೧೫ ॥
ನ ತೇಷಾಂ ಗ್ರಹಪೀಡಾ ಚ ಕದಾಚಿತ್ಕ್ವಾಽಪಿ ಜಾಯತೇ ।
ಅಂಗಾರಕೇನ ಸಂಯುಕ್ತಾ ಚತುರ್ಥೀ ಲಭ್ಯತೇ ಯದಿ ॥ ೧೬ ॥
ಉಪರಾಗಸಮಂ ಪರ್ವ ತದುಕ್ತಂ ಕಾಲವೇದಿಭಿಃ ।
ತಸ್ಯಾಂ ದತ್ತಂ ಹುತಂ ಜಪ್ತಂ ಸರ್ವಂ ಭವತಿ ಚಾಕ್ಷಯಂ ॥ ೧೭ ॥

---

ಸಾಂಖ್ಯಯೋಗಗಳ ಅಭ್ಯಾಸವಿಲ್ಲದಿದ್ದರೂ, ವಿವಿಧವ್ರತಗಳ ಅನುಷ್ಠಾನವಿಲ್ಲದಿದ್ದರೂ ಪುನರ್ಜನ್ಮವನ್ನು ಪಡೆಯುವುದಿಲ್ಲ.

೧೨–೧೩. ಇಂತಹ ಪಾವನವಾದ ಪ್ರದೇಶಗಳಲ್ಲಿ ಅಂಗಾರಕನು ತನ್ನ ಹೆಸರಿನಿಂದಲೆ ಒಂದು ಲಿಂಗವನ್ನು ವಿಧ್ಯುಕ್ತವಾಗಿ ಕಂಬಲಾಶ್ವತರ ನಾಗಗಳ ಉತ್ತರಕ್ಕಿರುವ ಪಾಂಚಮುದ್ರ ಮಹಾ ಪೀಠದಲ್ಲಿ ಸ್ಥಾಪಿಸಿ, ಅವನ ಮೈಯ್ಯಿಂದ ಉರಿಯುವ ಕೆಂಡದಂತಹ ತೇಜಸ್ಸು ಹೊರಡುವವರೆಗೂ ಮಹತ್ತರವಾದ ತಪಸ್ಸನ್ನು ಮಾಡಿದನು.

೧೪. ಇಂತು ತಪಸ್ಸನ್ನೆಸಗಿದುದರಿಂದ ಇವನಿಗೆ ಅಂಗಾರಕನೆಂದು ಹೆಸರಾಯಿತು. ಎಲ್ಲ ಲೋಕಗಳಲ್ಲಿಯೂ ಅವನನ್ನು ಈ ಹೆಸರಿನಿಂದಲೆ ಕರೆಯುತ್ತಾರೆ ಮಹಾದೇವನು ಇಂತಹ ಅದ್ಭುತವಾದ ಅವನ ತಪಸ್ಸಿನಿಂದ ಸಂತೋಷಗೊಂಡು ಅವನಿಗೆ ಮಹತ್ತರವಾದ ಗ್ರಹಪದವಿಯನ್ನು ವರವಾಗಿ ಕೊಟ್ಟನು.

೧೫–೧೭. ಯಾವ ಮಾನವರು ಉತ್ತರವಾಹಿನಿಯಾದ ಗಂಗಾನದಿಯಲ್ಲಿ ಸ್ನಾನಮಾಡಿ ಅಂಗಾರಕಚತುರ್ಥಿಯಂದು ಅಂಗಾರಕೇಶ್ವರನನ್ನು ಪೂಜಿಸಿ ನಮಸ್ಕರಿಸುತ್ತಾರೆಯೊ ಅವರಿಗೆ ಎಂದಿಗೂ ಎಲ್ಲಿಯೂ ಗ್ರಹಪೀಡೆಯೆಂಬುದುಂಟಾಗುವುದಿಲ್ಲ. ಅಂಗಾರಕನೊಡಗೂಡಿದ ಚತುರ್ಥಿಯು ಲಭಿಸಿದ್ದಾದರೆ ಆ ದಿನವು ಗ್ರಹಣ ದಿನಕ್ಕೆ ಸಮಾನವಾದ ದಿನವೆಂದು ಕಾಲಜ್ಞರು ಹೇಳುತ್ತಾರೆ. ಅಂದು ದಾನಕೊಟ್ಟದ್ದು, ಹೋಮಮಾಡಿದ್ದು ಜಪಿಸಿದ್ದು—ಎಲ್ಲವೂ ಅಕ್ಷಯವಾಗುತ್ತದೆ.

ಶ್ರದ್ಧಯಾ ಶ್ರಾದ್ಧದಾ ಯೇ ವೈ ಚತುರ್ಥ್ಯಂಗಾರಯೋಗತಃ ।
ತೇಷಾಂ ಪಿತೄಣಾಂ ಭವಿತಾ ತೃಪ್ತಿರ್ದ್ವಾದಶವಾರ್ಷಿಕೀ ॥ ೧೮ ॥
ಅಂಗಾರಕಚತುರ್ಥ್ಯಾಂ ತು ಪುರಾ ಜಜ್ಞೇ ಗಣೇಶ್ವರಃ ।
ಅತ ಏವ ತು ತತ್ಪರ್ವ ಪ್ರೋಕ್ತಂ ಪುಣ್ಯಸಮೃದ್ಧಯೇ ॥ ೧೯ ॥
ಏಕಭಕ್ತವ್ರತೀ ತತ್ರ ಸಂಪೂಜ್ಯ ಗಣನಾಯಕಂ ।
ಕಿಂಚಿದ್ದತ್ವಾ ತಮುದ್ದಿಶ್ಯ ನ ವಿಘ್ನೈರಭಿಭೂಯತೇ ॥ ೨೦ ॥
ಅಂಗಾರೇಶ್ವರಭಕ್ತಾ ಯೇ ವಾರಾಣಸ್ಯಾಂ ನರೋತ್ತಮಾಃ ।
ತೇಽಸ್ಮಿನ್ನಂಗಾರಕೇ ಲೋಕೇ ವಸಂತಿ ಪರಮರ್ಧಯಃ ॥ ೨೧ ॥

ಅಗಸ್ತ್ಯ ಉವಾಚ :-

ಇತ್ಥಂ ಕಥಯತೋರೇವ ರಮ್ಯಾಂ ಪುಣ್ಯವತೀಂ ಕಥಾಂ ।
ಭಗವದ್ಗಣಯೋಃ ಪ್ರಾಪ ನೇತ್ರಾತಿಥ್ಯಂ ಗುರೋಃ ಪುರೀ ॥ ೨೨ ॥
ನೇತ್ರಾನಂದಕರೀಂ ದೃಷ್ಟ್ವಾ ಶಿವಶರ್ಮಾಽಥ ತಾಂ ಪುರೀಂ ।
ಪಪ್ರಚ್ಛಾಚಾರ್ಯವರ್ಯಸ್ಯ ಕಸ್ಯೇಯಂ ಪೂರನುತ್ತಮಾ ॥ ೨೩ ॥

---

೧೮. ಅಂಗಾರಕಯೋಗವಿರುವ ಚತುರ್ಥಿಯ ದಿನದಲ್ಲಿ ಯಾರಾದರೆ ಶ್ರದ್ಧೆಯಿಂದ ಶ್ರಾದ್ಧವನ್ನು ಮಾಡುತ್ತಾರೆಯೊ ಅವರ ಪಿತೃಗಳಿಗೆ ಹನ್ನೆರಡು ವರ್ಷಗಳ ಕಾಲ ತೃಪ್ತಿಯುಂಟಾಗುವುದು.

೧೯. ಈ ಅಂಗಾರಕ ಚತುರ್ಥಿಯ ದಿನದಲ್ಲಿಯೆ ಪೂರ್ವದಲ್ಲಿ ಗಣೇಶ್ವರನು ಉದಿಸಿದನು. ಆದುದರಿಂದಲೆ ಆ ದಿನವು ಅತ್ಯಂತ ಶುಭವಾದ ಪರ್ವದಿನವೆಂದು ಪ್ರಸಿದ್ಧವಾಗಿದೆ.

೨೦. ಮಾನವನು ಆ ಪ್ರದೇಶದಲ್ಲಿ ಏಕಭುಕ್ತವ್ರತಿಯಾಗಿ ಗಣನಾಯಕನನ್ನು ಪೂಜಿಸಿ, ಆ ಸ್ವಾಮಿಯ ಸಂತುಷ್ಟಿಗಾಗಿ ಯಾರಿಗಾದರೂ ಏನನ್ನಾದರೂ ದಾನಮಾಡಿದ್ದಾದರೆ, ವಿಘ್ನಗಳಿಂದ ತಿರಸ್ಕೃತನಾಗುವುದಿಲ್ಲ.

೨೧. ಯಾವ ನರೋತ್ತಮರು ವಾರಾಣಸೀಕ್ಷೇತ್ರದಲ್ಲಿ ಅಂಗಾರೇಶ್ವರನ ಭಕ್ತರಾಗಿರುತ್ತಾರೆಯೊ ಅವರು ಈ ಅಂಗಾರಕ ಲೋಕದಲ್ಲಿ ನೆಲಸಿ ಮಹದೈಶ್ವರ್ಯಸಂಪನ್ನರಾಗಿ ಸುಖಿಸುತ್ತಾರೆ.

೨೨. ಅಗಸ್ತ್ಯನು ಹೇಳುತ್ತಾನೆ:—ಎಲೌ ಲೋಪಾಮುದ್ರೆ, ಹೀಗೆ ಆ ವಿಷ್ಣುಪಾರ್ಷದರು ಮನೋಹರವೂ, ಪುಣ್ಯಸಂಪಾದಕವೂ ಆದ ಅಂಗಾರಕ ಲೋಕದ ಕಥೆಯನ್ನು ಮುಂದುವರಿಸುತ್ತಿರುವಂತೆಯೆ, ಆ ಶಿವಶರ್ಮನು ತನ್ನ ಮುಂಗಡೆ ಗುರುಲೋಕವನ್ನು ಕಂಡನು.

೨೩. ನೇತ್ರಾನಂದಕರವಾದ ಆ ಪಟ್ಟಣವನ್ನು ಕಂಡ ಆ ವಿಪ್ರನು,

ಗಣಾವೂಚತುಃ:—

ಸಖೇ ಸುಖಂ ಸಮಾಖ್ಯಾವೋ ನಾನಾಖ್ಯೇಯಂ ತವಾಽಗ್ರತಃ ।
ಅಧ್ವಖೇದಾಽಪನೋದಾಯ ಪುನರಸ್ಯಾಃ ಪುರಃ ಕಥಾಂ ॥ ೨೪ ॥
ವಿಧೇರ್ವಿಧಿತ್ಸತಃ ಪೂರ್ವಂ ತ್ರಿಲೋಕೀರಚನಾಂ ಮುದಾ ।
ಆವಿರಾಸುಃ ಸುತಾಃ ಸಪ್ತ ಮಾನಸಾಃ ಸ್ವಸ್ಯ ಸನ್ನಿಭಾಃ ॥ ೨೫ ॥
ಮರೀಚ್ಯತ್ರ್ಯಂಗಿರೋ ಮುಖ್ಯಾಃ ಸರ್ವೇ ಸೃಷ್ಟಿಪ್ರವರ್ತಕಾಃ ।
ಪ್ರಜಾಪತೇರಂಗಿರಸಸ್ತೇಷ್ವಭೂದ್ದೇವಸತ್ತಮಃ ॥ ೨೬ ॥
ಸುತಶ್ಚಾಽಂಗಿರಸೋ ನಾಮ ಬುದ್ಧ್ಯಾ ವಿಬುಧಸತ್ತಮಃ ।
ಶಾಂತೋದಾಂತೋ ಜಿತಕ್ರೋಧೋ ಮೃದುವಾಙ್ನಿರ್ಮಲಾಶಯಃ ॥
ವೇದವೇದಾರ್ಥತತ್ವಜ್ಞಃ ಕಲಾಸು ಕುಶಲೋಽಮಲಃ ।
ಪಾರದೃಶ್ವಾ ತು ಸರ್ವೇಷಾಂ ಶಾಸ್ತ್ರಾಣಾಂ ನೀತಿವಿತ್ತಮಃ ॥ ೨೮ ॥
ಹಿತೋಪದೇಷ್ಟಾ ಹಿತಕೃದಹಿತಾತ್ಯಹಿತಃ ಸದಾ ।
ರೂಪವಾಂಛೀಲಸಂಪನ್ನೋ ಗುಣವಾನ್ದೇಶಕಾಲವಿತ್ ॥ ೨೯ ॥

---

ಉತ್ತಮೋತ್ತಮವಾದ ಆ ಪಟ್ಟಣವು ಯಾರದೆಂದು ವಿಷ್ಣುಪಾರ್ಷದರನ್ನು ಪ್ರಶ್ನಿಸಿದನು.

೨೪. ಗಣಗಳು ಹೇಳುತ್ತಾರೆ:—ಅಯ್ಯಾ ಮಿತ್ರನಾದ ಶಿವಶರ್ಮನೆ, ಈ ವಿಷಯವನ್ನು ನಾವು ಸಂತೋಷದಿಂದ ನಿನಗೆ ತಿಳಿಸುತ್ತೇವೆ. ನಿನಗೆ ಹೇಳ ಬಾರದುದು ಯಾವುದೂ ಇರುವುದಿಲ್ಲ. ಮಾರ್ಗವನ್ನು ನಡೆವ ಶ್ರಮವನ್ನು ಪರಿಹರಿಸಿಕೊಳ್ಳಲೋಸುಗ ಮತ್ತೆ ಈ ಗುರುಲೋಕದ ಕಥೆಯನ್ನು ನಿನಗೆ ತಿಳಿಸುತ್ತೇವೆ.

೨೫. ಪೂರ್ವದಲ್ಲಿ ಬ್ರಹ್ಮನು ಸಂತೋಷದಿಂದ ತ್ರಿಲೋಕರಚನೆಯನ್ನು ಮಾಡಬಯಸಿರಲು ಅವನ ಮನಸ್ಸಿನಿಂದಲೆ ಅವನ ತೇಜಸ್ಸಿಗೆ ಸಮಾನವಾದ ತೇಜಸ್ಸುಳ್ಳ ಏಳು ಮಕ್ಕಳು ಜನಿಸಿದರು.

೨೬–೨೭. ಮಾರೀಚ, ಅತ್ರಿ, ಅಂಗಿರ ಮೊದಲಾದ ಆ ಮಕ್ಕಳೆಲ್ಲರೂ ಸೃಷ್ಟಿಪ್ರವರ್ತಕರೆನಿಸಿದರು. ಅವರಲ್ಲಿ ಒಬ್ಬನಾದ ಅಂಗಿರಸನು ದೇವತಾಶ್ರೇಷ್ಠ ನೆನಿಸಿದ್ದನು. ಈ ಅಂಗಿರಸನಿಗೆ ಶಾಂತನೂ, ದಾಂತನೂ, ಜಿತಕ್ರೋಧನೂ, ಮೃದುವಚನನೂ, ನಿರ್ಮಲಚಿತ್ತನೂ, ಮಹಾ ಬುದ್ಧಿಶಾಲಿಯೂ ಆದ ಆಂಗಿರಸ ನೆಂಬ ವಿಬುಧಶ್ರೇಷ್ಠನಾದ ಮಗನು ಜನಿಸಿದನು.

೨೮–೨೯. ಈ ಆಂಗಿರಸನು ವೇದಾರ್ಥತತ್ತ್ವಜ್ಞನಾಗಿಯೂ, ಸಮಸ್ತ ಕಲೆಗಳಲ್ಲಿ ಕುಶಲನಾಗಿಯೂ, ಶುದ್ಧನಾಗಿಯೂ ಸಕಲ ಶಾಸ್ತ್ರಗಳಲ್ಲಿ ಪಾರಂಗತ ನಾಗಿಯೂ, ನೀತಿಯನ್ನರಿತವರಲ್ಲಿ ಉತ್ತಮನಾಗಿಯೂ ಸಮಸ್ತ ದೇವತೆಗಳಿಗೂ

ಸರ್ವಲಕ್ಷಣಸಂಭಾರಸಂಭೃತೋ ಗುರುವತ್ಸಲಃ ।
ತತಾಪ ತಾಪಸೀಂ ವೃತ್ತಿಂ ಕಾಶ್ಯಾಂ ಸ ಮಹತೀಂ ದಧತ್ ॥ ೩೦ ॥
ಮಹಲ್ಲಿಂಗಂ ಪ್ರತಿಷ್ಠಾಪ್ಯ ಶಾಂಭವಂ ಭೂರಿಭಾವನಃ ।
ಅಯುತಂ ಶರದಾಂ ದಿವ್ಯಂ ದಿವ್ಯತೇಜಾ ಮಹಾತಪಾಃ ॥ ೩೧ ॥
ತತಃ ಪ್ರಸನ್ನೋ ಭಗವಾನ್ ವಿಶ್ವೇಶೋ ವಿಶ್ವಭಾವನಃ ।
ಆವಿರ್ಭೂಯ ತತೋ ಲಿಂಗಾನ್ಮಹಸಾಂರಾಶಿರಬ್ರವೀತ್ ॥ ೩೨ ॥
ಪ್ರಸನ್ನೋಽಸ್ಮಿ ವರಂ ಬ್ರೂಹಿ ಯತ್ತೇ ಮನಸಿ ವರ್ತತೇ ।
ಇತಿ ಶಂಭುಂ ಸಮಾಲೋಕ್ಯ ತುಷ್ಟಾವೇತಿ ಸಹೃಷ್ಟವಾನ್ ॥ ೩೩ ॥

ಅಂಗಿರಸ ಉವಾಚ :—

ಜಯ ಶಂಕರ ಶಾಂತ ಶಶಾಂಕರುಚೇ
ರುಚಿರಾರ್ಥದ ಸರ್ವದ ಸರ್ವಶುಚೇ ।
ಶುಚಿದತ್ತ ಗೃಹೀತ ಮಹೋಪಹೃತೇ
ಹೃತಭಕ್ತಜನೋದ್ಧತ ತಾಪ ತತೇ ॥ ೩೪ ॥

---

ಹಿತೋಪದೇಶಕನಾಗಿಯೂ, ಹಿತಕರನಾಗಿಯೂ, ಎಲ್ಲ ಅಹಿತಗಳನ್ನೂ ಗೆದ್ದು ಶತ್ರುಗಳಿಗೂ ಇಷ್ಟನೂ, ರೂಪಶೀಲಸಂಪನ್ನನೂ, ಸದ್ಗುಣಭರಿತನೂ, ಆಗಿದ್ದನು.

೩೦. ತಂದೆಯಲ್ಲಿ ಭಕ್ತಿಗೌರವಗಳನ್ನೊಳಕೊಂಡ ಈ ಬೃಹಸ್ಪತಿಯು ಸಮಸ್ತ ತಪಸ್ಸಾಮಗ್ರಿಗಳನ್ನೂ ಶೇಖರಿಸಿಕೊಂಡು ಕಾಶೀಪಟ್ಟಣದಲ್ಲಿ ಮಹಾ ತೇಜಸ್ಸಂಪನ್ನನಾಗಿ ತಪೋವೃತ್ತಿಯನ್ನಾಚರಿಸಿದನು.

೩೧. ಹೀಗೆ ಮಹಾಭಕ್ತಿಸಂಪನ್ನನಾದ ಬೃಹಸ್ಪತಿಯು ಮಹತ್ತರವಾದ ಲಿಂಗವನ್ನು ಪ್ರತಿಷ್ಠಿಸಿ, ಹತ್ತುಸಾವಿರ ದಿವ್ಯ ವರ್ಷಗಳಕಾಲ ದಿವ್ಯತೇಜಸ್ವಿಯೂ ಮಹಾ ತಪಸ್ವಿಯೂ ಆಗಿ ತಪಸ್ಸನ್ನೆಸಗಿದನು.

೩೨. ಇದಾದ ತರುವಾಯ, ವಿಶ್ವವ್ಯಾಪಿಯಾದ ಭಗವಾನ್ ವಿಶ್ವೇಶ್ವರನು ಆತನ ತಪಸ್ಸಿಗೆ ಪ್ರಸನ್ನನಾಗಿ, ಆ ಲಿಂಗದಿಂದ ತೇಜೋರಾಶಿಸ್ವರೂಪನಾಗಿ ಆವಿರ್ಭವಿಸಿ ಅವನನ್ನು ಕುರಿತು ಹೀಗೆಂದನು.

೩೩. "ಅಯ್ಯಾ ಬೃಹಸ್ಪತಿಯೆ, ನಿನ್ನ ವಿಷಯದಲ್ಲಿ ನಾನು ಪ್ರಸನ್ನನಾಗಿದ್ದೇನೆ. ನಿನ್ನ ಅಭೀಷ್ಟವೇನೆಂದು ತಿಳಿಸು. ಅನುಗ್ರಹಿಸುತ್ತೇನೆ." ಇಂತು ನುಡಿದ ಆ ಪರಮೇಶ್ವರನ ಮಾತುಗಳನ್ನು ಕೇಳಿ ಅವನನ್ನು ಕಂಡು ಬೃಹಸ್ಪತಿಯು ಸ್ತೋತ್ರಮಾಡತೊಡಗಿದನು.

೩೪. ಬೃಹಸ್ಪತಿಯು ಸ್ತುತಿಸುತ್ತಾನೆ:—ಶಂಕರ, ಭಕ್ತರ ಅಭೀಷ್ಟಸಿದ್ಧಿಗಾಗಿ ಜಯಿಸು. ಶಮಪ್ರಧಾನನಾದ ಓ ವಿಭುವೆ, ಚಂದ್ರನಂತೆ ತಂಪಾದ ಕಾಂತಿ

ತತ ಸರ್ವ ಹೃದಂಬರ ವರದನತೇ
ನತವೃಜಿನಮಹಾವನದಾಹಕೃತೇ ।
ಕೃತವಿವಿಧಚರಿತ್ರ ತನೋ ಸುತನೋ
ತನು ವಿಶಿಖವಿಶೋಷಣ ಧೈರ್ಯನಿಧೇ ॥ ೩೫ ॥
ನಿಧನಾದಿವಿವರ್ಜಿತಕೃತನತಿಕೃತ್
ಕೃತಿವಿಹಿತ ಮನೋರಥ ಪನ್ನಗಭೃತ್ ।
ನಗಭರ್ತೃ ಸುತಾರ್ಪಿತ ವಾಮವಪುಃ
ಸ್ವವಪುಃ ಪರಿಪೂರಿತ ಸರ್ವಜಗತ್ ॥ ೩೬ ॥
ತ್ರಿಜಗನ್ಮಯರೂಪ ವಿರೂಪಸುದೃಕ್
ದೃಗುದಂಚನ ಕುಂಚನ ಕೃತಹುತಭುಕ್ ।
ಭವಭೂತಪತೇ ಪ್ರಮಥೈಕಪತೇ
ಪತಿತೇಷ್ವಪಿ ದತ್ತಕರಪ್ರಸೃತೇ ॥ ೩೭ ॥

---

ಯುಳ್ಳವನಾಗಿ ಭಕ್ತರಿಗೆ ಇಷ್ಟವಾದ ಅಭೀಷ್ಟಗಳನ್ನು ಸಲ್ಲಿಸುತ್ತ, ಮುಕ್ತಿ ಪ್ರದಾಯಕನೂ ಸರ್ವಪಾವನನೂ ಪರಿಶುದ್ಧವಾದ ಮನಸ್ಸುಳ್ಳ ಭಕ್ತಜನರಿಂದ ಮಹಾಪೂಜೆಗಳನ್ನು ಕೈಕೊಳ್ಳುವವನೂ ಅವರಿಗೆ ಬಂದೊದಗುವ ಸಂತಾಪ ಪರಂಪರೆಗಳನ್ನು ಕಳೆಯುವವನೂ ಆದ ಓ ಸ್ವಾಮಿಯೆ. ಜಯಿಸು!

೩೫. ಸಕಲಜೀವಿಗಳ ಹೃದಯಾಕಾಶಗಳನ್ನೂ ವಿಶಾಲಗೊಳಿಸುವ ಓ ಚಿದಂಬರಮೂರ್ತಿಯೆ, ವರದನೆ, ಭಕ್ತಿಯಿಂದ ನೀನೆ ಗತಿಯೆಂದು ಶರಣುಹೊಂದಿದವರ ಪಾಪಗಳೆಂಬ ಕಾಡಿಗೆ ದಳ್ಳುರಿಯಂತಿರುವವನೂ ಅನೇಕ ಅದ್ಭುತ ಕಾರ್ಯಗಳನ್ನು ಮಾಡಿದ ದಿವ್ಯಶರೀರವುಳ್ಳವನೂ ಅಸಮಾನ ತೇಜ ಶ್ಶರೀರಿಯೂ ಅನಂಗನನ್ನು ಭಸ್ಮಸಾತ್ಕರಿಸುವ ಕಾರ್ಯದಲ್ಲಿ ಮಹಾಧೈರ್ಯ ವನ್ನು ಮೆರೆದವನೂ ಆದ ಓ ಪರಮೇಶ್ವರನೆ ಜಯ ಜಯ!

೩೬. ಮರಣವೇ ಮೊದಲಾದ ಆರು ಬಗೆಯ ವಿಕಾರಗಳಿಲ್ಲದವನಾಗಿ, ಭಕ್ತಸಂಗ್ರಹಣ ಶೀಲನಾಗಿ, ಜ್ಞಾನಿಗಳಾದ ಆ ಭಕ್ತರಿಗೆ ಅವರ ಮನೋರಥ ವೆನಿಸಿದ ಮೋಕ್ಷವನ್ನು ದಯಪಾಲಿಸಿ ಮಹೋನ್ನತನಾಗಿರುವ ಓ ನಾಗ ಭೂಷಣನೆ, ಪರ್ವತರಾಜಕುಮಾರಿಯಾದ ಪಾರ್ವತಿಗೆ ವಾಮಶರೀರವನ್ನೇ ಅರ್ಪಿಸಿ, ನಿಜಶರೀರದಲ್ಲಿಯೆ ಅಖಿಲ ಜಗತ್ತನ್ನೂ ತುಂಬಿಕೊಂಡಿರುವ ಓ ವಿಶ್ವೇಶ್ವರ, ಜಯಿಸು, ಜಯಿಸು!

೩೭. ಮೂರು ಲೋಕಗಳ ಸ್ವರೂಪವನ್ನು ತಾಳಿ ಮೆರೆಯುತ್ತ ವಿರೂಪಾಕ್ಷ ನಾಗಿ, ಆ ವಿರೂಪಾಕ್ಷದ ಉನ್ಮೇಷ ನಿಮೇಷಗಳಿಂದ ಪ್ರಳಯಾಗ್ನಿಯನ್ನು ಉತ್ಪನ್ನಗೊಳಿಸುವವನೂ, ಸಮಸ್ತ ಜಗತ್ತಿಗೂ ಉಗಮಸ್ಥಾನವೆನಿಸಿ, ಚತುರ್ವಿಧ

ಪೃಸೃತಾಽಖಿಲ ಭೂತಲ ಸಂವರಣ
ಪ್ರಣವಧ್ವನಿ ಸೌಧ ಸುಧಾಂಶುಧರ ।
ಧರರಾಜಕುಮಾರಿಕಯಾ ಪರಯಾ
ಪರಿತಃ ಪರಿತುಷ್ಟ ನತೋಽಸ್ಮಿ ಶಿವ ॥ ೩೮ ।
ಶಿವ ದೇವ ಗಿರೀಶ ಮಹೇಶ ವಿಭೋ
ವಿಭವಪ್ರದ ಗಿರೀಶ ಶಿವೇಶ ಮೃಡ ।
ಮೃಡಯೋಡುಪತಿಧ್ರ ಜಗತ್ತ್ರಿತಯಂ
ಕೃತಯಂತ್ರಣಭಕ್ತಿವಿಘಾತಕೃತಾಂ ॥ ೩೯ ।
ನ ಕೃತಾಂತತ ಏಷ ಬಿಭೇಮಿ ಹರ
ಪ್ರಹರಾಶು ಮಹಾಘಮಮೋಘಮತೇ ।
ನ ಮತಾಂತರಮನ್ಯದವೈಮಿ ಶಿವ
ಶಿವಪಾದನತೇಃ ಪ್ರಣತೋಽಸ್ಮಿ ತತಃ ॥ ೪೦ ॥

---

ಭೂತಗಳಿಗೂ ಪ್ರಮಥಗಣಗಳಿಗೂ ಏಕಸ್ವಾಮಿಯಾಗಿ, ಭವಾರ್ಣವದಲ್ಲಿ ಬಿದ್ದು ತೊಳಲುತ್ತಿರುವ ಜೀವಿಗಳಿಗೆ ಅನುಕಂಪದಿಂದ ಕೈನೀಡಿ ಅಭಯನೀಡುವವನೂ ಆದ ಓ ಸ್ವಾಮಿಯೆ, ಜಯಶೀಲನಾಗು.

೩೮. ಅಖಿಲಭೂಮಂಡಲವನ್ನೂ ಆವರಣಸಹಿತವಾಗಿ ಆವರಿಸಿ, ಪ್ರಣವನಾದವೆಂಬ ಭವ್ಯಭವನಸ್ವರೂಪನಾಗಿ, ಶಶಾಂಕಶೇಖರನಾಗಿ, ಉತ್ತಮೆಯಾದ ಗಿರಿರಾಜಕುಮಾರಿಯನ್ನೊಡಗೊಂಡು ಸರ್ವಾನಂದಮಯನಾಗಿರುವ ಓ ಶಂಭುವೆ, ಕಲ್ಯಾಣಸ್ವರೂಪನಾದ ನೀನು ಸರ್ವಕಾಲದಲ್ಲಿಯೂ ಭಕ್ತರ ಅಭೀಷ್ಟಸಿದ್ಧಿಗಾಗಿ ವಿಜಯಿಸು.

೩೯. ಎಲೈ ಮಹೇಶ್ವರನೆ, ಸ್ವಯಂಪ್ರಕಾಶನಾಗಿ ವೇದಲಕ್ಷಣವಾದ ವಾಕ್ಕಿಗೆ ನಿಯಂತೃವೂ, ಕೈಲಾಸಪತಿಯೂ, ಮಹಾರಾಜಾಧಿರಾಜನೂ, ಸರ್ವವ್ಯಾಪಿಯೂ, ನಂಬಿದ ಭಕ್ತರಿಗೆ ಸರ್ವೈಶ್ವರ್ಯಪ್ರದಾಯಕನೂ, ಗಿರಿಶನೂ, ಪಾರ್ವತೀರಮಣನೂ, ಸುಖಸ್ವರೂಪನೂ, ಚಂದ್ರನನ್ನು ಧರಿಸದವನೂ ಆದ ಓ ಸ್ವಾಮಿಯೆ, ಭಕ್ತರಿಗೆ ತೊಂದರೆಯನ್ನು ಕೊಡುವ ದುಷ್ಟರನ್ನು ನಿಗ್ರಹಿಸುವ ಪ್ರಭುವೆ, ಮೂರು ಲೋಕಗಳನ್ನೂ ಸಂತೋಷಗೊಳಿಸಿ ಜಯಿಸು.

೪೦. ಎಲೈ ಹರನೆ, ನಾನು ನಿನ್ನನ್ನೇ ನಂಬಿರುವೆನಾಗಿ ಯಮನಿಗೂ ಅಂಜುವುದಿಲ್ಲ. ಎಲೈ ಜ್ಞಾನಸ್ವರೂಪನೆ, ನನ್ನ ಪಾಪಗಳೆಲ್ಲವನ್ನೂ ಕಳೆ. ನಿನ್ನನ್ನುಳಿದು ನಮಸ್ಕಾರರ್ಹನೂ, ಮಂಗಳಸ್ವರೂಪನೂ ಆದ ಬೇರೊಂದು ದೈವವನ್ನು ನಾನರಿಯೆ. ಆದುದರಿಂದಲೆ ಶಿವನಾದ ನಿನ್ನ ಪಾದವಂದನ

ವಿತತೇಽತ್ರ ಜಗತ್ಯಖಿಲೇಽಘಹರಂ
ಹರತೋಷಣಮೇವ ಪರಂ ಗುಣವತ್ ।
ಗುಣಹೀನಮಹೀನಮಹಾವಲಯಂ
ಪ್ರಲಯಾಂತಕಮೀಶ ನತೋಽಸ್ಮಿ ತತಃ ॥ ೪೧ ॥
ಇತಿ ಸ್ತುತ್ವಾ ಮಹಾದೇವಂ ವಿರರಾಮಾಂಗಿರಃಸುತಃ ।
ವ್ಯತರಚ್ಚ ಮಹೇಶಾನಃ ಸ್ತುತ್ಯಾ ತುಷ್ಟೋ ವರಾನ್ ಬಹೂನ್ ॥ ೪೨ ॥

ಶ್ರೀ ಮಹಾದೇವ ಉವಾಚ :—

ಬೃಹತಾ ತಪಸಾಽನೇನ ಬೃಹತಾಂ ಪತಿರೇಧ್ಯಹೋ ।
ನಾಮ್ನಾ ಬೃಹಸ್ಪತಿರಿತಿ ಗ್ರಹೇಷ್ವರ್ಚ್ಯೋ ಭವ ದ್ವಿಜ ॥ ೪೩ ॥
ಅಸ್ಮಾಲ್ಲಿಂಗಾರ್ಚನಾನ್ನಿತ್ಯಂ ಜೀವಭೂತೋಽಸಿ ಮೇ ಯತಃ ।
ಅತೋ ಜೀವ ಇತಿ ಖ್ಯಾತಿಂ ತ್ರಿಷು ಲೋಕೇಷು ಯಾಸ್ಯಸಿ ॥ ೪೪ ॥

---

ವನ್ನುಳಿದು ಬೇರೊಂದು ಶ್ರೇಯಸ್ಸಾಧನವನ್ನೂ ನಾನರಿಯೆ ಇದೊ ನಾನು ನಿನ್ನಲ್ಲಿಯೆ ಪ್ರಣತನಾಗಿರುವೆನು

೪೧. ವಿಸ್ತಾರವಾಗಿರುವ ಈ ಜಗತ್ತ್ರಯದಲ್ಲೆಲ್ಲ ಅತ್ಯುತ್ತಮವೂ ಗುಣವತ್ತರವೂ ಆದುದು ಪರಮೇಶ್ವರನನ್ನು ಪೂಜಿಸಿ ಸ್ತುತಿಸಿ ಸಂತೋಷಪಡಿಸುವುದೊಂದೆ. ಇಂತಹ ನಿರಾಕಾರಸ್ವರೂಪನಾಗಿ ಪ್ರಪಂಚಾತೀತನೆನಿಸಿದ್ದರೂ ಅನಂತ ವಾಸುಕಿ ಮಹಾ ಸರ್ಪಗಳ ಕಂಕಣಗಳಿಂದ ವಿರಾಜಿತನಾಗಿ ಪ್ರಳಯ ಕಾಲದ ಯಮಸ್ವರೂಪನಾಗಿರುವ ಓ ಜಗದೀಶ್ವರ! ನಿನ್ನನ್ನು ನಮಸ್ಕರಿಸುತ್ತೇನೆ.''

೪೨. ಎಲೈ ಶಿವಶರ್ಮನೆ, ಅಂಗಿರನ ಮಗನಾದ ಆ ಬೃಹಸ್ಪತಿಯು ಮಹದೇವನನ್ನು ಹೀಗೆ ಸ್ತುತಿಸಿ ಸುಮ್ಮನಾಗಲು, ಆ ಸ್ವಾಮಿಯು ಪರಮ ಸಂತುಷ್ಟನಾಗಿ ಅವನಿಗೆ ಅನೇಕ ವರಗಳನ್ನು ದಯಪಾಲಿಸಿದನು.

೪೩. ಮಹಾದೇವನು ಹೇಳುತ್ತಾನೆ:—''ಅಯ್ಯಾ ಬ್ರಾಹ್ಮಣನೆ, ಬೃಹತ್ತರವಾದ ಈ ನಿನ್ನ ತಪಸ್ಸಿನಿಂದ ಬೃಹತ್ತರೆನಿಸಿದ ದೇವೇಂದ್ರಾದಿಗಳಿಗೆ ಗುರುವೆನಿಸಿ ಬೃಹಸ್ಪತಿಯೆಂಬ ಹೆಸರನ್ನು ಪಡೆದು, ಗ್ರಹಗಳಲ್ಲೆಲ್ಲ ಪೂಜ್ಯನೆನಿಸಿ ವರ್ಧಿಸುವವನಾಗು.

೪೪. ನೀನೆಸಗಿದ ಈ ಲಿಂಗಾರ್ಚನೆಯಿಂದ ನೀನು ನನ್ನ ಜೀವಸ್ವರೂಪವೇ ಆಗಿರುವೆ. ಈ ಕಾರಣದಿಂದ ನೀನು ಮೂರು ಲೋಕಗಳಲ್ಲೂ ಜೀವನೆಂದು ಪ್ರಖ್ಯಾತಿಯನ್ನು ಪಡೆಯುವೆ.

ವಾಚಾಂ ಪ್ರಪಂಚೈಶ್ಚತುರ್ರೈರ್ನಿಷ್ಪ್ರಪಂಚೋ ಯತಃ ಸ್ತುತಃ ।
ಅತೋ ವಾಚಾಂ ಪ್ರಪಂಚಸ್ಯ ಪತಿರ್ವಾಚಸ್ಪತಿರ್ಭವ ॥ ೪೫ ॥
ಅಸ್ಯ ಸ್ತೋತ್ರಸ್ಯ ಪಠನಾದಪಿ ವಾಗುದಿಯಾಚ್ಚಯಂ ।
ತಸ್ಯ ಸ್ಯಾತ್ಸಂಸ್ಕೃತಾ ವಾಣೀ ತ್ರಿಭಿರ್ವರ್ಷೈಸ್ತ್ರಿಕಾಲತಃ ॥ ೪೬ ॥
ಸಮುತ್ಪನ್ನೇ ಮಹಾಕಾರ್ಯೇ ನ ಸ ಬುದ್ಧ್ಯಾ ಪ್ರಹೀಯತೇ ।
ಯಃ ಪಠಿಷ್ಯತ್ಯದಃ ಸ್ತೋತ್ರಂ ವಾಯುವ್ಯಾಖ್ಯಂ ದಿನೇ ದಿನೇ ॥ ೪೭ ॥
ಅಸ್ಯ ಸ್ತೋತ್ರಸ್ಯ ಪಠನಾನ್ನಿಯತಂ ಮಮ ಸನ್ನಿಧೌ ।
ನ ದುರ್ವೃತ್ತೌ ಪ್ರವೃತ್ತಿಃ ಸ್ಯಾದವಿವೇಕವತಾಂ ನೃಣಾಂ ॥ ೪೮ ॥
ಅದಃ ಸ್ತೋತ್ರಂ ಪಠಂಜಂತುರ್ಜಾತು ಪೀಡಾಂ ಗ್ರಹೋದ್ಭವಾಂ ।
ನ ಪ್ರಾಪ್ಸ್ಯತಿ ತತೋ ಜಪ್ಯಮಿದಂ ಸ್ತೋತ್ರಂ ಮಮಾಗ್ರತಃ ॥ ೪೯ ॥
ನಿತ್ಯಂ ಪ್ರಾತಃ ಸಮುತ್ಥಾಯ ಯಃ ಪಠಿಷ್ಯತಿ ಮಾನವಃ ।
ಇಮಾಂ ಸ್ತುತಿಂ ಹರಿಷ್ಯೇಽಹಂ ತಸ್ಯ ಬಾಧಾಃ ಸುದಾರುಣಾಃ ॥ ೫೦ ॥

---

೪೫. ಬಹು ವಿಸ್ತಾರವೂ, ಸುಶ್ರಾವ್ಯವೂ ಆದ ವಾಕ್ಕುಗಳಿಂದ ನಿಷ್ಪ್ರಪಂಚನಾದ ನನ್ನನ್ನು ಸ್ತುತಿಸಿದೆಯಾಗಿ ನೀನು ವಾಕ್ಪ್ರಪಂಚದ ಸ್ವಾಮಿಯಾಗಿ ವಾಚಸ್ಪತಿಯೆನಿಸು.

೪೬. ಎಲೈ ಬೃಹಸ್ಪತಿಯೆ, ನೀನು ಮಾಡಿದ ಈ ಸ್ತೋತ್ರವನ್ನು ಮೂರು ವರ್ಷಗಳ ಕಾಲ ತ್ರಿಕಾಲಗಳಲ್ಲಿಯೂ ಪಠನಮಾಡುವ ಮಾನವನಿಗೆ ವಾಕ್ಕು ತಾನಾಗಿಯೆ ವಶವಾಗುತ್ತದೆ.

೪೭. ವಾಯುದೇವತಾಕವೆನಿಸಿದ ಈ ನಿನ್ನ ಸೋತ್ರವನ್ನು ಯಾವ ಮಾನವನು ಪ್ರತಿದಿನವೂ ಪಠಿಸುವನೊ ಅವನು ಕಾರ್ಯಮಾಡುವ ಸಮಯದಲ್ಲಿ ಬುದ್ಧಿಗೆಡುವುದಿಲ್ಲ.

೪೮. ನನ್ನ ಸನ್ನಿಧಿಯಲ್ಲಿ ಈ ಸ್ತೋತ್ರವನ್ನು ಭಕ್ತಿಪೂರ್ವಕವಾಗಿ ಪಠಿಸುವ ಅವಿವೇಕಿಗಳಾದ ನರರಿಗೂ ದುರ್ವ್ಯಾಪಾರಗಳಲ್ಲಿ ಪ್ರವೃತ್ತಿಯುಂಟಾಗುವುದಿಲ್ಲ.

೪೯. ಈ ಸ್ತೋತ್ರವನ್ನು ಪಠನಮಾಡುವ ಪ್ರಾಣಿಯು ಗ್ರಹಗಳಿಂದ ಉದ್ಭವಿಸುವ ಪೀಡೆಯನ್ನು ಮಾತ್ರವಲ್ಲದೆ ರೋಗರುಜಿನಾದಿಗಳನ್ನೂ ಹೊಂದುವುದಿಲ್ಲ. ಆದುದರಿಂದ ಇದನ್ನು ನನ್ನ ಸಮ್ಮುಖದಲ್ಲಿ ಪಠನಮಾಡತಕ್ಕುದು.

೫೦. ಯಾವ ಮಾನವನು ಪ್ರತಿನಿತ್ಯವೂ ಪ್ರಾತಃಕಾಲಕ್ಕೆದ್ದು ಈ ಸೋತ್ರ ಪಠನಮಾಡುವನೊ ಅವನ ಆಯಾ ದಿನದ ಭಯಂಕರವಾದ ಬಾಧೆಗಳನ್ನೆಲ್ಲ ನಾನು ಕಳೆಯುವೆನು.

ತ್ವತ್ಪ್ರತಿಷ್ಠಿತಲಿಂಗಸ್ಯ ಪೂಜಾಂ ಕೃತ್ವಾ ಪ್ರಯತ್ನತಃ ।
ಇಮಾಂ ಸ್ತುತಿಮಧೀಯಾನೋ ಮನೋವಾಂಛಾಮವಾಪ್ಸ್ಯತಿ ॥ ೫೧ ॥
ಇತಿ ದತ್ವಾ ವರಾಂಛಂಭುಃ ಪುನರ್ಬ್ರಹ್ಮಾಣಮಾಹ್ವಯತ್ ।
ಸೇಂದ್ರಾನ್ದೇವಗಣಾನ್ ಸರ್ವಾನ್ ಸಯಕ್ಷೋರಗಕಿನ್ನರಾನ್ ॥ ೫೨ ॥
ತಾನಾಗತಾನ್ ಸಮಾಲೋಕ್ಯ ಶಿವೋ ಬ್ರಹ್ಮಾಣಮಬ್ರವೀತ್ ।
ವಿಧೇ ವಿಧೇಹಿ ಮದ್ವಾಕ್ಯಾದಮುಂ ವಾಚಸ್ಪತಿಂ ಮುನಿಂ ॥ ೫೩ ॥
ಗುರುಂ ಸರ್ವಸುರೇಂದ್ರಾಣಾಂ ಪರಿತಃ ಸ್ವಗಣೈರ್ಗುರುಂ ।
ಅಭಿಷಿಂಚ ವಿಧಾನೇನ ದೇವಾಚಾರ್ಯಪದೇ ಮುದೇ ॥ ೫೪ ॥
ಅತೀವ ಧಿಷಣಾಧೀಶೋ ಮಮ ಪ್ರೀತೋ ಭವಿಷ್ಯತಿ ।
ಮಹಾಪ್ರಸಾದ ಇತ್ಯಾಜ್ಞಾಂ ಶಿರಸ್ಯಾಧಾಯ ತತ್ಕ್ಷಣಾತ್ ॥ ೫೫ ॥
ಸುರಜ್ಯೇಷ್ಠಃ ಸುರಾಚಾರ್ಯಂ ಚಕಾರಾಂಗಿರಸಂ ತದಾ ।
ದೇವದುಂದುಭಯೋ ನೇದುರ್ನನೃತುಶ್ಚಾಽಪ್ಸರೋ ಗಣಾಃ ॥ ೫೬ ॥
ಗುರುಪೂಜಾಂ ವ್ಯಧುಃ ಸರ್ವೇ ಗೀರ್ವಾಣಾ ಮುದಿತಾನನಾಃ ।
ಅಭಿಷಿಕ್ತೋ ವರಿಷ್ಠಾದ್ಯೈರ್ಮಂತ್ರಪೂತೇನ ವಾರಿಣಾ ॥ ೫೭ ॥

---

೫೧. ಅಯ್ಯಾ ಬೃಹಸ್ಪತಿಯೆ, ನೀನು ಪ್ರತಿಷ್ಠಿಸಿದ ಈ ಶಿವಲಿಂಗವನ್ನು ಪ್ರಯತ್ನಪೂರ್ವಕವಾಗಿ ಪೂಜಿಸಿ, ನೀನೆಸಗಿದ ಈ ಸ್ತೋತ್ರವನ್ನು ಪರಾಯಣ ಮಾಡುವ ಮನುಷ್ಯನು ತನ್ನ ಮನೋಭೀಷ್ಟವನ್ನು ಪಡೆಯುತ್ತಾನೆ.''

೫೨. ಎಲೈ ಶಿವಶರ್ಮನೆ, ಪರಮೇಶ್ವರನು ಆ ಬೃಹಸ್ಪತ್ಯಾಚಾರ್ಯನಿಗೆ ಈ ರೀತಿ ವರಗಳನ್ನು ಕೊಟ್ಟು, ಆ ಮೇಲೆ ಬ್ರಹ್ಮನನ್ನೂ, ಇಂದ್ರಾದಿ ಸಮಸ್ತ ದೇವತೆಗಳನ್ನೂ, ಯಕ್ಷ ಉರಗ ಕಿನ್ನರರನ್ನೂ ಬರಮಾಡಿದನು.

೫೩–೫೬. ಅವರೆಲ್ಲರೂ ಬಂದ ತರುವಾಯ ಆ ಶಿವನು ಬ್ರಹ್ಮನನ್ನು ಕುರಿತು, ''ಅಯ್ಯಾ ವಿಧಾತನೆ, ನನ್ನ ಅಪ್ಪಣೆಯಂತೆ ಮುನಿಯಾದ ಈ ವಾಚಸ್ಪತಿಯನ್ನು ದೇವತಾಶ್ರೇಷ್ಠರೆಲ್ಲರಿಗೂ ಪರಮ ಗುರುವನ್ನಾಗಿ ಮಾಡು. ಇವನನ್ನು ಅತ್ಯಾನಂದಕರವಾದ ದೇವಾಚಾರ್ಯಪದವಿಯಲ್ಲಿ ವಿಧ್ಯುಕ್ತವಾಗಿ ಅಭಿಷೇಚಿಸು. ವಾಚಸ್ಪತಿಯಾದ ಈತನು ದೇವಗುರುವಾದುದಾದರೆ ನನಗೆ ಅತ್ಯಂತ ಸಂತೋಷವಾಗುತ್ತದೆ'' ಎಂದು ಹೇಳಿದನು. ಒಡನೆಯೆ ಬ್ರಹ್ಮನು ಮಹಾಪ್ರಸಾದವೆಂದು ಆ ಶಿವನ ಅಪ್ಪಣೆಯನ್ನು ಶಿರಸಾವಹಿಸಿ, ಆ ಅಂಗಿರಸನನ್ನು ಸುರಾಚಾರ್ಯನನ್ನಾಗಿ ಅಭಿಷೇಚಿಸಿದನು. ದೇವದುಂದುಭಿಗಳು ಮೊಳಗಿದುವು, ಅಪ್ಸರೆಯರು ಕುಣಿದರು

೫೭. ದೇವತೆಗಳೆಲ್ಲರೂ ಸಂತೋಷದಿಂದ ಅರಳಿದ ಮುಖವುಳ್ಳವರಾಗಿ

ಪುನರನ್ಯಂ ವರಂ ಪ್ರಾದಾದ್ಗಿರೀಶಃ ಪತಯೇ ಗಿರಾಂ ।
ಶೃಣ್ವಾಂಗಿರಸ ಧರ್ಮಾತ್ಮನ್ ದೇವೇಜ್ಯ ಕುಲನಂದನ ॥ ೫೮ ॥
ಭವತಾ ಸ್ಥಾಪಿತಂ ಲಿಂಗಂ ಸುಬುದ್ಧಿಪರಿವರ್ಧನಂ ।
ಬೃಹಸ್ಪತೀಶ್ವರ ಇತಿ ಖ್ಯಾತಂ ಕಾಶ್ಯಾಂ ಭವಿಷ್ಯತಿ ॥ ೫೯ ॥
ಗುರುಪುಷ್ಯಸಮಾಯೋಗೇ ಲಿಂಗಮೇತತ್ಸಮರ್ಚಯ ।
ಯತ್ಕರಿಷ್ಯಂತಿ ಮನುಜಾಸ್ತತ್ಸಿದ್ಧಿಮಧಿಯಾಸ್ಯತಿ ॥ ೬೦ ॥
ಬೃಹಸ್ಪತೀಶ್ವರಂ ಲಿಂಗಂ ಮಯಾ ಗೋಪ್ಯಂ ಕಲೌ ಯುಗೇ ।
ಅಸ್ಯ ಸಂದರ್ಶನಾದೇವ ಪ್ರತಿಭಾ ಪ್ರತಿಲಭ್ಯತೇ ॥ ೬೧ ॥
ಚಂದ್ರೇಶ್ವರಾದ್ದಕ್ಷಿಣತೋ ವೀರೇಶಾನ್ನೈರ್ಋತೇ ಸ್ಥಿತಂ ।
ಆರಾಧ್ಯ ಧಿಷಣೇಶಂ ವೈ ಗುರುಲೋಕೇ ಮಹೀಯತೇ ॥ ೬೨ ॥
ಗುರ್ವಂಗನಾಗಮನಜಂ ಪಾಪಂ ಷಣ್ಮಾಸಸೇವನಾತ್ ।
ಅವಶ್ಯಂ ವಿಲಯಂ ಯಾತಿ ತಮಃ ಸೂರ್ಯೋದಯಾದ್ಯಥಾ ॥ ೬೩ ॥

---

ಆಂಗಿರಸನಿಗೆ ಗುರುಪೂಜೆಯನ್ನು ಸಲ್ಲಿಸಿದರು. ವಸಿಷ್ಠಾದಿ ಮಹರ್ಷಿಗಳೆಲ್ಲರೂ ಪರಮಪವಿತ್ರವಾದ ಜಲಗಳಿಂದ ಆತನನ್ನು ಸುರಾಚಾರ್ಯಪೀಠದಲ್ಲಿ ಕುಳ್ಳಿರಿಸಿ ಅಭಿಷೇಚನಮಾಡಿದರು.

೫೮–೬೦. ಇದಾದ ತರುವಾಯ ಪರಶಿವನು ಆ ಗೀಷ್ಪತಿಗೆ ಮತ್ತೊಂದು ವರವನ್ನು ಅನುಗ್ರಹಿಸಿದನು. "ಅಯ್ಯಾ ಧರ್ಮಿಷ್ಠನಾದ ಆಂಗಿರಸನೆ, ನೀನು ನಿನ್ನ ವಂಶಕ್ಕೆ ತಕ್ಕ ಪುತ್ರನೆನಿಸಿ ದೇವಪೂಜ್ಯನಾದೆ. ನೀನು ಸ್ಥಾಪಿಸಿರುವ ಶಿವಲಿಂಗವು ಉಪಾಸಕರಿಗೆ ಸದ್ಬುದ್ಧಿಯನ್ನು ಬೆಳೆಸುವುದಾಗುತ್ತದೆ. ಇದು ಬೃಹಸ್ಪತೀಶ್ವರ ಲಿಂಗವೆಂದು ಈ ಕಾಶೀಕ್ಷೇತ್ರದಲ್ಲಿ ಪ್ರಸಿದ್ಧವಾಗುತ್ತದೆ. ಯಾವ ಮಾನವನು ಗುರುಪುಷ್ಯಸಮಾಯೋಗ ಸಮಯದಲ್ಲಿ ಈ ಲಿಂಗವನ್ನು ಅರ್ಚಿಸುತ್ತಾನೆಯೊ ಅವನು ಸಿದ್ಧಿಯನ್ನು ಪಡೆಯುತ್ತಾನೆ.

೬೧. ನಾನು ಈ ಬೃಹಸ್ಪತೀಶ್ವರಲಿಂಗವನ್ನು ಕಲಿಯುಗದಲ್ಲಿ ಗೋಪ್ಯವಾಗಿಸುತ್ತೇನೆ. ಇದರ ಸಂದರ್ಶನ ಮಾತ್ರದಿಂದಲೆ ಮಾನವರಿಗೆ ಪ್ರತಿಭೆಯುಂಟಾಗುತ್ತದೆಯಷ್ಟೆ.

೬೨. ಚಂದ್ರೇಶ್ವರನಿಗೆ ದಕ್ಷಿಣಕ್ಕೂ, ವಿಶ್ವೇಶ್ವರನಿಗೆ ನೈರ್ಋತ್ಯಭಾಗಕ್ಕೂ ನೆಲಸಿರುವ ಈ ಬೃಹಸ್ಪತೀಶ್ವರಲಿಂಗವನ್ನು ಪೂಜಿಸಿದವನು ಬೃಹಸ್ಪತಿ ಲೋಕದಲ್ಲಿ ಪೂಜ್ಯನೆನಿಸುತ್ತಾನೆ.

೬೩. ಈ ಲಿಂಗವನ್ನು ಆರು ತಿಂಗಳಕಾಲ ಸೇವಿಸಿದ್ದಾದರೆ ಗುರುಪತ್ನೀಗಮನದಿಂದುಂಟಾದ ಪಾಪವು ಸೂರ್ಯೋದಯದಲ್ಲಿ ಕತ್ತಲು ಎಂತೊ ಅಂತು ಕಳೆದುಹೋಗುತ್ತದೆ.

ಅತ ಏವ ಹಿ ಗೋಪ್ತವ್ಯಂ ಮಹಾಪಾತಕನಾಶನಂ ।
ಬೃಹಸ್ಪತೀಶ್ವರಂ ಲಿಂಗಂ ನಾಽಽಖ್ಯೇಯಂ ಯಸ್ಯ ಕಸ್ಯಚಿತ್ ॥ ೬೪ ॥
ಇತಿ ದತ್ವಾ ವರಾನ್ದೇವಸ್ತತ್ರೈವಾಽಂತರ್ಹಿತೋಽಭವತ್ ।
ದ್ರುಹಿಣೋ ಗುರುಣಾ ಸಾರ್ಧಂ ಸೇಂದ್ರೋಪೇಂದ್ರೋ ಬೃಹಸ್ಪತಿಂ ॥೬೫॥
ಅಸ್ಮಿನ್ಪುರೇಽಭಿಷಿಚ್ಯಾಽಥ ವಿಸೃಜ್ಯೇಂದ್ರಾದಿಕಾನ್ ಸುರಾನ್ ।
ಅಲಂಚಕಾರ ಸ್ವಂ ಲೋಕಂ ವಿಷ್ಣುನಾಽನುಮತೋ ದ್ವಿಜ ॥ ೬೬ ॥

ಅಗಸ್ತ್ಯ ಉವಾಚ :—

ಅತಿಕ್ರಮ್ಯ ಗುರೋರ್ಲೋಕಂ ಲೋಪಾಮುದ್ರೇ ದದರ್ಶ ಸಃ ।
ಶಿವಶರ್ಮಾ ಪುರೀಂ ಸೌರೇಃ ಪ್ರಭಾಮಂಡಲಮಂಡಿತಾಂ ॥ ೬೭ ॥
ಪೃಷ್ಟೌ ತೇನ ಚ ತೌ ತತ್ರ ತಾಂ ಪುರೀಂ ಪ್ರದದರ್ಶತುಃ ।
ದ್ವಿಜೇನ ದ್ವಿಜವರ್ಯಾಯ ಗಣವರ್ಯೌ ಶುಚಿಸ್ಮಿತೇ ॥ ೬೮ ॥

ಗಣಾವೂಚತುಃ :—

ಮಾರೀಚೇಃ ಕಶ್ಯಪಾಜ್ಜಜ್ಞೇ ದಾಕ್ಷಾಯಣ್ಯಾಂ ದ್ವಿಜೋಷ್ಣಗುಃ ।
ತಸ್ಯ ಭಾರ್ಯಾಽಭವತ್ಸಂಜ್ಞಾ ಪುತ್ರೀ ತ್ವಷ್ಟುಃ ಪ್ರಜಾಪತೇಃ ॥ ೬೯ ॥

---

೬೪. ಆದುದರಿಂದಲೆ ಮಹಾಪಾತಕನಾಶಕವೆನಿಸಿದ ಈ ಬೃಹಸ್ಪತೀಶ್ವರ ಲಿಂಗದ ವಿಷಯವನ್ನು ಗೋಪ್ಯವಾಗಿಡತಕ್ಕುದು. ಯಾರಿಗೂ ಹೇಳತಕ್ಕದ್ದಲ್ಲ."

೬೫–೬೬. ಈ ಪ್ರಕಾರವಾಗಿ ಪರಮೇಶ್ವರನು ಬೃಹಸ್ಪತಿಗೆ ವರವನ್ನಿತ್ತು ಅಲ್ಲಿಯೆ ಅಂತರ್ಧಾನವಾದನು. ಬ್ರಹ್ಮನು ಸಹ ಲೋಕಗುರುವಾದ ನಾರಾಯಣ ನೊಡನೆಯೂ ಇಂದ್ರಾದಿ ದೇವತೆಗಳೊಡನೆಯೂ ಬೃಹಸ್ಪತಿಯನ್ನು ಈ ಲೋಕಕ್ಕೆ ಕರೆತಂದು ರಾಜ್ಯಾಭಿಷೇಚನಮಾಡಿ ದೇವತೆಗಳೆಲ್ಲರನ್ನೂ ಅವರವರ ಲೋಕಗಳಿಗೆ ಕಳುಹಿಸಿಕೊಟ್ಟು, ವಿಷ್ಣುವಿನ ಅಪ್ಪಣೆಯನ್ನು ಪಡೆದು ತಾನೂ ತನ್ನ ಲೋಕಕ್ಕೆ ತೆರಳಿದನು.

೬೭. ಅಗಸ್ತ್ಯನು ಹೇಳುತ್ತಾನೆ —ಎಲೌ ಲೋಪಾಮುದ್ರೆ, ಇಂಥ ಮಹಿಮಾನ್ವಿತವಾದ ಬೃಹಸ್ಪತಿಯ ಲೋಕವನ್ನು ದಾಟಿ ಮುಂದುವರಿದ ಆ ಶಿವಶರ್ಮನು ಅಲ್ಲಿಯೆ ಸೂರ್ಯಪುತ್ರನೂ ಪ್ರಭಾಮಂಡಲ ಮಂಡಿತನೂ ಆದ ಶನಿಮಹಾರಾಯನ ಲೋಕವನ್ನು ಕಂಡನು.

೬೮. ಆ ಪಟ್ಟಣವನ್ನು ಕಂಡು ಅವನು ವಿಷ್ಣುಪಾರ್ಷದರನ್ನು ಪ್ರಶ್ನಿಸಲು ಆನಂದದಿಂದ ನಸುನಗೆಗೂಡಿ ಅವರು ಆ ಬ್ರಾಹ್ಮಣೋತ್ತಮನಿಗೆ ಆ ಪಟ್ಟಣದ ವಿಚಾರವನ್ನು ಹೇಳತೊಡಗಿದರು.

೬೯. ಗಣಗಳು ಹೇಳುತ್ತಾರೆ –ಎಲೈ ಬ್ರಾಹ್ಮಣನೆ, ದಾಕ್ಷಾಯಣಿಯಾದ ಅದಿತಿಯಲ್ಲಿ ಮರೀಚಿಯ ಮಗನಾದ ಕಶ್ಯಪನಿಗೆ ಉಷ್ಣರಶ್ಮಿಯಾದ ಸೂರ್ಯನು

ಭರ್ತುರಿಷ್ಟಾ ತತಸ್ತಸ್ಮಾದ್ರೂಪಯೌವನಶಾಲಿನೀ ।
ಸಂಜ್ಞಾ ಬಭೂವ ತಪಸಾ ಸುದೀಪ್ತೇನ ಸಮನ್ವಿತಾ ॥ ೨೦ ॥
ಆದಿತ್ಯಸ್ಯ ಹಿ ತದ್ರೂಪಂ ಮಂಡಲಸ್ಯ ತು ತೇಜಸಾ ।
ಗಾತ್ರೇಷು ಪರಿದಗ್ಧ್ಯಾ ವೈ ನಾಽತಿಕಾಂತಮಿವಾಽಭವತ್ ॥ ೨೧ ॥
ನ ಖಲ್ವಯಮ್ಮೃತೋಽಂಡಸ್ಥ ಇತಿ ಸ್ನೇಹಾದಭಾಷತ ।
ತದಾ ಪ್ರಭೃತಿ ಲೋಕೇಯಂ ಮಾರ್ತಂಡ ಇತಿ ಚೋಚ್ಯತೇ ॥ ೨೨ ॥
ತೇಜಸ್ತ್ವಭ್ಯಧಿಕಂ ತಸ್ಯ ಸಾಽಸಹಿಷ್ಣುರ್ವಿವಸ್ವತಃ ।
ಯೇನಾತಿತಾಪಯಾಮಾಸ ತ್ರೈಲೋಕ್ಯಂ ತಿಗ್ಮರಶ್ಮಿಭೃತ್ ॥ ೨೩ ॥
ತ್ರೀಣ್ಯಪತ್ಯಾನಿ ಭೋ ಬ್ರಹ್ಮನ್ ಸಂಜ್ಞಾಯಾಂ ಮಹಸಾಂ ನಿಧಿಃ ।
ಆದಿತ್ಯೋ ಜನಯಾಮಾಸ ಕನ್ಯಾಂ ದ್ವೌ ಚ ಪ್ರಜಾಪತೀ ॥ ೨೪ ॥
ವೈವಸ್ವತಂ ಮನುಂ ಜ್ಯೇಷ್ಠಂ ಯಮಂ ಚ ಯಮುನಾಂ ತತಃ ।
ನಾಽತಿತೇಜೋಮಯಂ ರೂಪಂ ಸೋಢುಂ ಸಾಽಲಂ ವಿವಸ್ವತಃ ॥ ೨೫ ॥
ಮಾಯಾಮಯೀಂ ತತಶ್ಛಾಯಾಂ ಸವರ್ಣಾಂ ನಿರ್ಮಮೇಸ್ವತಃ ।
ಪ್ರಾಂಜಲಿಃ ಪ್ರಣತಾ ಭೂತ್ವಾ ಸಂಜ್ಞಾಂ ಛಾಯಾ ತದಾಽಬ್ರವೀತ್ ॥ ೨೬ ॥

ಜನಿಸಿದನು. ತ್ವಷ್ಟೃಪ್ರಜಾಪತಿಯ ಮಗಳಾದ ಸಂಜ್ಞಾದೇವಿಯು ಆ ಸೂರ್ಯನ ಮಡದಿಯಾದಳು

೨೦. ರೂಪಯೌವನಶಾಲಿನಿಯಾಗಿ ಭರ್ತನಿಗೆ ಅತ್ಯಂತ ಪ್ರಿಯತಮೆಯಾಗಿ ನಡೆಯುತ್ತಿದ್ದ ಆ ಸಂಜ್ಞಾದೇವಿಯು ತಪಸ್ಸಿನಿಂದಲೂ ಮಹಾತೇಜಸ್ಸಂಪನ್ನೆಯಾದಳು.

೨೧. ಈಕೆಯು ಮಂಡಲಲಕ್ಷಿತವಾದ ಆ ಆದಿತ್ಯನ ಆ ಬಗೆಯ ತೇಜಸ್ಸನ್ನು ತನ್ನ ಮೆಯ್ಯಲ್ಲಿ ತಾಳಿ ಅಷ್ಟಾಗಿ ಪ್ರಕಾಶಿಸದೆ ಹೋದಳು. ಅವಳಿಂದ ಆ ತೇಜಸ್ಸನ್ನು ಸಹಿಸಲಾಗಲಿಲ್ಲ.

೨೨. ಆಗ ಸಂಜ್ಞಾದೇವಿಯು ಪ್ರಣಯಕೋಪವನ್ನು ತಾಳಿ, "ಈ ಸೂರ್ಯನು ನನ್ನ ಗರ್ಭಾಂಡದಲ್ಲಿ ಸೇರಿದ್ದಾನೆ" ಎಂದು ನುಡಿದಳು. ಅಂದಿನಿಂದ ಸೂರ್ಯನು ಮಾರ್ತಾಂಡನೆನಿಸಿದನು.

೨೩. ಆಕೆಯು ಸೂರ್ಯನ ಅಧಿಕಾಧಿಕವಾದ ಆ ತೇಜಸ್ಸನ್ನು ಸಹಿಸಲಾರದೆ ಹೋದಳು. ಆ ತೇಜಸ್ಸಿನಿಂದಲೆ ಸೂರ್ಯನು ಮೂರು ಲೋಕಗಳನ್ನೂ ತಪನಗೊಳಿಸುವನಷ್ಟೆ.

೨೪–೨೬. ಅಯ್ಯಾ ಬ್ರಾಹ್ಮಣನೆ, ಜ್ಯೋತಿರ್ನಿಧಿಯಾದ ಆದಿತ್ಯನು ಆ ಸಂಜ್ಞಾದೇವಿಯಲ್ಲಿ ಮೂರು ಮಂದಿ ಗಂಡುಮಕ್ಕಳನ್ನೂ ಇಬ್ಬರು ಹೆಣ್ಣುಮಕ್ಕಳನ್ನೂ ಪಡೆದನು. ಜ್ಯೇಷ್ಠಪುತ್ರನೇ ವೈವಸ್ವತಮನು; ಎರಡನೆಯವನು

ತವಾಜ್ಞಾಕಾರಿಣೀಂ ದೇವಿ ಶಾಧಿ ಮಾಂ ಕರವಾಣಿ ಕಿಂ ।
ಸಂಜ್ಞೋವಾಚ ತತಶ್ಛಾಯಾಂ ಸವರ್ಣೇ ಶೃಣು ಸುಂದರಿ ॥ ೨೭ ॥
ಅಹಂ ಯಾಸ್ಯಾಮಿ ಸದನಂ ತ್ವಷ್ಟುಸ್ತ್ವಂ ಪುನರದ್ಯ ಮೇ ।
ಭವನೇ ವಸ ಕಲ್ಯಾಣಿ ನಿರ್ವಿಶಂಕಂ ಮಮಾಜ್ಞಯಾ ॥ ೨೮ ॥
ಮನುರೇಷ ಯಮಾವೇತೌ ಯಮುನಾ ಯಮಸಂಜ್ಞಕೌ ।
ಸ್ವಾಪತ್ಯದೃಷ್ಟ್ಯಾ ದ್ರಷ್ಟವ್ಯಮೇತದ್ಬಾಲತ್ರಯಂ ತ್ವಯಾ ॥ ೨೯ ॥
ಅನಾಖ್ಯೇಯಮಿದಂ ವೃತ್ತಂ ತ್ವಯಾಪತ್ಯೌ ಶುಚಿಸ್ಮಿತೇ ।
ಇತ್ಯಾಕರ್ಣ್ಯಾಥ ಸಾ ತ್ವಾಷ್ಟ್ರೀಂ ದೇವೀಂ ಛಾಯಾ ಜಗಾದ ಹ ॥ ೩೦ ॥
ಆಕಚಗ್ರಹಣಾನ್ಮಾಹನಮಾಶಾಪಾಚ್ಚ ಕದಾಚನ ।
ಆಖ್ಯಾಸ್ಯಾಮಿ ಚರಿತ್ರಂ ತೇ ಯಾಹಿ ದೇವಿ ಯಥಾ ಸುಖಂ ॥ ೩೧ ॥

---

ಯಮ, ಯಮನ ತಂಗಿಯು ಯಮುನ. ಇದಾದ ಬಳಿಕ ಆ ಸಂಜ್ಞಾದೇವಿಯು ಸೂರ್ಯನ ಅತಿ ತೇಜೋಮಯವಾದ ರೂಪವನ್ನು ಸಹಿಸಲಾರದೆ ತನ್ನ ಮಾಯೆಯಿಂದ ತನ್ನಂತೆಯ ರೂಪವುಳ್ಳ ಒರ್ವ ಸ್ತ್ರೀಯನ್ನು ತನ್ನ ಛಾಯೆಯಿಂದಲೆ ನಿರ್ಮಿಸಿದಳು. ಹೀಗೆ ನಿರ್ಮಿತವಾದವಳೆ ಛಾಯಾದೇವಿಯು. ಹೀಗೆ ಉದಿಸಿದ ಛಾಯೆಯು ಅಂಜಲಿಬಂಧವನ್ನು ಮಾಡಿ ನಮಸ್ಕರಿಸಿ, ಆ ಸಂಜ್ಞೆಯನ್ನು ಕುರಿತು ಹೀಗೆಂದಳು.

೨೭–೨೮. "ಎಲೌ ದೇವಿಯೆ, ನಾನು ನಿನ್ನ ಅಪ್ಪಣೆಯನ್ನು ನೆರವೇರಿಸುವ ಸೇವಕಿ. ನಿನಗಾಗಿ ನಾನೇನು ಮಾಡಬೇಕೆಂಬುದನ್ನು ಆಜ್ಞಾಪಿಸು." ಛಾಯೆಯ ಮಾತನ್ನು ಕೇಳಿ ಸಂಜ್ಞೆಯು "ಸವರ್ಣೆಯಾದ ಎಲೌ ಛಾಯಾಸುಂದರಿಯೆ, ಪ್ರಕೃತದಲ್ಲಿ ನಾನು ನಮ್ಮ ತಂದೆಯಾದ ತ್ವಷ್ಟೃವಿನ ಮನೆಗೆ ಹೋಗುತ್ತೇನೆ. ಈ ನನ್ನ ಮನೆಯಲ್ಲಿ ನೀನು ನನ್ನ ಅಪ್ಪಣೆಯಂತೆ ಯಾವ ಶಂಕೆಯೂ ಇಲ್ಲದೆ ವಾಸಮಾಡಿಕೊಂಡಿರು.

೨೯–೩೦. ಈ ಮನುವನ್ನೂ ಯಮ ಯಮುನೆಯರೆಂಬ ಯಮಳರನ್ನೂ ನೀನು ನಿನ್ನ ಮಕ್ಕಳಂತೆಯೆ ನೋಡಿಕೊಂಡಿರು. ಎಲೌ ಕಲ್ಯಾಣಿ, ಶುಚಿಸ್ಮಿತೆಯಾದ ನೀನು ಈ ವಿಷಯವನ್ನು ಪತಿದೇವನಲ್ಲಿ ಹೇಳಕೂಡದು" ಎಂದಳು. ಈ ಮಾತನ್ನು ಕೇಳಿ ಛಾಯೆಯು ಸಂಜ್ಞಾದೇವಿಯನ್ನು ಕುರಿತು ಹೇಳಿದಳು.

೩೧. "ದೇವಿ, ಭರ್ತನು ಮುಡಿಹಿಡಿದು ಎಳೆವವರೆಗೂ, ನನ್ನನ್ನು ಶಪಿಸುವವರೆಗೂ ನಾನು ಅವನ ಸೇವೆಯನ್ನು ಮಾಡಿಕೊಂಡು ಇಲ್ಲಿ ವಾಸಮಾಡಿಕೊಂಡಿರುತ್ತೇನೆ. ನಿನ್ನ ವಿಷಯವನ್ನು ಆತನಿಗೆ ತಿಳಿಸುವುದಿಲ್ಲ. ಸುಖವಾಗಿ ಹೋಗಿಬಾ."

ಇತ್ಯಾದಿಶ್ಯ ಸವರ್ಣಾಂ ಸಾ ತಥೇತ್ಯುಕ್ತ್ವಾ ಸವರ್ಣಯಾ ।
ಪಿತುರಂತಿಕಮಾಸಾದ್ಯ ನತ್ವಾ ತ್ವಷ್ಟಾರಮಬ್ರವೀತ್ ॥ ೮೨ ॥
ಪಿತಃ ಸೋಢುಂ ನ ಶಕ್ನೋಮಿ ತೇಜಸ್ತೇಜೋನಿಧೇ ಹರಂ ।
ತೀವ್ರಂ ತಸ್ಯಾರ್ಯಪುತ್ರಸ್ಯ ಕಾಶ್ಯಪಸ್ಯ ಮಹಾತ್ಮನಃ ॥ ೮೩ ॥
ನಿಶಮ್ಯೋದೀರಿತಂ ತಸ್ಯಾಃ ಪಿತ್ರಾ ನಿರ್ಭರ್ತ್ಸಿತಾ ಬಹು ।
ಭರ್ತುಃ ಸಮೀಪಂ ಯಾಹೀತಿ ನಿಯುಕ್ತಾ ಸಾ ಪುನಃ ಪುನಃ ॥ ೮೪ ॥
ಚಿಂತಾಮವಾಪ ಮಹತೀಂ ಸ್ತ್ರೀಣಾಂ ಧಿಕ್ ಚೇಷ್ಟಿತಂತ್ವಿತಿ ।
ನಿನಿಂದ ಬಹುಧಾಽಽತ್ಮಾನಂ ಸ್ತ್ರೀತ್ವಂ ಚಾಽತಿನಿನಿಂದ ಸಾ ॥ ೮೫ ॥
ಸ್ವಾತಂತ್ರ್ಯಂ ನ ಕ್ವಚಿತ್ ಸ್ತ್ರೀಣಾಂ ಧಿಗಸ್ವಾತಂತ್ರ್ಯಜೀವಿತಂ ।
ಶೈಶವೇ ಯೌವನೇ ಪ್ರಾಂತೇ ಪಿತೃಭರ್ತೃಸುತಾದ್ಭಯಂ ॥ ೮೬ ॥
ತ್ಯಕ್ತಂ ಭರ್ತೃಗೃಹಂ ಮೌಗ್ಧ್ಯಾದ್ಧಂತ ದುರ್ವೃತ್ತಯಾ ಮಯಾ ।
ಅವಿಜ್ಞಾತಾಪಿ ಚೇದ್ಯಾಯಾಮಥ ಪತ್ಯುರ್ನಿಕೇತನಂ ॥ ೮೭ ॥

---

೮೨. ಎಲೈ ಶಿವಶರ್ಮನೆ, ಸಂಜ್ಞೆಯು ಈ ರೀತಿ ಛಾಯೆಗೆ ಅಪ್ಪಣೆ ಮಾಡಿದ ಮೇಲೆ, ಅಂತೆಯೆ ಆಗಲೆಂದು ಅವಳು ಒಪ್ಪಿದ ಮೇಲೆ ತಂದೆಯ ಬಳಿಗೈದಿ ಆತನಿಗೆ ಮಣಿದು ಇಂತೆಂದಳು.

೮೩. "ತಂದೆಯೆ, ತೇಜೋನಿಧಿಯೂ ಕಶ್ಯಪಪುತ್ರನೂ ಮಹಾತ್ಮನೂ ಆದ ನನ್ನ ಆರ್ಯಪುತ್ರನ ತೀವ್ರವಾದ ತೇಜಸ್ಸನ್ನು ಸಹಿಸಲು ನನ್ನಿಂದ ಸಾಧ್ಯವಾಗದೆ ಹೋಗಿದೆ."

೮೪. ಈ ಮಾತನ್ನು ಕೇಳಿ ತ್ವಷ್ಟೃಪ್ರಜಾಪತಿಯು ಮಗಳಾದ ಅವಳನ್ನು ಹೆದರಿಸಿ, ಗಂಡನ ಬಳಿಗೆ ಹೋಗೆಂದು ಬಾರಿಬಾರಿಗೂ ಅಪ್ಪಣೆಮಾಡಿದನು.

೮೫. ಆಗ ಸಂಜ್ಞೆಯು ಹೆಂಗುಸರ ಜೀವಿತವನ್ನೆ ಧಿಕ್ಕರಿಸುತ್ತ ತನ್ನನ್ನೂ ಸ್ತ್ರೀತ್ವವನ್ನೂ ಬಹಳವಾಗಿ ನಿಂದಿಸುತ್ತ ಮಹತ್ತರವಾದ ಚಿಂತೆಗೊಳಗಾದಳು.

೮೬. "ಸ್ತ್ರೀಯರಿಗೆ ಎಲ್ಲಿಯೂ ಸ್ವಾತಂತ್ರ್ಯವೆಂಬುದೇ ಇರುವುದಿಲ್ಲ. ಸ್ವಾತಂತ್ರ್ಯವಿಲ್ಲದಿರುವ ಜೀವನಕ್ಕೊಂದಿಷ್ಟು ಧಿಕ್ಕಾರವಿರಲಿ. ಬಾಲ್ಯದಲ್ಲಿ ಯೌವನದಲ್ಲಿ ವಾರ್ಧಕದಲ್ಲಿ ಹೆಂಗಸಿಗೆ ತಂದೆ ಗಂಡ ಮಕ್ಕಳಿಂದ ಭಯವಿದ್ದೇ ಇರುತ್ತದೆ.

೮೭–೯೪. ನಾನು ಬುದ್ಧಿಯಿಲ್ಲದೆ ಗಂಡನ ಮನೆಯನ್ನು ಬಿಟ್ಟುಬಂದೆನು. ಯಾರಿಗೂ ತಿಳಿಯದಂತೆ ಮತ್ತೆ ಗಂಡನ ಮನೆಗೆ ಹೋಗಲೆ? ಅಲ್ಲಿ ನನ್ನಿಂದಲೆ ನಿರ್ಮಿತೆಯಾಗಿ ಸಂಪೂರ್ಣ ಮನೋರಥಳಾದ ಛಾಯೆಯು ಸಂಸಾರಮಾಡುತ್ತಿದ್ದಾಳೆ. ಅಥವಾ ನನ್ನ ತಂದೆಯು ಗದರಿಸಿದರೂ ಇಲ್ಲಿಯೆ ಇರಲೆ? ಹಾಗೆ

ತತ್ರಾಽಸ್ತಿ ಸಾ ಸವರ್ಣಾ ವೈ ಪರಿಪೂರ್ಣ ಮನೋರಥಾ ।
ಅಥಾಽನತಿಷ್ಠೇ ಸಾಽತ್ರೈವ ಪಿತ್ರಾ ನಿರ್ಭರ್ತ್ಸಿತಾಽಪ್ಯಹಂ ॥ ೮೮ ॥
ತತೋಽತಿಚಂಡಶ್ಚಂಡಾಂಶುಃ ಪಿತ್ರೋರತಿಭಯಂಕರಃ ।
ಅಹೋ ಯದುಚ್ಯತೇ ಲೋಕೈರುಪಾಖ್ಯಾನಮಿದಂ ಹಿ ತತ್ ॥ ೮೯ ॥
ಸ್ಫುಟಂ ದೃಷ್ಟಂ ಮಯಾಽದ್ಯೇತಿ ಸ್ವಕರಾಂಗಾರಕರ್ಷಣಂ ।
ನಷ್ಟಂ ಭರ್ತೃಗೃಹಂ ಮೌಗ್ಧ್ಯಾಚ್ಛ್ರೇಯೋ ವಾ ನ ಪಿತುರ್ಗೃಹಂ ॥ ೯೦ ॥
ವಯಶ್ಚ ಪ್ರಥಮಂ ಚಾರು ರೂಪಂ ತ್ರೈಲೋಕ್ಯಕಾಂಕ್ಷಿತಂ ।
ಸರ್ವಾಭಿಭವನಂ ಸ್ತ್ರೀತ್ವಂ ಕುಲಂ ಚಾತೀವ ನಿರ್ಮಲಂ ॥ ೯೧ ॥
ಪತಿಶ್ಚ ತಾದೃಕ್ ಸರ್ವಜ್ಞೋ ಲೋಕಚಕ್ಷುಸ್ತಮೋಽಪಹಃ ।
ಸರ್ವೇಷಾಂ ಕರ್ಮಣಾಂ ಸಾಕ್ಷೀ ಸರ್ವಃ ಸರ್ವತ್ರ ಸಂಚರಃ ॥ ೯೨ ॥
ಮಹ್ಯಂ ಶ್ರೇಯಃ ಕಥಂ ವಾ ಸ್ಯಾದಿತಿ ಸಾ ಪರಿಚಿಂತ್ಯ ಚ ।
ಅಗಚ್ಛದ್ವಡವಾ ಭೂತ್ವಾ ತಪಸೇ ಪರ್ಯನಿಂದಿತಾ ॥ ೯೩ ॥
ಉತ್ತರಾಂಶ್ಚ ಕುರೂನ್ಪ್ರಾಪ ಚರಂತೀ ನೀರಸಂ ತೃಣಂ ।
ವ್ಯತ್ತೀಪೇ ಚ ತಪಸ್ತೀವ್ರಂ ಪತಿಮಾಧಾಯ ಚೇತಸಿ ।
ತಪೋಬಲೇನ ತತ್ಪತ್ಯುಃ ಸಹಿಷ್ಯೇ ತೇಜ ಇತ್ಯಲಂ ॥ ೯೪ ॥

---

ನಾನೇನಾದರೂ ಇಲ್ಲಿಯೆ ಇದ್ದುದಾದರೆ ಮಹಾಭಯಂಕರವಾದ ಆ ಚಂಡಾಂಶುವು ನನ್ನ ತಾಯಿತಂದೆಗಳಿಗೆ ಅತಿ ಭಯಂಕರನೆನಿಸುತ್ತಾನೆ. ಅಯ್ಯೋ! ಲೋಕದವರು ಆಡಿಕೊಳ್ಳುವ ಮಾತು ನಿಜವಾದುದೆ! ನಾನು ಚೆನ್ನಾಗಿ ನೋಡಿದ್ದೇನೆಂದು ಕೆಂಡವನ್ನು ಕೈಯಲ್ಲಿ ಹಿಡಿಯುವುದೂ, ಮೂರ್ಖ್ಯದಿಂದ ಗಂಡನ ಮನೆಯು ತಪ್ಪಿ ಹೋದರೆ ತಂದೆಯ ಮನೆಯನ್ನು ಶ್ರೇಯಸ್ಕರವೆಂದು ತಿಳಿಯುವುದೂ ಎರಡೂ ಒಂದೆ. ಇನ್ನೂ ನನಗೆ ಯೌವನವಿದೆ. ಮೂರು ಲೋಕಗಳೂ ಬಯಸುವ ಸೊಗಸಾದ ರೂಪವಿದೆ. ನನಗಿರುವ ಈ ಸ್ತ್ರೀತ್ವವಾದರೊ ಎಲ್ಲರನ್ನೂ ತಿರಸ್ಕರಿಸತಕ್ಕುದು ಕುಲವೊ ಅತ್ಯಂತ ಪಾವನವಾದುದು. ಪತಿಯೊ ಸರ್ವಜ್ಞನೂ, ಲೋಕಚಕ್ಷುವೂ, ಒಳ ಹೊರಗಿನ ಕತ್ತಲನ್ನು ಕಳೆಯುವ ಪ್ರಭುವೂ, ಎಲ್ಲರ ಎಲ್ಲ ಕರ್ಮಗಳಿಗೂ ಸಾಕ್ಷಿಯೂ, ಸರ್ವಸ್ವರೂಪನಾಗಿ ಸರ್ವತ್ರ ಸಂಚಾರ ಶೀಲನೂ ಆದ ಸಾಕ್ಷಾತ್ ಸೂರ್ಯನು. ಅವನನ್ನು ತೊರೆದು ಬಂದಿರುವ ನನಗೆ ಶ್ರೇಯಸ್ಸಾಗುವುದು ಹೇಗೆ?'' ಎಂದಿಂತು ಆ ಸಂಜ್ಞೆಯು ಬಹಳ ವಾಗಿ ಚಿಂತಿಸಿ, ಹೆಣ್ಣು ಕುದುರೆಯ ಆಕಾರವನ್ನು ತಾಳಿ ತಪಸ್ಸಿಗಾಗಿ ತೆರಳಿ ನೀರಸ ವಾದ ಹುಲ್ಲನ್ನು ಮೇಯುತ್ತ ಉತ್ತರಕುರುದೇಶವನ್ನು ಸೇರಿ, ಮನಸ್ಸಿನಲ್ಲಿ ಪತಿಯನ್ನೇ ಧ್ಯಾನಿಸುತ್ತ ತನ್ನ ತಪೋಬಲದಿಂದ ಆತನ ತೇಜಸ್ಸನ್ನು ಭರಿಸುವ ಸಾಮರ್ಥ್ಯವು ಬಂದರೆ ಸಾಕೆಂದು ಬಯಸಿ ಮಹತ್ತರವಾದ ತಪಸ್ಸನ್ನೆಸಗಿದಳು.

ಮನ್ಯಮಾನೋಽಥ ತಾಂ ಸಂಜ್ಞಾಂ ಸವರ್ಣಾಯಾಂ ತದಾ ರವಿಃ ।
ಸಾವರ್ಣಿಂ ಜನಯಾಮಾಸ ಮನುಮಷ್ಟಮಮುತ್ತಮಂ ॥ ೯೫ ॥
ಶನೈಶ್ಚರಂ ದ್ವಿತೀಯಂ ಚ ಸುತಾಂ ಭದ್ರಾಂ ತೃತೀಯಕಾಂ ।
ಸವರ್ಣಾಸ್ವೇಷ್ವಪತ್ಯೇಷು ಸಾಪತ್ನ್ಯಾತ್ ಸ್ತ್ರೀಸ್ವಭಾವತಃ ॥ ೯೬ ॥
ಚಕಾರಾಽಭ್ಯಧಿಕಂ ಸ್ನೇಹಂ ನ ತಥಾ ಪೂರ್ವಜೇಷ್ವಥ ।
ಮನುಸ್ತತ್ ಕ್ಷಾಂತವಾಂಜ್ಯೇಷ್ಠೋ ಭಕ್ಷ್ಯಾಲಂಕಾರಲಾಲನೇ ॥ ೯೭ ॥
ಕನಿಷ್ಠೇಷ್ವಧಿಕಂ ದೃಷ್ಟ್ವಾ ಸಾವರ್ಣ್ಯಾದಿಷು ನೋ ಯಮಃ ।
ಕದಾಚಿದ್ರೋಷತೋ ಬಾಲ್ಯಾದ್ಭಾವಿನೋಽರ್ಥಸ್ಯ ಗೌರವಾತ್ ॥ ೯೮ ॥
ಪದಾ ಸಂತರ್ಜಯಾಮಾಸ ಯಮಃ ಸಂಜ್ಞಾಸರೂಪಿಣೀಂ ।
ತಂ ಶಶಾಪ ಚ ಸಾ ಕ್ರೋಧಾತ್ಸಾವರ್ಣೇರ್ಜನನೀ ತದಾ ॥ ೯೯ ॥
ಜಿಘಾಂಸತಾ ತ್ವಯಾ ಪಾಪ ಮಾಂ ಯದಂಘ್ರಿಃ ಸಮುದ್ಯತಃ ।
ಅಚಿರಾತ್ತತ್ಪತತ್ವೇಷ ತವೇತಿ ಭೃಶದುಃಖಿತಾ ॥ ೧೦೦ ॥
ಮಾತೃಶಾಪ ಪರಿತ್ರಸ್ತೋ ಯಮೋಽಪಿ ಪಿತುರಗ್ರತಃ ।
ಶಶಂಸ ಸರ್ವಂ ತದ್ವೃತ್ತಂ ರಕ್ಷರಕ್ಷೇತ್ಯುವಾಚ ಚ ॥ ೧೦೧ ॥

---

೯೫–೧೦೦. ಅತ್ತ ಸೂರ್ಯನಾದರೊ ಸಂಜ್ಞಾದೇವಿಯ ಸವರ್ಣೆಯಾದ ಛಾಯೆಯನ್ನು ಸಂಜ್ಞೆಯೆಂದೇ ಅರಿತು ಅವಳಲ್ಲಿ ಉತ್ತಮನೂ, ಎಂಟನೆಯ ಮನುವೂ ಆದ ಸಾವರ್ಣಿಯನ್ನೂ ಶನೈಶ್ಚರನನ್ನೂ ಭದ್ರೆಯೆಂಬ ಮಗಳನ್ನೂ ಪಡೆದನು. ಛಾಯೆಯು ಸ್ತ್ರೀ ಸ್ವಭಾವಕ್ಕೆ ಒಳಗಾಗಿ ಸಂಜ್ಞೆಯ ಮಕ್ಕಳಿಗಿಂತಲೂ ತನ್ನ ಮಕ್ಕಳಲ್ಲಿಯೆ ಹೆಚ್ಚಾದ ಪ್ರೀತಿಯನ್ನು ತೋರತೊಡಗಿದಳು. ಭಕ್ಷ್ಯಗಳಲ್ಲಿಯೂ ಅಲಂಕಾರಗಳಲ್ಲಿಯೂ ಲಾಲನಪಾಲನಗಳಲ್ಲಿಯೂ ಅವಳು ತೋರುತ್ತಿದ್ದ ಈ ಪಕ್ಷಪಾತವನ್ನು ಜ್ಯೇಷ್ಠಪುತ್ರನಾದ ಮನುವು ಸಹಿಸಿಕೊಂಡನು. ಎರಡನೆಯವನಾದ ಯಮನಾದರೊ ಸಾವರ್ಣಿಯೇ ಮೊದಲಾದವರಲ್ಲಿ ಆ ತಾಯಿಯು ತೋರುತ್ತಿದ್ದ ಪಕ್ಷಪಾತವನ್ನು ಕಂಡು ಒಮ್ಮೆ ಬಾಲ್ಯಚಾಪಲ್ಯದಿಂದ ರೋಷಗೊಂಡು ಗೌರವವನ್ನು ಮೀರಿ ಅವಳನ್ನು ಒದೆಯಲು ಕಾಲೆತ್ತಿದನು. ಆಗ ಸಾವರ್ಣಿಯ ತಾಯಿಯಾದ ಛಾಯೆಯು ಬಹಳವಾಗಿ ಕನಲಿ ಅತಿ ದುಃಖಿತೆಯಾಗಿ, "ಎಲಾ ಪಾಪಿಷ್ಠನೆ, ನನ್ನನ್ನು ಒದೆಯಬಯಸಿ ಕಾಲನ್ನೆತ್ತಿದೆಯಾದುದರಿಂದ ಇದು ಬೇಗನೆ ಭೂಮಿಗೆ ಬಿದ್ದುಹೋಗಲಿ" ಎಂದು ಶಪಿಸಿದಳು.

೧೦೧–೧೦೩. ತಾಯಿಯ ಶಾಪಕ್ಕೆ ಹೆದರಿ ಯಮನಾದರೊ ತಂದೆಯ ಬಳಿಗೈದಿ ಆ ವೃತ್ತಾಂತವೆಲ್ಲವನ್ನೂ ಅವನಿಗೆ ತಿಳಿಸಿ, "ಕಾಪಾಡು ಕಾಪಾಡು" ಎಂದು ಮೊರೆಯಿಟ್ಟು, "ಅಪ್ಪಾ, ತಾಯಿಯು ಎಲ್ಲ ಮಕ್ಕಳಲ್ಲಿಯೂ ಒಂದೇ

ಮಾತ್ರಾ ಸುತೇಷು ಸರ್ವೇಷು ವರ್ತನೀಯಂ ಸಮಂ ಯತಃ ।
ತಸ್ಯಾಂ ಮಯೋದ್ಯತಃ ಪಾದೋ ನ ದೇಹೇ ಪರಿಪಾತಿತಃ ॥ ೧೦೨ ॥
ಬಾಲ್ಯಾದ್ವಾ ಯದಿ ವಾ ಮೋಹಾತ್ತದ್ಭವಾನ್ ಕ್ಷಂತುಮರ್ಹಸಿ ।
ಗೋಪತೇ ಶಾಪತೋ ಮಾತುರ್ಮಾ ಪತತ್ವಂಘ್ರಿರೇಷ ಮೇ ॥ ೧೦೩ ॥

ವಿವಸ್ವಾನುವಾಚ :—

ಅಪರಾಧಸಹಸ್ರೇಽಪಿ ಜನನೀ ನ ಶಪೇತ್ಸುತಂ ।
ತಸ್ಮಾತ್ಕಿಮಪಿ ಭೋ ಬಾಲ ಭವಿಷ್ಯತ್ಯತ್ರ ಕಾರಣಂ ॥ ೧೦೪ ॥
ಯೇನ ತ್ವಾಂ ಸಾಽಶಪತ್ ಕ್ರೋಧಾದ್ಧರ್ಮಜ್ಞಂ ಸತ್ಯವಾದಿನಂ ।
ಮಾತೃಶಾಪೋಽನ್ಯಥಾ ಕರ್ತುಂ ನ ಶಕ್ಯಃ ಕೇನಚಿತ್ ಕ್ವಚಿತ್ ॥ ೧೦೫ ॥
ಕೃಮಯೋ ಮಾಂಸಮಾದಾಯ ಯಾಸ್ಯಂತ್ವಸ್ಮಾನ್ಮಹೀತಲಂ ।
ಇತ್ಥಂ ತು ಚರಿತಾರ್ಥಃ ಸ್ಯಾಚ್ಛಾಪಸ್ತ್ವತ್ತೋ ಭವಾನಪಿ ॥ ೧೦೬ ॥
ಇತಿ ಪುತ್ರಂ ಸಮಾಶ್ವಾಸ್ಯ ರವಿರಂತಃಪುರಂ ಯಯೌ ।
ಚಿರಮಾಲೋಕ್ಯ ತಾಂ ಭಾರ್ಯಾಮುವಾಚ ಸವಿತಾ ವಚಃ ॥ ೧೦೭ ॥
ಅಯಿ ಭಾಮಿನಿ ಬಾಲೇಷು ಸಮೇಷ್ವಪಿ ಕುತಸ್ತ್ವಯಾ ।
ವಿಧೀಯತೇಽಧಿಕಃ ಸ್ನೇಹಃ ಸಾವರ್ಣ್ಯಾದಿಷ್ವನಾದಿಷು ॥ ೧೦೮ ॥

---

ಸಮನಾಗಿ ವರ್ತಿಸಬೇಕು. ಆಕೆಯು ಹಾಗೆ ವರ್ತಿಸದಿದ್ದುದರಿಂದ ನಾನು ಕಾಲನ್ನೆತ್ತಿದೆನಾಗಲಿ ಅದನ್ನು ಆಕೆಯ ಮೈಮೇಲೆ ಬೀಳಿಸಲಿಲ್ಲ. ಬಾಲ್ಯದಿಂದಲೊ ಅವಿವೇಕದಿಂದಲೋ ನಾನು ಮಾಡಿದ ಈ ಅಪರಾಧವನ್ನು ನೀನು ಕ್ಷಮಿಸಬೇಕು. ಎಲೈ ತೇಜೋನಿಧಿಯೆ, ತಾಯಿಯ ಶಾಪದಿಂದ ನನ್ನ ಈ ಕಾಲು ಬಿದ್ದುಹೋಗ ದಿರಲಿ'' ಎಂದು ಬೇಡಿಕೊಂಡನು

೧೦೪–೧೦೫. ವಿವಸ್ವಂತನು ಹೇಳುತ್ತಾನೆ:—''ವತ್ಸ, ನೂರು ಅಪರಾಧ ಗಳನ್ನು ಮಾಡಿದರೂ ತಾಯಿಯಾದವಳು ಮಗನನ್ನು ಶಪಿಸುವುದಿಲ್ಲ. ಹೀಗಿದ್ದೂ ನಿನ್ನ ತಾಯಿಯು ನಿನ್ನ ವಿಷಯದಲ್ಲಿ ಹೀಗೇಕೆ ಮಾಡಿದಳು? ಧರ್ಮಜ್ಞನೂ ಸತ್ಯವಾದಿಯೂ ಆದ ನಿನ್ನಲ್ಲಿ ಈ ರೀತಿ ಮುನಿದು ಆಕೆಯು ಶಪಿಸಿರುವಳಲ್ಲವೆ? ಯಾರೂ ಎಲ್ಲಿಯೂ ಮಾತೃಶಾಪವನ್ನು ಮರಳಿಸಲು ಶಕ್ಯವಲ್ಲ

೧೦೬. ಆದರೂ ಚಿಂತೆಯಿಲ್ಲ. ನಿನ್ನ ಕಾಲಿನ ಮಾಂಸವನ್ನು ಕ್ರಿಮಿಗಳು ಭೂಮಿಗೊಯ್ಯಲಿ. ಈ ಪ್ರಕಾರವಾಗಿ ಮಾತೃಶಾಪವು ನಿವಾರಣೆಯಾಗಲಿ. ನೀನೂ ಚರಿತಾರ್ಥವಾಗುತ್ತೀಯೆ.''

೧೦೭–೧೦೮. ಎಲೈ ಶಿವಶರ್ಮನೆ, ರವಿಯು ಹೀಗೆ ಮಗನನ್ನು ಸಂತೈಸಿ, ಅಂತಃಪುರಕ್ಕೆ ಬಂದು ಹೆಂಡತಿಯನ್ನೆ ಬಹಳಹೊತ್ತು ನಿಟ್ಟಿಸುತ್ತಿದ್ದು, ''ಎಲೆ ಭಾಮಿನಿ, ನಿನಗೆ ಮಕ್ಕಳೆಲ್ಲರೂ ಸಮವಾದ ಪ್ರೀತಿ ವಿಶ್ವಾಸಗಳಿಗೆ ಭಾಗಿಗಳಾಗಿ

ನಾಚಚಕ್ಷೇ ಯದಾ ಸಾಽಥ ಭಾಸ್ವತೇ ಪರಿಪೃಚ್ಛತೇ ।
ತದಾತ್ಮಾನಂ ಸಮಾಧಾಯ ಸೋಽಜ್ಞಾಸೀತ್ಸರ್ವಮೇವಹಿ ॥ ೧೦೯ ॥
ತತೋ ಭಗವತೇ ಶಪ್ತುಮುದ್ಯತೇ ಸಾ ಶಶಂಸ ಹ ।
ಯಥಾವೃತ್ತಂ ತಥಾ ತಥ್ಯಂ ತುತೋಷ ಭಗವಾನಪಿ ॥ ೧೧೦ ॥
ತಥ್ಯಭಾಷಣತಸ್ತಾಂ ತು ರವಿರ್ಜ್ಞಾತ್ವಾ ನಿರಾಗಸಂ ।
ನ ಶಶಾಪ ಚ ಸಂಕ್ರುದ್ಧೋ ಯಯೌ ಚ ತ್ವಷ್ಟುರಂತಿಕಂ ॥ ೧೧೧ ॥
ತ್ವಷ್ಟಾಽಪಿ ಚ ಯಥಾನ್ಯಾಯಂ ಸಾನ್ವಯಂ ತಿಗ್ಮತೇಜಸಂ ।
ನಿರ್ದಗ್ಧುಕಾಮಂ ಕೋಪೇನ ಪ್ರಾಗಾನರ್ಚ ಮುದಾ ತದಾ ।
ವಿಜ್ಞಾಯ ತದಭಿಪ್ರಾಯಂ ತ್ವಷ್ಟೋವಾಚಾಽಽಶು ತಂ ರವಿಂ ॥ ೧೧೨ ॥

ತ್ವಷ್ಟೋವಾಚ :—

ತವಾಽತಿತೇಜಸೋ ಭೀತಾ ಪ್ರಾಪ್ಯೋತ್ತರಕುರೂನ್ ರವೇ ।
ವಡವಾರೂಪಮಾಸ್ಥಾಯ ವನೇ ಚರತಿ ಶಾದ್ವಲೇ ॥ ೧೧೩ ॥
ದ್ರಷ್ಟಾ ಹಿ ತಾಂ ಭವಾನದ್ಯ ಸ್ವಾಂ ಭಾರ್ಯಾಮಾರ್ಯಚಾರಿಣೀಂ ।
ಅಧೃಷ್ಯಾಂ ಸರ್ವಭೂತಾನಾಂ ತೇಜಸಾಂ ನಿಯಮೇನ ಚ ॥ ೧೧೪ ॥

ದ್ದರೂ ಕಿರಿಯವರಾದ ಸಾವರ್ಣಿಯೇ ಮೊದಲಾದವರಲ್ಲಿ ಅಧಿಕ ಸ್ನೇಹವನ್ನೇಕೆ ತೋರುತ್ತಿರುವೆ?'' ಎಂದು ಕೇಳಿದನು.

೧೦೯. ಈ ಪ್ರಶ್ನೆಗೆ ಛಾಯೆಯು ಉತ್ತರವನ್ನೇ ಹೇಳದೆ ಸುಮ್ಮನಿರಲು ಆ ಭಾಸ್ವಂತನು ಆತ್ಮಸಂಯಮನವನ್ನು ಮಾಡಿ, ನಡೆದ ಎಲ್ಲ ವೃತ್ತಾಂತವನ್ನೂ ಅರಿತುಕೊಂಡನು.

೧೧೦. ತರುವಾಯ ಅವನು ಆ ಛಾಯೆಯನ್ನು ಶಪಿಸುವ ಉದ್ಯಮದಲ್ಲಿರಲು ಅಷ್ಟರಲ್ಲಿಯೆ ಅವಳು ನಡೆದ ಸಂಗತಿಯೆಲ್ಲವನ್ನೂ ಇದ್ದುದನ್ನು ಇದ್ದಂತೆಯೆ ಅರಿಕೆಮಾಡಿದಳು. ಭಗವಾನನೂ ಅವಳ ವಿಷಯದಲ್ಲಿ ಸಂತೋಷಪಟ್ಟನು.

೧೧೧. ಸತ್ಯವನ್ನು ನುಡಿದುದರಿಂದ ಅವಳು ನಿರ್ದೋಷೆಯೆಂದರಿತು ಆತನು ಕ್ರೋಧದಿಂದ ಅವಳನ್ನು ಶಪಿಸಲಿಲ್ಲ. ಒಡನೆಯೆ ಅಲ್ಲಿಂದೆದ್ದು ಸಂಜ್ಞೆಯ ತಂದೆಯಾದ ತ್ವಷ್ಟೃವಿನ ಬಳಿಗೈದಿದನು.

೧೧೨. ತ್ವಷ್ಟೃವೂ ಆ ಭಾಸ್ಕರನನ್ನು ಉಚಿತವರಿತು ಗೌರವಿಸಿ, ತನ್ನನ್ನು ಕೋಪದಿಂದ ದಹಿಸಬಯಸಿದ್ದ ಅವನ ಮನೋಭಾವವನ್ನರಿತು ಯಥಾವತ್ತಾಗಿ ಅವನನ್ನರ್ಚಿಸಿ, ಬಹು ಜಾಗ್ರತೆಯಾಗಿ ಅವನನ್ನು ಕುರಿತು ಹೀಗೆ ಹೇಳಿದನು.

೧೧೩–೧೧೪. ತ್ವಷ್ಟೃವು ಹೇಳುತ್ತಾನೆ —'' ಎಲೈ ರವಿಯೆ, ಅಪರಿಮಿತವಾದ ನಿನ್ನ ತೇಜಸ್ಸಿಗೆ ಹೆದರಿ ಸಂಜ್ಞೆಯು ಹೆಣ್ಣುಕುದುರೆಯ ರೂಪವನ್ನು ತಾಳಿ ಉತ್ತರ ಕುರುಪ್ರದೇಶಗಳನ್ನು ಸೇರಿ ಅಲ್ಲಿ ಹುಲ್ಲುಗಾಡುಗಳಲ್ಲಿ ಅಲೆಯು

ತ್ವಷ್ಟ್ರಾ ಯತ್ತ್ರಕ್ಷಿತಃ ಸೂರ್ಯಸ್ತ್ವಸ್ಯೈವಾಽನುಮತೇನ ಚ ।
ಭ್ರಮಿಮಾರೋಪ್ಯ ಯತ್ನೇನ ಸೋಽತಿಕಾಂತತರೋಽಭವತ್ ॥ ೧೧೫ ॥
ಲಬ್ಧಾಽನುಜ್ಞೋಽಥ ಸವಿತಾ ಗತ್ವೋತ್ತರಕುರೂನರಂ ।
ಸಾಕ್ಷಾತ್ತಪೋಮಯೀಂ ಲಕ್ಷ್ಮೀಂ ಚರಂತೀಂ ಚ ತಪೋ ಮಹತ್॥೧೧೬॥
ದದರ್ಶ ವಡವಾರೂಪಾಂ ವಾಡವಾಽನಲತೇಜಸಂ ।
ನೀರಸಾನಿ ತೃಣಾನ್ಯೇವ ವೃಣ್ವಂತೀಂ ಯೋಗಮಾಯಯಾ ॥ ೧೧೭ ॥
ಅನೇನಸಂ ಸವಿಜ್ಞಾಯ ತಾಂ ತ್ವಾಷ್ಟ್ರೀಮಶ್ವರೂಪಿಣೀಂ ।
ಸ ಹರಿರ್ಹರಿರೂಪೇಣ ಮುಖೇನ ಸಮಭಾವಯತ್ ॥ ೧೧೮ ॥
ತ್ವರಮಾಣಾ ಚ ಪರಿತಃ ಪರಪೂರುಷಶಂಕಯಾ ।
ಸಾ ತನ್ನಿರವಮಚ್ಛುಕ್ರಂ ನಾಸಿಕಾಭ್ಯಾಂ ವಿವಸ್ವತಃ ॥ ೧೧೯ ॥
ದೇವೌ ತಸ್ಮಾದಜಾಯೇತಾಮಶ್ವಿನೌ ಭಿಷಜಾಂ ವರೌ ।
ಸ್ವರೂಪಮನುರೂಪಂ ಚ ದ್ಯುಮಣಿಸ್ತಾಮದರ್ಶಯತ್ ॥ ೧೨೦ ॥

---

ತ್ತಿರುವಳು. ಧರ್ಮಚಾರಿಣಿಯೂ, ಮಹಾ ತೇಜಸ್ವಿನಿಯೂ, ನಿಯಮನಿಷ್ಠೆಗಳುಳ್ಳವಳಾಗಿ ಇತರರಾರಿಂದಲೂ ತಿರಸ್ಕರಿಸಲಸದಳೆಯೂ ಆದ ಆ ನಿನ್ನ ಭಾರ್ಯೆಯನ್ನು ಅಲ್ಲಿ ಕಾಣುವೆಯಷ್ಟೆ.''

೧೧೫. ಆಗ ಸೂರ್ಯನು ತ್ವಷ್ಟೃವಿನ ಈ ಮಾತನ್ನುಕೇಳಿ ಅವನ ಅನುಮತಿಯಿಂದಲೆ, ಕುಂದವೆಂಬ ಶಿಲ್ಪಯಂತ್ರವನ್ನೇರಿ ಕುಳಿತು ಸೌಮ್ಯನೂ ಅತಿ ಮನೋಹರನೂ ಆಗಿ ಬೆಳಗಿದನು.

೧೧೬-೧೧೭. ತರುವಾಯ ಅವನು ಮಾವನಾದ ಆ ತ್ವಷ್ಟೃವಿನ ಅನುಜ್ಞೆಯನ್ನು ಪಡೆದು ಉತ್ತರಕುರುಪ್ರದೇಶವನ್ನು ಬಹು ಬೇಗನೆಯೆ ಸೇರಿ, ಸಾಕ್ಷಾತ್ ತಪೋಲಕ್ಷ್ಮಿಯೋ ಹೆಣ್ಣುಕುದುರೆಯ ರೂಪವನ್ನು ತಾಳಿ ಪ್ರಳಯಾಗ್ನಿಯಂತೆ ಪ್ರಜ್ವಲಿಸುತ್ತ ನೀರಸವಾದ ಹುಲ್ಲನ್ನು ಮಾತ್ರವೆ ಭುಜಿಸುತ್ತ ಯೋಗಮಾಯೆಯಿಂದ ಮಹತ್ತರವಾದ ತಪಸ್ಸನ್ನೆಸಗುತ್ತಿದ್ದ ಆ ಸಂಜ್ಞಾದೇವಿಯನ್ನು ಕಂಡನು.

೧೧೮. ತರುವಾಯ ಆ ಸೂರ್ಯಭಂಗವಂತನು ತ್ವಷ್ಟೃವಿನ ಮಗಳಾದ ಸಂಜ್ಞೆಯನ್ನು ಆ ಬಗೆಯಾಗಿ ಕಂಡು, ಅವಳು ಪಾಪರಹಿತಳೆಂಬ ವಿಚಾರವನ್ನರಿತು, ಅಶ್ವರೂಪವನ್ನು ಧರಿಸಿ ಅವಳೊಡಗೂಡಿದನು.

೧೧೯. ಅಶ್ವರೂಪಿಣಿಯಾದ ಆ ಸಂಜ್ಞೆಯಾದರೊ ಪರಪುರುಷನಾವನೊ ಈ ರೂಪದಿಂದ ಬಂದಿರುವನೆಂದು ಬೆದರಿ, ಆ ವಿವಸ್ವಂತನ ರೇತಸ್ಸನ್ನು ಮೂಗಿನ ಹೊಳೆಗಳ ಮೂಲಕ ವಮನಮಾಡಿದಳು.

೧೨೦. ಆದರಿಂದ ಭಿಷಗ್ವರರಾದ ಅಶ್ವಿನೀದೇವತೆಗಳುದಿಸಿದರು. ಆಗಲಾ ಸೂರ್ಯನು ಅನುರೂಪವಾದ ತನ್ನ ಸ್ವರೂಪವನ್ನು ಆ ಸಂಜ್ಞೆಗೆ ತೋರಿದನು.

ತುತೋಷ ಸಾಽಪಿ ತಂ ದೃಷ್ಟ್ವಾ ಮಿತ್ರಂ ನೇತ್ರಮುದಾವಹಂ ।
ಪತಿಂ ಪತಿವ್ರತಾಕಾಂತಂ ಸ್ವಾಂತಸಂತಾಪಹಾರಿಣಂ ॥ ೧೨೧ ॥
ನಿರ್ವೃತಿಂ ಚ ಪರಾಂ ಪ್ರಾಪ ದುಷ್ಪ್ರಾಪಂ ತಪಸಾಽಥ ಕಿಂ ।
ತಪ ಏವ ಪರಂ ಶ್ರೇಯಸ್ತಪ ಏವ ಪರಂ ಧನಂ ॥ ೧೨೨ ॥
ತಪ ಏವ ಹಿ ದೇವತ್ವೇ ಕಾರಣಂ ಪರಮಂ ಮತಂ ।
ಶಿವಶರ್ಮನ್ ಯದೇತದ್ವೈ ದೃಶ್ಯತೇ ಚಾಽತಿದೀಪ್ತಿಮತ್ ॥ ೧೨೩ ॥
ಜ್ಯೋತಿಶ್ಚಕ್ರಸ್ವರೂಪಂ ಚ ವ್ಯೋಮ್ನ್ಯುಪರ್ಯಧ ಏವ ಚ ।
ತತ್ಸರ್ವಮಿಹ ಜಾನೀಹಿ ಸುಮಹತ್ತಾಪಸಂ ಮಹಃ ॥ ೧೨೪ ॥
ಏವಂ ಶನೈಶ್ಚರೋ ಜಜ್ಞೇ ಸವರ್ಣಾಯಾಂ ವಿವಸ್ವತಃ ।
ಸೋಽಥ ವಾರಾಣಸೀಂ ಗತ್ವಾ ಸರ್ವತ್ರಿದಶವಂದಿತಾಂ ॥ ೧೨೫ ॥
ತಪ್ತ್ವಾ ತಪೋಽತಿವಿಪುಲಂ ಲಿಂಗಂ ಸಂಸ್ಥಾಪ್ಯ ಶಾಂಕರಂ ।
ಇಮಂ ಲೋಕಮವಾಪ್ರೋಚ್ಚೈರ್ಗ್ರಹತ್ವಂ ಚ ಹರಾರ್ಚನಾತ್ ॥ ೧೨೬ ॥
ಶನೈಶ್ಚರೇಶ್ವರಂ ದೃಷ್ಟ್ವಾ ವಾರಾಣಸ್ಯಾಂ ಸುಶೋಭನಂ ।
ಶನಿಬಾಧಾ ನ ಜಾಯೇತ ಶನಿವಾರೇ ತದರ್ಚನಾತ್ ॥ ೧೨೭ ॥

---

೧೨೧ ಪತಿವ್ರತೆಯಾದ ಆ ಸಂಜ್ಞೆಯು ಸಹ ನೇತ್ರಾನಂದಕರನೂ, ಸುಮನೋಹರನೂ, ಸಂತಾಪಪರಿಹಾರಕನೂ ಆದ ಆ ತನ್ನ ಪತಿದೇವನನ್ನು ಕಂಡು ಆನಂದಿಸಿದಳು

೧೨೨–೧೨೪. ಆಗ ಅವಳಿಗೆ ಆದ ತೃಪ್ತಿಗೆ ಪಾರವಿಲ್ಲವಾಯಿತು. ಅಯ್ಯಾ ಶಿವಶರ್ಮನೆ, ತಪಸ್ಸಿನಿಂದ ದೊರಕದ್ದು ಜಗತ್ತಿನಲ್ಲಿ ಏನುಂಟು? ತಪಸ್ಸೇ ಉತ್ತಮವಾದ ಶ್ರೇಯಸ್ಸು. ತಪಸ್ಸೇ ಉತ್ತಮವಾದ ಧನ. ದೇವತ್ವವು ಲಭಿಸುವುದಕ್ಕೂ ತಪಸ್ಸೇ ಕಾರಣ. ಆದುದರಿಂದಲೆ ತಪಸ್ಸು ಉತ್ತಮೋತ್ತಮವಾದುದೆಂದು ಪರಿಗಣಿತವಾಗಿದೆ. ಅಯ್ಯಾ ಬ್ರಾಹ್ಮಣನೆ, ಆಕಾಶದ ಮೇಲ್ಭಾಗದಲ್ಲಿಯೂ ಕೆಳಗೂ ಎತ್ತೆತ್ತಲೂ ಜಾಜ್ವಲ್ಯಮಾನವಾಗಿ ಬೆಳಗುತ್ತಿರುವ ಜ್ಯೋತಿಶ್ಚಕ್ರದ ಸ್ವರೂಪವೆಲ್ಲವೂ ತಪಸ್ಸಿನಿಂದಾದುದೆಂದೇ ತಿಳಿಯುವವನಾಗು.

೧೨೫–೧೨೬ ಹೀಗೆ ವಿವಸ್ವಂತನ ಸವರ್ಣಭಾರ್ಯೆಯಲ್ಲಿ ಶನೈಶ್ಚರನು ಜನಿಸಿದನು. ತರುವಾಯ ಅವನು ಸಕಲ ದೇವತೆಗಳಿಂದಲೂ ನಮಸ್ಕರಿಸಲ್ಪಟ್ಟ ವಾರಾಣಸೀ ಕ್ಷೇತ್ರಕ್ಕೆ ಹೋಗಿ ಅಲ್ಲಿ ವಿಪುಲವಾದ ಶಾಂಕರ ಲಿಂಗವನ್ನು ಪ್ರತಿಷ್ಠಿಸಿ ತಪಸ್ಸನ್ನು ಮಾಡಿ, ಆ ಲಿಂಗಾರ್ಚನೆಯ ಫಲವಾಗಿ ಈ ಲೋಕವನ್ನೂ ಉಚ್ಚವಾದ ಗ್ರಹಪದವಿಯನ್ನೂ ಪಡೆದನು.

೧೨೭. ವಾರಾಣಸಿಯಲ್ಲಿ ಶನಿವಾರದಂದು ಪರಮಮಂಗಳಕರವಾಗಿ

ವಿಶ್ವೇಶಾದ್ದಕ್ಷಿಣೇ ಭಾಗೇ ಶುಕ್ರೇಶಾದುತ್ತರೇಣ ಹಿ ।
ಶನೈಶ್ಚರೇಶಮಭ್ಯರ್ಚ್ಯ ಲೋಕೇಽತ್ರ ಪರಿಮೋದತೇ ॥ ೧೨೮ ॥
ಶ್ರುತ್ವಾಽಧ್ಯಾಯಮಿಮಂ ಪುಣ್ಯಂ ಗ್ರಹಪೀಡಾ ನ ಜಾಯತೇ ।
ನೋಪಸರ್ಗಭಯಂ ತಸ್ಯ ಕಾಶ್ಯಾಂ ನಿವಸತಃ ಸತಃ ॥ ೧೨೯ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಅಂಗಾರಕ ಗುರು ಶನಿಲೋಕವರ್ಣನಂ" ನಾಮ ಸಪ್ತದಶೋಽಧ್ಯಾಯಃ

---

ಶೋಭಿಸುತ್ತಿರುವ ಶನೈಶ್ಚರೇಶ್ವರ ಲಿಂಗವನ್ನು ಸಂದರ್ಶಿಸಿದ ಮಾನವನಿಗೆ ಶನಿ ಬಾಧೆಯುಂಟಾಗುವುದಿಲ್ಲ.

೧೨೮ ವಿಶ್ವೇಶ್ವರಲಿಂಗಕ್ಕೆ ದಕ್ಷಿಣಭಾಗಕ್ಕೂ ಶುಕ್ರೇಶ್ವರನಿಗೆ ಉತ್ತರಕ್ಕೂ ಇರುವ ಶನೈಶ್ಚರೇಶ್ವರನನ್ನು ಭಕ್ತಿವಂತನಾಗಿ ಪೂಜಿಸಿದ್ದಾದರೆ ಅವನ ಈ ಲೋಕದಲ್ಲಿ ವಾಸವು ದೊರಕಿ ಮಾನವನು ಸುಖಿಸುತ್ತಾನೆ.

೧೨೯. ಅಯ್ಯಾ ಶಿವಶರ್ಮನೆ, ಪುಣ್ಯಪ್ರದವಾದ ಈ ಅಧ್ಯಾಯವನ್ನು ಕೇಳಿದ್ದಾದರೆ ಗ್ರಹಪೀಡೆಯು ನಿವಾರಣೆಯಾಗುತ್ತದೆ ಕಾಶಿಯಲ್ಲಿ ನೆಲಸಿ ಈ ಅಧ್ಯಾಯವನ್ನು ಶ್ರವಣಮಾಡಿದರಂತೂ ಪುನರ್ಜನ್ಮವೇ ಇರುವುದಿಲ್ಲ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಅಂಗಾರಕ ಗುರು ಶನಿಲೋಕಗಳವರ್ಣನ"ವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥಾಽಷ್ಟಾದಶೋಽಧ್ಯಾಯಃ

## ಸಪ್ತರ್ಷಿಲೋಕವರ್ಣನಂ

ಅಗಸ್ತಿರುವಾಚ :—

ಇತಿ ಶೃಣ್ವನ್ ಕಥಾಂ ರಮ್ಯಾಂ ಶಿವಶರ್ಮಾಽಥ ಮಾಥುರಃ ।
ಮುಕ್ತಿಪುರ್ಯಾಂ ಸುಸಂಸ್ನಾತೋ ಮಾಯಾಪುರ್ಯಾಂ ಗತಾಽಸುಕಃ ॥೧॥
ನೇತ್ರಯೋಃ ಪ್ರಾಘುಣೀಚಕ್ರೇ ತತಃ ಸಪ್ತರ್ಷಿಮಂಡಲಂ ।
ವ್ರಜನ್ ಸ ವೈಷ್ಣವಂ ಲೋಕಮಂತೇ ವಿಷ್ಣುಪುರೀಕ್ಷಣಾತ್ ॥ ೨ ॥
ಉವಾಚ ಚ ಪ್ರಸನ್ನಾತ್ಮಾ ಸ್ತುತಶ್ಚಾರಣಮಾಗಧೈಃ ।
ಪ್ರಾರ್ಥಿತೋ ದೇವಕನ್ಯಾಭಿಸ್ತಿಷ್ಠ ತಿಷ್ಠೇತಿ ಚ ಕ್ಷಣಂ ॥ ೩ ॥
ಸ್ಥಿತಾಸು ತಾಸು ನಿಃಶ್ವಸ್ಯ ಮಂದಭಾಗ್ಯಾ ವಯಂ ತ್ವಿತಿ ।
ಗತಃ ಪುಣ್ಯತಮಾಲ್ಲೋಕಾನಸೌ ಯತ್ಪುಣ್ಯವತ್ತಮಃ ॥ ೪ ॥
ಇತಿ ಶೃಣ್ವನ್ ಮುಖಾತ್ತಾಸಾಂ ವಚನಾನಿ ವಿಮಾನಗಃ ।
ದೇವೌ ಕಸ್ಯಾಽಯಮತುಲೋ ಲೋಕಸ್ತೇಜೋಮಯಃ ಶುಭಃ ॥ ೫ ॥

---

## ಕನ್ನಡದ ಅನುವಾದ

### ಸಪ್ತರ್ಷಿಲೋಕವರ್ಣನ

೧–೨. ಅಗಸ್ತ್ಯನು ಹೇಳುತ್ತಾನೆ —ಎಲೌ ಲೋಪಾಮುದ್ರೆ, ಹೀಗೆ ಮಥುರಾನಿವಾಸಿಯೂ, ಮುಕ್ತಿಪುರಿಯೆನಿಸಿದ ಕಾಶೀಕ್ಷೇತ್ರದಲ್ಲಿ ತೀರ್ಥಸ್ನಾನಾದಿಗಳನ್ನೆಸಗಿ ಪುಣ್ಯವನ್ನು ಸಂಪಾದಿಸಿ ಮಾಯಾಪುರಿಯಲ್ಲಿ ಅಸುದೊರೆದವನೂ ಆದ ಆ ಶಿವಶರ್ಮದ್ವಿಜನು ವಿಷ್ಣುಲೋಕವನ್ನು ಕುರಿತು ಪ್ರಯಾಣಮಾಡುತ್ತ ವಿಷ್ಣುಪಾರ್ಷದರು ಹೇಳಿದ ಮನೋಹರವಾದ ಈ ಕಥೆಯನ್ನು ಆಲಿಸುತ್ತಿರುವಂತೆಯೆ, ವಿಷ್ಣುಲೋಕದ ಸಮೀಪದಲ್ಲಿ ಸಪ್ತರ್ಷಿಮಂಡಲವನ್ನು ಕಂಡನು.

೩–೫. ಆಗ ಚಾರಣ ಮಾಗಧರು ಅವನನ್ನು ಬಹಳವಾಗಿ ಹೊಗಳುತ್ತಿರಲು, ದೇವಕನ್ಯೆಯರು ಒಂದು ಕ್ಷಣಕಾಲ ನಿಲ್ಲೆಂದು ಅವನನ್ನು ಪ್ರಾರ್ಥಿಸುತ್ತಿರಲು ಅವನು ಅಂತೆಯೆ ವಿಮಾನದಲ್ಲಿ ಮುಂದುವರಿಯುತ್ತ, ಅಲ್ಲಿಯೆ ನಿಂತ ಆ ಕನ್ಯೆಯರು ನಿಟ್ಟುಸಿರು ಬಿಟ್ಟು "ಅಯ್ಯೊ, ನಾವು ನಿರ್ಭಾಗ್ಯರು. ಈ ಪುಣ್ಯಾತ್ಮನು ಪುಣ್ಯತಮವಾದ ಲೋಕಗಳಿಗೆ ಹೊರಟೇಹೋದನು" ಎಂದು ಆಡುತ್ತಿದ್ದ ಮಾತುಗಳನ್ನು ಕೇಳುತ್ತ, ಸುಪ್ರಸನ್ನವಾದ ಅಂತರಂಗವುಳ್ಳವನಾಗಿ ಆ ಪಾರ್ಷದರನ್ನು ಕುರಿತು, ತೇಜೋಮಯವೂ, ಶುಭಕರವೂ ಆದ ಈ ಲೋಕವು ಯಾರದೆಂದು ಪ್ರಶ್ನಿಸಿದನು.

ಇತಿ ದ್ವಿಜವಚಃ ಶ್ರುತ್ವಾ ಪ್ರೋಚತುರ್ಗಣಸತ್ತಮೌ ।
ಶಿವಶರ್ಮನ್ ಶಿವಮತೇ ಸದಾ ಸಪ್ತರ್ಷಯೋಽಮಲಾಃ ॥ ೬ ॥
ವಸಂತೀಹ ಪ್ರಜಾಃ ಸ್ರಷ್ಟುಂ ವಿನಿಯುಕ್ತಾಃ ಪ್ರಜಾಸೃಜಾ ।
ಮರೀಚಿರತ್ರಿಃ ಪುಲಹಃ ಪುಲಸ್ತ್ಯಃ ಕ್ರತುರಂಗಿರಾಃ ॥ ೭ ॥
ವಸಿಷ್ಠಶ್ಚ ಮಹಾಭಾಗೋ ಬ್ರಹ್ಮಣೋ ಮಾನಸಾಃ ಸುತಾಃ ।
ಸಪ್ತ ಬ್ರಹ್ಮಾಣ ಇತ್ಯೇತೇ ಪುರಾಣೇ ನಿಶ್ಚಯಂಗತಾಃ ॥ ೮ ॥
ಸಂಭೂತಿರನಸೂಯಾ ಚ ಕ್ಷಮಾ ಪ್ರೀತಿಶ್ಚ ಸನ್ನತಿಃ ।
ಸ್ಮೃತಿರೂರ್ಜಾ ಕ್ರಮಾದೇಷಾಂ ಪತ್ನ್ಯೋ ಲೋಕಸ್ಯ ಮಾತರಃ ॥ ೯ ॥
ಏತೇಷಾಂ ತಪಸಾ ಚೈತದ್ಧಾರ್ಯತೇ ಭುವನತ್ರಯಂ ।
ಉತ್ಪಾದ್ಯ ಬ್ರಹ್ಮಣಾ ಪೂರ್ವಮೇತೇ ಪ್ರೋಕ್ತಾ ಮಹರ್ಷಯಃ ॥ ೧೦ ॥
ಪ್ರಜಾಃ ಸೃಜತ ರೇ ಪುತ್ರಾ ನಾನಾರೂಪಾಃ ಪ್ರಯತ್ನತಃ ।
ತತಃ ಪ್ರಣಮ್ಯ ಬ್ರಹ್ಮಾಣಂ ತಪಸೇ ಕೃತನಿಶ್ಚಯಾಃ ॥ ೧೧ ॥
ಅವಿಮುಕ್ತಂ ಸಮಾಸಾದ್ಯ ಕ್ಷೇತ್ರಂ ಕ್ಷೇತ್ರಜ್ಞಧಿಷ್ಠಿತಂ ।
ಮುಕ್ತಯೇ ಸರ್ವಜಂತೂನಾಮವಿಮುಕ್ತಂ ಶಿವೇನ ಯತ್ ॥ ೧೨ ॥

---

೬–೮ ಇಂತು ನುಡಿದ ಆ ಶಿವಶರ್ಮದ್ವಿಜನ ಮಾತನ್ನು ಕೇಳಿ ವಿಷ್ಣು ಪಾರ್ಷದರು ಹೇಳತೊಡಗಿದರು "ಎಲೈ ಶುಭಮತಿಯಾದಶಿವಶರ್ಮನೆ! ಸೃಷ್ಟಿ ಕರ್ತನಾದ ಬ್ರಹ್ಮನಿಂದ ಪ್ರಜೆಗಳನ್ನು ಸೃಜಿಸಲೋಸುಗ ನಿಯುಕ್ತರಾದ ಮರೀಚಿ, ಅತ್ರಿ, ಪುಲಹ, ಪುಲಸ್ತ್ಯ, ಕ್ರತು, ಅಂಗಿರಸ್ಸು, ಮಹಾ ಭಾಗ್ಯಶಾಲಿ ಯಾದ ವಸಿಷ್ಠ ಎಂಬ ಸಪ್ತರ್ಷಿಗಳು ಈ ಲೋಕದಲ್ಲಿ ವಾಸಮಾಡುತ್ತಿರುವರು. ಇವರೆಲ್ಲರೂ ಬ್ರಹ್ಮನಮಾನಸಪುತ್ರರು, ನಿಷ್ಕಲ್ಮಷರು; ಪುರಾಣಗಳಲ್ಲಿ ವರ್ಣಿತ ರಾದವರು.

೯. ಸಂಭೂತಿ, ಅನಸೂಯೆ, ಕ್ಷಮೆ, ಪ್ರೀತಿ, ಸನ್ನತಿ, ಸ್ಮೃತಿ, ಊರ್ಜೆ ಎಂಬುವರು ಕ್ರಮವಾಗಿ ಈ ಮಹರ್ಷಿಗಳ ಪತ್ನಿಯರು. ಇವರೆಲ್ಲರೂ ಲೋಕ ಮಾತೆಯರೆಂದು ಪರಿಗಣಿತರಾಗಿದ್ದಾರೆ.

೧೦–೧೩. ಅಯ್ಯಾ ಶಿವಶರ್ಮನೆ, ಈ ಸಪ್ತರ್ಷಿಗಳ ತಪಃ ಪ್ರಭಾವದಿಂದಲೆ ಮೂರು ಲೋಕಗಳೂ ಧರಿಸಲ್ಪಟ್ಟಿರುವುದು. ಪೂರ್ವದಲ್ಲಿ ಬ್ರಹ್ಮನು ಈ ಸಪ್ತರ್ಷಿ ಗಳನ್ನು ಸೃಜಿಸಿ ಇವರನ್ನು ಕುರಿತು, "ಎಲೈ ಪುತ್ರರೆ, ನೀವೆಲ್ಲರೂ ಪ್ರಯತ್ನ ವಂತರಾಗಿ ವಿವಿಧ ರೂಪಗಳುಳ್ಳ ಪ್ರಜೆಗಳನ್ನು ಸೃಜಿಸಿರಿ" ಎಂದು ಅಪ್ಪಣೆ ಮಾಡಿದನು ಹೀಗೆ ಅಪ್ಪಣೆಮಾಡಲು ಅವರೆಲ್ಲರೂ ಅತನನ್ನು ನಮಸ್ಕರಿಸಿ, ಪ್ರಜಾಸೃಷ್ಟಿಯನ್ನು ಮಾಡಬಯಸಿ ಅದಕ್ಕಾಗಿ ತಪಸ್ಸನ್ನೆಸಗಲು ಅವಿಮುಕ್ತ

ಪ್ರತಿಷ್ಠಾಪ್ಯ ಚ ಲಿಂಗಾನಿ ತೇ ಸ್ವನಾಮ್ನಾಂಕಿತಾನಿ ಚ ।
ಶಿವೇತಿಪರಯಾ ಭಕ್ತ್ಯಾ ತೇಪುರುಗ್ರಂ ತಪೋ ಭೃಶಂ ॥ ೧೩ ॥
ತುಷ್ಟಸ್ತತ್ತಪಸಾ ಶಂಭುಃ ಪ್ರಾಜಾಪತ್ಯಪದಂ ದದೌ ।
ಲಿಂಗಾನ್ಯತ್ರೀಶ್ವರಾದೀನಿ ದೃಷ್ಟ್ವಾ ಕಾಶ್ಯಾಂ ಪ್ರಯತ್ನತಃ ॥ ೧೪ ॥
ಪ್ರಾಜಾಪತ್ಯೇಽತ್ರ ತೇ ಲೋಕೇ ವಸಂತ್ಯುಜ್ವಲತೇಜಸಃ ।
ಗೋಕರ್ಣೇಶಸ್ಯ ಸರಸಃ ಪ್ರತ್ಯಕ್ತೀರೇ ಪ್ರತಿಷ್ಠಿತಂ ॥ ೧೫ ॥
ಲಿಂಗಮತ್ರೀಶ್ವರಂ ದೃಷ್ಟ್ವಾ ಬ್ರಹುತೇಜೋಭಿವರ್ಧತೇ ।
ಕರ್ಕೋಟವಾಪ್ಯಾ ಈಶಾನೇ ಮರೀಚೇಃ ಕುಂಡಮುತ್ತಮಂ ॥ ೧೬ ॥
ತತ್ರ ಸ್ನಾತ್ವಾ ನರೋ ಭಕ್ತ್ಯಾ ಭ್ರಾಜತೇ ಭಾಸ್ಕರೋ ಯಥಾ ।
ಮರೀಚೀಶ್ವರಸಂಜ್ಞಂ ತು ತತ್ರ ಲಿಂಗಂ ಪ್ರತಿಷ್ಠಿತಂ ॥ ೧೭ ॥
ತಲ್ಲಿಂಗದರ್ಶನಾದ್ವಿಪ್ರ ಮಾರೀಚಂ ಲೋಕಮಾಪ್ನುಯಾತ್ ।
ಕಾಂತ್ಯಾ ಮರೀಚಿಮಾಲೀವ ಶೋಭತೇ ಪುರುಷರ್ಷಭಃ ॥ ೧೮ ॥

---

ಕ್ಷೇತ್ರಕ್ಕೈತಂದು, ಸಮಸ್ತಜಂತುಗಳ ಮುಕ್ತಿ ಸಾಧನೆಗಾಗಿ ಕ್ಷೇತ್ರಜ್ಞನಾದ ಪರಮೇಶ್ವರನಿಂದಲೆ ನಿರ್ಮಿಸಲ್ಪಟ್ಟು ಅಧಿಷ್ಠಿತವಾಗಿರುವ ಅಲ್ಲಿ ತಂತಮ್ಮ ಹೆಸರುಗಳಿಂದಲೆ ಶಿವಲಿಂಗಗಳನ್ನು ಪ್ರತಿಷ್ಠಿಸಿ ಶಿವನಲ್ಲಿಯೆ ಮನಸ್ಸನ್ನಿಟ್ಟು ನಿರತಿಶಯವಾದ ಭಕ್ತಿಯಿಂದ ಬಹಳಕಾಲ ಉಗ್ರವಾದ ತಪಸ್ಸನ್ನೆಸಗಿದರು.

೧೪-೧೮. ಅವರ ಈ ತಪಸ್ಸಿಗೆ ಮೆಚ್ಚಿ ಶ್ರೀ ಶಂಭುಶಂಕರನು ಅವರಿಗೆ ಪ್ರಾಜಾಪತ್ಯಪದವಿಯನ್ನು ದಯಗೈದನು. ಕಾಶೀಕ್ಷೇತ್ರದಲ್ಲಿ ವಿರಾಜಿಸುತ್ತಿರುವ ಅತ್ರೀಶ್ವರಾದಿ ಸಪ್ತರ್ಷಿ ಲಿಂಗಗಳನ್ನು ಪ್ರಯತ್ನಪೂರ್ವಕವಾಗಿ ಭಕ್ತಿಯಿಂದ ಸಂದರ್ಶಿಸಿದ ಮಾನವರು ಪ್ರಾಜಾಪತ್ಯವೆಂದು ಪ್ರಸಿದ್ಧವಾದ ಈ ಸಪ್ತರ್ಷಿ ಲೋಕವನ್ನು ಸೇರಿ ಉಜ್ಜ್ವಲತೇಜಸ್ಸಂಪನ್ನರಾಗಿ ವಾಸಮಾಡುತ್ತಾರೆ. ಗೋಕರ್ಣೇಶ್ವರ ಸರೋವರದ ಪಶ್ಚಿಮತೀರದಲ್ಲಿ ಪ್ರತಿಷ್ಠಿತವಾಗಿರುವ ಅತ್ರೀಶ್ವರ ಲಿಂಗವನ್ನು ಸಂದರ್ಶಿಸುವುದರಿಂದ ಬ್ರಹ್ಮತೇಜಸ್ಸು ಅಭಿವೃದ್ಧಿಯಾಗುತ್ತದೆ. ಕರ್ಕೋಟವಾಪಿಯ ಈಶಾನ್ಯದಿಕ್ಕಿನಲ್ಲಿ ಮರೀಚಿಕುಂಡವಿರುವುದು. ಅಲ್ಲಿ ಮಾನವನು ಸ್ನಾನಮಾಡಿದುದಾದರೆ ಭಾಸ್ಕರನಂತೆ ತೇಜಸ್ಸಂಪನ್ನನಾಗಿ ಬೆಳಗುತ್ತಾನೆ. ಅಲ್ಲಿಯೆ ಪ್ರತಿಷ್ಠಿತವಾಗಿರುವ ಮರೀಚೀಶ್ವರವೆಂಬ ಲಿಂಗವನ್ನು ಸಂದರ್ಶಿಸಿದ ಮಾನವನು ಮರೀಚಿಲೋಕವನ್ನು ಹೊಂದುತ್ತಾನೆ. ಮರೀಚಿ ಲೋಕದಲ್ಲಿ ವಾಸಿಸುವ ಪುರುಷರ್ಷಭನು ಮರೀಚಿ (ಕಿರಣ) ಮಾಲಿಯಾದ ಸೂರ್ಯನಂತೆ ಕಾಂತಿಸಂಪನ್ನನಾಗುತ್ತಾನೆ.

ಪುಲಹೇಶಪುಲಸ್ತ್ಯೇಶೌ ಸ್ವರ್ಗದ್ವಾರಸ್ಯ ಪಶ್ಚಿಮೇ ।
ತೌ ದೃಷ್ಟ್ವಾ ಮನುಜೋ ಲೋಕೇ ಪ್ರಾಜಾಪತ್ಯೇ ಮಹೀಯತೇ॥ ೧೯ ॥
ಹರಿಕೇಶವನೇ ರಮ್ಯೇ ದೃಷ್ಟ್ವಾಂಗಿರಸೇಶ್ವರಂ ।
ಇಹಲೋಕೇ ವಸೇದ್ವಿಪ್ರ ತೇಜಸಾ ಪರಿಬೃಂಹಿತಃ ॥ ೨೦ ॥
ವರಣಾಯಾಸ್ತಟೇ ರಮ್ಯೇ ದೃಷ್ಟ್ವಾ ವಾಸಿಷ್ಠಮೀಶ್ವರಂ ।
ಕ್ರತ್ವೀಶ್ವರಂ ಚ ತತ್ರೈವ ಲಭತೇ ವಸತಿಂ ತ್ವಿಹ ॥ ೨೧ ॥
ಕಾಶ್ಯಾಮೇತಾನಿ ಲಿಂಗಾನಿ ಸೇವಿತಾನಿ ಶುಭೈಷಿಭಿಃ ।
ಮುನೋಭಿವಾಂಛಿತಂ ದದ್ಯುರಿಹಲೋಕೇ ಪರತ್ರ ಚ ॥ ೨೨ ॥
ಗಣಾವೂಚತುಃ :—
ಶಿವಶರ್ಮನ್ ಮಹಾಭಾಗ ತಿಷ್ಠತೇ ಸಾಽತ್ರ ಸುಂದರೀ ।
ಅರುಂಧತೀ ಮಹಾಪುಣ್ಯಾ ಪತಿವ್ರತಪರಾಯಣಾ ॥ ೨೩ ॥
ಯಸ್ಯಾಃ ಸ್ಮರಣಮಾತ್ರೇಣ ಗಂಗಾಸ್ನಾನಫಲಂ ಲಭೇತ್ ।
ಅಂತಃಪುರಚರೈರ್ದ್ವಿತ್ರೈಃ ಪವಿತ್ರೈಃ ಸಹಿತೋ ವಿಭುಃ ॥ ೨೪ ॥

---

೧೯. ಸ್ವರ್ಗದ್ವಾರದ ಪಶ್ಚಿಮಕ್ಕೆ ಪುಲಹೇಶ ಪುಲಸ್ತ್ಯೇಶ ಲಿಂಗಗಳು ಪ್ರತಿಷ್ಠಿತವಾಗಿರುತ್ತವೆ ಇವುಗಳನ್ನು ಸಂದರ್ಶಿಸಿದ ಮಾನವನು ಪ್ರಾಜಾಪತ್ಯ ಲೋಕದಲ್ಲಿ ಪೂಜ್ಯನೆನಿಸುತ್ತಾನೆ.

೨೦. ಮನೋಹರವಾದ ಹರಿಕೇಶವನದಲ್ಲಿ ಪ್ರತಿಷ್ಠಿತವಾಗಿರುವ ಆಂಗಿರಸೇಶ್ವರಲಿಂಗವನ್ನು ದರ್ಶನಮಾಡಿದ ಮಾನವನು ತೇಜಸ್ಸಂಪನ್ನನಾಗಿ ಈ ಸಪ್ತರ್ಷಿ ಲೋಕದಲ್ಲಿ ವಾಸಮಾಡುತ್ತಾನೆ.

೨೧. ರಮ್ಯವಾದ ವರಣಾನದಿಯ ತೀರದಲ್ಲಿ ಪ್ರತಿಷ್ಠಿತವಾಗಿರುವ ವಾಸಿಷ್ಠೇಶ್ವರಲಿಂಗವನ್ನೂ ಅಲ್ಲಿಯೆ ಇರುವ ಕ್ರತ್ವೀಶ್ವರಲಿಂಗವನ್ನೂ ಸಂದರ್ಶಿಸಿದ ನರನು ಈ ಸಪ್ತರ್ಷಿಲೋಕದಲ್ಲಿ ವಾಸವನ್ನು ಪಡೆಯುತ್ತಾನೆ

೨೨. ಎಲೈ ಶಿವಶರ್ಮನೆ, ಹೀಗೆ ಕಾಶೀಕ್ಷೇತ್ರದಲ್ಲಿ ಸಪ್ತರ್ಷಿಗಳಿಂದ ಪ್ರತಿಷ್ಠಿತವಾಗಿರುವ ಈ ಸಪ್ತಲಿಂಗಗಳನ್ನು ಶುಭಕಾಂಕ್ಷಿಗಳಾದ ಮಾನವರು ಸೇವಿಸಿದ್ದಾದರೆ ಆ ಮಹರ್ಷಿಗಳು ಇಹಪರಗಳಲ್ಲಿ ಅವರಿಗೆ ಸರ್ವಾಭೀಷ್ಟಗಳನ್ನೂ ದಯೆಗೆಯ್ಯುತ್ತಾರೆ.

೨೩. ಗಣಗಳು ಹೇಳುತ್ತಾರೆ.—ಎಲೈ ಶಿವಶರ್ಮನೆ, ಮಹಾಭಾಗ, ಮಹಾ ಪುಣ್ಯವಂತೆಯೂ ಪಾತಿವ್ರತ್ಯ ಪರಾಯಣೆಯೂ ಸುಂದರಿಯೂ ಆದ ಅರುಂಧತಿಯು ಈ ಸಪ್ತರ್ಷಿಲೋಕದಲ್ಲಿಯೆ ಇರುವಳು.

೨೪-೨೫. ಈಕೆಯ ಸ್ಮರಣಮಾತ್ರದಿಂದಲೆ ಗಂಗಾಸ್ನಾನ ಫಲವು ಲಭಿಸು-

ಸದಾ ನಾರಾಯಣೋ ದೇವೋ ಯಸ್ಯಾಶ್ಚಕ್ರೇ ಕಥಾಂ ಮುದಾ ।
ಕಮಲಾಯಾಃ ಪುರೋಭಾಗೇ ಪಾತಿವ್ರತ್ಯಸುತೋಷಿತಃ ॥ ೨೫ ॥
ಪತಿವ್ರತಾಸ್ವರುಂಧತ್ಯಾಃ ಕಮಲೇ ವಿಮಲಾಶಯಃ ।
ಯಥಾಽಸ್ತಿ ನ ತಥಾಽನ್ಯಸ್ಯಾಃ ಕಸ್ಯಾಶ್ಚಿತ್ಕ್ವಾಽಪಿ ಭಾಮಿನಿ ॥ ೨೬ ॥
ನ ತದ್ರೂಪಂ ನ ತಚ್ಛೀಲಂ ನ ತತ್ಕೌಲೀನಮೇವ ಚ ।
ನ ತತ್ಕಲಾಸು ಕೌಶಲ್ಯಂ ಪತ್ಯುಃ ಶುಶ್ರೂಷಣಂ ನ ತತ್ ॥ ೨೭ ॥
ನ ಮಾಧುರ್ಯಂ ನ ಗಾಂಭೀರ್ಯಂ ನ ಚಾರ್ಯಪರಿತೋಷಣಂ ।
ಅರುಂಧತ್ಯಾ ಯಥಾ ದೇವಿ ತಥಾಽನ್ಯಾಸಾಂ ಕ್ವಚಿತ್ಪ್ರಿಯೇ ॥ ೨೮ ॥
ಧನ್ಯಾಸ್ತಾ ಯೋಷಿತೋ ಲೋಕೇ ಸ ಭಾಗ್ಯಾಃ ಶುದ್ಧಬುದ್ಧಯಃ ।
ಅರುಂಧತ್ಯಾಃ ಪ್ರಸಂಗೇ ಯಾ ನಾಮಾಽಪಿ ಪರಿಗೃಹ್ಣತೇ ॥ ೨೯ ॥
ಯದಾ ಪತಿವ್ರತಾನಾಂ ತು ಕಥಾಽಸ್ಮದ್ಭವನೇ ಭವೇತ್ ।
ತದಾ ಪ್ರಾಥಮಿಕೀಂ ರೇಖಾಮೇಷಾಽಲಂಕುರುತೇ ಸತೀ ॥ ೩೦ ॥

---

ತ್ತದೆ. ವಿಭುವಾದ ಶ್ರೀಮನ್ನಾರಾಯಣನು ಪವಿತ್ರಹೃದಯರಾದ ಇಬ್ಬರು ಮೂವರು ಅನುಚರರೊಡನೆ ಅಂತಃಪುರದಲ್ಲಿ ಮಹಾಲಕ್ಷ್ಮಿಯ ಮುಂಗಡೆ ಈ ಅರುಂಧತೀದೇವಿಯ ಪಾತಿವ್ರತ್ಯದಿಂದ ಸಂತೋಷಗೊಂಡು ಈಕೆಯ ಚರಿತ್ರೆಯನ್ನು ಹೇಳುತ್ತಿದ್ದನು.

೨೬–೨೮. "ಎಲೆ ಭಾಮಿನಿ, ಕಮಲೆ, ಭೂಮಂಡಲದಲ್ಲಿ ಬೇರಾವ ಸ್ತ್ರೀಯ ಮನಸ್ಸೂ ಅರುಂಧತೀದೇವಿಯ ಮನಸ್ಸಿನಂತೆ ಪರಿಶುದ್ಧವಾಗಿರುವುದಿಲ್ಲ. ಆಕೆಗಿರುವ ರೂಪ, ಆಕೆಯ ಶೀಲ, ವಂಶೋನ್ನತಿ, ಕಲಾಕೌಶಲ್ಯ, ಸಂಪತ್ತು, ಶುಶ್ರೂಷಾಸಾಮರ್ಥ್ಯ, ಮಾಧುರ್ಯ, ಗಾಂಭೀರ್ಯ, ಪೂಜ್ಯರಾದ ಅತಿಥಿ ಅಭ್ಯಾಗತರ ಪರಿಚರ್ಯೆ ಮೊದಲಾದ ಶುಭಗುಣಸಂಪದವು ಆ ಅರುಂಧತಿಯಲ್ಲಿರುವಂತೆ ಮತ್ತಾವ ನಾರಿಯಲ್ಲಿಯೂ ಇರುವುದಿಲ್ಲ.

೨೯. ಎಲೌ ಪ್ರಿಯಳೆ, ಲೋಕದಲ್ಲಿ ಅರುಂಧತಿಯ ಹೆಸರನ್ನಾದರೂ ಇಟ್ಟುಕೊಂಡಿರುವ ಸ್ತ್ರೀಯರೇ ಧನ್ಯರು. ಅವರೇ ಭಾಗ್ಯವತಿಯರು. ಅವರೇ ಶುದ್ಧಬುದ್ಧಿಯುಳ್ಳವರು. ಆಕೆಯ ಪ್ರಸಂಗವನ್ನು ಹೇಳಿಕೊಳ್ಳುವವರು ಧನ್ಯಾತ್ಮರು.

೩೦. ನಮ್ಮ ಭವನದಲ್ಲಿ ಪತಿವ್ರತೆಯರ ಮಾತು ಬಂದಾಗ ಮಹಾ ಪತಿವ್ರತೆಯಾದ ಈ ಅನುಸೂಯೆಯೆ ಪ್ರಥಮ ಸ್ಥಾನದಲ್ಲಿ ಪರಿಗಣಿತೆಯಾಗುತ್ತಾಳೆ."

ಬ್ರುವತೋರಿತಿ ಸಂಕಥಾಂ ತಥಾ
ಗಣಯೋರ್ವೈಷ್ಣವಯೋರ್ಮುದಾವಹಾಂ ।
ಧ್ರುವಲೋಕ ಉಪಾಗತಸ್ತತೋ
ನಯನಾತಿಥ್ಯಮತಥ್ಯವರ್ಜಿತಃ ॥ ೩೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಸಪ್ತರ್ಷಿಲೋಕವರ್ಣನಂ" ನಾಮಾಷ್ಟಾದಶೋಽಧ್ಯಾಯಃ

---

೩೧. ಹೀಗೆ ಆ ವಿಷ್ಣುಪಾರ್ಷದರು ಸಪ್ತರ್ಷಿಲೋಕದ ಸಂತೋಷಕರವಾದ ಕಥೆಯನ್ನು ಹೇಳುತ್ತಿರುವಂತೆಯೆ, ಮೂರು ಲೋಕಗಳು ನಾಶವಾದರೂ ಸ್ಥಿರವಾಗಿಯೆ ಇರುವ ಧ್ರುವಲೋಕವನ್ನು ಆ ಶಿವಶರ್ಮದ್ವಿಜನು ಕಂಡವನಾದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಸಪ್ತರ್ಷಿಲೋಕವರ್ಣನ"ವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಧ್ಯೈಕೋನವಿಂಶೋಽಧ್ಯಾಯಃ

### ಧ್ರುವಲೋಕವರ್ಣನಂ— ಧ್ರುವೋಪದೇಶಕಥನಂ

**ಶಿವಶರ್ಮೋವಾಚ :—**

ತಿಷ್ಠನ್ನೇಕೇನ ಪಾದೇನ ಕೋಽಯಂ ಭ್ರಮತಿ ಸತ್ತಮೌ ।
ಅನೇಕರಶನಾವ್ಯಗ್ರಹಸ್ತಾಗ್ರೋ ವ್ಯಗ್ರಲೋಚನಃ ॥ ೧ ॥
ತ್ರಿಲೋಕೀಮಂಡಪಸ್ತಂಭಸನ್ನಿಭೋ ಭಾಭಿರಾವೃತಃ ।
ಅತುಲಂ ಜ್ಯೋತಿಷಾಂ ರಾಶಿಂ ತುಲಯಾ ತುಲಯನ್ನಿವ ॥ ೨ ॥
ಸೂತ್ರಧಾರ ಇವ ವ್ಯೋಮ್ನ ವ್ಯಾಯಾಮಪರಿಮಾಪಕಃ ।
ತ್ರೈವಿಕ್ರಮೋಽಂಘ್ರಿದಂಡೋ ವಾ ಪ್ರೋದ್ದಂಡೋ ಗಗನಾಂಗಣೇ ॥ ೩ ॥
ಅಥವಾಂಽಬರಕಾಸಾರಸಾರಯೂಪಸ್ವರೂಪಧೃಕ್ ।
ಕೋಽಯಂ ಕಥಯತಂ ದೇವೌ ಕೃಪಯಾ ಪರಯಾ ಮಮ ॥ ೪ ॥
ನಿಶಮ್ಯೇತಿ ವಚಸ್ತಸ್ಯ ವಯಸ್ಯಸ್ಯ ವಿಮಾನಗೌ ।
ಪ್ರಣಯಾದಾಹತುಸ್ತಸ್ಮೈ ಧ್ರುವಾಂ ಧ್ರುವಕಥಾಂ ಗಣೌ ॥ ೫ ॥

---

### ಕನ್ನಡದ ಅನುವಾದ

#### ಧ್ರುವಲೋಕವರ್ಣನ–ಧ್ರುವೋಪದೇಶಕಥನ

೧. ಶಿವಶರ್ಮನು ಕೇಳುತ್ತಾನೆ:—"ಎಲೈ ವಿಷ್ಣುಪಾರ್ಷದರೆ, ಒಂದೆ ಕಾಲಿನಲ್ಲಿ ನಿಂತು, ಕೈಯಲ್ಲಿ ಅನೇಕ ಹಗ್ಗಗಳನ್ನು ಹಿಡಿದು, ಚಂಚಲವಾದ ಕಣ್ನೋಟವುಳ್ಳವನಾಗಿ ಭ್ರಮಿಸುತ್ತಿರುವ ಈತನಾರು ?

೨. ಮೂರು ಲೋಕಗಳೆಂಬ ಮಂಟಪಕ್ಕೆ ಸ್ತಂಭಪ್ರಾಯನಾಗಿ, ತೇಜಃ ಕಿರಣಗಳಿಂದಾವರಿಸಲ್ಪಟ್ಟು, ಅಪಾರವಾದ ಜ್ಯೋತಿಗಳ ರಾಶಿಯನ್ನು ತಕ್ಕಡಿಯಲ್ಲಿ ಹಾಕಿ ತೂಗುತ್ತಿರುವನೊ ಎಂಬಂತೆ ಈ ಮಹಾತ್ಮನು ಪ್ರಕಾಶಿಸುತ್ತಿರುವರು.

೩. ಸೂತ್ರವನ್ನು ಕೈಯಲ್ಲಿ ಹಿಡಿದು ಆಕಾಶದ ವಿಸ್ತಾರವನ್ನು ಅಳೆಯುತ್ತಿರುವನೊ ಎಂಬಂತೆ ತೋರುತ್ತಲಿರುವ ಈತನು ಗಗನಾಂಗಣದಲ್ಲಿ ಮೇಲೆತ್ತಿದ ತ್ರಿವಿಕ್ರಮನಾದ ವಾಮನನ ಪಾದದಂಡದಂತೆ ಪ್ರಕಾಶಿಸುತ್ತಿರುವನು.

೪–೫. ಎಲೈ ಗಣಗಳೇ, ಅಥವಾ ಈ ಗಗನವೆಂಬ ಸರೋವರಕ್ಕೆ ಶ್ರೇಷ್ಠತರವಾದ ಯೂಪಸ್ತಂಭದಂತೆ ಬೆಳಗುತ್ತಿರುವ ಈತನಾರೆಂಬುದನ್ನು ಕೃಪೆಯಿಟ್ಟು ತಿಳಿಸಿರಿ." ಇಂತು ಪ್ರಶ್ನಿಸಿದ ಆ ಶಿವಶರ್ಮನನ್ನು ಕುರಿತು ದೇವವಿಮಾನದಲ್ಲಿ ಕುಳಿತಿದ್ದ ಆ ವಿಷ್ಣುಗಣಗಳಿಬ್ಬರೂ ಅವನಲ್ಲಿನ ವಿಶ್ವಾಸದಿಂದ ಆ ಧ್ರುವನ ಧ್ರುವಫಲವನ್ನೀಯುವ ಪುಣ್ಯಕಥೆಯನ್ನು ಹೇಳತೊಡಗಿದರು.

ಗಣಾವೂಚತುಃ :—
ಮನೋಃ ಸ್ವಾಯಂಭುವಸ್ಯಾಸೀದುತ್ತಾನಚರಣಃ ಸುತಃ ।
ತಸ್ಯ ಕ್ಷಿತಿಪತೇರ್ವಿಪ್ರ ದ್ವೌ ಸುತೌ ಸಂಬಭೂವತುಃ ॥ ೬ ॥
ಸುರುಚ್ಯಾಮುತ್ತಮೋ ಜ್ಯೇಷ್ಠಃ ಸುನೀತ್ಯಾಂ ತು ಧ್ರುವೋಽಪರಃ ।
ಮಧ್ಯೇಸಭಂ ನರಪತೇರುಪವಿಷ್ಟಸ್ಯ ಚೈಕದಾ ॥ ೭ ॥
ಸುನೀತ್ಯಾ ರಾಜಸೇವಾಯೈ ನಿಯುಕ್ತೋಽಲಂಕೃತೋಽರ್ಭಕಃ ।
ಧ್ರುವೋ ಧಾತ್ರೇಯಿಕಾಪುತ್ರೈಃ ಸಮಂ ವಿನಯತತ್ಪರಃ ॥ ೮ ॥
ಸಗತ್ವೋತ್ತಾನಚರಣಂ ಕ್ಷೋಣೀಶಂ ಪ್ರಣನಾಮ ಹ ।
ದೃಷ್ಟ್ವೋತ್ತಮಂ ತದುತ್ಸಂಗೇ ನಿವಿಷ್ಟಂ ಜನಕಸ್ಯ ವೈ ॥ ೯ ॥
ಪ್ರೋಚ್ಚಸಿಂಹಾಸನಸ್ಥಸ್ಯ ನೃಪತೇರ್ಬಾಲ್ಯಚಾಪಲಾತ್ ।
ಆರೋಢುಕಾಮಸ್ತ್ವಭವತ್ಸೌನೀತೇಯಸ್ತದಾ ಧ್ರುವಃ ॥ ೧೦ ॥
ಆರುರುಕ್ಷುಮವೇಕ್ಷ್ಯಾಮುಂ ಸುರುಚಿರ್ಧ್ರುವಮಬ್ರವೀತ್ ।
ದೌರ್ಭಾಗ್ಯೇಯ ಕಿಮಾರೋಢುಮಿಚ್ಛೇರಂಕಂ ಮಹೀಪತೇಃ ॥ ೧೧ ॥
ಬಾಲ ಬಾಲಿಶಬುದ್ಧಿತ್ವಾದಭಾಗ್ಯಾಜಠರೋದ್ಭವ ।
ಅಸ್ಮಿನ್ಸಿಂಹಾಸನೇ ಸ್ಥಾತುಂ ನ ತ್ವಯಾ ಸುಕೃತಂ ಕೃತಂ ॥ ೧೨ ॥

---

೬. ಗಣಗಳು ಹೇಳುತ್ತಾರೆ:—"ಅಯ್ಯಾ ವಿಪ್ರನೆ, ಸ್ವಾಯಂಭುವ ಮನುವಿಗೆ ಉತ್ತಾನಪಾದನೆಂಬ ಮಗನಿದ್ದನು. ದೊರೆಯಾದ ಆ ಉತ್ತಾನ ಪಾದನಿಗೆ ಇಬ್ಬರು ಮಕ್ಕಳಾದರು.

೭–೧೦. ಅವನ ಮೊದಲ ಹೆಂಡತಿಯಾದ ಸುರುಚಿಯಲ್ಲಿ ಜ್ಯೇಷ್ಠನಾದ ಉತ್ತಮನೂ ಸುನೀತಿಯಲ್ಲಿ ಕಿರಿಯವನಾದ ಧ್ರುವನೂ ಹುಟ್ಟಿದರು. ಒಂದಾನೊಂದುಸಲ ಆ ಉತ್ತಾನಪಾದರಾಯನು ಸಭಾಮಧ್ಯದಲ್ಲಿ ಮಂಡಿಸಿರಲು ರಾಜನನ್ನು ಸೇವಿಸೆಂದು ಅಪ್ಪಣೆಮಾಡಿ ಸುನೀತಿಯು ತನ್ನ ಮಗನಾದ ಧ್ರುವನನ್ನು ಅಲಂಕರಿಸಿ ಕಳಿಸಿದಳು. ಧ್ರುವನು ಚಿಕ್ಕತಾಯಿಯ ಮಕ್ಕಳೊಡನೆ ವಿನಯತತ್ಪರನಾಗಿ ಅಲ್ಲಿಗೆ ಬಂದು ತಂದೆಯ ಚರಣಗಳಿಗೆ ಪ್ರಣಾಮಮಾಡಿದನು. ಆಗ ಅವನು ತಂದೆಯಾದ ಆ ಉತ್ತಾನಪಾದರಾಯನ ತೊಡೆಯ ಮೇಲೆ ಕುಳಿತಿದ್ದ ಉತ್ತಮನನ್ನು ಕಂಡನು. ಆಗ ಅವನಿಗೆ ಬಾಲ್ಯಚಾಪಲ್ಯದ ದಸೆಯಿಂದ ಉನ್ನತವಾದ ಸಿಂಹಾಸನದ ಮೇಲೆ ಕುಳಿತಿದ್ದ ದೊರೆಯ ತೊಡೆಯ ಮೇಲೆ ತಾನೂ ಕುಳಿತುಕೊಳ್ಳುವ ಬಯಕೆಯಾಯಿತು.

೧೧–೧೨. ಹೀಗೆ ತಂದೆಯ ತೊಡೆಯನ್ನೇರಬಯಸಿರುವ ಆ ಧ್ರುವನನ್ನು ಕಂಡು ಸುರುಚಿಯು "ಎಲಾ, ದುರ್ಭಾಗ್ಯಳ ಮಗನೆ, ಏನು ದೊರೆಯ ತೊಡೆಯನ್ನೇರಬಯಸುತ್ತಿರುವೆ? ಮಂದಭಾಗ್ಯಳ ಹೊಟ್ಟೆಯಲ್ಲಿ ಹುಟ್ಟಿದ ಎಲಾ

ಯದಿ ಸ್ಯಾತ್ಸುಕೃತಂ ತತ್ಕಿಂ ದುರ್ಭಗೋದರಗೋಽಭವಃ ।
ಅನೇನೈವಾಽನುಮಾನೇನ ಬುಧ್ಯಸ್ವ ಸ್ವಾಲ್ಪಪುಣ್ಯತಾಂ ॥ ೧೩ ॥
ಭೂತ್ವಾ ರಾಜಕುಮಾರೋಽಪಿ ನಾಽಲಂಕುರ್ಯಾ ಮಮೋದರಂ ।
ಸುಕುಕ್ಷಿಜಮಮುಂ ಪಶ್ಯ ತ್ವಮುತ್ತಮಮನುತ್ತಮಂ ॥ ೧೪ ॥
ಅಧಿಜಾನುಧರಾಜಾನೇರ್ಮಾನೇನ ಪರಿಬೃಂಹಿತಂ ।
ಪ್ರಾಂಶೋಃ ಸಿಂಹಾಸನಸ್ಯಾಽಸ್ಯ ರುಚಿಶ್ಚೇದಧಿರೋಹಣೇ ॥ ೧೫ ॥
ಕುಕ್ಷಿಂ ಹಿತ್ವಾ ಕಿಮವಸಃ ಸುರುಚೇಶ್ಚ ಸುರೋಚಿಷಂ ।
ಮಧ್ಯೇಭೂಪಸಭಂ ಬಾಲಸ್ತ್ವಯೇತಿ ಪರಿಭರ್ತ್ಸಿತಃ ॥ ೧೬ ॥
ಪತನ್ನಿಸೀತಬಾಷ್ಪಾಂಬು ಧೈರ್ಯಾತ್ಕಿಂಚಿನ್ನಚೋಕ್ತವಾನ್ ।
ಉಚಿತಾಽನುಚಿತಂ ಕಿಂಚಿನ್ನೋಚಿವಾನ್ ಸೋಽಪಿ ಪಾರ್ಥಿವಃ ॥ ೧೭ ॥
ನಿಯಂತ್ರಿತೋ ಮಹಿಷ್ಯಾಶ್ಚ ತಸ್ಯಾಃ ಸೌಭಾಗ್ಯಗೌರವಾತ್ ।
ವಿಸೃಜ್ಯ ಚ ಸಭಾಲೋಕಂ ಶೋಕಂ ಸಮ್ಮೃಜ್ಯ ಚೇಷ್ಟಿತೈಃ ॥ ೧೮ ॥

---

ಹುಡುಗ, ನೀನು ಈ ಸಿಂಹಾಸನದಲ್ಲಿ ಕುಳಿತುಕೊಳ್ಳಲು ಯಾವ ಪುಣ್ಯವನ್ನೂ ಮಾಡಿಲ್ಲ. ನಿನ್ನ ಹುಡುಗುಬುದ್ಧಿಯನ್ನು ತೋರಬೇಡ. ಸುಮ್ಮನಿರು.

೧೩. ನೀನು ಅಂತಹ ಪುಣ್ಯವನ್ನೇ ಮಾಡಿದ್ದಿದ್ದರೆ ಆ ದುರದೃಷ್ಟಳ ಹೊಟ್ಟೆಯಲ್ಲಿ ಹುಟ್ಟಿದೆಯೇಕೆ? ಇದರಿಂದಲೆ ನೀನು ಅಲ್ಪಪುಣ್ಯನೆಂಬ ವಿಷಯವನ್ನು ತಿಳಿದುಕೊ.

೧೪. ನೀನು ರಾಜಕುಮಾರನಾಗಿ ಜನಿಸಿದ್ದರೂ ನನ್ನ ಉದರವನ್ನಲಂಕರಿಸಲಿಲ್ಲ. ನನ್ನ ಉದರದಲ್ಲಿ ಜನಿಸಿದ ಉತ್ತಮೋತ್ತಮನಾದ ಈ ಉತ್ತಮನನ್ನು ನೋಡು.

೧೫–೧೬. ಈ ಉತ್ತಾನಪಾದಮಹಾರಾಜನಿಂದ ಪರಿಪಾಲಿತವಾದ ಈ ಉಚ್ಚಸಿಂಹಾಸನವನ್ನೇರಲು ನಿನಗೆ ಅಪೇಕ್ಷೆಯಿರುವುದಾದರೆ ಮಹಾತೇಜಸಂಪನ್ನವಾದ ನನ್ನ ಉದರವನ್ನು ತೊರೆದು ಆ ಸುನೀತಿಯ ಉದರದಲ್ಲೇಕೆ ಜನಿಸಿದೆ?'' ಹೀಗೆ ಅವಳು ಆ ರಾಜಸಭಾಮಧ್ಯದಲ್ಲಿ ಆ ಬಾಲಕನನ್ನು ಗದರಿ ನುಡಿಯಲು, ಅವನು ಕಣ್ಣೀರು ಸುರಿಸುತ್ತ, ಧೈರ್ಯವಾಗಿ ಯಾವ ಮಾತನ್ನೂ ಆಡದೆ ಸುಮ್ಮನಿದ್ದನು. ಅರಸನಾದ ಉತ್ತಾನಪಾದನೂ ಆ ಸಮಯದಲ್ಲಿ ಯುಕ್ತಾಯುಕ್ತಗಳನ್ನರಿತು ಯಾವ ಮಾತನ್ನೂ ಆಡಲಿಲ್ಲ.

೧೮–೨೩. ಅವನು ತನ್ನ ಅರಸಿಯಾದ ಆ ಸುರುಚಿಯಿಂದ ನಿಯಂತ್ರಿತನಾಗಿ, ಅವಳ ಸೌಂದರ್ಯದಲ್ಲಿನ ನಿರತಿಶಯವಾದ ಗೌರವದಿಂದ ಆ ರೀತಿ ಮಾತನಾಡದೆ ಸುಮ್ಮನಾದನು. ಬಾಲಕನಾದ ಧ್ರುವನಾದರೊ ತನ್ನಲ್ಲಿ

ಶೈಶವೈಃ ಸ ಶಿಶುರ್ನತ್ವಾ ನೃಪಂ ಸ್ವಸದನಂ ಯಯೌ ।
ಸುನೀತಿರ್ನೀತಿನಿಲಯಮವಲೋಕ್ಯಾಽಥ ಬಾಲಕಂ ॥ ೧೯ ॥
ಮುಖಲಕ್ಷ್ಮೈಶ್ಚ ವಿಜ್ಞಾಸೀದ್ಧ್ರುವಂ ಸಮವಮಾನಿತಂ ।
ಅಭಿಸೃತ್ಯ ಚ ತಂ ಬಾಲಂ ಮೂರ್ಧ್ನ್ಯುಪಾಘ್ರಾಯ ಸಾಸಕೃತ್ ॥ ೨೦ ॥
ಕಿಂಚಿತ್ಪರಿಮ್ಲಾನಮಿವ ಸ ಸಾಂತ್ವಂ ಪರಿಷಸ್ವಜೇ ।
ಅಥ ದೃಷ್ಟ್ವಾ ಸುನೀತಿಂ ಸ ರಹೋಽಂತಃಪುರವಾಸಿನೀಂ ॥ ೨೧ ॥
ದೀರ್ಘಂ ನಿಶ್ವಸ್ಯ ಬಹುಶೋ ಮಾತುರಗ್ರೇ ರುರೋದ ಹ ।
ಸಾಂತ್ವಯಿತ್ವಾಽಶ್ರುನಯನಾ ವದನಂ ಪರಿಮಾರ್ಜ್ಯ ಚ ॥ ೨೨ ॥
ದುಕೂಲಾಂಚಲಸಂಪರ್ಕೈರ್ಮೃದುಲೈರ್ಮೃದುಪಾಣಿನಾ ।
ಪಪ್ರಚ್ಛ ತನಯಂ ಮಾತಾ ವದ ರೋದನಕಾರಣಂ ।
ವಿದ್ಯಮಾನೇ ನರಪತೌ ಶಿಶೋ ಕೇನಾಽಪಮಾನಿತಃ ॥ ೨೩ ॥
ಅಪ್ರೋಽಥ ಸಮುಪಸ್ಪೃಶ್ಯ ತಂ ಬಾಲಂ ಪರಿಗೃಹ್ಯ ಚ ।
ಮಾತ್ರಾ ಪೃಷ್ಟಃ ಸೋಪರೋಧಂ ಧ್ರುವಸ್ತಾಂ ಪರ್ಯಭಾಷತ ॥ ೨೪ ॥

---

ಉಕ್ಕಿಬಂದ ದುಃಖವನ್ನು ಹೇಗೆ ಹೇಗೆಯೊ ಬಾಲ್ಯಸಹಜವಾದ ಮುಖ ವಿಕಾರಗಳಿಂದಲೆ ತಡೆದುಕೊಂಡು, ಅರಸನಿಗೆ ಮಣಿದು ಅಲ್ಲಿಂದ ತನ್ನ ಮನೆಯನ್ನು ಸೇರಿದನು. ಆಗ ಸುನೀತಿಯು ನೀತಿನಿಲಯನೆನಿಸಿದ ಆ ಬಾಲಕನನ್ನು ಕಂಡು, ಅವನ ಮುಖಲಕ್ಷಣಗಳಿಂದಲೆ ಅವನಿಗೆ ಅವಮಾನವಾಗಿದೆಯೆಂಬ ಸಂಗತಿಯನ್ನರಿತು ಬಳಿಸಾರಿ ಮೂರ್ಧಾನವನ್ನು ಬಾರಿಬಾರಿಗೂ ಆಘ್ರಾಣಿಸಿ, ಸ್ವಲ್ಪ ಬತ್ತಿದ ಮುಖವುಳ್ಳವಳಾಗಿ ಅವನನ್ನು ಸಮಾಧಾನಗೊಳಿಸುತ್ತ ಆಲಿಂಗಿಸಿದಳು. ಬಾಲಕನಾದ ಧ್ರುವನೂ ಏಕಾಂಗಿಯಾಗಿ ಅಂತಃಪುರದಲ್ಲಿದ್ದ ತನ್ನ ತಾಯಿಯಾದ ಆ ಸುನೀತಿಯನ್ನು ಕಂಡು ನೀಳವಾಗಿ ಉಸಿರು ಬಿಡುತ್ತ ಅವಳ ಮುಂದೆ ಬಹಳವಾಗಿ ಅಳತೊಡಗಿದನು. ಸುನೀತಿಯು ಕಂಬನಿದುಂಬಿದ ಕಣ್ಣುಳ್ಳವನಾದ ಅವನನ್ನು ಸಮಾಧಾನಪಡಿಸಿ, ಸೆರಗಿನಿಂದಲೂ ಕೋಮಲವಾದ ತನ್ನ ಕೈಗಳಿಂದಲೂ ಅವನ ಮುಖವನ್ನು ಸವರಿ ಒರಸುತ್ತ, “ಮಗು, ಯಾಕಳುವೆ, ಏನಾಯಿತು? ಕಾರಣವೇನು? ಅರಸನಿದ್ದೂ ನಿನ್ನನ್ನು ಅವಮಾನಪಡಿಸಿದವರಾರು?” ಎಂದು ಕೇಳಿದಳು.

೨೪. ತರುವಾಯ ನೀರುತಂದು ಮುಖವನ್ನು ತೊಳೆದು ಆ ಬಾಲನನ್ನು ಬಾಚಿ ತಬ್ಬಿ ತಾಯಿಯು ಮತ್ತೆ ಪ್ರಶ್ನಿಸಲು, ಧ್ರುವನು ಅಂತಃಪುರದಲ್ಲಿ ಮತ್ತಾರೂ ಇಲ್ಲದಿರುವುದನ್ನು ಕಂಡು ಅವಳನ್ನು ಕುರಿತು ಹೀಗೆಂದನು.

ಸಂಪೃಚ್ಛೇ ಜನನಿ ತ್ವಾಽಹಂ ಸಮ್ಯಕ್ ಶಂಶ ಮಮಾಗ್ರತಃ ।
ಭಾರ್ಯಾತ್ವೇಽಪಿ ಚ ಸಾಮಾನ್ಯೇ ಕಥಂ ಸಾ ಸುರುಚಿಃ ಪ್ರಿಯಾ ॥ ೨೫ ॥
ಕಥಂ ನ ಭವತೀ ಮಾತಃ ಪ್ರಿಯಾ ಕ್ಷಿತಿಪತೇರಸಿ ।
ಕಥಮುತ್ತಮತಾಂ ಪ್ರಾಪ್ತ ಉತ್ತಮಃ ಸುರುಚೇಃ ಸುತಃ ॥ ೨೬ ॥
ಕುಮಾರತ್ವೇಽಪಿ ಸಾಮಾನ್ಯೇ ಕಥಂ ತ್ವಹಮನುತ್ತಮಃ ।
ಕಥಂ ತ್ವಂ ಮಂದಭಾಗ್ಯಾಽಸಿ ಸುಕುಕ್ಷಿಃ ಸುರುಚಿಃ ಕಥಂ ॥ ೨೭ ॥
ಕಥಂ ನೃಪಾಸನಂ ಯೋಗ್ಯಮುತ್ತಮಸ್ಯ ಕಥಂ ನ ಮೇ ।
ಕಥಂ ಮೇ ಸುಕೃತಂ ತುಚ್ಛಮುತ್ತಮಸ್ಯೋತ್ತಮಂ ಕಥಂ ॥ ೨೮ ॥
ಇತಿ ಶ್ರುತ್ವಾ ವಚಸ್ತಸ್ಯ ಸುನೀತಿರ್ನೀತಿಮಚ್ಛಿಶೋಃ ।
ಕಿಂಚಿದುಚ್ಛ್ವಸ್ಯ ಶನಕೈಃ ಶಿಶುಕೋಪೋಪಶಾಂತಯೇ ॥ ೨೯ ॥
ಸ್ವಭಾವಮಧುರಾಂ ವಾಣೀಂ ವಕ್ತುಂ ಸಮುಪಚಕ್ರಮೇ ।
ಸಾಪತ್ನಂ ಪ್ರತಿಘಂ ತ್ಯಕ್ತ್ವಾ ರಾಜನೀತಿವಿದಾಂ ವರಾ ॥ ೩೦ ॥

**ಸುನೀತಿರುವಾಚ :—**

ಅಯಿ ತಾತ ಮಹಾಬುದ್ಧೇ ವಿಶುದ್ಧೇನಾಂತರಾತ್ಮನಾ ।
ನಿವೇದಯಾಮಿ ತೇ ಸರ್ವಂ ಮಾಽಪಮಾನೇ ಮತಿಂ ಕೃಥಾಃ ॥ ೩೧ ॥

---

೨೫–೨೮. "ತಾಯೆ, ನಾನು ಕೇಳುತ್ತಿರುವ ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ಹೇಳು. ಸತ್ಯವನ್ನು ನುಡಿ. ಅರಸನಿಗೆ ಭಾರ್ಯೆಯರಾದ ನೀವೀರ್ವರೂ ಸಮಾನರಾಗಿರುವಲ್ಲಿ ಆ ಸುರುಚಿಯು ಮಾತ್ರ ಅರಸನಿಗೆ ಹೆಚ್ಚು ಪ್ರಿಯಳಾದುದು ಹೇಗೆ? ನೀನೇಕೆ ಅರಸನಿಗೆ ಪ್ರಿಯಳಾಗಲಿಲ್ಲ? ಸುರುಚಿಯ ಮಗನಾದ ಆ ಉತ್ತಮನು ಶ್ರೇಷ್ಠತೆಯನ್ನು ಪಡೆದುದೆಂತು? ನಾನೂ ಅರಸನಿಗೆ ಮಗನೇ ಆಗಿದ್ದರೂ ಅನುತ್ತಮನಾದುದುದೆಂತು? ಅಮ್ಮಾ, ನೀನು ಮಂದ ಭಾಗ್ಯಳಾಗಿ ಆ ಸುರುಚಿಯು ಮಹಾಭಾಗ್ಯಶಾಲಿನಿಯಾಗಿ ಸುಕುಕ್ಷಿಯೆನಿಸಿ ದುದೆಂತು? ಸಿಂಹಾಸನವು ಉತ್ತಮನಿಗೆ ಯೋಗ್ಯವಾಗಿ ನನಗೆ ಅಲ್ಲದೆ ಹೋದುದು ಯಾವ ಕಾರಣದಿಂದಲೊ? ನನ್ನ ಪುಣ್ಯವು ತುಚ್ಛವಾಗಿ ಆ ಉತ್ತಮನ ಪುಣ್ಯವು ಉತ್ತಮವೆನಿಸೆದುದೆಂತು?"

೨೯–೩೦. ಸುನೀತಿಯು ನೀತಿವಂತನಾದ ಆ ಬಾಲಕನ ಮಾತನ್ನು ಕೇಳಿ ಸ್ವಲ್ಪ ನಿಟ್ಟುಸಿರು ಬಿಟ್ಟು, ಅವನ ಕೋಪವನ್ನು ಶಾಂತಗೊಳಿಸಲೋಸುಗ ಸ್ವಭಾವ ಮಧುರವಾದ ಮಾತುಗಳನ್ನಾಡಲು ಉಪಕ್ರಮಿಸಿದಳು. ಅವಳು ರಾಜನೀತಿಯನ್ನರಿತವರಲ್ಲಿ ಉತ್ತಮಳಾದುದರಿಂದ ಸವತಿಯ ಮೇಲಣ ಅಸೂಯೆಯನ್ನು ತೊರೆದು ಹೀಗೆಂದಳು.

೩೧. ಸುನೀತಿಯು ಹೇಳುತ್ತಾಳೆ:—"ಮಗು, ಸಮಾಧಾನ ತಂದುಕೊ.

ತಯಾ ಯದುಕ್ತಂ ತತ್ಸರ್ವಂ ತಥ್ಯಮೇವ ನ ಚಾಽನ್ಯಥಾ ।
ಸಾ ಪತ್ಯುರ್ಮಹಿಷೀ ರಾಜ್ಞೋ ರಾಜ್ಞೀನಾಮತಿವಲ್ಲಭಾ ॥ ೩೨ ॥
ತಯಾ ಜನ್ಮಾಂತರೇ ತಾತ ಯತ್ಪುಣ್ಯಂ ಸಮುಪಾರ್ಜಿತಂ ।
ತತ್ಪುಣ್ಯೋಪಚಯಾದ್ರಾಜಾ ಸುರುಚ್ಯಾಂ ಸುರುಚಿರ್ಭೃಶಂ ॥ ೩೩ ॥
ಮಾದೃಶ್ಯೋ ಮಂದಭಾಗ್ಯಾಯಾಃ ಪ್ರಮದಾ ಸುಪ್ರತಿಷ್ಠಿತಾಃ ।
ಕೇವಲಂ ರಾಜಪತ್ನೀತ್ವವಾದಸ್ತಾಸು ನ ತದ್ರುಚಿಃ ॥ ೩೪ ॥
ಮಹಾಸುಕೃತಸಂಭಾರೈರುತ್ತಮಶ್ಚೋತ್ತಮೋದರೇ ।
ಉವಾಸ ತಸ್ಯಾಃ ಪುಣ್ಯಾಯಾ ನೃಪಸಿಂಹಾಸನೋಚಿತಃ ॥ ೩೫ ॥
ಆತಪತ್ರಂ ಚ ಚಂದ್ರಾಭಂ ಶುಭೇ ಚಾಽಪಿ ಚ ಚಾಮರೇ ।
ಭದ್ರಾಸನಂ ತಥೋಚ್ಚಂ ಚ ಸಿಂಧುರಾಶ್ಚಮರೋದ್ಧುರಾಃ ॥ ೩೬ ॥
ತುರಂಗಮಾಶ್ಚ ತುರಗಾಸ್ತ್ವನಾಧಿವ್ಯಾಧಿಜೀವಿತಂ ।
ನಿಃಸಪತ್ನಂ ಶುಭಂ ರಾಜ್ಯಂ ಪ್ರಾಜ್ಯಂ ಹರಿಹರಾರ್ಚನಂ ॥ ೩೭ ॥

---

ನೀನು ಬಹಳ ಬುದ್ಧಿವಂತ. ಮನಸ್ಸನ್ನು ನಿರ್ಮಲವಾಗಿಟ್ಟುಕೊ. ನನಗೆ ಅಪಮಾನವಾಯಿತೆಂದು ಚಿಂತಿಸಲೇಬೇಡ ನಿನಗೆ ಎಲ್ಲ ವಿಷಯಗಳನ್ನೂ ತಿಳಿಸುತ್ತೇನೆ.

೩೨–೩೩. ನಿನ್ನ ಬಲತಾಯಿಯಾದ ಆ ಸುರುಚಿಯು ಹೇಳಿದುದೆಲ್ಲವೂ ದಿಟ. ಅದು ಸುಳ್ಳಲ್ಲ. ಅವಳು ಅರಸನ ಮಡದಿ, ಮಹಾರಾಣಿ. ಆತನಿಗೆ ಅತ್ಯಂತ ಪ್ರಿಯಳಾದವಳು. ವತ್ಸ, ಆ ಸುರುಚಿಯು ಜನ್ಮಾಂತರದಲ್ಲಿ ಆರ್ಜಿಸಿದ್ದ ಪುಣ್ಯದ ಫಲವಾಗಿ ಮಹಾರಾಜನು ಆಕೆಯಲ್ಲಿ ಅಷ್ಟು ಪ್ರಿಯನಾಗಿ ನಡೆದುಕೊಳ್ಳುತ್ತಿರುವನು.

೩೪. ಹೆಂಗಳೆಯರಲ್ಲಿ ನನ್ನಂತಹ ಮಂದಭಾಗ್ಯೆಯರು ಬರಿಯ ರಾಜಪತ್ನಿ ಎಂಬ ಹೆಸರಿಗೆ ಮಾತ್ರ ತಕ್ಕವರು. ಅಂಥವರಲ್ಲಿ ದೊರೆಯು ಅಷ್ಟು ಪ್ರೀತಿಯನ್ನಿಡುವುದಿಲ್ಲ.

೩೫. ಉತ್ತಮನು ಮಹಾಪುಣ್ಯಶಾಲಿಯಾದುದರಿಂದ ಪುಣ್ಯಶಾಲಿನಿಯೇ ಆದ ಆ ಸುರುಚಿಯ ಗರ್ಭದಲ್ಲಿ ಜನಿಸಿರುತ್ತಾನೆಯಾಗಿ ಸಿಂಹಾಸನಕ್ಕೆ ಅರ್ಹನೂ ಆಗಿದ್ದಾನೆ.

೩೬–೪೦. ಚಂದ್ರನಂತೆ ಬೆಳಗುವ ಬೆಳುಗೊಡೆ, ಮಂಗಳಕರವಾದ ಚಾಮರಗಳು, ಸಿಂಹಾಸನ, ಮದದಾನೆಗಳು, ವೇಗಶಾಲಿಗಳಾದ ಅಶ್ವಗಳು, ರೋಗರುಜಿನಗಳಿಲ್ಲದ ಜೀವನ, ದಾಯಾದಿಗಳಿಲ್ಲದ ಮಂಗಳಕರವಾದ ರಾಜ್ಯಭೋಗ, ಹರಿಹರಾರ್ಚನ ಭಾಗ್ಯ, ಅಪಾರವಾದ ಕಲಾಜ್ಞಾನ, ಶತ್ರುಗಳಿಂದ

ವಿಪುಲಂ ಚ ಕಲಾಜ್ಞಾನಮಧೀತಮಪರಾಜಿತಂ ।
ತಥಾ ಜಯೋಽರಿಷಡ್ವರ್ಗೇ ಸ್ವಭಾವಾತ್ಸಾತ್ವಿಕೀಮತಿಃ ॥ ೩೮ ॥
ದೃಷ್ಟಿಃ ಕಾರುಣ್ಯಸಂಪೂರ್ಣಾ ವಾಣೀ ಮಧುರಭಾಷಿಣೀ ।
ಅನಾಲಸ್ಯಂ ಚ ಕಾರ್ಯೇಷು ತಥಾ ಗುರುಜನೇ ನತಿಃ ॥ ೩೯ ॥
ಸರ್ವತ್ರ ಶುಚಿತಾ ತಾತ ಸಾ ಪರೋಪಕೃತಿಃ ಸದಾ ।
ಔರ್ಜಸ್ವಲಾಮನೋವೃತ್ತಿಃ ಸ ದೈವಾದೀನವಾದಿತಾ ॥ ೪೦ ॥
ಸದೋಽಜಿರೇಚ ಪಾಂಡಿತ್ಯಂ ಪ್ರಾಗಲ್ಭ್ಯಂ ಚ ರಣಾಂಗಣೇ ।
ಆರ್ಜವಂ ಬಂಧುವರ್ಗೇಷು ಕಾಠಿನ್ಯಂ ಕ್ರಯವಿಕ್ರಯೇ ॥ ೪೧ ॥
ಮಾರ್ದವಂ ಸ್ತ್ರೀಪ್ರಯೋಗೇಷು ವತ್ಸಲತ್ವಂ ಪ್ರಜಾಸು ಚ ।
ಬ್ರಾಹ್ಮಣೇಭ್ಯೋಽಭಯಂ ನಿತ್ಯಂ ವೃದ್ಧವೃತ್ತ್ಯುಪಜೀವನಂ ॥ ೪೨ ॥
ವಾಸೋ ಭಾಗೀರಥೀತೀರೇ ತೀರ್ಥೇ ವಾ ಮರಣಂ ರಣೇ ।
ಅಪರಾಙ್ಮುಖತಾಽರ್ಥಿಭ್ಯಃ ಪ್ರತ್ಯರ್ಥಿಭ್ಯೋ ವಿಶೇಷತಃ ॥ ೪೩ ॥

---

ಜಯಿಸಲಸಾಧ್ಯವಾದ ವಿದ್ವತ್ತು, ಅಂತೆಯೆ ಇಂದ್ರಿಯಜಯ, ಅರಿಷಡ್ವರ್ಗಾದಿಗಳ ಜಯ, ಸ್ವಾಭಾವಿಕವಾದ ಸಾತ್ತ್ವಿಕಬುದ್ಧಿ, ಕರುಣಾರಸಪೂರ್ಣವಾದ ದೃಷ್ಟಿ, ಸವಿಯಾದ ಮಾತು, ಕಾರ್ಯಗಳಲ್ಲಿ ಜಾಗರೂಕತೆ, ಗುರುಭಕ್ತಿ, ಎಲ್ಲೆಡೆಗಳಲ್ಲಿಯೂ ಪರಿಶುದ್ಧವಾಗಿರುವಿಕೆ, ಸತತವೂ ಪರೋಪಕೃತಿಯನ್ನೆಸಗುವುದು, ಉದಾರವಾದ ಬುದ್ಧಿ, ಯಾವಾಗಲೂ ಕುಗ್ಗದೆ ಧೈರ್ಯವಾಗಿ ನುಡಿಯುವುದು, ಸಭಾಂಗಣಗಳಲ್ಲಿ ಪಾಂಡಿತ್ಯ, ರಣಾಂಗಣದಲ್ಲಿ ಪರಾಕ್ರಮ, ಪಂಡಿತರ ವಿಷಯದಲ್ಲಿ ಋಜುವಾಗಿರುವಿಕೆ ಮತ್ತು ಉದಾರವಾಗಿ ನಡೆದುಕೊಳ್ಳುವುದು, ಪದಾರ್ಥಗಳ ಕ್ರಯವಿಕ್ರಯಗಳ ವಿಷಯದಲ್ಲಿ ನಿರುಕಾಗಿರುವುದು, ಹೆಂಗಸರ ಸಂಬಂಧವಾದ ವಿಚಾರಗಳಲ್ಲಿ ಮೃದುವಾಗಿರುವಿಕೆ, ಪ್ರಜಾವಾತ್ಸಲ್ಯ, ಬ್ರಾಹ್ಮಣರಲ್ಲಿ ಭಯಭಕ್ತಿ, ಸದಾಚಾರಸಂಪನ್ನರಾದ ವೃದ್ಧರನ್ನು ಅನುವರ್ತಿಸಿ ನಡೆಯುವುದು, ಗಂಗಾತೀರದಲ್ಲಿ ವಾಸ, ತೀರ್ಥ ಅಥವಾ ರಣಾಂಗಣಗಳಲ್ಲಿಯ ಮರಣ, ಅರ್ಥಿಗಳಿಗೂ ಅದರಲ್ಲಿಯೂ ಶತ್ರುಗಳಿಗೂ ಹಿಮ್ಮೊಗನಾಗದಿರುವುದು, ಪರಿಜನರೊಡಗೂಡಿ ಭೋಗಪಡುವುದು, ದಾನವಿಲ್ಲದೆ ದಿನವನ್ನು ಕಳೆಯದಿರುವುದು, ಅನುದಿನವೂ ವಿದ್ಯೆಯಲ್ಲಿ ಆಸಕ್ತಿಯಿರುವುದು, ಗುರುಹಿರಿಯರ ಸೇವೆ, ಪ್ರತಿನಿತ್ಯವೂ ಯಶಸ್ಸನ್ನೂ ಧರ್ಮವನ್ನೂ ಆರ್ಜಿಸುವುದು, ಸ್ವರ್ಗಮೋಕ್ಷಗಳ ಸಿದ್ಧಿ, ಸತತವೂ ಶೀಲವನ್ನು ಕಾಯ್ದುಕೊಳ್ಳುವುದು, ಸತ್ಸಹವಾಸ, ತಂದೆಯ ಸ್ನೇಹಿತರೊಡನೆ ಮೈತ್ರಿಯನ್ನು ಬೆಳಸುವುದು, ಸತತವೂ ಇತಿಹಾಸಪುರಾಣಗಳನ್ನು ಕೇಳುವುದರಲ್ಲಿ ಉತ್ಸಾಹ, ಆಪತ್ತಿನಲ್ಲಿಯೂ ಧೈರ್ಯವಾಗಿರುವುದು, ಅಪರಿಮಿತವಾದ ಸಂಪತ್ತು

ಭೋಗಃ ಪರಿಜನೈಃ ಸಾರ್ಧಂ ದಾನಾವಂಧ್ಯದಿನಾಗಮಃ ।
ವಿದ್ಯಾವ್ಯಸನಿತಾ ನಿತ್ಯಂ ನಿತ್ಯಂ ಪಿತ್ರೋರುಪಸ್ಥಿತಿಃ ॥ ೪೪ ॥
ಯಶಸಃ ಸಂಚಯೋ ನಿತ್ಯಂ ನಿತ್ಯಂ ಧರ್ಮಸ್ಯ ಸಂಚಯಃ ।
ಸ್ವರ್ಗಾಽಪವರ್ಗಯೋಃ ಸಿದ್ಧಿಃ ಸದಾ ಶೀಲಸ್ಯ ಮಂಡನಂ ॥ ೪೫ ॥
ಸದ್ಭಿಶ್ಚ ಸಂಗತಿರ್ನಿತ್ಯಂ ಮೈತ್ರೀ ಚ ಪಿತೃಮಿತ್ರಕೈಃ ।
ಇತಿಹಾಸ ಪುರಾಣಾನಾಮುತ್ಕಂಠಾ ಶ್ರವಣೇ ಸದಾ ॥ ೪೬ ॥
ವಿಪದ್ಯಪಿ ಪರಂ ಧೈರ್ಯಂ ಸ್ಥೈರ್ಯಂ ಸಂಪತ್ಸಮಾಗಮೇ ।
ಗಾಂಭೀರ್ಯಂ ವಾಗ್ವಿಲಾಸೇಷು ಔದಾರ್ಯಂ ಪಾತ್ರಪಾಣಿಷು ॥ ೪೭ ॥
ದೇಹೇ ಪರೈಕಾ ಕೃಶತಾ ತಪೋಭಿರ್ನಿಯಮೈರ್ಯಮೈಃ ।
ಏತೈರ್ಮನೋರಥಫಲೈಃ ಫಲಂತ್ಯೇವ ತಪೋದ್ರುಮಾಃ ॥ ೪೮ ॥
ತಸ್ಮಾದಲ್ಪತಪಸ್ತ್ವಾದ್ವೈ ತ್ವಂ ಚಾಽಹಂ ಚ ಮಹಾಮತೇ ।
ಪ್ರಾಪ್ಯಾಽಪಿ ರಾಜಸಾನ್ನಿಧ್ಯಂ ರಾಜಲಕ್ಷ್ಮ್ಯಾ ನ ಭಾಜನಂ ॥ ೪೯ ॥
ಮಾನಾಽಪಮಾನಯೋಸ್ತಸ್ಮಾತ್ಸ್ವಕೃತಂ ಕಾರಣಂ ಪರಂ ।
ಸ್ರಷ್ಟ್ವಾಽಪಿ ನಾಽಪಮಾರ್ಷ್ಟುಂ ತತ್ಪರೀಷ್ಟೇ ಸ್ವಕೃತಾಂ ಕೃತಿಂ ।
ಮಾಶೋಚಸ್ತ್ವಮತಃ ಪುತ್ರ ದಿಷ್ಟಮಿಷ್ಟಂ ಸಮರ್ಪಯೇತ್ ॥ ೫೦ ॥
ಇತ್ಯಾಕರ್ಣ್ಯ ಸುನೀತ್ಯಾಸ್ತನ್ಮಹಾವಾಕ್ಯಂ ಸುನೀತಿಮತ್ ।
ಸೌನೀತೇಯೋ ಧ್ರುವೋ ವಾಚಮಾದದೇ ವಕ್ತುಮುತ್ತರಂ ॥ ೫೧ ॥

---

ಲಭಿಸಿದಾಗ ಸ್ಥೈರ್ಯವಾಗಿರುವುದು, ಮಾತನಾಡುವುದರಲ್ಲಿ ಯಾವಾಗಲೂ ಗಂಭೀರವಾಗಿರುವುದು, ಯಾಚಕರಲ್ಲಿ ಔದಾರ್ಯದಿಂದ ನಡೆಯುವುದು, ಪರೋಪಕಾರಕ್ಕಾಗಿಯೇ ದೇಹವನ್ನು ಸವೆಸುವುದು, ಇಲ್ಲವೆ ತಪಸ್ಸು ಯಮ ನಿಯಮಗಳಿಂದ ದೇಹವನ್ನು ಕೃಶವಾಗಿಸುವುದು—ಈ ಮೊದಲಾದ ಮನೋರಥ ಫಲಗಳೆಲ್ಲವನ್ನೂ ತಪೋವೃಕ್ಷಗಳು ಕೊಡುತ್ತವೆ. ಎಲೈ ಮಹಾಮತಿಯೆ, ನಾನೂ ನೀನೂ ಇಬ್ಬರೂ ರಾಜಸನ್ನಿಧಿಯನ್ನು ಸೇರಿದ್ದರೂ ಆ ಮಹಾಭಾಗ್ಯ ವನ್ನು ಅನುಸರಿಸದಿರುವುದು ಅಲ್ಪ ತಪಸ್ಸನ್ನು ಮಾಡಿರುವುದರಿಂದಲೆ ಎಂದು ತಿಳಿದುಕೊ. ಮಾನಾಪಮಾನಗಳೆರಡಕ್ಕೂ ಬಲವಾದ ಕಾರಣವೆಂದರೆ ಸ್ವಕೃತವೇ ಆದುದರಿಂದ ಬ್ರಹ್ಮನೂ ಸ್ವಕೃತವಾದ ಕೃತಿಯನ್ನು ಅಳಿಸಿಹಾಕಲು ಸಮರ್ಥ ನಾಗುವುದಿಲ್ಲ. ಆದುದರಿಂದ ಎಲೈ ಮಗುವೆ, ಇದಕ್ಕಾಗಿ ನೀನು ಶೋಕಿಸಬೇಡ. ಅದೃಷ್ಟವೆಂಬುದು ಏನನ್ನಾದರೂ ಕೊಡಬಲ್ಲುದು.

೫೧. ಈ ಪ್ರಕಾರವಾಗಿ ನೀತಿಯನ್ನನುಸರಿಸಿ ನುಡಿದ ಆ ಸುನೀತಿಯ ಮಹಾ ವಾಕ್ಯವನ್ನು ಕೇಳಿ ಅವಳ ಮಗನಾದ ಧ್ರುವನು ಅದಕ್ಕೆ ಉತ್ತರವನ್ನು ಕೊಡತೊಡಗಿದನು.

ಧ್ರುವ ಉವಾಚ :—

ಜನಯಿತ್ರಿ ಸುನೀತೇ ಮೇ ಶೃಣು ವಾಕ್ಯಮನಾಕುಲಂ ।
ಮಾ ಬಾಲ ಇತಿ ಮತ್ವಾ ಮಾಮವಮಂಸ್ಥಾಸ್ತಪಸ್ವಿನಿ ॥ ೫೨ ॥
ಯದ್ಯಹಂ ಮಾನವೇ ವಂಶೇ ಜಾತೋಽಸ್ಮ್ಯತ್ಯಂತಪಾವನೇ ।
ಉತ್ತಾನಪಾದತನಯಸ್ತ್ವದೀಯೋದರಸಂಭವಃ ॥ ೫೩ ॥
ತಪ ಏವಹಿ ಚೇನ್ಮಾತಃ ಕಾರಣಂ ಸರ್ವಸಂಪದಾಂ ।
ತತ್ತದಾಸಾದಿತಂ ವಿದ್ಧಿ ಪದಮನ್ಯೈರ್ದುರಾಸದಂ ॥ ೫೪ ॥
ಏಕಮೇವಹಿ ಸಾಹಾಯ್ಯಂ ಕುರು ಮಾತರತಂದ್ರಿತಾ ।
ಅನುಜ್ಞಾದಾನಮಾತ್ರಂ ಚ ಆಶೀರ್ಭಿರಭಿನಂದಯ ॥ ೫೫ ॥
ಸಾಽಪಿ ಜ್ಞಾತ್ವಾ ಮಹಾವೀರ್ಯಂ ಕುಮಾರಂ ಕುಕ್ಷಿಸಂಭವಂ ।
ಮಹತ್ಯೋತ್ಸಾಹಸಂಪತ್ಯಾ ರಾಜಮಾನಮುವಾಚ ತಂ ॥ ೫೬ ॥
ಅನುಜ್ಞಾತುಂ ನ ಶಕ್ತಾಽಹಂ ತ್ವಾಮುತ್ತಾನಶಯಾಽಂಗಜ ।
ಸಾಷ್ಟೈಕವರ್ಷದೇಶೀಯಸ್ತ್ವಥಾಽಪಿ ಕಥಯಾಮ್ಯಹಂ ॥ ೫೭ ॥

---

೫೨. ಧ್ರುವನು ಹೇಳುತ್ತಾನೆ:—"ಅಮ್ಮಾ, ಸುನೀತಿಯೆಂಬ ನಿನ್ನ ಹೆಸರಿಗೆ ತಕ್ಕಂತೆ ನೀನು ಎಲ್ಲ ನೀತಿಗಳನ್ನೂ ಅರಿತವಳು. ಈಗ ನಾನಾಡುವ ಮಾತುಗಳನ್ನು ಯಾವ ತಳಮಳವೂ ಇಲ್ಲದೆ ಕೇಳು. ಓ ತಪಸ್ವಿನೀ, ನಾನು ಕೇವಲ ಬಾಲಕನೆಂದು ನನ್ನನ್ನು ಅವಮಾನಗೊಳಿಸಬೇಡ.

೫೩–೫೪. ನಾನು ಪಾವನವಾದ ಮನು ವಂಶದವನೇ ಆಗಿ, ಉತ್ತಾನಪಾದರಾಯನ ಮಗನಾಗಿ, ನಿನ್ನ ಹೊಟ್ಟೆಯಲ್ಲಿ ಹುಟ್ಟಿರುವುದೇ ದಿಟವಾಗಿದ್ದರೆ, ನೀನು ಹೇಳುವಂತೆ ಸಮಸ್ತ ಸಂಪತ್ತುಗಳಿಗೂ ತಪಸ್ಸೇ ಮೂಲಕಾರಣವಾಗಿರುವುದಾದರೆ, ಇತರರಾರಿಂದಲೂ ಹೊಂದಲಸದಳವೆನಿಸಿದ ಆ ಸಂಪತ್ತು ಸಾಧಿತವಾಯಿತೆಂದೇ ತಿಳಿದುಕೊ.

೫೫. ತಾಯೆ, ಆದರೆ ನೀನು ಮಾತ್ರ ನನಗೊಂದು ಸಹಾಯವನ್ನು ಮಾಡಬೇಕು. ನನಗೆ ಹೋಗಿಬಾರೆಂದು ಅಪ್ಪಣೆಯಿತ್ತು ಆಶೀರ್ವದಿಸಿ ಸಂತೋಷವಾಗಿ ಕಳುಹಿಸಿಕೊಡು."

೫೬. ಧ್ರುವನು ಇಂತು ನುಡಿಯಲು, ಆ ಸುನೀತಿಯು ಸಹ ತನ್ನ ಮಗನಾದ ಆ ಕುಮಾರನ ಮಹಾ ಧೈರ್ಯವನ್ನು ಅರಿತುಕೊಂಡು, ಅತಿಶಯವಾದ ಉತ್ಸಾಹವು ತುಂಬಿಬರಲು ರಾಜಗೌರವಕ್ಕೆ ತಕ್ಕಂತೆ ಅವನನ್ನು ಕುರಿತು ಇಂತು ನುಡಿದಳು.

೫೭–೬೨. "ಎಲೈ ಉತ್ತಾನಪಾದಕುಮಾರನೆ, ನಿನಗೆ ಅನುಜ್ಞೆಯನ್ನು ಕೊಡಲು ನಾನು ಸಮರ್ಥಳಾಗಿಲ್ಲ. ನೀನಿನ್ನೂ ಎಂಟೇ ವರ್ಷದ ಹುಡುಗ

ಸಪತ್ನೀವಾಕ್ಯಭಲ್ಲೀಭಿರ್ಭಿನ್ನೇ ಮಹತಿ ಮೇ ಹೃದಿ ।
ತವ ಬಾಷ್ಪೌಘವಾರೀಣಿ ನ ತಿಷ್ಠಂತಿ ಕರೋಮಿ ಕಿಂ ॥ ೫೮ ॥
ತಾನಿ ಮನ್ಯೇಽತ್ರ ಮಾರ್ಗೇಣ ಸ್ರವಂತ್ಯವಿರತಂ ಶಿಶೋ ।
ಸ್ರವಂತೀಶ್ಚ ಚಿಕೀರ್ಷಂತಿ ಪ್ರತಿಕೂಲಜಲಾಃ ಕಿಲ ॥ ೫೯ ॥
ತ್ವದೇಕತನಯಾ ತಾತ ತ್ವದಾಧಾರೈಕಜೀವಿತಾ ।
ತ್ವಮಂಗಯಷ್ಟಿರಸಿ ಮೇ ತ್ವನ್ಮುಖಾಸಕ್ತಲೋಚನಾ ॥ ೬೦ ॥
ಲಬ್ಧೋಽಸಿ ಕತಿಭಿಃ ಕಷ್ಟೈರಿಷ್ಟಾಃ ಸಂಪ್ರಾರ್ಥ್ಯ ದೇವತಾಃ ।
ತ್ವನ್ಮುಖೇಂದೂದಯೇ ತಾತ ಮನ್ಮನಃ ಕ್ಷೀರನೀರಧಿಃ ॥ ೬೧ ॥
ಆನಂದಪಯಸಾ ಪೂರ್ಯ ಕುಚಾವುದ್ವೇಲಿತೋ ಭವೇತ್ ।
ತ್ವದಂಗಸಂಗಸಂಭೂತಸುಖಸಂದೋಹಶೀತಲಾ ॥ ೬೨ ॥
ಸುಖಂ ಶಯೇ ಸುಶಯನೇ ಪ್ರಾವೃತ್ಯ ಪುಲಕಾಂಬರಂ ।
ಅಪ್ಯೋಽಥ ಸಮುಪಸ್ಪೃಶ್ಯ ತಾಂಬೂಲಂ ಪರಿಗೃಹ್ಯ ಚ ॥ ೬೩ ॥
ತ್ವದಾಸ್ಯಸ್ಯೋಷ್ಠಪುಟಕದುಗ್ಧವಾರ್ಧಿವಿವರ್ಧಿತಾಂ ।
ಸುಧಾಂ ಸುಧಾಂಶುವದನ ಧಯಂತ್ಯಪಿ ಧಿನೋಮಿ ನ ॥ ೬೪ ॥

---

ನಾದರೂ ಹೇಳುತ್ತೇನೆ ಕೇಳು ಸವತಿಯ ಭಲ್ಲಾಯುಧಗಳಂತಿರುವ ಈ ಮಾತುಗಳಿಂದ ನನ್ನ ಎದೆಯೇ ಒಡೆದು ಭಿನ್ನವಾಗಿಹೋಗಿದೆ. ಅದರಲ್ಲಿ ನಿನ್ನ ಕಂಬನಿಗಳು ನಿಲ್ಲಲಾರದೆ ಹೋಗಿವೆ. ನಾನೇನು ಮಾಡಲಿ? ಮಗು, ಆ ಕಂಬನಿಗಳು ಈ ಮಾರ್ಗವಾಗಿ ತಡೆಯಿಲ್ಲದೆ ಹರಿದುಬರುತ್ತಿವೆ. ಹಾಗೆ ಹರಿದುಬರುತ್ತಿರುವ ಕಂಬನಿಯ ಹೊಳೆಯನ್ನು ತಡೆಗಟ್ಟಲು ಪ್ರತಿಕೂಲ ಜಲವೇ ಸಮರ್ಥವಾದುದಷ್ಟೆ. ನನಗಿರುವವನು ನೀನೊಬ್ಬನೇ ಮಗನು. ನಿನ್ನನ್ನವಲಂಬಿಸಿಯೇ ನಾನು ಬದುಕಿರುವುದು. ನೀನೇ ನನ್ನ ಮೈಯಾಗಿರುವೆ. ನೀನೇ ನನ್ನ ಊರುಗೋಲು. ನಾನು ಯಾವಾಗಲೂ ನಿನ್ನನ್ನು ನೋಡಿಕೊಂಡೆ ಕಾಲಹಾಕುತ್ತಿದ್ದೇನೆ. ಅನೇಕ ಕಷ್ಟಗಳನ್ನು ಪಟ್ಟು ಹಲವು ಮಂದಿ ಇಷ್ಟದೇವತೆಗಳನ್ನು ಪ್ರಾರ್ಥಿಸಿ ನಿನ್ನನ್ನು ಪಡೆದೆನು. ಮಗುವೆ, ನಿನ್ನ ಮುಖಚಂದ್ರನ ಉದಯವಾಗುತ್ತಲೆ ನನ್ನ ಮನಸ್ಸೆಂಬ ಕ್ಷೀರಸಾಗರವು ಆನಂದಜಲದಿಂದ ತುಂಬಿ ಎದೆಯುಬ್ಬಿಹೋಯಿತು. ನಿನ್ನ ಮೆಯ್ಯ ಸಂಪರ್ಕದಿಂದ ನನ್ನ ಶರೀರಾದ್ಯಂತವೂ ಆನಂದದಿಂದ ಶೀತಳವಾಗುವುದು.

೬೩–೬೪. ಬಾಯಿ ತೊಳೆದುಕೊಂಡು ತಾಂಬೂಲವನ್ನು ಸೇವಿಸಿ ಸುಪ್ಪತ್ತಿಗೆಯಲ್ಲಿ ಹೊದೆದುಕೊಂಡು ನಿನ್ನ ಮುಖಚಂದ್ರಸಂಪುಟದ ಸುಧಾಸಮುದ್ರದಿಂದ ಉಕ್ಕಿಬರುವ ಸುಧೆಯನ್ನು ಎಷ್ಟು ಪಾನಮಾಡಿದರೂ ರೋಮಾಂಚಗೊಂಡ ನಾನು ತೃಪ್ತಿಯನ್ನೇ ಪಡೆಯುವುದಿಲ್ಲ.

ತ್ವದೀಯಃ ಶೀತಲಾಲಾಪಃ ಪ್ರಾಪ ಶ್ರುತಿಪಥಂ ಯದಾ ।
ಸಪತ್ನೀವಾಕ್ಯದವಥುಸ್ತದೈವ ಸ್ಯಾತ್ಸವೇಪಥುಃ ॥ ೬೫ ॥
ಯದಂಗ ನಿದ್ರಾಸಿ ಚಿರಂ ಧ್ಯಾಯಂತ್ಯಸ್ಮಿ ತದೇತ್ಯಹಂ ।
ಕದಾ ನಿದ್ರಾದರಿದ್ರೋಽಸೌ ಭವಿತಾಽರ್ಕೋದಯೇಽಬ್ಜವತ್ ॥ ೬೬ ॥
ಯದೋಪೇಯಾ ಗೃಹಾನ್ವತ್ಸ ಖೇಲಿತ್ವಾ ಬಾಲಖೇಲನೈಃ ।
ತದಾನರ್ಘ್ಯಾರ್ಘ್ಯಮುತ್ಸ್ರಷ್ಟುಂ ಸ್ತನೌ ಸ್ಯಾತಾಮಿವೋನ್ಮುಖೌ ॥ ೬೭ ॥
ಯದಾ ಸೌಧಾದ್ವಿನಿರ್ಯಾಯಾಃ ಪದ್ಮರೇಖಾಂಕಿತಂ ಪದಂ ।
ಪ್ರಾಣಾನಾಂ ತೇ ಯಿಯಾಸೂನಾಂ ತದಾ ತದವಲಂಬನಂ ॥ ೬೮ ॥
ಯದಾ ಯದಾ ಬಹಿರ್ಯಾಸಿ ಪುತ್ರ ತ್ರಿಚತುರಂ ಪದಂ ।
ತದಾ ತದಾ ಮಮ ಪ್ರಾಣಃ ಕಂಠಪ್ರಾಘುಣಿಕೀ ಭವೇತ್ ॥ ೬೯ ॥
ಚಿತ್ರಂ ಪುತ್ರ ತ್ವರಯತಿ ಯಾತುಂ ಮೇ ಮಾನಸಾಂಡಜಃ ।
ಸುಧಾಧಾರಾಧರ ಇವ ಬಹಿಶ್ಚಿರಯತಿ ತ್ವಯಿ ॥ ೭೦ ॥

---

೬೫. ನಿನ್ನ ಶೀತಲವಾದ ಮಧುರಾಲಾಪವನ್ನು ಕೇಳುವ ಸಮಯದಲ್ಲಿ ಸವತಿಯ ಕೆಡುನುಡಿಗಳಿಂದುಂಟಾದ ನಡುಕವು ಮಾಯವಾಗಿ ಅದೇ ರೋಮಾಂಚವೆನಿಸುತ್ತದೆ.

೬೬. ಮಗನೆ ನೀನು ಬಹಳ ಹೊತ್ತು ಮಲಗಿ ನಿದ್ರಿಸಿದರೆ, 'ಮಗುವು ಎಷ್ಟುಹೊತ್ತಿಗೆ ನಿದ್ರೆಕಳೆದು ಸೂರ್ಯೋದಯ ಕಾಲದಲ್ಲಿನ ಕಮಲದಂತೆ ಎಚ್ಚೆತ್ತು ಅರಳಿ ನಗುವನೊ' ಎಂದೇ ಯೋಚಿಸುತ್ತಿರುತ್ತೇನೆ.

೬೭. ವತ್ಸ, ನೀನು ಮಕ್ಕಳಾಟದಲ್ಲಿ ತೊಡಗಿದ್ದು ಮನೆಗೆ ಹಿಂತಿರುಗಿದಾಗ ನಿನಗೆ ಅಮೂಲ್ಯವಾದ ಅರ್ಘ್ಯವನ್ನು ಕೊಡಲೋಸುಗವೊ ಎಂಬಂತೆ ನನ್ನ ಕುಚ ಚೂಚಕಗಳು ಉನ್ಮುಖಗಳಾಗಿ ಹಾಲೆರಚುತ್ತ ನಿಲ್ಲುವುವು.

೬೮. ಮಗುವೆ, ನೀನು ರಾಜಭವನದಿಂದ ಹೊರಕ್ಕೆ ಹೋದಾಗ, ಧೂಳಿರುವ ಪ್ರದೇಶಗಳಲ್ಲಿ ಅಚ್ಚೊತ್ತಿದಂತೆ ಬಿದ್ದಿರುವ ನಿನ್ನ ಕಮಲರೇಖಾಂಕಿತವಾದ ಕಾಲ ಗುರುತುಗಳೇ ನನ್ನ ಬಾಳಿನ ಅವಲಂಬನವೆನಿಸುತ್ತವೆ.

೬೯. ಪುತ್ರ, ಯಾವಯಾವ ಸಮಯಗಳಲ್ಲಿ ನೀನು ಮೂರು ನಾಲ್ಕು ಅಡಿಗಳನ್ನಿಟ್ಟು ಮುಂದೆ ಹೋಗುವೆಯೊ ಆ ಸಮಯಗಳೆಲ್ಲ ನನ್ನ ಪ್ರಾಣವು ಮೇಲಕ್ಕೆ ಹತ್ತಿಬರುತ್ತದೆ.

೭೦. ಮಗನೆ, ನೀನು ಹೊರಗಿದ್ದು ಬಹಳ ತಡಮಾಡಿದ್ದಲ್ಲಿ ನನ್ನ ಮನಸ್ಸೆಂಬ ಚಕೋರವು ಅಮೃತ ಧಾರೆಯನ್ನು ಧರಿಸಿರುವ ಚಂದ್ರನನ್ನು ಕುರಿತು ಎಂತೊ ಅಂತು ಹಾರಿಹೋಗಲು ತವಕಿಸುತ್ತದೆ.

ಅಥ ತಿಷ್ಠಂತು ಕಠಿನಾಃ ಪ್ರಾಣಾಃ ಕಂಠಾಽಟವೀ ತಟೇ ।
ತಪಸ್ಯಂತೋಽತಿಸಂತಪ್ತಾಸ್ತಪಸೇ ತ್ವಯಿ ಯಾಸ್ಯತಿ ॥ ೭೧ ॥
ಇತ್ಯನುಜ್ಞಾಮನುಪ್ರಾಪ್ಯ ಜನನೀ ಚರಣಾಂಬುಜೌ ।
ಕ್ಷಣಂ ಮೌಲಿಜಜಂಬಾಲಜಡೌ ಕೃತ್ವಾ ಧ್ರುವೋ ಯಯೌ ॥ ೭೨ ॥
ತಯಾಽಪಿ ಧೈರ್ಯಸೂತ್ರೇಣ ಸುನೀತ್ಯಾ ಪರಿಗುಂಫ್ಯ ಚ ।
ನೇತ್ರೇಂದೀವರಜಾ ಮಾಲಾ ಧ್ರುವಸ್ಯೋಪಾಯನೀ ಕೃತಾ ॥ ೭೩ ॥
ಮಾತ್ರಾ ತನ್ಮಾರ್ಗರಕ್ಷಾರ್ಥಂ ತದಾ ತದನುಗೀಕೃತಾಃ ।
ಪರೈರವಾರ್ಯಪ್ರಸರಾಃ ಸ್ವಾಶೀರ್ವಾದಾಃ ಪರಃಶತಾಃ ॥ ೭೪ ॥
ಸ್ವಸೌಧಾತ್ಸವಿನಿರ್ಗತ್ಯ ಬಾಲೋಽಬಾಲಪರಾಕ್ರಮಃ ।
ಅನುಕೂಲೇನ ಮರುತಾ ದರ್ಶಿತಾಽಧ್ವಾಽವಿಶದ್ವನಂ ॥ ೭೫ ॥
ಸಮುರುತ್ತರುಶಾಖಾಗ್ರ ಪ್ರಸಾರಣಮಿಷೇಣ ಸಃ ।
ಕೃತಾಹೂತಿರಿವ ಪ್ರೇಮ್ಣಾ ವನೇನ ವನಮಾವಿಶತ್ ॥ ೭೬ ॥

---

೭೧ ಹೇಗಾದರೂ ಆಗಲಿ, ನೀನು ತಪಸ್ಸಿಗೆಂದು ಹೊರಟುಹೋದ ಬಳಿಕ ಬಹಳವಾಗಿ ಸಂತಪಿಸಿ ಬಳಲುವ ಕಠಿನವಾದ ಈ ನನ್ನ ಪ್ರಾಣಗಳು ಕುತ್ತಿಗೆ ಯೆಂಬ ಕಾಡಿನ ಅಂಚಿನಲ್ಲಿ ಹೇಗಾದರೂ ಕಾದು ಕುಳಿತಿರಲಿ. ನೀನು ಹೋಗಿಬಾ.''

೭೨. ಅಯ್ಯಾ ಶಿವಶರ್ಮನ, ಹೀಗೆ ಆ ಧ್ರುವನು ತಾಯಿಯಾದ ಸುನೀತಿಯ ಅಪ್ಪಣೆಯನ್ನು ಪಡೆದು, ಆಕೆಯ ತಾವರೆಯಡಿಗಳಲ್ಲಿ ಮಂಡೆ ಯನ್ನಿಟ್ಟು ಒಂದು ಕ್ಷಣಕಾಲ ಅವುಗಳನ್ನು ಜಡವಾಗಿಸಿ, ಆ ತರುವಾಯ ಹೊರಟನು.

೭೩. ಆ ಸಮಯದಲ್ಲಿ ಸುನೀತಿಯೂ ಸಹ ಧೈರ್ಯವೆಂಬ ದಾರದಲ್ಲಿ ಕಣ್ಣುಗಳೆಂಬ ಕನ್ನೈದಿಲೆಗಳಿಂದ ಹುಟ್ಟಿದ ಅಶ್ರುಬಿಂದುಗಳನ್ನು ಪೋಣಿಸಿ ಮಾಲೆಯನ್ನು ಮಾಡಿ ಆ ಧ್ರುವನಿಗೆ ಉಪಾಯನವನ್ನಾಗಿ ಕೊಟ್ಟಳು.

೭೪. ಮಾರ್ಗದಲ್ಲಿ ಆ ಮಗುವಿನ ರಕ್ಷೆಗಾಗಿ ಆ ತಾಯಿಯು ಇತರರಾ ರಿಂದಲೂ ಪಡೆಯಲಸದಳವಾದ ಉತ್ತಮೋತ್ತಮವಾದ ನೂರಾರು ಆಶಿಷಗಳನ್ನು ಒಡನಾಡಿಗಳನ್ನಾಗಿ ಕಳುಹಿಸಿಕೊಟ್ಟಳು.

೭೫. ಹುಡುಗನಾದರೂ ಆ ವಯಸ್ಸಿಗೆ ಮೀರಿದ ಪರಾಕ್ರಮವುಳ್ಳ ಧ್ರುವನು ಅರಮನೆಯಿಂದ ಹೊರಟು ಅನುಕೂಲವಾದ ಗಾಳಿಯಿಂದ ದಾರಿಯನ್ನರಿತು ವನವನ್ನು ಪ್ರವೇಶಿಸಿದನು.

೭೬. ಆ ಮಲಯಮಾರುತವು ಅತ್ತಿತ್ತ ಅಲುಗಾಡುತ್ತಿರುವ ಕೊಂಬೆಮುದಿ ಗಳಿಂದ ಪ್ರೇಮವನ್ನು ಸೂಚಿಸಿ ಆಹ್ವಾನವೀಯುತ್ತಿರುವುದೊ ಎಂಬಂತೆ ತೋರು ತ್ತಿರಲು ಆ ಕುಮಾರನು ಕಾಡಿಂದ ಕಾಡಿಗೆ ಮುಂದೆ ನಡೆದನು.

ಸ ಮಾತೃದೈವತೋಽಭಿಜ್ಞಃ ಕೇವಲಂ ರಾಜವರ್ತ್ಮನಿ ।
ನ ವೇದ ಕಾನನಾಽಧ್ವಾನಂ ಕ್ಷಣಂ ದಧ್ಯೌ ನೃಪಾತ್ಮಜಃ ॥ ೭೭ ॥
ಯಾವದುನ್ಮೀಲ್ಯ ನಯನೇ ಪುರಃ ಪಶ್ಯತಿ ಸ ಧ್ರುವಃ ।
ತಾವದ್ದದರ್ಶ ಸಪ್ತರ್ಷೀನತರ್ಕಿತಗತೀನ್ವನೇ ॥ ೭೮ ॥
ಬಾಲಿಶೇಷ್ವಸಹಾಯೇಷು ಭವೇದ್ಭಾಗ್ಯಂ ಸಹಾಯಕೃತ್ ।
ಅರಣ್ಯಾನ್ಯಾಂ ರಣೇ ಗೇಹೇ ತತೋ ಭಾಗ್ಯಂ ಹಿ ಕಾರಣಂ ॥ ೭೯ ॥
ಕ್ವ ರಾಜತನಯೋ ಬಾಲೋ ಗಹನಂ ಕ್ವ ಚ ತದ್ವನಂ ।
ಬಲಾತ್ಸ್ವಸಾತ್ಪ್ರಕುರ್ವತ್ಯೈ ನಮಸ್ತೇ ಭವಿತವ್ಯತೇ ॥ ೮೦ ॥
ಯತ್ರ ಯಸ್ಯ ಹಿ ಯದ್ಭಾವ್ಯಂ ಶುಭಂ ವಾಽಶುಭಮೇವ ಚ ।
ಆಕೃಷ್ಯ ಭಾವಿನೀರಜ್ಜುಸ್ತತ್ರ ತಸ್ಯ ಹಿ ದಾಪಯೇತ್ ॥ ೮೧ ॥
ಅನ್ಯಥಾ ವಿದಧಾತ್ಯೇಷ ಮಾನವೋ ಬುದ್ಧಿವೈಭವಾತ್ ।
ಭಗವತ್ಯಾ ಭವಿತ್ರ್ಯಾಽಸೌ ವಿದಧ್ಯಾದ್ವಿಧಿರನ್ಯಥಾ ॥ ೮೨ ॥

---

೭೭. ತಾಯಿಯೇ ದೇವತೆಯೆಂದು ಅರಿತಿದ್ದವನೂ ಕೇವಲ ರಾಜಬೀದಿಗಳಲ್ಲಿ ಮಾತ್ರ ನಡೆಯಲು ಬಲ್ಲವನೂ ಆದ ಆ ಬಾಲಕನು ಕಾಡುದಾರಿಯನ್ನರಿಯದೆ ಒಂದು ಕ್ಷಣಕಾಲ ಅಂತೆಯೆ ಕಣ್ಣುಮುಗಿದು ಯೋಚಿಸುತ್ತ ನಿಂತನು.

೭೮. ತರುವಾಯ ಅವನು ಕಣ್ಣುಬಿಟ್ಟು ತನ್ನ ಮುಂಗಡೆಯೆ ವನಸಂಚಾರದಲ್ಲಿ ತಡೆಯಿಲ್ಲದ ನಡೆಯುಳ್ಳವರಾದ ಗೌತಮಾದಿ ಸಪ್ತರ್ಷಿಗಳನ್ನು ಕಂಡನು.

೭೯. ಮಹಾರಣ್ಯಗಳಲ್ಲಿಯಾಗಲಿ ರಣಭೂಮಿಗಳಲ್ಲಿಯಾಗಲಿ ಮನೆಯಲ್ಲಿಯೆ ಆಗಲಿ ಶ್ರೇಯಸ್ಸುಂಟಾಗಲು ಸರ್ವರಿಗೂ ಭಾಗ್ಯವೇ ಮೂಲಕಾರಣ. ಅಸಹಾಯರಾದ ಅಜ್ಞಜನರಿಗೂ ಸಹಾಯವನ್ನೆಸಗುವುದು ಭಾಗ್ಯವೇ.

೮೦. ಕೇವಲ ಬಾಲಕನಾದ ಆ ರಾಜಕುಮಾರನೆಲ್ಲಿ? ಗಹನವಾದ ಆ ಕಾಡೆಲ್ಲಿ? ಅದು ಎಂಥವನನ್ನಾದರೂ ಬಲಾತ್ಕಾರವಾಗಿ ತನ್ನ ವಶವಾಗಿಸಿಕೊಳ್ಳುತ್ತದೆ. ಓ ಭವಿತವ್ಯತೆಯೆ, ನಿನಗೆ ನಮೋ ನಮಃ!

೮೧. ಯಾವನಿಗೆ ಒಳ್ಳೆಯದಾಗಲಿ ಕೆಟ್ಟದಾಗಲಿ ಎಲ್ಲಿ ಆಗಬೇಕಾಗಿದೆಯೊ ಅಲ್ಲಿ ಭವಿತವ್ಯತೆಯೆಂಬ ಆ ರಜ್ಜುವು ಅವನನ್ನು ಕಟ್ಟಿನಿಲ್ಲಿಸಿ ಅದನ್ನೇ ಹೊಂದುವಂತೆ ಮಾಡುತ್ತದೆ.

೮೨. ಮಾನವನು ತನಗಿರುವ ಬುದ್ಧಿವೈಭವದಿಂದ ಪೂಜ್ಯಳಾದ ಈ ಭವಿತವ್ಯದೇವತೆಯ ಪ್ರಭಾವವನ್ನು ಬೇರ್ಪಡಿಸಲು ಪ್ರಯತ್ನಿಸುತ್ತಾನೆ. ಆದರೆ ಭವಿತವ್ಯತೆಯು ಬೇರೊಂದನ್ನೇ ಮಾಡಿ ತೀರುವುದು.

ನ ವಯೋ ನ ಚ ವೈಚಿತ್ರ್ಯಂ ನ ಚಿತ್ರಂ ವಿದಧೇ ಹಿತಂ ।
ನ ಬಲಂ ನೋದ್ಯಮಃ ಪುಂಸಾಂ ಕಾರಣಂ ಪ್ರಾಕ್ಕೃತಂ ಕೃತಂ ॥ ೮೩ ॥
ಅಥ ದೃಷ್ಟ್ವಾ ಸ ಸಪ್ತರ್ಷೀನ್ ಸಪ್ತಸಪ್ತ್ಯತಿತೇಜಸಃ ।
ಭಾಗ್ಯಸೂತ್ರೈರಿವಾಕೃಷ್ಟೋಪನೀತಾನ್ಪ್ರಮುಮೋದ ಹ ॥ ೮೪ ॥
ತಿಲಕಾಂಕಿತ ಸದ್ಭಾಲಾನ್ ಕುಶೋಪಗ್ರಹಿತಾಂಗುಲೀನ್ ।
ಕೃಷ್ಣಾಜಿನೋಪವಿಷ್ಟಾಂಶ್ಚ ಯಜ್ಞಸೂತ್ರೈರಲಂಕೃತಾನ್ ॥ ೮೫ ॥
ಸಾಕ್ಷಸೂತ್ರಕರಾನ್ಕಿಂಚಿದ್ವಿನಿಮೀಲಿತಲೋಚನಾನ್ ।
ಸುಧೌತಸೂಕ್ಷ್ಮಕಾಷಾಯವಾಸಃ ಪ್ರಾವರಣಾನ್ವಿತಾನ್ ॥ ೮೬ ॥
ಅಕಾಂಡೇಽಪಿ ಮಹಾಭಾಗಾನ್ಮಿಲಿತಾನ್ ಸಪ್ತನೀರಧೀನ್ ।
ಚಿತ್ರಂ ವಿಪದ್ವಿನಿರ್ಮಗ್ನಾನುದ್ದಿಧೀರ್ಷೂನಿವ ಪ್ರಜಾಃ ॥ ೮೭ ॥
ಉಪಗಮ್ಯ ವಿನಮ್ರಃ ಸ ಪ್ರಬದ್ಧಕರಸಂಪುಟಃ ।
ಧ್ರುವೋ ವಿಜ್ಞಾಪಯಾಂಚಕ್ರೇ ಪ್ರಣಮ್ಯ ಲಲಿತಂ ವಚಃ ॥ ೮೮ ॥

---

೮೩. ವಯಸ್ಸಾಗಲಿ, ವಿಚಿತ್ರವಾದ ಪ್ರಸಂಗಗಳಾಗಲಿ, ಆಶ್ಚರ್ಯಕರವಾದ ಕೃತಿಗಳಾಗಲಿ, ಬಲ ಉದ್ಯಮಗಳಾಗಲಿ ಮಾನವರ ಶುಭಾಶುಭಗಳಿಗೆ ಕಾರಣವಲ್ಲ. ಅವು ಏನೂ ಮಾಡಲಾರವು. ಅವರ ಪುರಾಕೃತ ಪುಣ್ಯಪಾಪಗಳೇ ಅವಕ್ಕೆ ಮುಖ್ಯಕಾರಣ.

೮೪. ಅಯ್ಯಾ ಬ್ರಾಹ್ಮಣನೆ, ಆ ಧ್ರುವಕುಮಾರನು ಸೂರ್ಯನನ್ನೂ ಮೀರಿಸಿದ ತೇಜಸ್ಸನ್ನೊಳಗೊಂಡಿರುವವರೂ ಭಾಗ್ಯಸೂತ್ರದಿಂದಲೆ ಸೆಳೆಯಲ್ಪಟ್ಟವರೊ ಎಂಬಂತೆ ತನ್ನ ಬಳಿಗೈದಿದವರೂ ಆದ ಆ ಸಪ್ತರ್ಷಿಗಳನ್ನು ಕಂಡು ಆನಂದಿಸಿದನು.

೮೫–೮೮. ಹಣೆಯಲ್ಲಿ ತಿಲಕವನ್ನಿಟ್ಟು ಬೆಳಗುತ್ತ, ಬೆರಳಲ್ಲಿ ದರ್ಭೆಯ ಪವಿತ್ರವನ್ನು ತಳೆದು, ಕೃಷ್ಣಾಜಿನಗಳಲ್ಲಿ ಮಂಡಿಸಿ ಯಜ್ಞೋಪವೀತಗಳಿಂದ ಅಲಂಕೃತರಾಗಿ, ಕೈಯಲ್ಲಿ ಸ್ಫಟಿಕಮಣಿಮಾಲೆಗಳನ್ನು ಹಿಡಿದು, ಧ್ಯಾನಾಸಕ್ತರಾಗಿ ಕಣ್ಣುಮುಗಿದು, ಚೆನ್ನಾಗಿ ಒಗೆದು ಮಡಿಮಾಡಿದ ಕಾವಿಯ ಬಟ್ಟೆಯನ್ನು ಹೊದೆದು, ಅವಸರವಿಲ್ಲದಿದ್ದರೂ ಆಕಸ್ಮಿಕವಾಗಿ ಒಂದೆಡೆ ಸೇರಿದ ಸಪ್ತಸಾಗರಗಳನ್ನು ಹೋಲಿ, ಇಕ್ಕಟ್ಟಿಗೆ ಸಿಕ್ಕಿದ ಜನಗಳನ್ನು ಸಂರಕ್ಷಿಸಲೋಸುಗವಾಗಿಯೆ ಬಂದಿರುವರೊ ಎಂಬಂತೆ ತೋರುತ್ತಿದ್ದ ಮಹಾ ಭಾಗ್ಯಸಂಪನ್ನರಾದ ಆ ಸಪ್ತರ್ಷಿಗಳ ಬಳಿಗೆ ಬಾಲಕನಾದ ಆ ಧ್ರುವನು ಬಂದು ಬದ್ಧಾಂಜಲಿಪುಟವುಳ್ಳವನಾಗಿ ನಮ್ರತೆಯಿಂದ ಮಧುರವಾದ ಮಾತನ್ನು ಈ ರೀತಿ ವಿಜ್ಞಾಪಿಸಿಕೊಂಡನು.

ಧ್ರುವ ಉವಾಚ :—

ಅವೈತ ಮಾಂ ಮುನಿವರಾಃ ಸುನೀತ್ಯುದರಸಂಭವಂ ।
ಉತ್ತಾನಪಾದತನಯಂ ಧ್ರುವಂ ನಿರ್ವಿಣ್ಣಮಾನಸಂ ॥ ೮೯ ॥
ಇದಂ ವನಮನುಪ್ರಾಪ್ತಂ ಸನಾಥಂ ಯುಷ್ಮದಂಘ್ರಿಭಿಃ ।
ಪ್ರಾಯೋಽನಭಿಜ್ಞಂ ಸರ್ವತ್ರ ಮಹರ್ಷ್ಯಧಿಷ್ಠಿತಮಾನಸಂ ॥ ೯೦ ॥
ತೇ ದೃಷ್ಟ್ವೋರ್ಜಸ್ವಲಂ ಬಾಲಂ ಸ್ವಭಾವಮಧುರಾಕೃತಿಂ ।
ಅನರ್ಘ್ಯನಯನೇಪಥ್ಯಂ ಮೃದುಗಂಭೀರಭಾಷಿಣಂ ॥ ೯೧ ॥
ಉಪೋಪವೇಶ್ಯ ಶಿಶುಕಂ ಪ್ರೋಚುರ್ವೈ ವಿಸ್ಮಿತಾ ಭೃಶಂ ।
ಅಹೋ ಬಾಲ ವಿಶಾಲಾಕ್ಷ ಮಹಾರಾಜಕುಮಾರಕ ॥ ೯೨ ॥
ವಿಚಾರ್ಯಾಽಪಿ ನ ಜಾನೀಮೋ ವದ ನಿರ್ವೇದಕಾರಣಂ ।
ಅದ್ಯ ತೇಽಹ್ಯರ್ಥಚಿಂತಾ ನೋ ಕ್ವಾಽಪಮಾನಃ ಪ್ರಸೂರ್ಗೃಹೇ ॥ ೯೩ ॥
ನೀರುಕ್ಶರೀರಸಂಪತ್ತಿರ್ನಿರ್ವೇದೇ ಕಿಂನು ಕಾರಣಂ ।
ಅನವಾಪ್ತಾಽಭಿಲಾಷಾಣಾಂ ವೈರಾಗ್ಯಂ ಜಾಯತೇ ನೃಣಾಂ ॥ ೯೪ ॥

---

೮೯. ಧ್ರುವನು ಹೇಳುತ್ತಾನೆ.—"ಓ ಮುನಿವರರೆ, ನಾನು ಸುನೀತಿಯ ಉದರದಿಂದ ಜನಿಸಿದ ಉತ್ತಾನಪಾದಮಹಾರಾಜನ ಮಗನಾದ ಧ್ರುವನೆಂದೂ, ಸಂತಾಪಗೊಂಡ ಮನಸ್ಸುಳ್ಳವನೆಂದೂ ಅರಿತುಕೊಳ್ಳುವುದಾಗಲಿ

೯೦. ತಮ್ಮ ಅಡಿಗಳಿಂದ ಸನಾಥವೆನಿಸಿದ ಈ ವನಕ್ಕೆ ಬಂದಿರುವೆನು. ಅತಿಶಯವಾದ ತೇಜಸ್ಸಂಪದವನ್ನೊಳಕೊಂಡು, ನಿಮ್ಮಿಂದ ಎಲ್ಲೆಡೆಗಳಲ್ಲಿಯೂ ಅಧಿಷ್ಠಿತವಾಗಿರುವ ಈ ವನವು ಪ್ರಾಯಶಃ ಯಾರಿಗೂ ಗೊತ್ತರಿಯದುದಾಗಿದೆ."

೯೧—೯೩. ಆ ಸಪ್ತರ್ಷಿಗಳು ಬಹುತೇಜಸ್ಸಂಪನ್ನನಾಗಿ, ಸ್ವಭಾವದಿಂದಲೆ ಬಹುಸುಂದರವಾದ ಆಕಾರವುಳ್ಳವನಾಗಿ, ಅತಿಶಯವಾದ ನಯನೀತಿಗಳ ಚಾತುರಿಯನ್ನೊಳಕೊಂಡು ಗಂಭೀರವಾಗಿಯೂ, ಮೃದುವಾಗಿಯೂ ಮಾತನಾಡುತ್ತಿದ್ದ ಆ ಧ್ರುವಕುಮಾರನನ್ನು ಕಂಡು ಅಚ್ಚರಿಗೊಂಡು ಅವನನ್ನು ಬಳಿಯಲ್ಲಿಯೆ ಕುಳ್ಳಿರಿಸಿಕೊಂಡು, "ಓ ಬಾಲಕ, ವಿಶಾಲಾಕ್ಷನಾಗಿ ರಾಜಕುಮಾರನಾಗಿ ನೀನು ಈ ರೀತಿ ವೈರಾಗ್ಯವನ್ನು ತಳೆದಿರುವುದಕ್ಕೆ ಕಾರಣವೇನೆಂಬುದನ್ನು ನಾವು ಎಷ್ಟು ಯೋಚಿಸಿದರೂ ತಿಳಿಯದೆ ಹೋಗಿದೆ. ಪ್ರಕೃತದಲ್ಲಿ ನಿನಗೆ ಅರ್ಥಸಂಬಂಧವಾದ ಚಿಂತೆಯೇನೂ ಇರುವುದಿಲ್ಲ. ಹುಟ್ಟಿದ ಮನೆಯಲ್ಲಿಯೆ ಅಪಮಾನವೇನಾದರೂ ಆಯಿತೆನ್ನಲು ಕಾರಣವಿಲ್ಲ. ತಂದೆತಾಯಿಗಳೇ ಮಗುವನ್ನು ಅಪಮಾನಗೊಳಿಸುವುದೆಲ್ಲಿಯಾದರೂ ಉಂಟೆ?

೯೪. ನಿನಗೆ ರೋಗರಹಿತವಾದ ಶರೀರಸಂಪತ್ತಿಯಿದೆ. ಹೀಗಿದ್ದೂ ನಿನ್ನ

ಸಪ್ತದ್ವೀಪಪತೇ ರಾಜ್ಞಃ ಕುಮಾರಸ್ತ್ವಂ ತಥಾ ಕಥಂ ।
ಸ್ವಭಾವಭಿನ್ನಪ್ರಕೃತೌ ಲೋಕೇಽಸ್ಮಿನ್ನ ಮನೋಗತಂ ॥ ೯೫ ॥
ಅವಗಂತುಂ ಹಿ ಶಕ್ಯೇತ ಯೂನೋ ವೃದ್ಧಸ್ಯ ವಾ ಶಿಶೋಃ ।
ಇತಿ ಶ್ರುತ್ವಾ ವಚಸ್ತೇಷಾಂ ಸಹಜಪ್ರೇಮನಿರ್ಭರಂ ॥ ೯೬ ॥
ವಾಚಂ ಜಗ್ರಾಹ ಸ ತದಾ ಶಿಶುಃ ಪ್ರಾಂಶುಮನೋರಥಃ ।
ಧ್ರುವ ಉವಾಚ :—
ಪ್ರೇಷಿತೋ ರಾಜಸೇವಾರ್ಥಂ ಜನನ್ಯಾಽಹಂ ಮುನೀಶ್ವರಾಃ ॥ ೯೭ ॥
ರಾಜಾಂಕಮಾರುರುಕ್ಷುರ್ಹಿ ಸುರುಚ್ಯಾ ಪರಿಭರ್ತ್ಸಿತಃ ।
ಉತ್ತಮಂ ಚೋತ್ತಮೀಕೃತ್ಯ ಮಾಂ ಚ ಮನ್ಮಾತರಂ ತಥಾ ॥ ೯೮ ॥
ಧಿಕ್ಕೃತ್ಯ ಪ್ರಶಶಂಸ ಸ್ವಂ ನಿರ್ವೇದೇ ಕಾರಣಂ ತ್ವಿದಂ ।
ನಿಶಮ್ಯೇತಿ ಶಿಶೋರ್ವಾಕ್ಯಂ ಪರಸ್ಪರಮವೇಕ್ಷ್ಯತೇ ॥ ೯೯ ॥
ಕ್ಷಾತ್ರಮೇವ ಶಶಂಸುಸ್ತದಹೋ ಬಾಲೇಽಪಿ ನ ಕ್ಷಮಾ ॥ ೧೦೦ ॥

---

ನಿರ್ವೇದಕ್ಕೆ ಕಾರಣವೇನು? ಲೋಕದಲ್ಲಿ ಮಾನವರಿಗೆ ಮಾಯೆಯ ಪ್ರಭಾವದಿಂದ ದೊರಕದುದನ್ನು ಅಪೇಕ್ಷಿಸಿ ಅದು ದೊರಕದೆಹೋದರೆ ಸಾಮಾನ್ಯವಾಗಿ ವೈರಾಗ್ಯವು ಹುಟ್ಟುತ್ತದೆ.

೯೫–೯೭. ಸಪ್ತದ್ವೀಪಗಳಿಗೂ ಒಡೆಯನೆನಿಸಿದ ಉತ್ತಾನಪಾದರಾಯನ ಮಗನಾದ ನೀನು ಈ ರೀತಿಯಾದುದೆಂತು? ಸ್ವಭಾವದಿಂದಲೆ ಬೇರೆ ಬೇರೆಯಾದ ಸ್ವಭಾವಗಳುಳ್ಳ ಈ ಮಾನವಪ್ರಪಂಚದಲ್ಲಿ ಯುವಕರಾಗಲಿ ಬಾಲಕರಾಗಲಿ ಮುದುಕರಾಗಲಿ ಅವರ ಮನೋಗತವನ್ನು ತಿಳಿಯಲು ಯಾರಿಗೂ ಶಕ್ಯವಾಗುವುದಿಲ್ಲ'' ಎಂದು ಕೇಳಿದರು. ಹೀಗೆ ಸಹಜವೂ ಅತಿಶಯವೂ ಆದ ಪ್ರೇಮದಿಂದ ಆ ಮುನಿಗಳು ಆಡಿದ ಮಾತನ್ನು ಕೇಳಿ ಮಹೋನ್ನತವಾದ ಮನೋರಥವನ್ನೊಳಗೊಂಡಿದ್ದ ಆ ಧ್ರುವನು ಇಂತೆಂದನು ಧ್ರುವನು ಹೇಳುತ್ತಾನೆ —'' ಎಲೈ ಮುನೀಶ್ವರರೆ! ನಾನು ಅರಸನನ್ನು ಸೇವಿಸಬೇಕೆಂದು ನಮ್ಮ ತಾಯಿಯು ನನ್ನನ್ನು ಪ್ರೇರಿಸಿ ಕಳುಹಿಸಿದಳು.

೯೮–೧೦೦. ಅಂತೆಯೆ ನಾನು ರಾಜಸಭೆಗೆ ಹೋಗಿ ನಮ್ಮ ತಂದೆಯಾದ ಉತ್ತಾನಪಾದರಾಯನ ತೊಡೆಯನ್ನೇರಿ ಕುಳಿತುಕೊಳ್ಳಬಯಸಿದೆನು. ಆಗ ನನ್ನ ಬಲತಾಯಿಯಾದ ಸುರುಚಿಯು ನನ್ನನ್ನು ಗದರಿಸಿದಳು. ತನ್ನ ಮಗನಾದ ಉತ್ತಮನನ್ನು ಹೆಚ್ಚುಗೊಳಿಸಿ ನನ್ನನ್ನೂ, ನನ್ನ ತಾಯಿಯನ್ನೂ ಧಿಕ್ಕರಿಸಿ ನುಡಿದು ತನ್ನನ್ನು ಬಹಳವಾಗಿ ಪ್ರಸಂಸೆಮಾಡಿಕೊಂಡಳು ಇದೇ ನನ್ನ ನಿರ್ವೇದಕ್ಕೆ ಕಾರಣ'' ಆ ಬಾಲಕನಿಂತು ನುಡಿದುದನ್ನು ಕೇಳಿ, ಆ ಮಹರ್ಷಿಗಳೆಲ್ಲರೂ

ಋಷಯ ಊಚುಃ:–

ಕಿಮಸ್ಮಾಭಿರಹೋ ಕಾರ್ಯಂ ಕಸ್ತವಾಽಸ್ತಿ ಮನೋರಥಃ ।
ಜ್ಞಾತೋ ಭವತು ತಾವತ್ಸ ನಃ ಶ್ರವೋಗೋಚರೀ ಕುರು ॥ ೧೦೧ ॥

ಧ್ರುವ ಉವಾಚ:–

ಮುನಯೋ ಮಮ ಯೋ ಬಂಧುರುತ್ತಮಶ್ಚೋತ್ತಮೋತ್ತಮಃ ।
ಪಿತ್ರಾ ದತ್ತಂ ಚ ಸೋಽಧ್ಯಾಸ್ತಾಂ ತದ್ಭದ್ರಾಸನಮುತ್ತಮಂ ॥ ೧೦೨ ॥
ಭವತ್ಕೃತಂ ಹಿ ಸಾಹಾಯ್ಯಮೇತದಿಚ್ಛಾಮಿ ಸುವ್ರತಾಃ ।
ಪ್ರಾಯೋ ಜಾನೇ ನ ಬಾಲತ್ವಾದುಪದೇಶಸ್ತದುಚ್ಯತಾಂ ॥ ೧೦೩ ॥
ಅನನ್ಯನೃಪಭುಕ್ತಂ ಯದ್ಯದನ್ಯೇಭ್ಯಃ ಸಮುಚ್ಛ್ರಿತಂ ।
ಇಂದ್ರಾದಿದುರವಾಪ್ಯಂ ಯತ್ಕಥಂ ಲಭ್ಯಂ ದುರಾಸದಂ ॥ ೧೦೪ ॥
ಪಿತ್ರೋತ್ಸೃಷ್ಟಂ ನ ಕಾಂಕ್ಷಾಮಿ ಕಾಂಕ್ಷಾಮಿ ಸ್ವಭುಜಾರ್ಜಿತಂ ।
ಮನೋರಥಪಥಾಽತೀತಂ ಭವೇದ್ಯತ್ಪಿತುರಪ್ಯಹೋ ॥ ೧೦೫ ॥

---

ಒಬ್ಬರನ್ನೊಬ್ಬರು ನೋಡಿಕೊಂಡು, "ಆಹ, ಈ ಬಾಲಕನಲ್ಲಿಯೂ ಕ್ಷಾತ್ರವು ತುಂಬಿದೆ!" ಎಂದು ಕ್ಷಾತ್ರವನ್ನೇ ಪ್ರಶಂಸಿಸಿದರು.

೧೦೧. ಋಷಿಗಳು ಹೇಳುತ್ತಾರೆ.—ಮಗು, ಈಗ ನಾವು ಮಾಡಬೇಕಾದುದೇನು? ನಿನಗಿರುವ ಮನೋರಥವೇನು? ಮೊದಲು ಅದು ತಿಳಿಯಲಿ, ಹೇಳು.

೧೦೨. ಧ್ರುವನು ಹೇಳುತ್ತಾನೆ:—"ಎಲೈ ಮುನಿಗಳೆ, ನನ್ನ ಬಂಧುವಾದ ಆ ಉತ್ತಮನು ಉತ್ತಮೋತ್ತಮನೆನಿಸಿರಲಿ. ಅವನು ನಮ್ಮ ತಂದೆಯು ಕೊಡುವ ಉತ್ತಮೋತ್ತಮವಾದ ಭದ್ರಾಸನವನ್ನು ಮಂಡಿಸಲಿ.

೧೦೩. ಎಲೈ ಸುವ್ರತರೆ, ನಿಮ್ಮಿಂದ ನಾನು ಬಯಸುವ ಸಹಾಯವನ್ನು ಅರಿಕೆಮಾಡುತ್ತೇನೆ. ಅದನ್ನು ತಾವು ಮಾಡಿಕೊಡಬೇಕು. ನಾನು ತೀರ ಬಾಲಕನಾಗಿರುವುದರಿಂದ ಉಪದೇಶವನ್ನು ಪಡೆಯಬೇಕಾದುದೇನೆಂಬುದನ್ನೇ ಅರಿಯದಿರುವೆನು. ಅದನ್ನು ಅಪ್ಪಣೆಕೊಡಿಸಬೇಕು.

೧೦೪. ಇತರರಾರಿಂದಲೂ ಅನುಭವಿಸಲ್ಪಡದುದಾಗಿ ಮಹೋನ್ನತವಾಗಿ ಇಂದ್ರಾದಿದೇವತೆಗಳಿಗೂ ಹೊಂದಲಸದಳವಾಗಿ ಅತ್ಯಂತ ದುರಾಸದವೆನಿಸಿದ ಪದವಿಯನ್ನು ಪಡೆಯುವುದು ಹೇಗೆ?

೧೦೫. ಎಲೈ ಮಹರ್ಷಿಗಳೆ, ನನ್ನ ಜನಕನು ನನಗೆ ಕೊಡುವ ಪದವಿಯನ್ನು ನಾನು ಬಯಸುವುದಿಲ್ಲ. ನನ್ನ ಭುಜಬಲದಿಂದಲೆ ಆರ್ಜಿಸಿದುದನ್ನು ಮಾತ್ರ ಬಯಸುತ್ತೇನೆ. ಅದು ತಂದೆಯು ಕೊಡುವುದಕ್ಕಿಂತಲೂ ಮೇಲಾಗಿ ಮನೋರಥಕ್ಕೂ ಮೀರಿರುವುದಾಗಿದೆಯಷ್ಟೆ.

ಪಿತೃಸಂಪತ್ತಿಭೋಕ್ತಾರಃ ಪ್ರಾಯಶೋ ನ ಯಶೋಧನಾಃ ।
ನರೋತ್ತಮಾಸ್ತು ತೇ ಜ್ಞೇಯಾ ಯೇ ಪಿತ್ರಾಧಿಕ್ಯದರ್ಶಿನಃ ॥ ೧೦೬ ॥
ಉಪಾರ್ಜಿತಂ ಹಿ ಪಿತ್ರಾ ಯೇ ನಾಶಯಂತಿ ಯಶಃ ಶ್ರುತಂ ।
ಧನಂ ನಿಧನಮೇವಾಽಸ್ತು ತೇಷಾಂ ದುರ್ವೃತ್ತಚೇತಸಾಂ ॥ ೧೦೭ ॥
ಇತಿ ಶ್ರುತ್ವಾ ವಚಸ್ತಸ್ಯ ಮುನಯಃ ಸುನಯೋರ್ಜಿತಂ ।
ಯಥಾರ್ಥಮೇವಂ ಪ್ರತ್ಯೂಚುರ್ಮರೀಚ್ಯಾದ್ಯಾಸ್ತಥಾಧ್ರುವಂ ॥ ೧೦೮ ॥

ಮರೀಚಿರುವಾಚ :—

ಅನರ್ಚಿತಾಽಚ್ಯುತಪದಃ ಪದಮಾಪದ್ಯತೇ ಕಥಂ ।
ಯಥಾ ತಥಾತ್ವಮಾತ್ಥಾಂಗ ನಾಽತಥ್ಯಂ ಕಥಯಾಮ್ಯಹಂ ॥ ೧೦೯ ॥

ಅತ್ರಿರುವಾಚ :—

ಅನಾಸ್ವಾದಿತಗೋವಿಂದಪದಾಂಬುಜರಜೋರಸಃ ।
ಮನೋರಥಪಥಾಽತೀತಂ ಸ್ಫೀತಂ ನಾಕಲಯೇತ್ಪದಂ ॥ ೧೧೦ ॥

---

೧೦೬. ಲೋಕದಲ್ಲಿ ತಂದೆಯು ಸಂಪಾದಿಸಿದುದನ್ನು ಅನುಭವಿಸುವವರು ಬಹುಮಟ್ಟಿಗೆ ಕೀರ್ತಿಶಾಲಿಗಳೆನಿಸುವುದಿಲ್ಲ. ತಂದೆಗಿಂತಲೂ ಹೆಚ್ಚಾದ ಯಶಸ್ಸನ್ನೂ, ಐಶ್ವರ್ಯವನ್ನೂ ಸಂಪಾದಿಸುವವರೇ ನರೋತ್ತಮರೆಂದು ತಿಳಿಯಬೇಕು.

೧೦೭. ತಂದೆಯು ಸಂಪಾದಿಸಿದ ಯಶಸ್ಸನ್ನೂ ಸದ್ಧರ್ಮವನ್ನೂ ಚಾರಿತ್ರವನ್ನೂ ಧನವನ್ನೂ ಯಾರು ನಾಶಗೊಳಿಸುತ್ತಾರೆಯೋ ಆ ದುಷ್ಟಾತ್ಮರು ಇರುವುದಕ್ಕಿಂತ ಮೃತಿಹೊಂದುವುದೇ ಲೇಸು.”

೧೦೮. ಇಂತು ನುಡಿದ ಯಥಾರ್ಥವಾಗಿ ಆ ಧ್ರುವಕುಮಾರನ ನೀತಿಯೊಡಗೂಡಿದ ಮಾತುಗಳನ್ನು ಕೇಳಿ, ಮರೀಚಿಯೇ ಮೊದಲಾದ ಸಪ್ತರ್ಷಿಗಳು ಅವನನ್ನು ಕುರಿತು ಯಥಾರ್ಥವಾದ ಪ್ರತ್ಯುತ್ತರವನ್ನು ಕೊಡುವವರಾಗಿ ಹೀಗೆಂದರು·

೧೦೯. ಮರೀಚಿಯು ಹೇಳುತ್ತಾನೆ.—ವತ್ಸ, ನೀನು ಯಾವ ಪದವಿಯನ್ನು ಪಡೆಯಬೇಕೆಂದು ಹೇಳಿದೆಯೋ ಆ ಪದವಿಯು ಅಚ್ಯುತನ ಪದಕಮಲವನ್ನಾರಾಧಿಸದೆ ಹೇಗೆ ತಾನೆ ದೊರಕುವುದು? ಅದು ಭಗವದರ್ಚನ ಪ್ರಭಾವದಿಂದಲೆ ದೊರಕಬೇಕಾದುದು. ನಾನು ಸುಳ್ಳು ಹೇಳುವುದಿಲ್ಲ.

೧೧೦. ಅತ್ರಿಯು ಹೇಳುತ್ತಾನೆ:— ಅಯ್ಯಾ ಧ್ರುವಕುಮಾರನೆ, ಗೋವಿಂದನ ಪಾದಕಮಲಗಳ ದೂಳಿನ ರಸದ ರುಚಿ ನೋಡದವನು ಮನೋರಥದ ಹಾದಿಗೂ ಮೀರಿದುದೂ ನೀನೊರೆದುದೂ ಆದ ಅಂತಹ ಉತ್ತಮಪದವಿಯನ್ನು ಹೊಂದಲಾರನು.

ಅಂಗಿರಾ ಉವಾಚ :—

ಅದವೀಯಃ ಪದಂ ತಸ್ಯ ಸರ್ವಾಸಾಂ ಸಂಪದಾಮಿಹ ।
ಕಮಲಾಕಾಂತಕಾಂತಾಂಘ್ರಿಕಮಲೇ ಯಃ ಸುಶೀಲಯೇತ್ ॥ ೧೧೧ ॥

ಪುಲಸ್ತ್ಯ ಉವಾಚ :—

ಯಸ್ಯ ಸ್ಮರಣಮಾತ್ರೇಣ ಮಹಾಪಾತಕಸಂತತಿಃ ।
ಪರಮಾಂತಮವಾಪ್ನೋತಿ ಸ ವಿಷ್ಣುಃ ಸರ್ವದೋ ಧ್ರುವ ॥ ೧೧೨ ॥

ಪುಲಹ ಉವಾಚ :—

ಯದಾಹುಃ ಪರಮಂ ಬ್ರಹ್ಮ ಪ್ರಧಾನಪುರುಷಾತ್ಪರಂ ।
ಯನ್ಮಾಯಯಾ ತತಂ ಸರ್ವಂ ಸರ್ವಂ ದಾಸ್ಯತಿ ಸೋಽಚ್ಯುತಃ ॥ ೧೧೩ ॥

ಕ್ರತುರುವಾಚ :—

ಯೋ ಯಜ್ಞಪುರುಷೋ ವಿಷ್ಣುರ್ವೇದವೇದ್ಯೋ ಜನಾರ್ದನಃ ।
ಅಂತರಾತ್ಮಾಽಸ್ಯ ಜಗತಃ ಸ ತುಷ್ಟಃ ಕಿಂ ನ ಯಚ್ಛತಿ ॥ ೧೧೪ ॥

ವಸಿಷ್ಠ ಉವಾಚ :—

ಯದ್ಭ್ರೂನರ್ತನವರ್ತಿನ್ಯಃ ಸಿದ್ಧಯೋಽಷ್ಟೌ ನೃಪಾತ್ಮಜ ।
ತಮಾರಾಧ್ಯ ಹೃಷೀಕೇಶಮಪವರ್ಗೋಽಪ್ಯದೂರತಃ ॥ ೧೧೫ ॥

---

೧೧೧ ಅಂಗಿರನು ಹೇಳುತ್ತಾನೆ :—ಮಗುವೆ, ಕಮಲಾಕಾಂತನ ಕಮನೀಯವಾದ ಅಂಘ್ರಿಕಮಲವನ್ನು ಚೆನ್ನಾಗಿ ಧ್ಯಾನಮಾಡಿದುದಾದರೆ, ಸಮಸ್ತ ಸಂಪದಗಳಿಗೂ ಆಕರವೆನಿಸಿದ ಅಂತಹ ಪದವಿಯು ಸಮೀಪದಲ್ಲಿಯೆ ಇರುತ್ತದೆ.

೧೧೨. ಪುಲಸ್ತ್ಯನು ಹೇಳುತ್ತಾನೆ —ಅಯ್ಯಾ ಧ್ರುವನೆ, ಯಾವನ ಸ್ಮರಣಮಾತ್ರದಿಂದಲೆ ಮಹಾಪಾತಕಸಂತತಿಯೆಲ್ಲವೂ ನಿಶ್ಶೇಷವಾಗಿ ಅಳಿದು ಹೋಗುವುದೇ ಆ ಸರ್ವವ್ಯಾಪಕನಾದ ವಿಷ್ಣುವು ಸರ್ವವನ್ನೂ ಭಕ್ತರಿಗೆ ಅನುಗ್ರಹಿಸುವವನೇ ಆಗಿದ್ದಾನೆ.

೧೧೩. ಪುಲಹನು ಹೇಳುತ್ತಾನೆ:—ಅಪ್ಪ, ಪ್ರಧಾನ ಪುರುಷನಿಗಿಂತಲೂ ಉತ್ತಮನೆನಿಸಿ ಪರಬ್ರಹ್ಮನೆಂದು ಯಾವನು ಜ್ಞಾನಿಗಳಿಗೆ ಮಾತ್ರ ಗೋಚರವಾಗಿರುವನೊ, ಯಾವನ ಮಾಯೆಯಿಂದಲೆ ಈ ಸಮಸ್ತ ಪ್ರಪಂಚವೂ ವಿಸ್ತೃತವಾಗಿರುವುದೊ ಆ ಅಚ್ಯುತನು ಎಲ್ಲವನ್ನೂ ದಯಪಾಲಿಸುತ್ತಾನೆ.

೧೧೪. ಕ್ರತುವು ಹೇಳುತ್ತಾನೆ —ಕುಮಾರ, ಯಾವನು ಯಜ್ಞಪುರುಷನಾಗಿ, ಸರ್ವವ್ಯಾಪಕನಾಗಿ, ವೇದಪ್ರತಿಪಾದ್ಯನಾಗಿ, ಜಗತ್ತಿನ ಅಂತರಾತ್ಮಸ್ವರೂಪನಾಗಿ, ಜನಾರ್ದನನೆಂದು ಪ್ರಸಿದ್ಧನಾಗಿರುವನೋ ಆ ಭಗವಂತನು ಸಂತುಷ್ಟನಾದರೆ ಏನನ್ನು ತಾನೆ ಕೊಡುವುದಿಲ್ಲ ?

೧೧೫. ವಸಿಷ್ಠನು ಹೇಳುತ್ತಾನೆ.—ರಾಜಕುಮಾರ, ಯಾವನ ಭ್ರೂನರ್ತನ

ಧ್ರುವ ಉವಾಚ :—

**ಸತ್ಯಮುಕ್ತಂ ಮುನೀಶಾನಾ ವಿಷ್ಣೋರಾರಾಧನಂ ಪ್ರತಿ ।**
**ಕಥಂ ವಾ ಭಗವಾನೀಜ್ಯಃ ಸ ವಿಧಿಶ್ಚೋಪದಿಶ್ಯತಾಂ ॥ ೧೧೬ ॥**

ಮುನಯ ಊಚುಃ :—

**ತಿಷ್ಠತಾ ಗಚ್ಛತಾ ವಾಽಪಿ ಸ್ವಪತಾ ಜಾಗ್ರತಾ ತಥಾ ।**
**ಶಯಾನೇನೋಪವಿಷ್ಟೇನ ಜಪ್ಯೋ ನಾರಾಯಣಃ ಸದಾ ॥ ೧೧೭ ॥**
**ದ್ವಾದಶಾಕ್ಷರಮಂತ್ರೇಣ ವಾಸುದೇವಾತ್ಮಕೇನ ಚ ।**
**ಧ್ಯಾಯಂಶ್ಚತುರ್ಭುಜಂ ವಿಷ್ಣುಂ ಜಪ್ತ್ವಾ ಸಿದ್ಧಿಂ ನ ಕೋ ಗತಃ ॥ ೧೧೮ ॥**
**ಅತಸೀಪುಷ್ಪಸಂಕಾಶಂ ಪೀತವಾಸಸಮಚ್ಯುತಂ ।**
**ಕ್ಷಣಂ ಸರ್ವಾತ್ಮಕಂ ಪಶ್ಯನ್ ಕೋ ನ ಸಿದ್ಧ್ಯತಿ ಭೂತಲೇ ॥ ೧೧೯ ॥**
**ಪುತ್ರಾನ್ಕಲತ್ರಮಿತ್ರಾಣಿ ರಾಜ್ಯಂ ಸ್ವರ್ಗಾಽಪವರ್ಗಕಂ ।**
**ವಾಸುದೇವಂ ಜಪನ್ಮರ್ತ್ಯಃ ಸರ್ವಂ ಪ್ರಾಪ್ನೋತ್ಯಸಂಶಯಂ ॥ ೧೨೦ ॥**

---

ದಿಂದಲೆ ಅಣಿಮಾದ್ಯಷ್ಟಸಿದ್ಧಿಗಳೂ ವಶವರ್ತಿಗಳಾಗಿರುತ್ತವೆಯೂ ಆ ಹೃಷೀಕೇಶನನ್ನು ಆರಾಧಿಸಿದುದಾದರೆ, ಈ ಪದವಿಗಳೆಂಬವಂತಿರಲಿ, ಹೊಂದಲಸದಳವಾದ ಮುಕ್ತಿಯೂ ದೂರವೆನಿಸುವುದಿಲ್ಲ.

೧೧೬. ಧ್ರುವನು ಹೇಳುತ್ತಾನೆ —ಎಲೈ ಮುನೀಶ್ವರರೆ, ವಿಷ್ಣುವಿನ ಆರಾಧನೆಯ ವಿಷಯದಲ್ಲಿ ಯಥಾರ್ಥವಾದುದನ್ನೇ ನುಡಿದಿರಿ. ಆ ಭಗವಂತನನ್ನು ಪೂಜಿಸುವ ಬಗೆ ಹೇಗೆ? ಅದರ ವಿಧಾನವೆಂತು? ಅದನ್ನು ಉಪದೇಶ ಮಾಡಿರಿ.

೧೧೭. ಮುನಿಗಳು ಹೇಳುತ್ತಾರೆ.—"ಎಲೈ ಧ್ರುವನೆ, ಆ ಭಗವಂತನನ್ನು ಭಕ್ತನಾದವನು, ಕುಳಿತಿರುವಾಗ, ನಡೆಯುವಾಗ, ಮಲಗಿರುವಾಗ, ಎಚ್ಚತ್ತಿರುವಾಗ, ಮಲಗಿ ಎದ್ದಾಗ ಎಲ್ಲ ಕಾಲಗಳಲ್ಲಿಯೂ ಜಪಿಸುತ್ತಿರಬೇಕು.

೧೧೮–೧೧೯. ವಾಸುದೇವಾತ್ಮಕವಾದ ದ್ವಾದಶಾಕ್ಷರ ಮಂತ್ರದಿಂದ ಚತುರ್ಭುಜನಾದ ಶ್ರೀಮನ್ಮಹಾವಿಷ್ಣುವನ್ನು ಜಪಿಸಿದ ಯಾವನು ತಾನೆ ಸಿದ್ಧಿಯನ್ನು ಪಡೆದಿರುವುದಿಲ್ಲ? ಅಗಸೆಯ ಹೂವಿನಂತೆ ನೀಲಕಾಂತಿಯುಳ್ಳವನಾಗಿ, ಪೀತಾಂಬರಧಾರಿಯಾಗಿ ವಿರಾಜಿಸುತ್ತಿರುವ ಅಚ್ಯುತನನ್ನು ಒಂದು ಕ್ಷಣ ಮಾತ್ರವಾದರೂ ಸರ್ವಾಂತರ್ಯಾಮಿಯಾಗಿರುವವನನ್ನಾಗಿ ಸಾಕ್ಷಾತ್ಕರಿಸಿಕೊಂಡ ಯಾವನು ತಾನೆ ಈ ಭೂತಲದಲ್ಲಿ ಪಾಪದೂರನಾಗಿ ಸಿದ್ಧಿಯನ್ನು ಪಡೆಯುವುದಿಲ್ಲ?

೧೨೦. ವತ್ಸ, ವಾಸುದೇವಮಂತ್ರವನ್ನು ಜಪಿಸಿದವನಿಗೆ ಸಿದ್ಧಿಯು ಮಾತ್ರ ಲಭಿಸುವುದಲ್ಲದೆ ಪುತ್ರಮಿತ್ರಕಳತ್ರ ಸಂಪದವೂ ರಾಜ್ಯವೇ ಅಲ್ಲದೆ

ವಾಸುದೇವಜಪಾಸಕ್ತಾನಪಿ ಪಾಪಕೃತೋ ಜನಾನ್ ।
ನೋಪಸ್ಪೃಶಂತಿ ವೈ ವಿಘ್ನಾ ಯಮದೂತಾಶ್ಚ ದಾರುಣಾಃ ॥ ೧೨೧ ॥
ಪಿತಾಮಹೇನ ತೇಽಪ್ಯೇಷ ಮಹಾಮಂತ್ರ ಉಪಾಸಿತಃ ।
ಮನುನಾ ರಾಜ್ಯಕಾಮೇನ ವೈಷ್ಣವೇನ ಮಹರ್ಧಿನಾ ॥ ೧೨೨ ॥
ತ್ವಮಪ್ಯೇತೇನ ಮಂತ್ರೇಣ ವಾಸುದೇವಪರೋ ಭವ ।
ಯಥಾಭಿಲಷಿತಾಮೃದ್ಧಿಂ ಕ್ಷಿಪ್ರಮಾಪ್ನುಹಿ ಸತ್ತಮ ॥ ೧೨೩ ॥
ಇತ್ಯುಕ್ತ್ವಾಂತರ್ಹಿತಾಃ ಸರ್ವೇ ಮಹಾತ್ಮಾನೋ ಮುನೀಶ್ವರಾಃ ।
ವಾಸುದೇವಮನಾ ಭೂತ್ವಾ ಧ್ರುವೋಽಪಿ ತಪಸೇ ಗತಃ ॥ ೧೨೪ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಧ್ರುವಲೋಕವರ್ಣನಂ–ಧ್ರುವೋಪದೇಶಕಥನಂ" ನಾಮೈಕೋನವಿಂಶೋಽಧ್ಯಾಯಃ

---

ಸ್ವರ್ಗಾಪವರ್ಗಗಳೂ ಸಮಸ್ತವೂ ದೊರೆಯುತ್ತದೆಂಬುದರಲ್ಲಿ ಸಂಶಯವೇ ಇಲ್ಲವು.

೧೨೧–೧೨೩. ವಾಸುದೇವಜಪದಲ್ಲಿ ಆಸಕ್ತರಾಗಿರುವ ಮಾನವರು ಒಂದುವೇಳೆ ಪಾಪಿಷ್ಠರೆ ಆಗಿದ್ದರೂ ಅವರನ್ನು ಮುಕ್ತಿಗೆ ವಿಘ್ನಗಳೆನಿಸಿದ ಆ ಪಾಪಗಳಾಗಲಿ ಭಯಂಕರವಾದ ಯಮದೂತರಾಗಲಿ ತೊಡುವುದಿಲ್ಲ. ನಿನ್ನ ತಾತನೂ ಮಹಾವಿಷ್ಣುಭಕ್ತನೂ ಆದ ಸ್ವಾಯಂಭುವ ಮನುವು ರಾಜ್ಯಕಾಮನೆಯಿಂದ ಈ ದ್ವಾದಶಾಕ್ಷರ ಮಹಾಮಂತ್ರವನ್ನು ಉಪಾಸನೆಮಾಡಿ, ಅಪರಿಮಿತವಾದ ರಾಜ್ಯೈಶ್ವರ್ಯವನ್ನು ಪಡೆದನು. ಆದುದರಿಂದ ಎಲೈ ಸತ್ತಮನೆ, ನೀನು ಸಹ ಇದೇ ಮಂತ್ರದಿಂದಲೆ ವಾಸುದೇವನನ್ನು ಆರಾಧಿಸಿ, ನಿನ್ನ ಅಭೀಷ್ಟವೆನಿಸಿದ ಆ ಮಹದೈಶ್ವರ್ಯವನ್ನು ಜಾಗ್ರತೆಯಾಗಿಯೆ ಪಡೆಯುವವನಾಗು."

೧೨೪. ಅಯ್ಯಾ ಶಿವಶರ್ಮನೆ, ಮಹಾತ್ಮರಾದ ಆ ಮುನೀಶ್ವರರೆಲ್ಲರೂ ಈ ಪ್ರಕಾರವಾಗಿ ಆ ಧ್ರುವಕುಮಾರನಿಗೆ ಉಪದೇಶಮಾಡಿ ಅಲ್ಲಿಯೆ ಅಂತರ್ಧಾನವಾದರು. ಆ ತರುವಾಯ ಧ್ರುವನೂ ಸಹ ವಾಸುದೇವನಲ್ಲಿಯೆ ಮನಸ್ಸನ್ನು ನೆಲೆಗೊಳಿಸಿಕೊಂಡು ತಪಸ್ಸಿಗಾಗಿ ತೆರಳಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಧ್ರುವಲೋಕವರ್ಣನ–ಧ್ರುವೋಪದೇಶಕಥನ"ವೆಂಬ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ವಿಂಶೋಽಧ್ಯಾಯಃ

## ಧ್ರುವಾಖ್ಯಾನೇ ಭಗವದ್ದರ್ಶನಂ

**ಗಣಾವೂಚತುಃ :—**

**ಔತ್ತಾನಪಾದಿರ್ನಿರ್ಗತ್ಯ ತತಃ ಕಾನನತೋ ದ್ವಿಜ ।**
**ರಮ್ಯಂ ಮಧುವನಂ ಪ್ರಾಪ ಯಮುನಾಯಾಸ್ತಟೇ ಮಹತ್ ॥ ೧ ॥**
**ಆದ್ಯಂ ಭಗವತಃ ಸ್ಥಾನಂ ತತ್ಪುಣ್ಯಂ ಹರಿಮೇಧಸಃ ।**
**ಪಾಪೋಽಪಿ ಜಂತುಸ್ತತ್ಪ್ರಾಪ್ಯ ನಿಷ್ಪಾಪೋ ಜಾಯತೇ ಧ್ರುವಂ ॥ ೨ ॥**
**ಜಪನ್ ಸ ವಾಸುದೇವಾಖ್ಯಂ ಪರಂ ಬ್ರಹ್ಮ ನಿರಾಮಯಂ ।**
**ಅಪಶ್ಯತ್ತನ್ಮಯಂ ವಿಶ್ವಂ ಧ್ಯಾನಸ್ತಿಮಿತಲೋಚನಃ ॥ ೩ ॥**
**ಹರಿರ್ಹರಿತ್ಸು ಸರ್ವಾಸು ಹರಿರ್ಹರಿಮರೀಚಿಷು ।**
**ಶಿವಾಮೃಗಮೃಗೇಂದ್ರಾದಿರೂಪಃ ಕಾನನಗೋ ಹರಿಃ ॥ ೪ ॥**

---

## ಕನ್ನಡದ ಅನುವಾದ

### ಧ್ರುವಾಖ್ಯಾನ— ಪರಮಾತ್ಮಸಾಕ್ಷಾತ್ಕಾರವರ್ಣನ

೧. ಗಣಗಳು ಹೇಳುತ್ತಾರೆ.—ಎಲೈ ಶಿವಶರ್ಮನೆ, ಆ ತರುವಾಯ **ಉತ್ತಾನಪಾದರಾಯನ** ಮಗನಾದ ಆ ಧ್ರುವನು ಕಾಡಿನಿಂದ ಹೊರಟು ಬಂದು ಯಮುನಾನದಿಯ ತೀರದಲ್ಲಿದ್ದ ಮನೋಹರವಾದ ಮಧುವನವನ್ನು ಸೇರಿದನು.

೨. ಆ ಮಧುವನವು ಮಾಹಾತ್ಮ್ಯಯುಕ್ತವಾದುದು. ಸಂಸಾರಬಂಧನವನ್ನು ಪರಿಹರಿಸುವ ಪರಮಾತ್ಮನ ಆದ್ಯಸ್ಥಾನವು. ಆ ಪುಣ್ಯಕ್ಷೇತ್ರವನ್ನು ಸೇರಿದ ಪಾಪಿಷ್ಠನು ಸಹ ಪಾಪವನ್ನು ಕಳೆದುಕೊಂಡು ಪುಣ್ಯಶಾಲಿಯಾಗುತ್ತಾನೆಂಬುದರಲ್ಲಿ ಸಂಶಯವಿಲ್ಲವು.

೩. ಇಂತಹ ಆ ವನದಲ್ಲಿ ಧ್ರುವಕುಮಾರನು ಎಲ್ಲ ಬಂಧನಗಳನ್ನೂ ತೊಲಗಿಸುವ ವಾಸುದೇವದ್ವಾದಶಾಕ್ಷರೀಮಂತ್ರವನ್ನು ಜಪಿಸುತ್ತ, ಧ್ಯಾನದಿಂದ ಸ್ತಿಮಿತವಾದ ದೃಷ್ಟಿಯುಳ್ಳವನಾಗಿ ಜಗತ್ತೆಲ್ಲ ಆ ವಾಸುದೇವಮಯವಾಗಿರುವುದನ್ನು ಕಂಡನು.

೪. ದಶದಿಶೆಗಳಲ್ಲಿಯೂ ಸೂರ್ಯರಶ್ಮಿಗಳಲ್ಲಿಯೂ ನರಿ, ಜಿಂಕೆ, ಸಿಂಹ **ಮೊದಲಾದ** ಮೃಗಗಳ ರೂಪಗಳಲ್ಲಿಯೂ ಆ ಹರಿಯು ನೆಲಸಿ ಆ ವನದಲ್ಲಿ ಸಂಚರಿಸುತ್ತಿರುವುದನ್ನು ಆ ಬಾಲಕನು ಕಂಡನು.

ಜಲೇ ಶಾಲೂರಕೂರ್ಮಾದಿರೂಪೇಣ ಭಗವಾನ್ ಹರಿಃ ।
ಹರಿರಶ್ವಾದಿರೂಪೇಣ ಮಂದುರಾಸ್ವಪಿ ಭೂಭುಜಾಂ ॥ ೫ ॥
ಅನಂತರೂಪಃ ಪಾತಾಲೇ ಗಗನೇಽನಂತಸಂಜ್ಞಕಃ ।
ಏಕೋಽಪ್ಯನಂತತಾಂ ಯಾತೋ ರೂಪಭೇದೈರನಂತಕೈಃ ॥ ೬ ॥
ದೇವೇಷು ಯೋ ವಸೇನ್ನಿತ್ಯಂ ದೇವಾನಾಂ ವಸತಿರ್ಹಿ ಯಃ ।
ಸ ವಾಸುದೇವಃ ಸರ್ವತ್ರ ದೀವ್ಯೇದ್ಯದ್ವಾಸನಾವಶಾತ್ ॥ ೭ ॥
ವಿಷ್ಲೃವ್ಯಾಪ್ತಾವಯಂ ಧಾತುರ್ಯತ್ರ ಸಾರ್ಥಕತಾಂ ಗತಃ ।
ವಿಷ್ಣುನಾಮಸ್ವರೂಪೇ ಹಿ ಸರ್ವವ್ಯಾಪನಶಾಲಿನಿ ॥ ೮ ॥
ಸರ್ವೇಷಾಂ ಚ ಹೃಷೀಕಾಣಾಮೀಶನಾತ್ಪರಮೇಶ್ವರಃ ।
ಹೃಷೀಕೇಶ ಇತಿ ಖ್ಯಾತೋ ಯಃ ಸ ಸರ್ವತ್ರ ಸಂಸ್ಥಿತಃ ॥ ೯ ॥
ನ ಚ್ಯವಂತೇ ಹಿ ಯದ್ಭಕ್ತಾ ಮಹತಿ ಪ್ರಲಯೇ ಸತಿ ।
ಅತೋಽಚ್ಯುತೋಽಖಿಲೇ ಲೋಕೇ ಸ ಏಕಃ ಸರ್ವಗೋಽವ್ಯಯಃ ॥೧೦॥

---

೫. ನೀರಿನಲ್ಲಿ ಕಪ್ಪೆ, ಆಮೆ ಮೊದಲಾದ ರೂಪಗಳಿಂದಲೂ ಅರಸರ ಅಶ್ವ ಶಾಲೆಗಳಲ್ಲಿ ಕುದುರೆಗಳ ರೂಪಗಳಿಂದಲೂ ಆ ಭಗವಂತನೇ ನೆಲಸಿರುವವನು.

೬. ಪಾತಾಳದಲ್ಲಿ ಸರ್ಪರಾಜನಾದ ಅನಂತನರೂಪದಿಂದಲೂ ಗಗನದಲ್ಲಿ ಅಪರಿಚ್ಛಿನ್ನ ರೂಪನಾಗಿ ಅನಂತರೂಪದಿಂದಲೂ ನೆಲಸಿರುವವನು ಶ್ರೀಹರಿಯೇ. ಆ ಪರಮಾತ್ಮನು ಒಬ್ಬನೇ ಆದರೂ ಅನಂತವಾದ ರೂಪಭೇದಗಳಿಂದ ಅನಂತನೇ ಆಗಿರುವನು.

೭. ಯಾವ ಭಗವಂತನು ಸಮಸ್ತ ದೇವತೆಗಳಲ್ಲಿಯೂ ಅಂತರಾತ್ಮನಾಗಿ ನೆಲಸಿ ಆ ದೇವತೆಗಳಿಗೆ ಆಶ್ರಯಭೂತನಾಗಿರುವನೊ ಆ ವಾಸುದೇವನು ವಾಸನಾವಶದಿಂದ ಸಮಸ್ತಯೋನಿಗಳಲ್ಲಿಯೂ ಅಂತರ್ಯಾಮಿಯಾಗಿರುವುದ ರಿಂದಲೂ, ಅಧಿಷ್ಠಾನವಾಗಿರುವುದರಿಂದಲೂ ಸರ್ವವ್ಯಾಪಕನಾಗಿರುವನು.

೮. ವಿಷ್ಲೃ ಎಂಬ ಧಾತುವಿನ ವ್ಯಾಪ್ತ್ಯರ್ಥವು ಸರ್ವವ್ಯಾಪನಶೀಲನಾದ ಆ ವಿಷ್ಣುವಿನ ನಾಮಸ್ವರೂಪದಲ್ಲಿ ಸಾರ್ಥಕತೆಯನ್ನು ಪಡೆದಿರುವುದು.

೯. ಸಮಸ್ತರ ಇಂದ್ರಿಯಗಳಿಗೂ ಒಡೆಯನಾದ ಆ ಪರಮೇಶ್ವರನು ಹೃಷೀಕೇಶನೆಂದು ಪ್ರಖ್ಯಾತನಾಗಿ ಜಗತ್ತಿನ ಚರಾಚರಪ್ರಾಣಿಗಳಲ್ಲೆಲ್ಲ ನೆಲಸಿರುವನು.

೧೦. ಆತನ ಭಕ್ತರು ಮಹಾಪ್ರಳಯಕಾಲದಲ್ಲಿಯೂ ಚ್ಯುತಿಹೊಂದದಿರು ವುದರಿಂದ ಸರ್ವವ್ಯಾಪಿಯೂ, ಅವ್ಯಯನೂ ಆದ ಆ ಪ್ರಭುವೊಬ್ಬನೇ ಅಚ್ಯುತ ನೆಂದು ಸಮಸ್ತಲೋಕಗಳಲ್ಲಿಯೂ ಪ್ರಸಿದ್ಧನಾಗಿರುವನು.

ಇದಂ ಚರಾಚರಂ ವಿಶ್ವಂ ಯೋ ಬಭಾರ ಸ್ವಲೀಲಯಾ ।
ಭೃತ್ಯಾ ಸ್ವರೂಪಸಂಪತ್ತ್ಯಾ ಸೋಽತ್ರ ವಿಶ್ವಂಭರೋಽಖಿಲಂ ॥ ೧೧ ॥
ತಸ್ಯೇಕ್ಷಣೇ ಸವಿಾಕ್ಷೇತೇ ನಾಽನ್ಯದ್ವಿಷ್ಣುಪದಾದೃತೇ ।
ನಿರೀಕ್ಷ್ಯಃ ಪುಂಡರೀಕಾಕ್ಷೋ ನಾಽನ್ಯೋ ನಿಯಮತೋ ಹ್ಯತಃ ॥ ೧೨ ॥
ನಾಽನ್ಯಶಬ್ದಗ್ರಹೌ ತಸ್ಯ ಜಾತೌ ಶಬ್ದಗ್ರಹಾವಪಿ ।
ವಿನಾ ಮುಕುಂದಗೋವಿಂದದಾಮೋದರಚತುರ್ಭುಜ ॥ ೧೩ ॥
ಗೋವಿಂದಚರಣಾರ್ಚಾರ್ಚಾಂ ತತ್ಪ್ರಿಯಂ ಕರ್ಮ ವೈ ವಿನಾ ।
ಶಂಖಚಕ್ರಾಂಕಿತೌ ತಸ್ಯ ನಾಽನ್ಯಕರ್ಮಕರೌ ಕರೌ ॥ ೧೪ ॥
ನಿರ್ದ್ವಂದಚರಣದ್ವಂದ್ವಂ ತನ್ಮನೋ ಮನುತೇ ಹರೇಃ ।
ಹಿತ್ವಾಽನ್ಯನ್ಮನನಂ ಸರ್ವಂ ನಿಶ್ಚಲತ್ವಮವಾಪಹ ॥ ೧೫ ॥
ಚರಣೌ ವಿಷ್ಣುಶರಣೌ ಹಿತ್ವಾ ನಾರಾಯಣಾಂಗಣಂ ।
ತಸ್ಯ ಸೋ ಚರತೋಽನ್ಯತ್ರ ಚರತೋ ವಿಪುಲಂ ತಪಃ ॥ ೧೬ ॥

---

೧೧. ತನ್ನ ಲೀಲೆಯಿಂದಲೇ ಚರಾಚರಾತ್ಮಕವಾದ ಈ ವಿಶ್ವವನ್ನು ಭರಿಸಿ, ಆಭರಣಸಾಮರ್ಥ್ಯದಿಂದಲೂ ಸ್ವರೂಪಸಂಪತ್ತಿಯಿಂದಲೂ ಅಖಿಲರೂಪನಾದ ಆ ಭಗವಂತನು ವಿಶ್ವಂಭರನೆನಿಸಿರುವನು.

೧೨. ಇಂತಹ ಆ ಮಹಾವಿಷ್ಣುವಿನ ಚರಣವನ್ನುಳಿದು ಆ ಪುಂಡರೀಕಾಕ್ಷನೊಬ್ಬನನ್ನಲ್ಲದೆ ಮತ್ತಾರನ್ನೂ ನೋಡಕೂಡದೆಂಬ ನಿಯಮದಿಂದ ಆ ಧ್ರುವನ ನೇತ್ರಗಳು ಬೇರಾವುದೊಂದನ್ನೂ ನೋಡುತ್ತಿರಲಿಲ್ಲವು.

೧೩. ಮುಕುಂದ, ಗೋವಿಂದ, ದಾಮೋದರ, ಚತುರ್ಭುಜ ಎಂಬ ಆ ಭಗವನ್ನಾಮಗಳನ್ನಲ್ಲದೆ ಆ ಬಾಲಕನ ಕಿವಿಗಳು ಬೇರಾವ ಶಬ್ದಗಳನ್ನೂ ಗ್ರಹಿಸುತ್ತಿರಲಿಲ್ಲ.

೧೪. ಆ ಕುಮಾರನ ಕೈಗಳು ಶಂಖಚಕ್ರಾಂಕಿತಗಳಾಗಿ ಗೋವಿಂದನ ಅಡಿದಾವರೆಗಳ ಪೂಜೆಯೆಂಬ ಪ್ರಿಯವಾದ ಕರ್ಮವೊಂದನ್ನಲ್ಲದೆ ಮತ್ತಾವ ಕರ್ಮವನ್ನೂ ಮಾಡುತ್ತಿರಲಿಲ್ಲ.

೧೫. ಆ ಧ್ರುವನ ಮನಸ್ಸು ಮುಕ್ತಿಗೆ ಮೂಲಭೂತವಾದ ಆ ಪರಮಾತ್ಮನ ಚರಣದ್ವಂದ್ವವನ್ನು ಮಾತ್ರ ಧ್ಯಾನಿಸುತ್ತ ಮಿಕ್ಕೆಲ್ಲ ಚಿಂತೆಗಳನ್ನೂ ತೊರೆದು ನಿಶ್ಚಲತ್ವವನ್ನು ಹೊಂದಿತು.

೧೬. ಅಪಾರವಾದ ತಪಸ್ಸನ್ನು ಮಾಡುತ್ತಿದ್ದ ಆ ಧ್ರುವನ ಪಾದಗಳು ವಿಷ್ಣುವಿನ ರಕ್ಷೆಯನ್ನೊಳಗೊಂಡು ಆ ಭಗವಂತನ ಆಲಯದ ಅಂಗಣದಲ್ಲಲ್ಲದೆ ಬೇರೊಂದೆಡೆಯಲ್ಲಿ ಚಲಿಸದೆ ಇದ್ದುವು.

ವಾಣೀ ಪ್ರಮಾಣೀಕ್ರಿಯತೇ ಗೋವಿಂದಗುಣವರ್ಣನೇ ।
ಜೋಷಂ ಸಮಾಸತಾ ತೇನ ಮಹಾಸಾರಂ ತಪಸ್ಯತಾ ॥ ೧೭ ॥
ನಿತಾಂತಕಮಲಾಕಾಂತನಾಮಧೇಯಸುಧಾರಸಂ ।
ರಸಯಂತೀ ನ ರಸನಾ ತಸ್ಯಾಽನ್ಯರಸಸಸ್ಪೃಹಾ ॥ ೧೮ ॥
ಶ್ರೀಮುಕುಂದಪದದ್ವಂದ್ವ ಪದ್ಮಾಮೋದ ಪ್ರಮೋದಿತಂ ।
ಗಂಧಾಂತರಂ ನ ತದ್ಘ್ರಾಣಂ ಪರಿಜಿಘ್ರೃತ್ಯಶೀಘ್ರಗಂ ॥ ೧೯ ॥
ತ್ವಗಿಂದ್ರಿಯಂ ಮಧುರಿಪೋಃ ಪರಿಸ್ಪೃಶ್ಯ ಪದದ್ವಯಂ ।
ಸರ್ವಸ್ಪರ್ಶಸುಖಂ ಪ್ರಾಪ ತಸ್ಯ ಭೂಜಾನಿಜನ್ಮನಃ ॥ ೨೦ ॥
ಶಬ್ದಾದಿವಿಷಯಾಧಾರಂ ಸಾರಂ ದಾಮೋದರಂ ಪರಂ ।
ಧ್ರುವೇಂದ್ರಿಯಾಣಿ ಸಂಪ್ರಾಪ್ಯ ಕೃತಾರ್ಥಾನ್ಯಭವಂಸ್ತದಾ ॥ ೨೧ ॥
ಲುಪ್ತಾನಿ ಸರ್ವತೇಜಾಂಸಿ ತತ್ತಪಸ್ತಪನೋದಯೇ ।
ಚಂದ್ರಸೂರ್ಯಾನಲಕ್ಷ್ಮಾಣಾಂ ಪ್ರದೀಪಿತಜಗತ್ತ್ರಯೇ ॥ ೨೨ ॥

---

೧೭. ಅತಿಶಯವಾದ ಧೈರ್ಯವನ್ನವಲಂಬಿಸಿ ತಪಸ್ಸನ್ನೆಸಗುತ್ತಿದ್ದವನೂ ಅಧಿಕವಾದ ಭಕ್ತಿಯಿಂದ ವಿಷ್ಣುವನ್ನು ಸೇವಿಸಿ ಆತನ ಪ್ರೀತಿಯನ್ನು ಸಂಪಾದಿಸ ಬಯಸಿದವನೂ ಆದ ಆ ಧ್ರುವಕುಮಾರನು ಅವನ ವಾಗಿಂದ್ರಿಯವನ್ನು ಭಗವಂತನ ಗುಣಕರ್ಮಗಳನ್ನು ಮಾತ್ರ ಹೇಳಿ ಕೃತಾರ್ಥವಾಗುವಂತೆ ನಿಯಮಿಸಿ ಕೊಂಡಿದ್ದನು.

೧೮. ಅವನ ರಸನೇಂದ್ರಿಯವು ಕಮಲಾಕಾಂತನಾದ ಆ ನಾರಾಯಣನ ನಾಮಧೇಯ ರೂಪವಾದ ಸುಧಾರಸವನ್ನು ಮಾತ್ರ ಆಸ್ವಾದಿಸುತ್ತ ಇತರ ರಸಗಳಲ್ಲಿ ಸ್ವಲ್ಪಮಾತ್ರವೂ ಸ್ಪೃಹೆಗೊಳ್ಳುತ್ತಿರಲಿಲ್ಲ.

೧೯. ಆತನ ಘ್ರಾಣೇಂದ್ರಿಯವು ಶ್ರೀಮುಕುಂದನ ಚರಣದ್ವಂದ್ವವೆಂಬ ಕಮಲದ ಗಂಧವನ್ನು ಆಘ್ರಾಣಿಸಿ ಪ್ರಮೋದಗೊಂಡು, ಇತರ ವಾಸನಾದ್ರವ್ಯ ಗಳನ್ನು ದೂರೀಕರಿಸಿದ್ದಿತು.

೨೦. ಆ ರಾಜಕುಮಾರನ ಚರ್ಮೇಂದ್ರಿಯವು ಮಧುರಿಪುವಾದ ನಾರಾಯಣನ ಪದದ್ವಯದ ಸ್ಪರ್ಶವನ್ನು ತಳೆದು, ಸ್ರಕ್ಚಂದನಾದಿ ವಿಷಯೋಪ ಭೋಗಗಳ ಸುಖಸಂಸ್ಪರ್ಶವನ್ನು ಸಂಪೂರ್ಣವಾಗಿ ಪಡೆದು ತೃಪ್ತಿಗೊಂಡಿದ್ದಿತು.

೨೧. ಶಬ್ದಾದಿ ಸಮಸ್ತ ವಿಷಯಗಳಿಗೂ ಅಧಿಷ್ಠಾನಪ್ರಾಯವಾಗಿ ಸಾರಸರ್ವಸ್ವಸ್ವರೂಪವಾದ ಆ ದಾಮೋದರನೆಂಬ ಪರಬ್ರಹ್ಮನನ್ನು ಹೊಂದಿ, ಆ ಧ್ರುವಕುಮಾರನ ಸರ್ವೇಂದ್ರಿಯಗಳೂ ಕೃತಾರ್ಥಗಳಾದುವು.

೨೨. ಧ್ರುವನ ತಪಸ್ಸೆಂಬ ಸೂರ್ಯನುದಿಸಿದೊಡನೆಯೆ ತ್ರೈಲೋಕ್ಯವೆಲ್ಲ

ಇಂದ್ರಚಂದ್ರಾಗ್ನಿವರುಣಸಮೀರಣಧನಾಧಿಪಾಃ ।
ಯಮನೈರ್ಋತಮುಖ್ಯಾಶ್ಚ ಜಾತಾಃ ಸ್ವಪದಶಂಕಿತಾಃ ॥ ೨೩ ॥
ವೈಮಾನಿಕಾಸ್ತಥಾಽನ್ಯೇಽಪಿ ವಸುಮುಖ್ಯಾ ದಿವೌಕಸಃ ।
ತತೋ ಧ್ರುವಾತ್ಸಮುತ್ರೇಸುಃ ಸ್ವಾಧಿಕಾರೈಧಿತಾಧಯಃ ॥ ೨೪ ॥
ಯತ್ರ ಯತ್ರ ಧ್ರುವಃ ಪಾದಂ ವಿನೋತಿ ಪೃಥಿವೀತಲೇ ।
ಧರಾ ತಸ್ಯ ಭರಾಕ್ರಾಂತಾ ವಿನಮೇತ್ತತ್ರ ತತ್ರ ವೈ ॥ ೨೫ ॥
ಅಹೋ ತದಂಗಸಂಗೀನಿ ತ್ಯಕ್ತ್ವಾ ಜಾಡ್ಯಂ ಜಲಾನ್ಯಪಿ ।
ರಸವಂತಿ ಪದಸ್ಥಾನಿ ಸ್ಫುರಂತ್ಯನ್ಯತ್ರ ತದ್ಭಯಾತ್ ॥ ೨೬ ॥
ಯಾವಂತಿ ವಿಷ್ವಕ್ತೇಜಾಂಸಿ ಸಿದ್ಧರೂಪಗುಣಾನಿ ಚ ।
ನೇತ್ರಾಽತಿಥೀನಿ ತಾವಂತಿ ತತ್ತಪಸ್ತೇಜಸಾಽಭವನ್ ॥ ೨೭ ॥
ಅಹೋ ನಿಜಗುಣಸ್ಪರ್ಶಃ ಸತತಂ ಮಾತರಿಶ್ವನಾ ।
ದೂರದೇಶಾಂತರಸ್ಥೋಽಪಿ ತತ್ತ್ವಚೋವಿಷಯೀಕೃತಃ ॥ ೨೮ ॥

---

ಬಹುವಾಗಿ ಬೆಳಕುಗೊಳ್ಳಲು ಚಂದ್ರ, ಸೂರ್ಯ, ಅಗ್ನಿ, ನಕ್ಷತ್ರಗಳ ತೇಜಸ್ಸೆಲ್ಲ ಉಡುಗಿಹೋಯಿತು.

೨೩. ಇಂದ್ರ, ಚಂದ್ರ, ಅಗ್ನಿ, ವರುಣ, ಸಮೀರಣ, ಕುಬೇರ, ಯಮ, ನಿರ್ಋತಿ ಮೊದಲಾದ ದಿಕ್ಪಾಲಕರೆಲ್ಲರೂ ತಮ್ಮತಮ್ಮ ಸ್ಥಾನಗಳಿಗೆಲ್ಲಿ ಚ್ಯುತಿ ಬರುವುದೊ ಎಂದು ಭೀತಿಗೊಂಡರು.

೨೪ ಅಷ್ಟ ವಸುಗಳೇ ಮೊದಲಾದ ವಿಮಾನಸಂಚರಣಶೀಲರಾದ ದೇವತೆಗಳೆಲ್ಲರೂ ತಮ್ಮ ಅಧಿಕಾರಗಳಿಗೆ ಎಲ್ಲಿ ಧಕ್ಕೆ ಬರುವುದೋ ಎಂದು ಆ ಧ್ರುವಕುಮಾರನಿಗೆ ಹೆದರಿಹೋದರು.

೨೫. ಯಾವ ಯಾವ ಪ್ರದೇಶಗಳಲ್ಲಿ ಧ್ರುವನು ಅಡಿಯಿಡುತ್ತಿದ್ದನೊ ಆಯೆಡೆಗಳಲ್ಲೆಲ್ಲ ಭೂಮಿಯು ಅವನ ಭಾರವನ್ನು ಭರಿಸಲಾರದೆ ಕುಗ್ಗಿ ಹೋಗುತ್ತಿದ್ದಿತು.

೨೬. ಆ ವನದಲ್ಲಿನ ಯಮುನಾದಿ ನದೀಜಲಗಳು ಮಹಾತಪಸ್ವಿಯಾದ ಆ ಧ್ರುವ ಬಾಲಕನ ಅಂಗಸಂಗವನ್ನು ಹೊಂದಿ ಪರಿಶುದ್ಧಗಳಾಗಿ, ಅವನ ತಪಸ್ಸಿಗೆ ಭೀತಿಗೊಂಡು ಬೇರೆ ಬೇರೆ ಪ್ರದೇಶಗಳಲ್ಲಿಯೂ ಜಾಡ್ಯವನ್ನು ತೊರೆದು ರಸಸ್ವರೂಪವಾಗಿ ಪ್ರವಹಿಸುತ್ತಿರುವುವಲ್ಲವೆ!

೨೭. ಆ ಧ್ರುವನ ತಪಸ್ಸಿನಿಂದ ಉದಿಸಿದ ತೇಜೋಬಲದಿಂದ ಅವನಿಗೆ ಜಗತ್ತಿನಲ್ಲಿಯ ಸಮಸ್ತ ಸಿದ್ಧಪುರುಷರ ಗುಣರೂಪದ್ಯೋತಕಗಳಾದ ತೇಜಸ್ಸೆಲ್ಲವೂ ಗೋಚರವಾಗುತ್ತಿದ್ದಿತು.

೨೮. ಆಹ! ವಾಯುವು ದೂರದೇಶದಲ್ಲಿದ್ದರೂ ಆ ಧ್ರುವನ ಸ್ಪರ್ಶವನ್ನು

ವ್ಯೋಮ್ನಾಽಪಿ ಶಬ್ದಗುಣಿನಾ ಧ್ರುವಾರಾಧನಬುದ್ಧಿನಾ ।
ಶಬ್ದಜಾತಸ್ತ್ವಶೇಷೋಽಪಿ ತತ್ಕರ್ಣಶರಣೀಕೃತಃ ॥ ೨೯ ॥
ಆರಾಧಿತೋಽನುದಿವಸಂ ಸ ಭೂತೈರಪಿ ಪಂಚಭಿಃ ।
ತಪ ಏವ ಪರಂ ಮೇನೇ ಗೋವಿಂದಾರ್ಪಿತಮಾನಸಃ ॥ ೩೦ ॥
ಕೌಸ್ತುಭೋದ್ಭಾಸಿತಹೃದಃ ಪೀತಕೌಶೇಯವಾಸಸಃ ।
ಧ್ಯಾನಾತ್ತೇಜೋಮಯಂ ವಿಶ್ವಂ ತೇನೈಕ್ಷಿ ನೃಪಸೂನುನಾ ॥ ೩೧ ॥
ಮರುತ್ವತಾಽತಿಮಹತೀ ಚಿಂತಾಪ್ತಾ ತತ್ತಪೋಭಯಾತ್ ।
ಮತ್ಪದಂ ಚೇದಕಾಂಕ್ಷಿಷ್ಯದಹರಿಷ್ಯದ್ಧ್ರುವಂ ಧ್ರುವಃ ॥ ೩೨ ॥
ಸಮರ್ಥಸ್ತ್ವಪ್ಸರೋ ವರ್ಗೋ ನಿಯಂತುಂ ಯಮಿನಾಂ ಯಮಾನ್ ।
ಸ ತು ಯೂನಿ ಪ್ರಭವತಿ ನಾಽತ್ರ ಬಾಲೇ ಕರೋಮಿ ಕಿಂ ॥ ೩೩ ॥

---

ಹೊಂದಿ, ಮಾಂದ್ಯ ಸೌರಭ್ಯ ಶೈತ್ಯವೆಂಬ ತನ್ನ ಸಹಜ ಸ್ಪರ್ಶಗುಣಗಳನ್ನು ತಾನೇ ಪಡೆದುಕೊಳ್ಳುತ್ತಿದ್ದನು.

೨೯. ಶಬ್ದಗುಣವನ್ನೊಳಗೊಂಡ ಆಕಾಶವು ಮಹಾತಪಸ್ವಿಯಾದ ಧ್ರುವನನ್ನು ಆರಾಧಿಸ ಬಯಸಿ ಸಮಸ್ತ ಶಬ್ದ ಸಮೂಹವನ್ನು ಅವನ ಕಿವಿಗಳಿಗೆ ಶರಣು ಹೊಗಿಸಿದನು.

೩೦. ಹೀಗೆ ಆ ಧ್ರುವನು ಪ್ರತಿನಿತ್ಯವೂ ಪಂಚಭೂತಗಳಿಂದಲೂ ಆರಾಧಿತನಾಗಿ, ಆ ಗೋವಿಂದನ ಅಡಿಗಳಲ್ಲಿಯೇ ನೆಲಸಿದ ಮನಸ್ಸುಳ್ಳವನಾಗಿ, ಎಲ್ಲಕ್ಕಿಂತಲೂ ತಪಸ್ಸೇ ಶ್ರೇಷ್ಠವೆಂಬುದನ್ನು ಮನಗಂಡನು.

೩೧. ತರುವಾಯ ಆ ರಾಜಕುಮಾರನು ಅಂತೆಯೇ ಧ್ಯಾನಿಸುತ್ತ ಕೌಸ್ತುಭಮಣಿಯಿಂದ ಬೆಳಗಿದ ವಕ್ಷಸ್ಥಲವುಳ್ಳವನೂ, ಪೀತಾಂಬರಧರನೂ ಆದ ಭಗವಂತನ ತೇಜಸ್ಸಿನಿಂದಲೆ ವಿಶ್ವವೆಲ್ಲವೂ ತುಂಬಿರುವುದನ್ನು ಸಾಕ್ಷಾತ್ಕರಿಸಿಕೊಂಡನು.

೩೨. ಅತ್ತ ಮಹೇಂದ್ರನು ಆ ಕುಮಾರನ ತಪಸ್ಸಿನಿಂದ ಭಯಗೊಂಡು, "ಈ ಧ್ರುವನು ನನ್ನ ಪದವಿಯನ್ನೇನಾದರೂ ಬಯಸಿದುದಾದರೆ ಅದನ್ನು ಅವನು ಅಪಹರಿಸುವುದರಲ್ಲಿ ಸಂಶಯವೇ ಇಲ್ಲ" ಎಂದು ಭಾವಿಸಿ ಬಹಳವಾಗಿ ಚಿಂತೆಗೀಡಾದನು.

೩೩. "ಆಹ! ಈ ಅಪ್ಸರೆಯರ ಗುಂಪು ಸಂಯಮಿಗಳಾದ ತಪಸ್ವಿಗಳ ಚಿತ್ತಸ್ಥೈರ್ಯವನ್ನು ನಾಶಗೊಳಿಸಲು ಸಮರ್ಥವೇ ಆದರೂ ಅದರ ಸಾಮರ್ಥ್ಯವು ಯುವಕರ ವಿಷಯದಲ್ಲಿ ಮಾತ್ರ ಸಫಲವಾಗುತ್ತದೆಯಾಗಲಿ ಇನ್ನೂ ಕೇವಲ ಬಾಲಕನಾದ ಈ ಧ್ರುವನ ವಿಷಯದಲ್ಲಿ ವ್ಯರ್ಥವೇ ಆಗುತ್ತದೆ. ಏನು ಮಾಡಲಿ?

ತಪಸ್ವಿನಾಂ ತಪೋ ಹಂತುಂ ದ್ವೌ ಮತ್ಸಾಹಾಯ್ಯಕಾರಿಣೌ ।
ಕಾಮಕ್ರೋಧೌ ನ ತಾವಸ್ಮಿನ್ ಪ್ರಭವೇತಾಂ ಶಿಶೌ ಧ್ರುವೇ ॥ ೩೪ ॥
ಏಕ ಏವ ಕಿಲೋಪಾಯೋ ಬಾಲೇ ಮೇ ಪ್ರಭವಿಷ್ಯತಿ ।
ಭೂತಾಲಿಂ ಭೀಷಣಾಕಾರಾಂ ಪ್ರಹಿಣೋಮ್ಯಹ ತದ್ಭಿಯೇ ॥ ೩೫ ॥
ಬಾಲತ್ವಾದ್ಭೀಷಿತೋ ಭೂತೈಸ್ತಪಸ್ತ್ಯಕ್ಷ್ಯತ್ಯಸೌ ಧ್ರುವಂ ।
ಇತಿ ನಿಶ್ಚಿತ್ಯ ಭೂತಾಲಿಂ ಪ್ರೇಷಯಾಮಾಸ ವಾಸವಃ ॥ ೩೬ ॥
ಭಲ್ಲೂಕಾಕಾರಸರ್ವಾಂಗ ಉಪ್ಪ್ರಲಂಬಶಿರೋಧರಃ ।
ಕಶ್ಚಿದ್ದುರ್ದರ್ಶ ದಶನಸ್ತ್ವಭ್ಯಧಾವತ್ತಮರ್ಭಕಂ ॥ ೩೭ ॥
ತಂ ವ್ಯಾಘ್ರವದನಃ ಕಶ್ಚಿದ್ವ್ಯಾದಾಯ ವಿಕಟಾನನಂ ।
ದ್ವಿಪೋಚ್ಚದೇಹಸಂಸ್ಥಾನೋ ಮುಹುರ್ಗರ್ಜನ್ ಸಮಭ್ಯಗಾತ್ ॥ ೩೮ ॥
ರಯಾತ್ತು ಮಾಂಸಕಂ ಭುಂಜನ್ ಕಶ್ಚಿದ್ವಿಕಟದಂಷ್ಟ್ರಕಃ ।
ರೋಷಾತ್ತಮಭಿದುದ್ರಾವ ದೃಷ್ಟ್ವಾ ಸಂತರ್ಜಯನ್ನಿವ ॥ ೩೯ ॥

---

೩೪. ತಪಸ್ವಿಗಳ ತಪಸ್ಸನ್ನು ನಾಶಗೊಳಿಸಲು ನನಗಿರುವ ಸಹಾಯಕರು ಇಬ್ಬರೆ; ಒಬ್ಬನು ಕಾಮ. ಇನ್ನೊಬ್ಬನು ಕ್ರೋಧ ಅವರಿಬ್ಬರೂ ಬಾಲಕನಾದ ಈ ಧ್ರುವನ ತಪಸ್ಸನ್ನು ಕೆಡಿಸಲು ಸಮರ್ಥರಲ್ಲ

೩೫. ಆದುದರಿಂದ ಈ ಬಾಲಕನ ತಪಸ್ಸನ್ನು ಕೆಡಿಸಲು ನನಗೆ ಒಂದೇ ಉಪಾಯವು ತೋರುತ್ತದೆ. ಇವನನ್ನು ಭಯಗೊಳಿಸಲು ಈಗ ನಾನು ಭೂತಗಳ ಗುಂಪನ್ನು ಕಳುಹಿಸುತ್ತೇನೆ.

೩೬. ಕೇವಲ ಬಾಲಕನಾಗಿರುವುದರಿಂದ ಅವನು ಭೂತಗಳಿಗೆ ಬೆದರಿ ತಪಸ್ಸನ್ನು ತೊರೆಯುವುದು ಖಂಡಿತ'' ಎಂಬೀ ಪ್ರಕಾರವಾಗಿ ನಿಶ್ಚಯಿಸಿ ಆ ವಾಸವನು ಅಂತೆಯೆ ಭೂತಗಳ ಗುಂಪನ್ನು ಪ್ರೇರಿಸಿ ಕಳುಹಿಸಿದನು.

೩೭. ಆ ಭೂತಗಣಗಳಲ್ಲಿ ಒಂದು ಭೂತವು ಮೈಯೆಲ್ಲಾ ಕರಡಿಯಂತೆ ತೋರುತ್ತಿರಲು, ಒಂಟೆಯಂತೆ ಜೋಲುತ್ತಿರುವ ತಲೆಗೂದಲುಳ್ಳುದಾಗಿ, ನೋಡಲಸದಳವಾದ ಕೋರೆದಾಡೆಗಳಿಂದ ಭಯಂಕರವಾಗಿ ಆ ಮಗುವನ್ನು ಅಟ್ಟಿಬಂದಿತು.

೩೮. ಮತ್ತೊಂದು ಭೂತವು ವಿಕಾರವಾದ ತನ್ನ ಹುಲಿಮೊಗವನ್ನು ಅಗಲವಾಗಿ ತೆರೆದುಕೊಂಡು, ಆನೆಯಂತೆ ದೊಡ್ಡದೇಹವುಳ್ಳುದಾಗಿ ಅಡಿಗಡಿಗೂ ಘೋರವಾಗಿ ಗರ್ಜಿಸುತ್ತ, ಆ ಧ್ರುವನಿದ್ದೆಡೆಗೆ ಓಡಿಬಂದಿತು.

೩೯. ವಿಕಾರವಾದ ಕೋರೆದಾಡೆಗಳುಳ್ಳ ಮತ್ತೊಂದು ಭೂತವು ಮಾಂಸದ ತುಂಡನ್ನು ಕಚ್ಚಿ ತಿನ್ನುತ್ತ, ಆ ಬಾಲಕನನ್ನು ನೋಡಿ ರೋಷಗೊಂಡು ಹಿಂಸಿಸಲೋಸುಗವೋ ಎಂಬಂತೆ ಬಹುವೇಗವಾಗಿ ಅವನ ಕಡೆಗೆ ಓಡಿಬಂದಿತು.

ಅತಿ ತೀಕ್ಷ್ಣೈರ್ವಿಷಾಣಾಗ್ರೈಸ್ತಟಾನುಚ್ಚಾನ್ವಿದಾರಯನ್ ।
ಖುರಾಗ್ರೈರ್ದಲಯನ್ ಭೂಮಿಂ ಮಹೋಕ್ಷೋಽಭಿಜಗರ್ಜ ತಂ ॥೪೦॥
ಕಶ್ಚಿದ್ಧಿ ಪನ್ನಗೀಭೂಯ ಫಟಾಟೋಪಭಯಾನಕಃ ।
ಅತಿಲೋಲದ್ವಿರಸನಃ ಪುಸ್ಫೂರ್ಜ ನಿಕಷಾಚಿತಂ ॥ ೪೧ ॥
ಕಶ್ಚಿಚ್ಚ ಮಹಿಷಾಕಾರಃ ಕ್ಷಿಪಂಛೃಂಗಾಗ್ರತೋ ಗಿರೀನ್ ।
ಲಾಂಗೂಲತಾಡಿತಧರಃ ಶ್ವಸನ್ನೇಗಾತ್ತಮಾಪ್ತವಾನ್ ॥ ೪೨ ॥
ಕಶ್ಚಿದ್ದಾವಾಽನಲಾಲೀಢಖರ್ಜೂರದ್ರುಮಸನ್ನಿಭಂ ।
ಬಿಭ್ರದೂರುದ್ವಯಂ ಭೂತೋ ವ್ಯಾತ್ತಾಸ್ಯಸ್ತಮಭೀಷಯತ್ ॥ ೪೩ ॥
ಮೌಲಿಜೈರಭ್ರಸಂಘರ್ಷಂ ಕುರ್ವನ್ದೀರ್ಘಕೃಶೋದರಃ ।
ನಿಮಗ್ನಪಿಂಗನಯನಃ ಕಶ್ಚಿದ್ಭೀಷಯತಿಸ್ಮ ತಂ ॥ ೪೪ ॥
ಕೃಪಾಣಪಾಣಿರ್ಭಗ್ನಾಸ್ಯೋ ವಾಮಹಸ್ತಕಪಾಲಧೃತ್ ।
ಪ್ರಚಂಡಂ ಕ್ಷ್ವೇಡಯನ್ಕಶ್ಚಿದಭ್ಯಧಾವತ್ತಮರ್ಭಕಂ ॥ ೪೫ ॥

---

೪೦. ಮತ್ತೊಂದು ಭೂತವು ದೊಡ್ಡ ಗೂಳಿಯ ಆಕಾರವನ್ನು ತಳೆದು ಗುಟುರುಹಾಕುತ್ತ ಬಹು ಮೊನಚಾದ ಕೋಡತುದಿಗಳಿಂದ ಎತ್ತರವಾದ ದಡಗಳನ್ನು ಗುದ್ದಿ ಕೆಡವುತ್ತ, ಕಾಲಗೊರಸುಗಳಿಂದ ಭೂಮಿಯನ್ನು ಕೆರೆಯುತ್ತ ಆ ಬಾಲಕನನ್ನು ಕಂಡು ಮತ್ತಷ್ಟು ಗಟ್ಟಿಯಾಗಿ ಗುಟುರುಹಾಕಿತು.

೪೧. ಮತ್ತೊಂದು ಭೂತವು ಸರ್ಪಾಕಾರವನ್ನು ತಾಳಿ ಪಟಾಟೋಪದಿಂದ ಬಹು ಭಯಂಕರವಾಗಿ ತೋರುತ್ತ, ನೀಳವಾಗಿ ಜೋಲುತ್ತಿರುವ ಎರಡು ನಾಲಗೆಗಳುಳ್ಳದ್ದಾಗಿ ಬುಸುಗುಟ್ಟುತ್ತ ಆ ಕುಮಾರನ ಬಳಿಸಾರಿತು.

೪೨. ಇನ್ನೊಂದು ಭೂತವು ಕೋಣನ ರೂಪವನ್ನು ತಳೆದು ಕೋಡತುದಿಗಳಿಂದ ಬೆಟ್ಟಗಳನ್ನೇ ಚಿಮ್ಮುತ್ತ ಬಾಲದಿಂದ ಭೂಮಿಯನ್ನು ಅಪ್ಪಳಿಸುತ್ತ ಸಿರ್ರೆಂದು ಬಿಸಸುಯ್ಯುತ್ತ ಅವನ ಬಳಿಗೆ ಓಡಿ ಬಂದಿತು.

೪೩. ಮಗದೊಂದು ಭೂತವು ದಳ್ಳುರಿ ತಗುಲಿದ ಖರ್ಜೂರದ ಮರವನ್ನು ಹೋಲಿದ ತೊಡೆಗಳನ್ನೊಳಗೊಂಡು ಅಗಲವಾಗಿ ಬಾಯಿತೆರೆದು ಅವನನ್ನು ಹೆದರಿಸಿತು.

೪೪. ಇನ್ನೊಂದು ಭೂತವು ಆಕಾಶವನ್ನೇ ಒರೆಯುತ್ತಿರುವ ತಲೆಗೂದಲುಗಳುಳ್ಳದಾಗಿ, ದೀರ್ಘವೂ ಕೃಶವೂ ಆದ ಹೊಟ್ಟೆಯನ್ನೊಳಗೊಂಡು, ಗುಳಿಬಿದ್ದ ಬೂದುಬಣ್ಣದ ಕಣ್ಣುಗಳಿಂದ ಅವನನ್ನು ದುರುಗುಟ್ಟಿ ನೋಡುತ್ತ ಹೆದರಿಸಿತು.

೪೫. ಮತ್ತೊಂದು ಭೂತವು ಮುರಿದ ಮುಖವುಳ್ಳದಾಗಿ, ಬಲಗೈಯಲ್ಲಿ ಕತ್ತಿಯನ್ನು ಹಿಡಿದು ಝಳಪಿಸುತ್ತ, ಎಡಗೈಯಲ್ಲಿ ತಲೆಬುರುಡೆಯನ್ನು ತಳೆದು, ಕಠೋರವಾಗಿ ಕಿರಿಚುತ್ತ ಆ ಅರ್ಭಕನನ್ನು ಅಟ್ಟಿ ಬಂದಿತು.

ವಿಶಾಲಸಾಲಮಾದಾಯ ಕುರ್ವನ್ಕಿಲಕಿಲಾರವಂ ।
ಕಶ್ಚಿತ್ತ್ವಮಭಿತೋ ಯಾತಿ ಕಾಲೋದಂಡಧರೋ ಯಥಾ ॥ ೪೬ ॥
ತಮಃ ಸಂಕೇತಸದನಂ ವ್ಯಾಘ್ರಂ ವೈ ವದನಂ ಮಹತ್ ।
ಕೃತಾಂತ ಕಂದರಾಕಾರಂ ಬಿಭ್ರತ್ಕಶ್ಚಿತ್ತ್ವಮಭ್ಯಗಾತ್ ॥ ೪೭ ॥
ಉಲೂಕಾಕಾರತಾಂ ಧೃತ್ವಾ ಫೂತ್ಕಾರೈರತಿದಾರುಣೈಃ ।
ಹೃದಯಾಕಂಪನೈಃ ಕಶ್ಚಿದ್ಭೀಷಯಾಮಾಸ ತಂ ಧ್ರುವಂ ॥ ೪೮ ॥
ಯಕ್ಷಿಣೀ ಕಾಚಿದಾನೀಯ ರುದಂತಂ ಕಸ್ಯಚಿಚ್ಛಿಶುಂ ।
ಅಪಿಬದ್ರುಧಿರಂ ಕೋಷ್ಣಾಚ್ಚ ಖಾದಾಸ್ಥಿ ಮೃಣಾಲವತ್ ॥ ೪೯ ॥
ಪಿಪಾಸಿತಾದ್ಯರುಧಿರಂ ತೇ ಪಿಪಾಸ್ಯಾಮ್ಯಹಂ ಧ್ರುವ ।
ಯಥಾಽಸ್ಯ ಬಾಲಸ್ಯ ತಥಾ ಚರ್ವಿತ್ವಾಽಸ್ಥೀನಿ ವಾದಿನೀ ॥ ೫೦ ॥
ಆನೀಯ ತೃಣದಾರೂಣಿ ಪರಿಸ್ತೀರ್ಯ ಸಮಂತತಃ ।
ದಾವಾಗ್ನಿಂ ಜ್ವಾಲಯಾಮಾಸ ಕಾಚಿದ್ವಾತ್ವಾ ವಿವರ್ಧಿತಂ ॥ ೫೧ ॥

---

೪೬. ಇನ್ನೊಂದು ಭೂತವು, ಬಹು ದೊಡ್ಡದಾದ ಸಾಲವೃಕ್ಷವನ್ನುಕೈಯಲ್ಲಿ ಎತ್ತಿ ಹಿಡಿದು ಕಿಲಕಿಲನೆ ವಿಕಾರವಾಗಿ ನಗುತ್ತಲೂ ಅರಚುತ್ತಲೂ ದಂಡಧರನಾದ ಯಮನಂತೆ ಆ ಮಗುವಿಗೆ ಅಭಿಮುಖವಾಗಿ ಓಡಿಬಂದಿತು.

೪೭. ಮಗದೊಂದು ಭೂತವು, ಯಮನ ಗುಹೆಯನ್ನನುಕರಿಸಿ ಕತ್ತಲೆಗೆ ಸಂಕೇತನವ ನೆಲೆಯೊ ಎಂಬಂತಿರುವ ಬಹು ದೊಡ್ಡದಾದ ತನ್ನ ಹುಲಿಮೊಗವನ್ನು ಅಗಲವಾಗಿ ತೆರೆದುಕೊಂಡು ಆ ಹುಡುಗನ ಕಡೆಗೆ ಬಂದಿತು.

೪೮. ಮತ್ತೊಂದು ಭೂತವು ಒನಕೆಯ ಆಕಾರವನ್ನು ತಾಳಿ, ಎದೆನಡುಕವನ್ನುಂಟುಮಾಡುವ ಭಯಂಕರವಾದ ಫೂತ್ಕಾರಶಬ್ದಗಳಿಂದ ಆ ಧ್ರುವನನ್ನು ಹೆದರಿಸಿತು.

೪೯–೫೦. ಒಬ್ಬಾನೊಬ್ಬ ಯಕ್ಷಿಣಿಯು ಬಹಳವಾಗಿ ಅಳುತ್ತಿರುವ ಮಗುವೊಂದನ್ನು ಕೊಂಡುಬಂದು, ಅದರ ಎದೆಗೂಡಿನಿಂದ ರಕ್ತವನ್ನು ಬಗೆದು ಕುಡಿದು ಅದರ ಎಲುಬುಗಳನ್ನೆಲ್ಲ ಕಮಲದ ನಾಳಗಳನ್ನೆಂತೊ ಅಂತು ಆ ಬಾಲಕನ ಮುಂದೆ ತಿನ್ನತೊಡಗಿದಳು. "ಎಲಾ ಧ್ರುವನೆ, ನಾನು ಬಹಳವಾಗಿ ಬಾಯಾರಿದ್ದೇನೆ. ಈ ಮಗುವಿನ ರಕ್ತವನ್ನು ಕುಡಿದು ಎಲುಬುಗಳನ್ನು ತಿನ್ನುತ್ತಿರುವಂತೆಯೆ ನಿನ್ನ ರಕ್ತವನ್ನು ಈಗಲೆ ಕುಡಿಯಬಯಸುವೆನಲ್ಲದೆ ಎಲುಬುಗಳನ್ನೂ ತಿಂದು ಬಿಡುತ್ತೇನೆ" ಎಂದು ಆ ಯಕ್ಷಿಣಿಯು ಅಬ್ಬರಿಸಿದಳು.

೫೧. ಇನ್ನೊಬ್ಬ ಯಕ್ಷಿಣಿಯು ಹುಲ್ಲುಮೋಟುಗಳನ್ನೆಲ್ಲ ತಂದು ಗುಡ್ಡೆ ಹಾಕಿ, ಅದಕ್ಕೆ ಬೆಂಕಿಯಿಟ್ಟು ಬಾಯಲ್ಲಿ ಊದಿ ದಳ್ಳುರಿಯನ್ನೆಬ್ಬಿಸಿದಳು.

ವೇತಾಲೀರೂಪಮಾಸ್ಥಾಯ ಭಂಕ್ತ್ವಾ ಕಾಚಿತ್ತರೂನ್ಗಿರೀನ್ ।
ರುರೋಧ ಗಗನಾಧ್ವಾನಂ ಕಂಪಯಂತೀ ಚ ತಂ ಭೃಶಂ ॥ ೫೨ ॥
ಅನ್ಯಾ ಸುನೀತಿರೂಪೇಣ ತಮಭಿಪ್ರೇಕ್ಷ್ಯ ದೂರತಃ ।
ರುರೋದಾಽತೀವ ದುಃಖಾರ್ತಾ ವಕ್ಷೋಽಘಾತಂ ಮುಹುರ್ಮುಹುಃ ॥
ಉವಾಚ ಚ ವಚಶ್ಚಾಟು ಬಹುಮಾಯಾವಿನಿರ್ಮಿತಂ ।
ಕಾರುಣ್ಯಪೂರ್ಣವಾತ್ಸಲ್ಯಮತೀವಾತನ್ವತೀ ಸತೀ ॥ ೫೪ ॥
ತ್ವದೇಕಶರಣಾಂ ವತ್ಸ ಬತ ಮೃತ್ಯುರ್ಜಿಘಾಂಸತಿ ।
ರಕ್ಷ ರಕ್ಷ ಗತಾಸುಂ ಮಾಂ ಶರಣಾಗತವತ್ಸಲ ॥ ೫೫ ॥
ಪ್ರತಿಗ್ರಾಮಂ ಪ್ರತಿಪುರಂ ಪ್ರತ್ಯಧ್ವಂ ಪ್ರತಿಕಾನನಂ ।
ಪ್ರತ್ಯಾಶ್ರಮಂ ಪ್ರತಿಗಿರಿಂ ಶ್ರಾಂತಾ ತ್ವದ್ವೀಕ್ಷಣಾತುರಾ ॥ ೫೬ ॥
ಯದಾ ಪ್ರಭೃತಿ ರೇ ಬಾಲ ನಿರಗಾತ್ತಪಸೇ ಭವಾನ್ ।
ತದೇವ ದಿನಮಾರಭ್ಯ ನಿರ್ಗತಾಽಹಂ ತ್ವದೀಕ್ಷಣೇ ॥ ೫೭ ॥
ತೈಸ್ತೈಃ ಸಪತ್ನೀದುರ್ವಾಕ್ಯೈರ್ದುನೋಽಷಿ ತ್ವಂ ಯಥಾಽರ್ಭಕ ।
ತಥಾಽಹಮಪಿ ದೂನಾಽಸ್ಮಿ ನಿತರಾಂ ತದ್ವಚೋಽಗ್ನಿನಾ ॥ ೫೮ ॥

---

೫೨ ಮತ್ತೊಬ್ಬ ಯಕ್ಷಿಣಿಯು ಭೇತಾಳಿಯ ರೂಪವನ್ನು ತಳೆದು ಮರಗಳನ್ನೂ ಗಿರಿಗಳನ್ನೂ ಕೆಡವಿ ಆ ಬಾಲಕನನ್ನು ಬಹಳವಾಗಿ ಭೀತಿಗೊಳಿಸಿ ನಡುಗಿಸುತ್ತ ಗಗನಮಾರ್ಗವನ್ನೇ ಅಡ್ಡಗಿಸಿ ನಿಂತಳು.

೫೩–೫೪. ಇನ್ನೊಬ್ಬಳು ಸುನೀತಿಯ ರೂಪವನ್ನು ತಳೆದು ದೂರದಿಂದಲೆ ಆ ಧ್ರುವಕುಮಾರನನ್ನು ಕಂಡು ಬಹು ದುಃಖಪೀಡಿತೆಯಾದವಳಂತೆ ಬಹಳವಾಗಿ ರೋದಿಸುತ್ತ, ಅಡಿಗಡಿಗೂ ಎದೆಯನ್ನು ಬಡಿದುಕೊಂಡು, ಮಿತಿಮಿರಿದ ದಯೆ ವಾತ್ಸಲ್ಯಗಳನ್ನು ತೋರಿ, ಕಪಟದಿಂದ ನಿರ್ಮಿಸಿಕೊಂಡ ಅನೇಕ ಬೇಳುವೆಯ ಮಾತುಗಳನ್ನು ಆಡತೊಡಗಿದಳು.

೫೫–೬೦. "ವತ್ಸ, ನೀನೊಬ್ಬನೇ ಗತಿಯೆಂದು ನಂಬಿರುವ ನಾನು ಇದೀಗ ಮೃತ್ಯುಮುಖದಲ್ಲಿರುವೆನು. ಶರಣಾಗತವತ್ಸಲನಾದ ನೀನು ನನ್ನನ್ನು ಕಾಪಾಡು, ಕಾಪಾಡು. ನಾನು ಪ್ರತಿಯೊಂದು ಹಳ್ಳಿಯನ್ನೂ ಪಟ್ಟಣವನ್ನೂ ದಾರಿಯನ್ನೂ ಕಾಡನ್ನೂ ಆಶ್ರಮವನ್ನೂ ಬೆಟ್ಟಗುಡ್ಡಗಳನ್ನೂ ನಿನ್ನನ್ನು ನೋಡುವ ಆತುರದಿಂದಲೇ ಅಲೆದಲೆದು ಬೇಸತ್ತಿರುವೆನು. ಮಗು, ನೀನು ತಪಸ್ಸಿಗಾಗಿ ಮನೆಯನ್ನು ಬಿಟ್ಟು ಹೊರಟಂದೇ ನಾನೂ ನಿನ್ನನ್ನು ನೋಡಲೋಸುಗ ಮನೆಯನ್ನು ಬಿಟ್ಟು ಹೊರಟುಬಂದೆನು. ಕಂದ, ಬಲತಾಯಿಯ ಕೆಡುನುಡಿಗಳಿಂದ ನೀನೆಂತು ನೊಂದಿರುವೆಯೊ ಅಂತೆಯೆ ನಾನೂ ಅವಳ ಮಾತೆಂಬ ಬೆಂಕಿಯಿಂದ

ನ ನಿದ್ರಾಮಿ ನ ಜಾಗರ್ಮಿ ನಾಶ್ನಾಮಿ ನ ಪಿಬಾಮ್ಯಹಂ ।
ಧ್ಯಾಯಾಮಿ ಕೇವಲಂ ತ್ವಾಹಂ ಯೋಗಿನೀವ ವಿಯೋಗಿನೀ ॥ ೫೯ ॥
ನಿದ್ರಾದರಿದ್ರನಯನಾ ಸ್ವಪ್ನೇಽಪಿ ನ ತವಾನನಂ ।
ಆನಂದಿ ಸರ್ವಥಾ ಯನ್ಮೇ ಮಂದಭಾಗ್ಯಾ ವಿಲೋಕಯೇ ॥ ೬೦ ॥
ತ್ವದಾನನಪ್ರತಿನಿಧಿರ್ವಿಧುರ್ವಿಧುರಯಾ ಮಯಾ ।
ಉದಿತ್ವರೋಽಪಿ ನಾಲೋಕಿ ತಾಪಂ ವೈ ತ್ಯಕ್ತುಕಾಮಯಾ ॥ ೬೧ ॥
ತ್ವದಾಲಾಪಸಮಾಲಾಪಂ ಕಲಯನ್ಕಿಲ ಕಾಕಲೀಂ ।
ಕೋಕಿಲೋಽಪಿ ಮಯಾಽಽಕರ್ಣಿ ನಾಲಕಾಕೀರ್ಣಕರ್ಣಯಾ ॥ ೬೨ ॥
ತ್ವದಂಗಸಂಗಮಧುರೋ ಧ್ರುವ ಧೂಪಿತಯಾ ಮಯಾ ।
ನಾಽನಿಲೋಽಪಿ ಮಯಾಲಿಂಗಿ ಕ್ವಚಿದ್ವಿಶ್ರಾಂತಯಾ ಭೃಶಂ ॥ ೬೩ ॥
ಕೇ ದೇಶಾಃ ಕಾಶ್ಚ ಸರಿತಃ ಕೇ ಶೈಲಾಸ್ತ್ವತ್ಕೃತೇ ಧ್ರುವ ।
ಮಯಾ ಚರಣಚಾರಿಣ್ಯಾ ರಾಜಪತ್ನ್ಯಾ ನ ಲಂಘಿತಾಃ ॥ ೬೪ ॥

---

ಬೆಂದುಹೋಗಿರುವೆನು. ನಿದ್ರೆಯಿಲ್ಲ, ಎಚ್ಚೆತ್ತಿರಲೂ ಸಾಧ್ಯವಿಲ್ಲ. ಊಟವಿಲ್ಲ. ಜಲಪಾನವೂ ಇಲ್ಲ. ನಿನ್ನ ವಿಯೋಗದಿಂದ ದುಃಖಿತೆಯಾಗಿ ಯೋಗಿನಿಯಂತೆ ನಾನು ನಿನ್ನನ್ನೇ ಕುರಿತು ಚಿಂತಿಸುತ್ತಿರುವೆನು. ನಿದ್ರೆಯೇ ಬಾರದಿರುವುದರಿಂದ ಅಮಿತಾನಂದವನ್ನುಂಟುಮಾಡುವ ನಿನ್ನ ಮುಖದರ್ಶನವು ಮಂದಭಾಗಿನಿಯಾದ ನನಗೆ ಸ್ವಪ್ನದಲ್ಲಿಯೂ ಆಗಲೊಲ್ಲದು.

೬೧–೬೨. ವತ್ಸ, ನಿನ್ನ ಅಗಲಿಕೆಯಿಂದುಂಟಾದ ಸಂತಾಪವನ್ನು ತೊರೆಯ ಬಯಸಿದ ನಾನು ನಿನ್ನ ಮುಖಕ್ಕೆ ಪ್ರತಿನಿಧಿಯೆನಿಸಿದ ಚಂದ್ರನುದಿಸಿದರೂ ನೋಡಲು ಸಮರ್ಥಳಾಗಲಿಲ್ಲ. ನೀನು ಹೊರಟುಹೋದಮೇಲೆ, ದುಃಖದ ಹೆಚ್ಚಳದಿಂದ ತಲೆಯನ್ನೂ ಬಾಚಿಕೊಳ್ಳದೆ ಕೂದಲು ಕಿವಿಗಳನ್ನೇ ಮುಚ್ಚಿರಲು ಮಧುರವಾದ ನಿನ್ನಆಲಾಪಗಳನ್ನನುಕರಿಸುವ ಕೋಕಿಲೆಯ ಪ್ರಿಯಾಲಾಪಗಳನ್ನು ಕೇಳಲೂ ನನಗೆ ಸಾಧ್ಯವಾಗಲಿಲ್ಲ.

೬೩. ಅಪ್ಪಾ ಧ್ರುವ, ನೀನು ನನ್ನ ಬಳಿಯಿದ್ದಾಗ ಬಹಳವಾಗಿ ಆಯಾಸ ಗೊಂಡರೂ ನಿನ್ನ ಮೆಯ್ಯನ್ನು ಸೋಕಿಬರುವ ಮಧುರವಾದ ತಂಗಾಳಿಯನ್ನು ಸೇವಿಸಿ ತಣ್ಣಗೊಳ್ಳುತ್ತಿದ್ದ ನಾನು, ನೀನು ಹೊರಟುಬಂದಂದಿನಿಂದಲೂ ಎಲ್ಲಿಯೂ ಯಾವಾಗಲೂ ತಂಗಾಳಿಯನ್ನಪ್ಪಿ ತಣಿಯಲಿಲ್ಲ.

೬೪. ಉತ್ತಾನಪಾದರಾಯನ ಮಡದಿಯಾದ ನಾನು ನಿನ್ನ ಸಲುವಾಗಿ ಕಾಲ್ನಡಗೆಯಿಂದಲೆ ಎಷ್ಟು ದೇಶಗಳು, ಎಷ್ಟು ನದಿಗಳು, ಎಷ್ಟು ಬೆಟ್ಟಗಳು— ದಾಟದ್ದಾಯಿತೊ!

ಅಧ್ರುವಂ ಸರ್ವಮೇವೈತತ್ಪಶ್ಯಂತ್ಯಂಧೀಕೃತಾಽಸ್ಮ್ಯಹಂ ।
ಧಾತ್ರೀಂ ತ್ರಾಯಸ್ವ ಮಾಂ ಪುತ್ರ ಪ್ರಾಪ್ಯ ತ್ವಂ ಮೇಽಂಧಯಷ್ಟಿತಾಂ॥೬೫॥
ಮೃದುಲಾನಿ ತವಾಂಗಾನಿ ಕ್ವೇಮಾನಿ ಕ್ವತಪಸ್ತ್ವಿದಂ ।
ಪರುಷಂ ಪುರುಷೈಃ ಸಾಧ್ಯಂ ಪರುಷಾಂಗೈರ್ನರರ್ಷಭ ॥ ೬೬ ॥
ಅನೇನ ತಪಸಾ ವತ್ಸ ತ್ವಯಾಽಽಪ್ಯಂ ಕಿಮನೇನಸಾ ।
ಧರಾಧೀಶ ತನೂಜತ್ವಾದಧಿಕಂ ತದ್ವದಾಽಧುನಾ ॥ ೬೭ ॥
ಅನೇನ ವಯಸಾ ಬಾಲ ಖೇಲನೀಯಂ ತ್ವಯಾಽನಿಶಂ ।
ಬಾಲಕ್ರೀಡನಕೈರನ್ಯೈಃ ಸವಯಃ ಶಿಶುಭಿಃ ಸಮಂ ॥ ೬೮ ॥
ತತಃ ಕೌಮಾರಮಾಸಾದ್ಯ ವಯೋಽಭಿಧ್ಯಾನ ಶೀಲಿನಾ ।
ಭವತಾ ಸರ್ವವಿದ್ಯಾನಾಂ ಭಾವ್ಯಂ ವೈ ಪಾರದೃಶ್ವನಾ ॥ ೬೯ ॥
ವಯೋಽಥ ಚತುರಂ ಪ್ರಾಪ್ಯ ಯೋಷಾಸ್ರಕ್ಚಂದನಾದಿಕಾನ್ ।
ನಿರ್ವೇಕ್ಷ್ಯಸಿ ಬಹೂನ್ಭೋಗಾನಿಂದ್ರಿಯಾರ್ಥಾನ್ ಕೃತಾರ್ಥಯನ್ ॥೭೦॥

---

೬೫. ಧ್ರುವನಾದ ನೀನಿಲ್ಲದ ಅಧ್ರುವವಾದ ಈ ಎಲ್ಲ ಪ್ರದೇಶಗಳನ್ನೂ ನೋಡಿ ನೋಡಿ ನಾನು ಕುರುಡಾಗಿ ಹೋಗಿದ್ದೇನೆ. ಮಗನೆ, ಈಗ ನೀನು ನಿನ್ನ ತಾಯಿಯಾದ ನನಗೆ ಕುರುಡಿಗೆ ಕೈಯ ಕೋಲಿನಂತೆ ಆಸರೆಯನ್ನಿತ್ತು ಕಾಪಾಡು.

೬೬. ಎಲೈ ನರಶ್ರೇಷ್ಠನೆ, ಕೋಮಲವಾದ ಈ ನಿನ್ನ ಮೈಯ್ಯೆಲ್ಲಿ? ಕಠಿನವಾದ ಮಯ್ಯುಳ್ಳವರಿಂದಲೆ ಸಾಧ್ಯವಾಗುವ ಈ ತಪಸ್ಸೆಲ್ಲಿ?

೬೭. ಧರಾಧೀಶನ ಮಗನಾಗಿ ಜನಿಸಿ, ಯಾವೊಂದು ಪಾಪದ ಲೇಪವೂ ಇಲ್ಲದಿರುವ ನೀನು ಇಂತಹ ಕಠಿನವಾದ ತಪಸ್ಸಿನಿಂದ ಪಡೆಯಬೇಕಾದ ಅಂತಹ ಅಧಿಕಾಧಿಕವಾದ ಇಷ್ಟಾರ್ಥವಾದರೂ ಏನೆಂಬುವನ್ನು ಈಗ ನನಗೆ ಹೇಳು.

೬೮. ನಿನ್ನ ವಯಸ್ಸಿಗೆ ನೀನು ಯಾವಾಗಲೂ ಸಮಾನ ವಯಸ್ಸಿನ ಮಕ್ಕಳೊಡನೆ ಚೆಂಡು, ಗೋಲಿ ಮೊದಲಾದ ಆಟದ ಸಾಮಾನುಗಳನಿಟ್ಟುಕೊಂಡು ಆಟವಾಡುತ್ತಿರಬೇಕು.

೬೯. ಬಾಲ್ಯವು ಕಳೆದಮೇಲೆ ಕೌಮಾರವನ್ನು ಹೊಂದಿದ ಬಳಿಕ ಮನಸ್ಸು ಒಂದು ನೆಲೆಗೆ ಬಂದು ಅನುಸಂಧಾನ ಸಾಮರ್ಥ್ಯವು ಬಂದಂದು ನೀನು ಸಮಸ್ತ ವಿದ್ಯೆಗಳಲ್ಲಿಯೂ ಪಾರಂಗತನಾಗಬೇಕು.

೭೦. ಆಮೇಲೆ ಯೌವನವು ಬರುತ್ತದೆ. ಆಗ ನೀನು ಸ್ತ್ರೀ ಸ್ರಕ್ಚಂದನಾದಿ ಬಹು ಭೋಗಗಳನ್ನು ಅನುಭವಿಸುತ್ತ, ಇಂದ್ರಿಯಗಳಿಗೆ ಉಚಿತವಾದ ಪ್ರಯೋಜನವನ್ನು ಪಡೆದು ಸಾರ್ಥಕಗೊಳಿಸಿಕೊಳ್ಳುವಿಯಂತೆ.

ಉತ್ಪಾದ್ಯಾಽಥ ಬಹೂನ್ಪುತ್ರಾನ್ ಗುಣಿನೋ ಧರ್ಮವತ್ಸಲಾನ್ ।
ಪರಿಸಂಕ್ರಾಮಿತಶ್ರೀಕಸ್ತೇಷ್ವಥೋ ತ್ವಂ ತಪಶ್ಚರ ॥ ೭೧ ॥
ಇದಾನೀಮೇವ ತಪಸಿ ಬಾಲ್ಯೇ ವಯಸಿ ಕಃ ಶ್ರಮಃ ।
ಪಾದಾಂಗುಷ್ಠಕರೀಷಾಗ್ನಿಃ ಕದಾ ಮೌಲಿಮವಾಪ್ಸ್ಯತಿ ॥ ೭೨ ॥
ವಿಪಕ್ಷಪರಿಭೂತೇನ ಹೃತಮಾನೇನ ಕೇನಚಿತ್ ।
ಪರಿಭ್ರಷ್ಟಶ್ರಿಯಾ ವಾಽಪಿ ತಪ್ತವ್ಯಂ ತೇಷು ಕೋ ಭವಾನ್ ॥ ೭೩ ॥
ಹೃತಮಾನೇನ ತಪ್ತವ್ಯಂ ನಿಶಮ್ಯೇತಿ ವಚೋ ಧ್ರುವಃ ।
ದೀರ್ಘಮುಷ್ಣಂ ಹಿ ನಿಃಶ್ವಸ್ಯ ಪುನರ್ದಧ್ಯೌ ಹರಿಂ ಹೃದಿ ॥ ೭೪ ॥
ಜನಯಿತ್ರೀಮನಾಭಾಷ್ಯಂ ಭೂತಭೀತಿಂ ವಿಹಾಯ ಚ ।
ಧ್ರುವೋಽಚ್ಯುತಧ್ಯಾನಪರಃ ಪುನರೇವ ಬಭೂವ ಹ ॥ ೭೫ ॥
ಸಾಽಪಿ ಭೂತಾವಲೀಭೀತಿಂ ಬಹುಭೀಷಣಭೂಷಣಾ ।
ದರ್ಶಯಂತೀ ತಮಭಿತೋಽದ್ರಾಕ್ಷೀಚ್ಚಕ್ರಂ ಸುದರ್ಶನಂ ॥ ೭೬ ॥

---

೭೧. ಆ ಬಳಿಕ ಧರ್ಮದಲ್ಲಿ ಪ್ರೇಮವುಳ್ಳವರಾಗಿ ಗುಣಾಢ್ಯರೆನಿಸಿದ ಬಹು ಪುತ್ರರನ್ನು ಪಡೆದು, ನಿನ್ನ ಯೌವನವೆಲ್ಲ ಕಳೆದ ತರುವಾಯ ತಪಸ್ಸನ್ನು ಮಾಡು.

೭೨. ಈ ಬಾಲ್ಯದಲ್ಲಿಯೆ ತಪಸ್ಸಿಗೆ ಆರಂಭಿಸಿ ವಾರ್ಧಕ್ಯದವರೆಗೂ ಇದನ್ನು ಮುಂದುವರಿಸಿಕೊಂಡು ಹೋಗುವುದು ಬಹಳ ಶ್ರಮವಾಗುವುದು. ಕಾಲಬೆರಳ ತುದಿಯಲ್ಲಿರುವ ಕಾಡುಬೆರಣಿಯ ಬೆಂಕಿಯು ತುದಿಗೇರುವುದು ಯಾವಾಗಲೊ?

೭೩. ಶತ್ರುವಿನಿಂದ ಅಪಮಾನಗೊಂಡವನೂ, ಮರ್ಯಾದೆಯನ್ನು ಕಳೆದುಕೊಂಡವನೂ, ಐಶ್ವರ್ಯವೆಲ್ಲ ನಾಶವಾಗಿ ದಟ್ಟದರಿದ್ರನಾದವನೂ ಹೀಗೆ ತಪಸ್ಸನ್ನು ಮಾಡಬೇಕು. ಇವರಲ್ಲಿ ನೀನು ಯಾರು?''

೭೪–೭೫. ಆ ಕಪಟಸುನೀತಿಯು ಈ ರೀತಿ ನುಡಿಯಲು, ''ಅಪಮಾನಕ್ಕೀಡಾದವನು ತಪಸ್ಸುಮಾಡಬೇಕು'' ಎಂದು ನುಡಿದ ಅವಳ ಮಾತನ್ನು ಕೇಳಿ, ಅವಳು ಮಾಯಾವಿನಿಯಾಗಿರಬೇಕೆಂದೇ ನಿಶ್ಚಯಿಸಿ, ದೀರ್ಘವಾಗಿ ಬಿಸಿಯುಸಿರೆದು ಮತ್ತೆ ತನ್ನ ಹೃದಯದಲ್ಲಿ ಶ್ರೀಹರಿಯನ್ನೇ ಧ್ಯಾನಿಸುತ್ತಾ ಕುಳಿತನು. ಅವನು ತಾಯಿಯೆಂದು ಬಂದ ಅವಳೊಡನೆ ಮಾತನಾಡದೆಯೂ ಭೂತಭೀತಿಯನ್ನು ತೊರೆದೂ ಮತ್ತೆ ಅಚ್ಯುತನನ್ನೇ ಧ್ಯಾನಿಸತೊಡಗಿದನು.

೭೬–೮೦. ಬಹುವಾಗಿ ಭಯಗೊಳಿಸುವುದೇ ಭೂಷಣವಾಗಿರುವ ಆ ಭೂತಸಮೂಹವು, ಆ ಧ್ರುವಕುಮಾರನ ಸುತ್ತ ತಿರುಗುತ್ತ ಭಯಗೊಳಿಸುತ್ತಿರುವಾಗಲೇ ಆತನ ಸುತ್ತಲೂ ಪರಿವೇಷದ ಪ್ರಭೆಯನ್ನೊಡಗೊಂಡು ಸೂರ್ಯನಿಗಿಂತಲೂ ಮಿಗಿಲಾದ ಕಾಂತಿಯನ್ನು ಚೆಲ್ಲಿ ಬೆಳಗುತ್ತಿರುವುದೂ, ಭಕ್ತರನ್ನು

ಪರಿತಃ ಪರಿವೇಷಾಽಽಭಂ ಸೂರ್ಯಸ್ಯೋಚ್ಚೈಃ ಸ್ಫುರತ್ಪ್ರಭಂ ।
ರಕ್ಷಣಾಯ ಚ ರಕ್ಷೋಭ್ಯಸ್ತಸ್ಯಾಽಧೋಕ್ಷಜನಿರ್ಮಿತಂ ॥ ೭೭ ॥
ಭೂತಾವಲೀ ತಮಾಲೋಕ್ಯ ಸ್ಫುರಚ್ಚಕ್ರಂ ಸುದರ್ಶನಂ ।
ಜ್ವಾಲಾಮಾಲಾಕುಲಂ ತೀವ್ರಂ ರಕ್ಷಂತಂ ಪರಿತೋ ಧ್ರುವಂ ॥ ೭೮ ॥
ಅತೀವನಿಷ್ಕಂಪಹೃದಂ ಗೋವಿಂದಾರ್ಪಿತಚೇತಸಂ ।
ತಪೋಂಕುರಮಿವೋದ್ಭಿದ್ಯ ಮೇದಿನೀಂ ಸಮುದಿತ್ವರಂ ॥ ೭೯ ॥
ಸಾಽಪಿ ಪ್ರತ್ಯುತ ಭೀತಾ ತಂ ಧ್ರುವಂ ಧ್ರುವವಿನಿಶ್ಚಯಂ ।
ನಮಸ್ಕೃತ್ಯ ಯಥಾಯಾತಂ ಯಾತಂ ವ್ಯರ್ಥಮನೋರಥಾ ॥ ೮೦ ॥
ಗರ್ಜತ್ಕಾದಂಬಿನೀಜಾಲಂ ವ್ಯೋಮ್ನಿ ವೈ ವ್ಯಾಕುಲಂ ಯಥಾ ।
ವೃಥಾ ಭವತಿ ಸಂಪ್ರಾಪ್ಯ ಮನಾಗನಿಲಲೋಲತಾಂ ॥ ೮೧ ॥
ಅಥ ಜಂಭಾರಿಣಾ ಸಾರ್ಧಂ ಭೀತಾಃ ಸರ್ವೇ ದಿವೌಕಸಃ ।
ಸಂಮಂತ್ರ್ಯ ತ್ವರಿತಾ ಜಗ್ಮುರ್ಬ್ರಹ್ಮಾಣಂ ಶರಣಂ ದ್ವಿಜ ॥ ೮೨ ॥
ನತ್ವಾ ವಿಜ್ಞಾಪಯಾಮಾಸುಃ ಪರಿಷ್ಟುತ್ಯ ಪಿತಾಮಹಂ ।
ವಚೋಽವಸರಮಾಲೋಕ್ಯ ಪೃಷ್ಟಾಗಮನಕಾರಣಾಃ ॥ ೮೩ ॥

---

ರಾಕ್ಷಸರ ಕೋಟಲೆಗೆ ಸಿಕ್ಕದಂತೆ ರಕ್ಷಿಸಲೋಸುಗ ಶ್ರೀಮನ್ಮಹಾವಿಷ್ಣುವಿನಿಂದ ನಿರ್ಮಿತವಾದುದೂ, ಸುತ್ತಮುತ್ತ ಎತ್ತೆತ್ತಲೂ ತೀವ್ರವಾದ ಅಗ್ನಿಜ್ವಾಲೆಗಳನ್ನು ಚಿಮ್ಮುತ್ತಿರುವುದೂ ಆದ ಸುದರ್ಶನ ಚಕ್ರವನ್ನೂ, ಭೂಮಿಯನ್ನೇ ಭೇದಿಸಿಕೊಂಡು ಮೇಲಕ್ಕೆ ಮೊಳೆತು ನಿಂತಿರುವ ತಪಸ್ಸಿನ ಮೊಳಕೆಯೋ ಎಂಬಂತೆ ತೋರಿ ಸುಸ್ಥಿರಮನಸ್ಕನಾಗಿ ಆ ಮನಸ್ಸೆಲ್ಲವನ್ನೂ ಶ್ರೀ ಗೋವಿಂದನ ಅಡಿದಾವರೆಗಳಲ್ಲಿ ನೆಲೆಗೊಳಿಸಿರುವ ಆ ಧ್ರುವಬಾಲಕನನ್ನೂ ಕಂಡು ಆ ಬಾಲಕನ ಸ್ಥಿರ ಸಂಕಲ್ಪವನ್ನರಿತು ಬಹುವಾಗಿ ಬೆದರಿ ತತ್ತಳಿಸಿ ಅವನಿಗೆ ಭಕ್ತಿಯಿಂದ ಮಣಿದು ಬಂದದಾರಿಯನ್ನು ಹಿಡಿದು ಹೊರಟುಹೋಯಿತು.

೮೧. ಆಕಾಶವನ್ನೆಲ್ಲಾ ಆವರಿಸಿ ಗರ್ಜಿಸುತ್ತಿದ್ದ ಪ್ರಳಯ ಮೇಘಗಳೂ ಅತ್ತಿತ್ತ ವ್ಯಾಕುಲಗೊಂಡು ಚದುರಿಹೋದುವು. ಅಯ್ಯಾ ಶಿವಶರ್ಮನೆ, ಭಕ್ತರಿಗೆ ಬರುವ ವಿಘ್ನಪರಂಪರೆಗಳೆಲ್ಲ ಹೀಗೆಯೆ ಗಾಳಿಯಂತೆ ಅತಿ ಚಂಚಲವಾಗಿ ಹರಿದುಹೋಗುವುವಷ್ಟೆ!

೮೨. ತರುವಾಯ ಇಂದ್ರನೊಡಗೂಡಿದ ದೇವತೆಗಳೆಲ್ಲರೂ ಭೀತರಾಗಿ ತಂತಮ್ಮಲ್ಲಿಯೇ ಆಲೋಚಿಸಿಕೊಂಡು ಬ್ರಹ್ಮದೇವನಲ್ಲಿಗೆ ಶರಣು ಬಂದರು.

೮೩. ಆಗ ಕಮಲಾಸನನು ಬಂದ ಕಾರಣವೇನೆಂದು ಪ್ರಶ್ನಿಸಲು ಅವರು ಆತನನ್ನು ನಮಸ್ಕರಿಸಿ ಈ ಮಾತನ್ನು ಆ ಪ್ರಭುವಿನಲ್ಲಿ ಅರಿಕೆಮಾಡಿಕೊಂಡರು.

ದೇವಾ ಊಚುಃ:—
ಧಾತರುತ್ತಾನಪಾದಸ್ಯ ತನಯೇನ ಸುವರ್ಚಸಾ ।
ತಪಸಾ ತಾಪಿತಾಃ ಸರ್ವೇ ತ್ರಿಲೋಕೀತಲವಾಸಿನಃ ॥ ೮೪ ॥
ಸಮ್ಯಕ್ಸಂವಿದ್ಮಹೇ ತಾತ ಧ್ರುವಸ್ಯ ನ ಮನೀಷಿತಂ ।
ಪದಂ ಪರಿಜಿಹೀರ್ಷುಃ ಸ ಕಸ್ಯಾಸ್ಮಾಸು ಮಹಾತಪಾಃ ॥ ೮೫ ॥
ಇತಿ ವಿಜ್ಞಾಪಿತೋ ದೇವೈರ್ವಿರಿಹಸ್ಯ ಚತುರಾನನಃ ।
ಪ್ರತ್ಯುವಾಚಾಽಥ ತಾನ್ ಸರ್ವಾನ್ಧ್ರುವತೋ ಭೀತಮಾನಸಾನ್ ॥ ೮೬ ॥
ಬ್ರಹ್ಮೋವಾಚ:—
ನ ಭೇತವ್ಯಂ ಸುರಾಸ್ತಸ್ಮಾದ್ಧ್ರುವಾದ್ಧ್ರುವಪದೈಷಿಣಃ ।
ವ್ರಜಂತು ವಿಜ್ವರಾಃ ಸರ್ವೇ ನ ಸ ವಃ ಪದಮಿಚ್ಛತಿ ॥ ೮೭ ॥
ನ ತಸ್ಮಾದ್ಭಗವದ್ಭಕ್ತಾದ್ಭೇತವ್ಯಂ ಕೇನಚಿತ್ಕ್ವಚಿತ್ ।
ನಿಶ್ಚಿತಂ ವಿಷ್ಣುಭಕ್ತಾ ಯೇ ನ ತೇ ಸ್ಯುಃ ಪರತಾಪಿನಃ ॥ ೮೮ ॥

---

೮೪. ದೇವತೆಗಳು ಹೇಳುತ್ತಾರೆ:—" ಎಲೈ ವಿಧಾತನೆ! ಉತ್ತಾನಪಾದ ಕುಮಾರನೂ, ಮಹಾತೇಜಸ್ವಿಯೂ ಆದ ಆ ಧ್ರುವನು ಅತ್ಯುಗ್ರವಾದ ತಪಸ್ ನ್ನೆಸಗಿ ಮೂರುಲೋಕದವರನ್ನೂ ಸಂತಾಪಗೊಳಿಸುತ್ತಿರುವನು.

೮೫. ಆತನಿಂತು ತಪವನ್ನೆಸಗಲು ಕಾರಣವೇನೆಂಬುದೇ ನಮಗೆ ಸ ಯಾಗಿ ತಿಳಿಯದೆ ಹೋಗಿದೆ. ಮಹಾತಪಸ್ವಿಯಾದ ಆತನು ನಮ್ಮಲ್ಲಿ ಯಾ ಪದವಿಯನ್ನು ಅಪಹರಿಸುವನೋ ಎಂಬ ಶಂಕೆಯು ನಮ್ಮನ್ನು ಬಾಧಿ ತ್ತಿದೆ."

೮೬. ಎಲೈ ಶಿವಶರ್ಮನೇ! ದೇವತೆಗಳು ಈ ರೀತಿ ವಿಜ್ಞಾಪಿಸಿಕೊಳ್ಳ ಆ ಚತುರಾನನನು ಗಟ್ಟಿಯಾಗಿ ನಕ್ಕು ಧ್ರುವನ ಸಲುವಾಗಿ ಭೀತಿಗೊಂಡಿ ಆ ದೇವತೆಗಳನ್ನು ಕುರಿತು ಇಂತೆಂದನು.

೮೭. ಬ್ರಹ್ಮನು ಹೇಳುತ್ತಾನೆ:—" ಅಯ್ಯಾ ದೇವತೆಗಳಿರಾ! ಧ್ರು ಪದವನ್ನು ಬಯಸುತ್ತಿರುವ ಆ ಧ್ರುವ ಕುಮಾರನಿಗೂ, ಅವನ ಉಗ್ರ ತಪಸ್ಸಿಗ ನೀವು ಯಾರೂ ಹೆದರಬೇಕಾಗಿಲ್ಲ. ಅವನು ನಿಮ್ಮಲ್ಲಿ ಯಾರೊಬ್ಬರ ಪದ ಯನ್ನೂ ಬಯಸುದಿಲ್ಲವಾಗಿ ನೀವು ನಿಮ್ಮ ಮನಸ್ಸಿನ ಸಂಶಯಗಳನ್ನೂ, ಭೀ ಯನ್ನೂ ತೊರೆದು ತೆರಳಿರಿ.

೮೮. ಮಹಾಭಗವದ್ಭಕ್ತನಾದ ಆತನಿಗಾಗಿ ಯಾರೂ ಎಲ್ಲಿಯೂ ಅಂ ಬೇಕಾಗಿಲ್ಲ. ಲೋಕದಲ್ಲಿ ವಿಷ್ಣುಭಕ್ತರಾದವರಾರೂ ಇತರರನ್ನು ತೊಂದ ಪಡಿಸರು.

ಆರಾಧ್ಯ ವಿಷ್ಣುಂ ದೇವೇಶಂ ಲಬ್ಧ್ವಾ ತಸ್ಮಾತ್ಸ್ವಕಾಂಕ್ಷಿತಂ ।
ಭವತಾಮಪಿ ಸರ್ವೇಷಾಂ ಪದಾನಿ ಸ್ಥಿರಯಿಷ್ಯತಿ ॥ ೮೯ ॥
ನಿಶಮ್ಯೇತಿ ಚ ಗೀರ್ವಾಣಾಃ ಪ್ರಣೀತಂ ಬ್ರಹ್ಮಣೋ ವಚಃ ।
ಪ್ರಣಿಪತ್ಯ ಸ್ವಧಿಷ್ಣ್ಯಾನಿ ಪ್ರಹೃಷ್ಟಾಃ ಪರಿವವ್ರಜುಃ ॥ ೯೦ ॥
ಅಥ ನಾರಾಯಣೋ ದೇವಸ್ತಂ ದೃಷ್ಟ್ವಾ ದೃಢಮಾನಸಂ ।
ಅನನ್ಯಶರಣಂ ಬಾಲಂ ಗತ್ವಾ ತಾರ್ಕ್ಷ್ಯರಥೋಽಬ್ರವೀತ್ ॥ ೯೧ ॥

ಶ್ರೀ ವಿಷ್ಣುರುವಾಚ :—

ಪ್ರಸನ್ನೋಽಸ್ಮಿ ಮಹಾಭಾಗ ವರಂ ವರಯ ಸುವ್ರತ ।
ತಪಸೋಽಸ್ಮಾನ್ನಿವರ್ತಸ್ವ ಚಿರಂ ಖಿನ್ನೋಽಸಿ ಬಾಲಕ ॥ ೯೨ ॥
ವಚೋಽಮೃತಂ ಸಮಾಕರ್ಣ್ಯ ಪರ್ಯುನ್ಮೀಲ್ಯ ವಿಲೋಚನೇ ।
ಇಂದ್ರನೀಲಮಣಿಜ್ಯೋತಿಃ ಪಟಲೀಂ ಪರ್ಯಲೋಕಯತ್ ॥ ೯೩ ॥
ಪ್ರತ್ಯಗ್ರವಿಕಸನ್ನೀಲೋತ್ಪಲಾನಾಂ ನಿಕುರಂಬಕೈಃ ।
ಪ್ರೋತ್ಫುಲ್ಲಿತಾಂ ಸಮಂತಾಚ್ಚ ರೋದಸೀ ಸರಸೀಮಿವ ॥ ೯೪ ॥

---

೮೯. ಆ ಬಾಲಕನು ದೇವೇಶ್ವರನಾದ ಶ್ರೀಮನ್ಮಹಾವಿಷ್ಣುವನ್ನು ತನ್ನ ತಪಸ್ಸಿನಿಂದ ಸಂತೋಷಗೊಳಿಸಿ ತನ್ನ ಕಾಂಕ್ಷಿತವನ್ನು ಪಡೆದು, ನಿಮ್ಮೆಲ್ಲರ ಪದವಿಗಳನ್ನೂ ಸ್ಥಿರಗೊಳಿಸುತ್ತಾನೆ.''

೯೦. ಬ್ರಹ್ಮದೇವನಿಂತೆನಲು ಆ ಗೀರ್ವಾಣರೆಲ್ಲರೂ ಆತನನ್ನು ನಮಸ್ಕರಿಸಿ ಸಂತುಷ್ಟಾಂತರಂಗರಾಗಿ ತಂತಮ್ಮ ಲೋಕಗಳಿಗೆ ಹೊರಟುಹೋದರು.

೯೧. ತರುವಾಯ ಇತ್ತ ಶ್ರೀಮನ್ನಾರಾಯಣಮೂರ್ತಿಯು ದೃಢಮನಸ್ಕನೂ, ಅನನ್ಯಶರಣನೂ ಆದ ಆ ಧ್ರುವನ ಬಳಿಗೆ ಗರುಡಾರೂಢನಾಗಿ ಹೋಗಿ ಪ್ರತ್ಯಕ್ಷನಾಗಿ ಅವನನ್ನು ಕುರಿತು ಹೀಗೆಂದನು.

೯೨. ಶ್ರೀ ವಿಷ್ಣುವು ಹೇಳುತ್ತಾನೆ :—''ಮಹಾಭಾಗ್ಯಶಾಲಿಯೂ, ಸುವ್ರತನೂ ಆದ ಓ ಧ್ರುವನೇ! ಇದೋ ನಾನು ನಿನಗೆ ಪ್ರಸನ್ನನಾಗಿದ್ದೇನೆ. ಇನ್ನು ಈ ತಪಸ್ಸಿನಿಂದ ಮರಳು, ಬಹಳಕಾಲದಿಂದಲೂ ಈ ಉಗ್ರ ತಪಸ್ಸನ್ನು ಮಾಡಿ ಆಯಾಸಗೊಂಡಿರುವೆ. ಇನ್ನು ತಪಸ್ಸನ್ನು ಸಾಕುಮಾಡು.''

೯೩. ಆಗ ಧ್ರುವಕುಮಾರನು ಅಮೃತೋಪಮವಾದ ಆ ಮಾತನ್ನು ಕೇಳಿ, ಮುಗಿದಿದ್ದ ಕಣ್ಣುಗಳನ್ನು ತೆರೆದು ಮೊದಲು ಇಂದ್ರನೀಲಮಣಿ ಜ್ಯೋತಿಯ ಸಮೂಹವನ್ನು ಕಂಡನು.

೯೪. ಆ ಜ್ಯೋತಿಯಾದರೋ ಭೂಮ್ಯಂತರಿಕ್ಷಗಳೆರಡೂ ಸರೋವರವಾಗಿ ಮಾರ್ಪಟ್ಟು ಬಹು ಚೆನ್ನಾಗಿ ಅರಳಿ ನಗುತ್ತಿರುವ ಕನ್ನೈದಿಲೆಗಳಿಂದ ತುಂಬಿರುವುದೋ ಎಂಬಂತಿದ್ದಿತು.

ಲಕ್ಷ್ಮೀದೇವೀಕಟಾಕ್ಷೈಃ ಕಟಾಕ್ಷಿತಮಿವಾಖಿಲಂ ।
ಧ್ರುವಸ್ತದಾ ನಿರೈಕ್ಷಿಷ್ಟ ದ್ಯಾವಾಭೂಮ್ಯೋರ್ಯದಂತರಂ ॥ ೯೫ ॥
ಪ್ರೋದ್ಯತ್ಕಾದಂಬಿನೀಮಧ್ಯವಿದ್ಯುದ್ದಾಮಸಮಾನರುಕ್ ।
ಪುರಃ ಪೀತಾಂಬರಃ ಕೃಷ್ಣಸ್ತೇನ ನೇತ್ರಾತಿಥೀಕೃತಃ ॥ ೯೬ ॥
ನಭೋನಿಕಷಪಾಷಾಣಮೇರುಕಾಂಚನರೇಖಿತಃ ।
ಯಥಾ ತಥಾ ಧ್ರುವೇಣೈಕ್ಷಿ ತದಾ ಗರುಡವಾಹನಃ ॥ ೯೭ ॥
ಸುನೀಲಗಗನಂ ಯದ್ವದ್ಭೂಷಿತಂ ತು ಕಲಾವತಾ ।
ಪೀತೇನ ವಾಸಸಾ ಯುಕ್ತಂ ಸ ದದರ್ಶ ಹರಿಂ ತದಾ ॥ ೯೮ ॥
ದಂಡವತ್ಪ್ರಣಿಪತ್ಯಾಥ ಪರಿತಃ ಪರಿಲುಠ್ಯ ಚ ।
ರುರೋದ ದೃಷ್ಟ್ವೇವ ಚಿರಂ ಪಿತರಂ ದುಃಖಿತಃ ಶಿಶುಃ ॥ ೯೯ ॥
ನಾರದೇನ ಸನಂದೇನ ಸನಕೇನ ಸುಸಂಸ್ತುತಃ ।
ಅನ್ಯೈಃ ಸನತ್ಕುಮಾರಾದ್ಯೈರ್ಯೋಗಿಭಿರ್ಯೋಗಿನಾಂ ವರಃ ॥ ೧೦೦ ॥

---

೯೫. ಆ ಭೂಮ್ಯಂತರಿಕ್ಷಗಳ ನಡುವಣ ಪ್ರದೇಶವೆಲ್ಲವನ್ನೂ ಸಾಕ್ಷಾತ್ ಲಕ್ಷ್ಮೀದೇವಿಯೇ ಕಟಾಕ್ಷಿಸುತ್ತಿರುವಳೋ ಎಂಬಂತೆ ಆ ಜ್ಯೋತಿಯು ಬಹು ಸಂಪದ್ಭರಿತವಾಗಿದ್ದಿತು.

೯೬. ತರುವಾಯ ಆ ಧ್ರುವನು ದಟ್ಟವಾಗಿ ಕವಿದಿರುವ ಮುಗಿಲುಗಳ ನಡುವಣ ಮಿಂಚಿನ ಬಳ್ಳಿಯನ್ನು ಹೋಲಿ ತನ್ನ ಮುಂಗಡೆಯೇ ಕಂಗೊಳಿಸುತ್ತಿದ್ದ ಪೀತಾಂಬರಧಾರಿಯೂ, ನೀಲಮೇಘಶ್ಯಾಮಲನೂ ಆದ ಶ್ರೀಮನ್ಮಹಾವಿಷ್ಣುವನ್ನು ಕಂಡನು.

೯೭. ಆಕಾಶವೇ ಒರೆಗಲ್ಲಾಗಿ, ಮೇರುವೇ ಸುವರ್ಣವಾಗಿ ಅದರಿಂದ ರೇಖಿತವಾದಂತೆ ಕಂಗೊಳಿಸುತ್ತಿದ್ದ ಗರುಡಾರೂಢನಾದ ಆ ಮಹಾವಿಷ್ಣುವನ್ನು ಧ್ರುವಕುಮಾರನು ಸಾಕ್ಷಾತ್ಕರಿಸಿದನು.

೯೮. ಆ ಬಾಲಕನು, ಚಂದ್ರನಿಂದಲಂಕೃತವಾದ ನೀಲಿಮವಾದ ಗಗನದಂತೆ ಬೆಳಗುತ್ತಿದ್ದ ಪೀತಾಂಬರಧಾರಿಯಾದ ಆ ವಿಷ್ಣುವನ್ನು ಕಂಡನು.

೯೯. ಆಗ ಅವನು ಆ ಪ್ರಭುವಿಗೆ ನಮಸ್ಕರಿಸಿ ಆತನ ಸುತ್ತಲೂ ಪ್ರದಕ್ಷಿಣೆಯಾಗಿ ಹೊರಳಿ ಬಹುಕಾಲದಮೇಲೆ ತಂದೆಯನ್ನು ಕಂಡ ಮಗುವಿನಂತೆ ಬಿಕ್ಕಿಬಿಕ್ಕಿ ಅಳತೊಡಗಿದನು.

೧೦೦–೧೦೧. ಆ ಸಮಯದಲ್ಲಿ ನಾರದ, ಸನಂದನ, ಸನಕ, ಸನತ್ಕುಮಾರಾದಿ ಮುನಿಸಂಸ್ತುತನೂ, ಯೋಗಿಶ್ರೇಷ್ಠನೂ, ಕಮಲದಳಾಯತಲೋಚ

ಕಾರುಣ್ಯಬಾಷ್ಪನೀರಾರ್ದ್ರಪುಂಡರೀಕವಿಲೋಚನಃ ।
ಧ್ರುವಮುತ್ಥಾಪಯಾಂಚಕ್ರೇ ಚಕ್ರೀ ಧೃತ್ವಾ ಕರೇಣ ತಂ ॥ ೧೦೧ ॥
ಹರಿಸ್ತು ಪರಿಪಸ್ಪರ್ಶ ತದಂಗಂ ಧೂಲಿಧೂಸರಂ ।
ಕರಾಭ್ಯಾಂ ಸುಕಠೋರಾಭ್ಯಾಂ ನಿತ್ಯಂ ಶಸ್ತ್ರಪರಿಗ್ರಹಾತ್ ॥ ೧೦೨ ॥
ಸ್ಪರ್ಶನಾದ್ದೇವದೇವಸ್ಯ ಸುಸಂಸ್ಕೃತಮಯಿಾ ಶುಭಾ ।
ವಾಣೀ ಪ್ರವೃತ್ತಾ ತಸ್ಯಾಸ್ಯಾತ್ತುಷ್ಟಾವಾಽಥ ಧ್ರುವೋ ಹರಿಂ ॥ ೧೦೩ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಧ್ರುವಾಖ್ಯಾನೇ ಭಗವದ್ದರ್ಶನಂ" ನಾಮ ವಿಂಶೋಽಧ್ಯಾಯಃ

---

ನನೂ ಆದ ಆ ಸ್ವಾಮಿಯು ಕಾರುಣ್ಯಬಾಷ್ಪಗಳಿಂದ ತುಂಬಿತುಳುಕುವ ಕಂಗಳುಳ್ಳವನಾಗಿ ಆ ಬಾಲಕನನ್ನು ಎರಡೂ ಕೈಗಳಿಂದ ಹಿಡಿದೆತ್ತಿ ನಿಲ್ಲಿಸಿದನು.

೧೦೨. ಇಷ್ಟೆಯಲ್ಲದೆ ಆ ಹರಿಯು, ಶಸ್ತ್ರಗಳನ್ನು ಹಿಡಿದು ಮೊರಟಾಗಿದ್ದ ತನ್ನೆರಡೂ ಕೈಗಳಿಂದ, ಭೂಮಿಯಲ್ಲಿ ಹೊರಳಿ ದೂಳಡಸಿದ್ದ ಆ ಧ್ರುವನ ಮೈಯೆಲ್ಲವನ್ನೂ ಒಮ್ಮೆ ಸವರಿದನು.

೧೦೩. ಇಂತು ದೇವದೇವನಾದ ಆ ಮಹಾವಿಷ್ಣುವಿನ ಕರಸ್ಪರ್ಶವಾದೊಡನೆಯೆ ಆ ಧ್ರುವನಿಗೆ ಸುಸಂಸ್ಕೃತವೂ, ಶುಭಕರವೂ ಆದ ವಾಕ್ಕು ಉಂಟಾಗಿ ಅವನು ಆ ಶ್ರೀಹರಿಯನ್ನು ಸ್ತುತಿಸತೊಡಗಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ "ಧ್ರುವಾಖ್ಯಾನ—ಪರಮಾತ್ಮಸಾಕ್ಷಾತ್ಕಾರವರ್ಣನ" ವೆಂಬ ಇಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಧ್ಯೈಕವಿಂಶೋಽಧ್ಯಾಯಃ

## ಧ್ರುವಸ್ತುತಿವರ್ಣನಂ

ಧ್ರುವ ಉವಾಚ :—

ನಮೋ ಹಿರಣ್ಯಗರ್ಭಾಯ ಸರ್ವಸೃಷ್ಟಿವಿಧಾಯಿನೇ ।
ಹಿರಣ್ಯರೇತಸೇ ತುಭ್ಯಂ ಸುಹಿರಣ್ಯಪ್ರದಾಯಿನೇ ॥ ೧ ॥
ನಮೋ ಹರಸ್ವರೂಪಾಯ ಭೂತಸಂಹಾರಕಾರಿಣೇ ।
ಮಹಾಭೂತಾತ್ಮಭೂತಾಯ ಭೂತಾನಾಂ ಪತಯೇ ನಮಃ ॥ ೨ ॥
ನಮಃ ಸ್ಥಿತಿಕೃತೇ ತುಭ್ಯಂ ವಿಷ್ಣವೇ ಪ್ರಭವಿಷ್ಣವೇ ।
ತೃಷ್ಣಾಹರಾಯ ಕೃಷ್ಣಾಯ ಮಹಾಭಾರಸಹಿಷ್ಣವೇ ॥ ೩ ॥
ನಮೋ ದೈತ್ಯಮಹಾರಣ್ಯದಾವವಹ್ನಿಸ್ವರೂಪಿಣೇ ।
ದೈತ್ಯದ್ರುಮಕುಠಾರಾಯ ನಮಸ್ತೇ ಶಾರ್ಙ್ಗಪಾಣಯೇ ॥ ೪ ॥

---

## ಕನ್ನಡದ ಅನುವಾದ

### ಧ್ರುವಕೃತ ಶ್ರೀವಿಷ್ಣುಸ್ತವವರ್ಣನ

೧. ಧ್ರುವನು ಸ್ತುತಿಸುತ್ತಾನೆ :—ಸೃಷ್ಟಿವಿಷಯಿಕವಾದ ವಿಜ್ಞಾನವನ್ನೊಳಗೊಂಡ ಹಿರಣ್ಯಗರ್ಭನಾಗಿ, ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂಬ ಸಕಲ ಪ್ರಪಂಚವನ್ನೂ ಸೃಜಿಸಿ, ಹಿರಣ್ಯರೇತಸನೂ, ಸಮ್ಯಜ್ಞಾನವನ್ನೂ, ಸಂಪತ್ಸಮೃದ್ಧಿಯನ್ನೂ ದಯೆಗೈಯುವವನೂ ಆದ ಎಲೈ ನಾರಾಯಣನೆ! ನಿನಗೆ ನಮಸ್ಕಾರವು.

೨. ಹರಸ್ವರೂಪನಾಗಿ ಸಮಸ್ತಭೂತಗಳನ್ನೂ ಸಂಹಾರಮಾಡುವವನಾಗಿ, ಮಹಾಭೂತಗಳೆನಿಸಿದ ಆತ್ಮಾಹಂಕಾರಗಳ ಸ್ವರೂಪನಾಗಿ, ಸಕಲ ಭೂತಗಳಿಗೂ ಒಡೆಯನಾಗಿರುವ ಓ ಸ್ವಾಮಿಯೆ! ನಿನಗೆ ನಮಸ್ಕಾರವು.

೩. ಜಗತ್ತನ್ನು ಪಾಲಿಸುವವನೂ, ಸರ್ವವ್ಯಾಪಕನಾಗಿ ವಿಷ್ಣುವೆನಿಸಿರುವವನೂ, ಮಹಾಸಮರ್ಥನೂ, ವಿಷಯಮೃಗತೃಷ್ಣಿಕೆಯನ್ನು ಪರಿಹರಿಸುವವನೂ, ಸದಾನಂದಸ್ವರೂಪನಾಗಿ ಶ್ರೀಕೃಷ್ಣನೆನಿಸಿದವನೂ, ವರಾಹಾವತಾರವನ್ನೆತ್ತಿ ಭೂಮಿಯ ಭಾರವೆಲ್ಲವನ್ನೂ ಭರಿಸುವವನೂ ಆದ ನಿನಗೆ ನಮಸ್ಕಾರವು.

೪. ದೈತ್ಯರೆಂಬ ಮಹಾರಣ್ಯಕ್ಕೆ ದಳ್ಳುರಿಯೆನಿಸಿ, ದೈತ್ಯರೆಂಬ ಹೆಮ್ಮರಗಳಿಗೆ ಕೊಡಲಿಯಂತಿರುವವನಾಗಿ, ಶಾರ್ಙ್ಗಧನುಸ್ಸನ್ನು ಧರಿಸಿರುವ ಓ ಸ್ವಾಮಿಯೆ! ನಿನಗೆ ನಮಸ್ಕಾರವು.

ನಮಃ ಕೌಮೋದಕೀವ್ಯಗ್ರಕರಾಗ್ರಾಯ ಗದಾಧರ ।
ಮಹಾದನುಜನಾಶಾಯ ನಮೋ ನಂದಕಧಾರಿಣೇ ॥ ೫ ॥
ನಮಃ ಶ್ರೀಪತಯೇ ತುಭ್ಯಂ ನಮಶ್ಚಕ್ರಧರಾಯ ಚ ।
ಧರಾಧರಾಯ ವಾರಾಹರೂಪಿಣೇ ಪರಮಾತ್ಮನೇ ॥ ೬ ॥
ನಮಃ ಕಮಲಹಸ್ತಾಯ ಕಮಲಾವಲ್ಲಭಾಯ ತೇ ।
ನಮೋ ಮತ್ಸ್ಯಾದಿರೂಪಾಯ ನಮಃ ಕೌಸ್ತುಭವಕ್ಷಸೇ ॥ ೭ ॥
ನಮೋ ವೇದಾಂತವೇದ್ಯಾಯ ನಮಃ ಶ್ರೀವತ್ಸಧಾರಿಣೇ ।
ನಮೋ ಗುಣಸ್ವರೂಪಾಯ ಗುಣಿನೇ ಗುಣವರ್ಜಿತೇ ॥ ೮ ॥
ನಮಸ್ತೇ ಪದ್ಮನಾಭಾಯ ಪಾಂಚಜನ್ಯಧರಾಯ ಚ ।
ವಾಸುದೇವ ನಮಸ್ತುಭ್ಯಂ ದೇವಕೀನಂದನಾಯ ಚ ॥ ೯ ॥
ಪ್ರದ್ಯುಮ್ನಾಯ ನಮಸ್ತುಭ್ಯಮನಿರುದ್ಧಾಯ ತೇ ನಮಃ ।
ನಮಃ ಕಂಸವಿನಾಶಾಯ ನಮಶ್ಚಾಣೂರಮರ್ದಿನೇ ॥ ೧೦ ॥

---

೫. ಕೌಮೋದಕೀಗದೆಯನ್ನು ಹಿಡಿಯಲು ಆತುರಗೊಳ್ಳುತ್ತಿರುವ ಕೈಬೆರಳುಳ್ಳವನೂ, ಗದಾಧರನೆಂದು ವಿಖ್ಯಾತನೂ, ಮಹಾದೈತ್ಯರಾದ ವಿಪ್ರಚಿತ್ತಿಯೇ ಮೊದಲಾದವರನ್ನು ನಾಶಗೊಳಿಸಿದವನೂ, ನಂದಕವೆಂಬ ಖಡ್ಗವನ್ನು ಧರಿಸಿದವನೂ ಆದ ಎಲೈ ಪ್ರಭುವೆ! ನಿನಗೆ ನಮಸ್ಕಾರವು.

೬. ಶ್ರೀಮಹಾಲಕ್ಷ್ಮಿಯ ಒಡೆಯನೂ, ಸುದರ್ಶನ ಚಕ್ರವನ್ನು ಧರಿಸಿದವನೂ, ಮೇರುಪರ್ವತ ಸ್ವರೂಪನೂ, ಪರಮಾತ್ಮನೂ ಆದ ಓ ಶ್ರೀಹರಿಯೆ! ನಿನಗೆ ನಮೋನಮಃ!!

೭. ಕಮಲಹಸ್ತನೂ, ಕಮಲಾಪತಿಯೂ, ಮತ್ಸ್ಯಾದಿ ರೂಪಧರನೂ, ಕೌಸ್ತುಭಮಣಿರಂಜಿತವಾದ ವಕ್ಷಃಸ್ಥಳವುಳ್ಳವನೂ ಆದ ನಿನಗೆ ನಮೋನಮಃ.

೮. ವೇದಾಂತವೇದ್ಯನೂ, ಶ್ರೀವತ್ಸಲಾಂಛನವನ್ನು ತಾಳಿರುವವನೂ, ಸಕಲ ಸದ್ಗುಣಸ್ವರೂಪನೂ, ಸಗುಣನೂ, ಗುಣರಹಿತನೂ ಆದ ನಿನಗೆ ನಮಸ್ಕಾರವು.

೯. ಪದ್ಮನಾಭನೂ, ಪಾಂಚಜನ್ಯ ಶಂಖವನ್ನು ಧರಿಸಿದವನೂ, ವಸುದೇವ ಸುತನೂ, ತಾಯಿಯಾದ ದೇವಕೀದೇವಿಗೆ ಆನಂದವನ್ನುಂಟುಮಾಡಿದವನೂ ಆದ ಎಲೈ ಶ್ರೀಕೃಷ್ಣನೇ! ನಿನಗೆ ನಮಸ್ಕೃತಿಯು.

೧೦–೧೧. ಪ್ರದ್ಯುಮ್ನನೂ, ಅನಿರುದ್ಧನೂ, ಕಂಸವಿನಾಶಕನೂ, ಚಾಣೂರ ಮರ್ದಕನೂ, ದಾಮೋದರನೂ, ಹೃಷೀಕೇಶನೂ, ಗೋವಿಂದನೂ, ಅಚ್ಯುತನೂ, ಮಾಧವನೂ, ಉಪೇಂದ್ರನೂ, ಕೈಟಭಾಸುರನನ್ನು ಸಂಹರಿಸಿದವನೂ, ಮಧು

ದಾಮೋದರ ಹೃಷೀಕೇಶ ಗೋವಿಂದಾಽಚ್ಯುತ ಮಾಧವ ।
ಉಪೇಂದ್ರ ಕೈಟಭಾರಾತೇ ಮಧುಹಂತರಧೋಕ್ಷಜ ॥ ೧೧ ॥
ನಾರಾಯಣಾಯ ನರಕಹಾರಿಣೇ ಪಾಪಹಾರಿಣೇ ।
ವಾಮನಾಯ ನಮಸ್ತುಭ್ಯಂ ಹರಯೇ ಶೌರಯೇ ನಮಃ ॥ ೧೨ ॥
ಅನಂತಾಯ ನಮಸ್ತುಭ್ಯಮನಂತಶಯನಾಯ ಚ ।
ರುಕ್ಮಿಣೀಪತಯೇ ತುಭ್ಯಂ ರುಕ್ಮಿಪ್ರಮಥನಾಯ ಚ ॥ ೧೩ ॥
ಚೈದ್ಯಹಂತ್ರೇ ನಮಸ್ತುಭ್ಯಂ ದಾನವಾಽರೇಽಸುರಾರಯೇ ।
ಮುಕುಂದ ಪರಮಾನಂದ ನಂದಗೋಪಪ್ರಿಯಾಯ ಚ ॥ ೧೪ ॥
ನಮಸ್ತೇ ಪುಂಡರೀಕಾಕ್ಷ ದನುಜೇಂದ್ರನಿಷೂದನ ।
ನಮೋ ಗೋಪಾಲರೂಪಾಯ ವೇಣುವಾದನಕಾರಿಣೇ ॥ ೧೫ ॥
ಗೋಪೀಪ್ರಿಯಾಯ ಕೇಶಿಘ್ನೇ ಗೋವರ್ಧನಧರಾಯ ಚ ।
ರಾಮಾಯ ರಘುನಾಥಾಯ ರಾಘವಾಯ ನಮೋನಮಃ ॥ ೧೬ ॥

---

ಸಂಹಾರಿಯೂ, ಅಧೋಕ್ಷಜನೂ ಆದ ಓ ಪರಮಾತ್ಮನೇ! ನಿನಗೆ ನಮೋ ನಮೋ!!

೧೨ ನಾರಾಯಣನಾಗಿ ಮಾನವರ ಅಜ್ಞಾನವನ್ನು ಕಳೆಯುವವನೂ, ನರಕಾಸುರನನ್ನು ಧ್ವಂಸಗೊಳಿಸಿದವನೂ, ಪಾಪಗಳನ್ನು ಪರಿಹರಿಸುವವನೂ, ವಾಮನಾವತಾರಿಯೂ, ಶ್ರೀಹರಿಯೂ, ಶೌರಿಯೂ ಆದ ಓ ದೇವ! ನಿನಗೆ ನಮಸ್ಕಾರವು.

೧೩. ಅನಂತನೂ, ಅನಂತಶಯನನೂ, ರುಕ್ಮಿಣೀಪತಿಯೂ, ರುಕ್ಮಿಯ ಗರ್ವವನ್ನು ಅಡಗಿಸಿದವನೂ ಆದ ನಿನಗೆ ನಮೋ ನಮೋ.

೧೪ ಶಿಶುಪಾಲಸಂಹಾರಕನೂ, ದಾನವಾರಿಯೂ, ಮುಕುಂದನೂ, ಪರಮಾನಂದಸ್ವರೂಪನೂ, ನಂದಗೋಪನಿಗೆ ಅತ್ಯಂತ ಪ್ರಿಯನೂ ಆದ ಓ ದೇವ ದೇವ, ನಿನಗೆ ನಮೋ ನಮೋ.

೧೫. ಓ ಪುಂಡರೀಕಾಕ್ಷ! ನಿನಗೆ ನಮಸ್ಕಾರವು. ಹಿರಣ್ಯಕಶಿಪುವೇ ಮೊದಲಾದ ದಾನವೇಂದ್ರರನ್ನು ಸಂಹರಿಸಿದವನೂ, ಗೋಪಾಲ ಸ್ವರೂಪನೂ, ವೇಣುಗಾನವಿಶಾರದನೂ ಆದ ಓ ಕೃಷ್ಣಸ್ವಾಮಿಯೆ! ನಿನಗೆ ನಮಸ್ಕಾರವು.

೧೬. ಗೋಪಿಯರಿಗೆ ಪ್ರಿಯಕರನೂ, ಕೇಶಿದಾನವನಾಶಕನೂ, ಗೋವರ್ಧನ ಪರ್ವತವನ್ನೆತ್ತಿ ಹಿಡಿದವನೂ, ಬಲರಾಮನೂ, ರಘುರಾಮನೂ ಆದ ನಿನಗೆ ನಮೋ ನಮೋ!

ರಾವಣಾರೇ ನಮಸ್ತುಭ್ಯಂ ವಿಭೀಷಣಶರಣ್ಯದ ।
ಅಜಾಯ ಜಯರೂಪಾಯ ರಣಾಂಗಣ ವಿಚಕ್ಷಣ ॥ ೧೭ ॥
ಕ್ಷಣಾದಿಕಾಲರೂಪಾಯ ನಾನಾರೂಪಾಯ ಶಾರ್ಙ್ಗಿಣೇ ।
ಗದಿನೇ ಚಕ್ರಿಣೇ ತುಭ್ಯಂ ದೈತ್ಯಚಕ್ರವಿಮರ್ದಿನೇ ॥ ೧೮ ॥
ಬಲಾಯ ಬಲಭದ್ರಾಯ ಬಲಾಽರಾತಿ ಪ್ರಿಯಾಯ ಚ ।
ಬಲಿಯಜ್ಞಪ್ರಮಥನ ನಮೋ ಭಕ್ತವರಪ್ರದ ॥ ೧೯ ॥
ಹಿರಣ್ಯಕಶಿಪೋರ್ವಕ್ಷೋವಿದಾರಣ ರಣಪ್ರಿಯ ।
ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ॥ ೨೦ ॥
ನಮಸ್ತೇ ಧರ್ಮರೂಪಾಯ ನಮಃ ಸತ್ತ್ವಗುಣಾಯ ಚ ।
ನಮಃ ಸಹಸ್ರಶಿರಸೇ ಪುರುಷಾಯ ಪರಾಯ ಚ ॥ ೨೧ ॥
ಸಹಸ್ರಾಕ್ಷ ಸಹಸ್ರಾಂಘ್ರೇ ಸಹಸ್ರಕಿರಣಾಯ ಚ ।
ಸಹಸ್ರಮೂರ್ತೇ ಶ್ರೀಕಾಂತ ನಮಸ್ತೇ ಯಜ್ಞಪೂರುಷ ॥ ೨೨ ॥

---

೧೭. ಎಲೈ ರಾವಣಾರಿಯೆ! ವಿಭೀಷಣನಿಗೆ ಶರಣ್ಯನಾದ ಓ ಪ್ರಭುವೆ, ಜನ್ಮವಿಲ್ಲದವನೂ, ವಿಜಯಸ್ವರೂಪನೂ, ರಣವಿಚಕ್ಷಣನೂ ಆದ ನಿನಗೆ ನಮಸ್ಕಾರವು

೧೮ ಕ್ಷಣದಿಂದ ಮೊದಲುಗೊಂಡು ಕಲ್ಪಗಳವರೆಗಣ ಕಾಲಸ್ವರೂಪನಾಗಿ ನಾನಾ ರೂಪಗಳನ್ನು ತಳೆಯುವವನಾಗಿ, ಶಾರ್ಙ್ಗಪಾಣಿಯೂ, ಗದಾಧರನೂ, ಚಕ್ರಧರನೂ, ದೈತ್ಯಸಮೂಹವನ್ನು ನಿರ್ಮೂಲಗೊಳಿಸುವವನೂ ಆದ ನಿನಗೆ ನಮಸ್ಕಾರವು.

೧೯. ಬಲಾಧಿಕನೂ, ಬಲಭದ್ರಸ್ವರೂಪನೂ, ಬಲಾಸುರವೈರಿಯೂ, ಸತ್ತ್ವಗುಣಪ್ರಧಾನನೂ, ಬಲಿಚಕ್ರವರ್ತಿಯು ನಡಸಿದ ಮಹಾ ಯಜ್ಞವನ್ನು ಮಥನ ಮಾಡಿದವನೂ, ಭಕ್ತರಿಗೆ ವರಪ್ರದನಾದವನೂ ಆದ ಓ ನಾರಾಯಣನೇ! ನಿನಗೆ ನಮಸ್ಕಾರವು.

೨೦. ಹಿರಣ್ಯಕಶಿಪುವಿನ ವಕ್ಷಸ್ಥಳವನ್ನು ಸೀಳಿದವನೂ, ರಣಪ್ರಿಯನೂ, ಬ್ರಹ್ಮಣ್ಯದೇವನೂ, ಗೋಬ್ರಾಹ್ಮಣರಿಗೆ ಹಿತವನ್ನುಂಟುಮಾಡುವವನೂ ಆದ ನಿನಗೆ ನಮಸ್ಕಾರವು

೨೧ ಚೋದನಾಲಕ್ಷಣವಾದ ಅರ್ಥವುಳ್ಳ ಧರ್ಮದ ಸ್ವರೂಪವಾಗಿರುವವನೂ, ಸತ್ತ್ವಗುಣಪ್ರಧಾನನೂ, ಸಹಸ್ರ ಶಿರಸ್ಸುಗಳುಳ್ಳವನೂ, ಪರಮ ಪುರುಷನೂ, ಪರಾತ್ಪರನೂ ಆದ ಓ ಭಗವಂತ! ನಿನಗೆ ನಮೋ ನಮೋ.

೨೨. ಸಹಸ್ರಾಕ್ಷನೂ, ಸಹಸ್ರಪಾದನೂ, ಸಹಸ್ರ ಕಿರಣನಾದ ಸೂರ್ಯ

ವೇದವೇದ್ಯಸ್ವರೂಪಾಯ ನಮೋ ವೇದಪ್ರಿಯಾಯ ಚ ।
ವೇದಾಯ ವೇದಗದಿನೇ ಸದಾಚಾರಾಽಧ್ವಗಾಮಿನೇ ॥ ೨೩ ॥
ವೈಕುಂಠಾಯ ನಮಸ್ತುಭ್ಯಂ ನಮೋ ವೈಕುಂಠವಾಸಿನೇ ।
ವಿಷ್ಟರಶ್ರವಸೇ ತುಭ್ಯಂ ನಮೋ ಗರುಡಗಾಮಿನೇ ॥ ೨೪ ॥
ವಿಷ್ವಕ್ಸೇನ ನಮಸ್ತುಭ್ಯಂ ಜಗನ್ಮಯ ಜನಾರ್ದನ ।
ತ್ರಿವಿಕ್ರಮಾಯ ಸತ್ಯಾಯ ನಮಃ ಸತ್ಯಪ್ರಿಯಾಯ ಚ ॥ ೨೫ ॥
ಕೇಶವಾಯ ನಮಸ್ತುಭ್ಯಂ ಮಾಯಿನೇ ಬ್ರಹ್ಮಗಾಯಿನೇ ।
ತಪೋರೂಪಾಯ ತಪಸಾಂ ನಮಸ್ತೇ ಫಲದಾಯಿನೇ ॥ ೨೬ ॥
ಸ್ತುತ್ಯಾಯ ಸ್ತುತಿರೂಪಾಯ ಭಕ್ತಸ್ತುತಿರತಾಯ ಚ ।
ನಮಸ್ತೇ ಶ್ರುತಿರೂಪಾಯ ಶ್ರುತ್ಯಾಚಾರಪ್ರಿಯಾಯ ಚ ॥ ೨೭ ॥
ಅಂಡಜಾಯ ನಮಸ್ತುಭ್ಯಂ ಸ್ವೇದಜಾಯ ನಮೋಽಸ್ತು ತೇ ।
ಜರಾಯುಜಸ್ವರೂಪಾಯ ನಮ ಉದ್ಭಿಜ್ಜರೂಪಿಣೇ ॥ ೨೮ ॥

---

ಸ್ವರೂಪನೂ, ಸಹಸ್ರಮೂರ್ತಿಯೂ, ಶ್ರೀಕಾಂತನೂ, ಯಜ್ಞಪುರುಷನೂ ಆದ ನಿನಗೆ ನಮಸ್ಕಾರವು.

೨೩. ವೇದವೇದಾಂತ ಪ್ರತಿಪಾದ್ಯನಾದ ಪರಬ್ರಹ್ಮಸ್ವರೂಪವುಳ್ಳವನೂ, ವೇದಗಳಿಗೆ ಅತ್ಯಂತ ಪ್ರಿಯನೂ (ವೇದಗಳ ವಿಷಯದಲ್ಲಿ ಅತ್ಯಂತ ಪ್ರೀತಿಯುಳ್ಳವನೂ), ವೇದಸ್ವರೂಪನೂ, ವೇದಗಳನ್ನು ಶಿಷ್ಯರಿಗೆ ವಿಭಾಗಮಾಡಿ ಅನುಗ್ರಹಿಸಿದ ಶ್ರೀ ವೇದವ್ಯಾಸಮುನಿಸ್ವರೂಪನೂ, ಸದಾಚಾರಮಾರ್ಗದರ್ಶಕನೂ ಆದ ನಿನಗೆ ನಮಸ್ಕಾರವು.

೨೪. ವೈಕುಂಠನೇ ನೀನಾಗಿ, ವೈಕುಂಠ ಲೋಕದಲ್ಲಿ ನೆಲಸಿರುವವನಾಗಿ ವಿಷ್ಟರಶ್ರವಸನೂ, ಗರುಡವಾಹನನೂ ಆದ ನಿನಗೆ ನಮೋನಮಃ.

೨೫. ಓ ವಿಷ್ವಕ್ಸೇನನೇ! ಜಗನ್ಮಯನೂ, ಜನಾರ್ದನನೂ, ತ್ರಿವಿಕ್ರಮನೂ, ಸತ್ಯಪ್ರಿಯನೂ, ಸತ್ಯಸ್ವರೂಪನೂ ಆಗಿರುವ ನಿನಗೆ ನಮಸ್ಕಾರವು.

೨೬. ಕೇಶವನೂ, ಮಾಯಿಯೂ, ಬ್ರಹ್ಮ(ವೇದ)ದಿಂದ ಸ್ತೋತ್ರಗೈಸಿಕೊಳ್ಳುವವನೂ, ತಪೋರೂಪನಾಗಿ ವಿವಿಧತಪಸ್ಸುಗಳಿಗೆ ಫಲಗಳನ್ನು ಅನುಗ್ರಹಿಸುವವನೂ ಆದ ನಿನಗೆ ನಮಸ್ಕಾರವು

೨೭. ಸ್ತುತ್ಯನೂ, ಸ್ತುತಿಸ್ವರೂಪನೂ, ಭಕ್ತರೆಸಗುವ ಸ್ತುತಿಗಳಲ್ಲಿ ಅತ್ಯಂತ ಪ್ರೇಮವುಳ್ಳವನೂ, ಶ್ರುತಿರೂಪನೂ ನೀನೇ ಆಗಿ, ಶ್ರುತ್ಯುಕ್ತವಾದ ಸದಾಚಾರಗಳಲ್ಲಿ ಅತ್ಯಂತ ಪ್ರೀತಿಯಿರುವವನೂ ಆದ ನಿನಗೆ ನಮಸ್ಕಾರವು.

೨೮. ಅಂಡಜ, ಸ್ವೇದಜ, ಜರಾಯುಜ, ಉದ್ಭಿಜ್ಜಗಳೆಂಬ ಚತುರ್ವಿಧ ಭೂತಗಳ ಸ್ವರೂಪನಾಗಿರುವ ನಿನಗೆ ನಮಸ್ಕಾರವು.

**ದೇವಾನಾಮಿಂದ್ರರೂಪೋಽಸಿ ಗ್ರಹಾಣಾಮಸಿ ಭಾನುಮಾನ್ ।**
**ಲೋಕಾನಾಂ ಸತ್ಯಲೋಕೋಽಸಿ ಸಿಂಧೂನಾಂ ಕ್ಷೀರಸಾಗರಃ ॥ ೨೯ ॥**
**ಸುರಾಪಗಾಸಿ ಸರಿತಾಂ ಸರಸಾಂ ಮಾನಸಂ ಸರಃ ।**
**ಹಿಮವಾನಸಿ ಶೈಲಾನಾಂ ಧೇನೂನಾಂ ಕಾಮಧುಗ್ಭವಾನ್ ॥ ೩೦ ॥**
**ಧಾತೂನಾಂ ಹಾಟಕಮಸಿ ಸ್ಫಟಿಕಶ್ಚೋಪಲೇಷ್ವಸಿ ।**
**ನೀಲೋತ್ಪಲಂ ಪ್ರಸೂನೇಷು ವೃಕ್ಷೇಷು ತುಲಸೀ ಭವಾನ್ ॥ ೩೧ ॥**
**ಸರ್ವಪೂಜ್ಯಶಿಲಾನಾಂ ವೈ ಶಾಲಗ್ರಾಮಶಿಲಾ ಭವಾನ್ ।**
**ಮುಕ್ತಿಕ್ಷೇತ್ರೇಷು ಕಾಶೀ ತ್ವಂ ಪ್ರಯಾಗಸ್ತೀರ್ಥಪಂಕ್ತಿಷು ॥ ೩೨ ॥**
**ವರ್ಣೇಷು ಶ್ವೇತವರ್ಣೋಽಸಿ ದ್ವಿಪದಾಂ ಬ್ರಾಹ್ಮಣೋ ಭವಾನ್ ।**
**ಗರುಡೋಽಸ್ಯಂಡಜೇಷ್ವೀಶ ವ್ಯವಹಾರೇಷು ವಾಗ್ಭವಾನ್ ॥ ೩೩ ॥**
**ವೇದೇಷೂಪನಿಷದ್ರೂಪಾ ಮಂತ್ರಾಣಾಂ ಪ್ರಣವೋಽಹ್ಯಸಿ ।**
**ಅಕ್ಷರಾಣಾಮಕಾರೋಽಸಿ ಯಜ್ವನಾಂ ಸೋಮರೂಪಧೃಕ್ ॥ ೩೪ ॥**

---

೨೯. ಎಲೈ ಪ್ರಭುವೇ! ನೀನು ದೇವತೆಗಳಲ್ಲೆಲ್ಲ ಶ್ರೇಷ್ಠನಾದ ದೇವೇಂದ್ರನ ಸ್ವರೂಪನಾಗಿರುವೆ ಗ್ರಹಗಳಲ್ಲೆಲ್ಲ ಅತ್ಯುತ್ತಮವಾದ ಸೂರ್ಯಗ್ರಹವೇ ನೀನಾಗಿರುವೆ. ಸಮಸ್ತಲೋಕಗಳಲ್ಲಿಯೂ ನೀನು ಸತ್ಯಲೋಕವಾಗಿರುವುದಲ್ಲದೆ, ಸಪ್ತಸಾಗರಗಳಲ್ಲಿ ಕ್ಷೀರಸಾಗರವಾಗಿರುವೆ.

೩೦. ದೇವದೇವ! ನದಿಗಳಲ್ಲಿ ನೀನು ದೇವಗಂಗಾನದಿಯಾಗಿರುವೆ. ಸರೋವರಗಳಲ್ಲಿ ಮಾನಸಸರೋವರವಾಗಿರುವೆ. ಸಕಲಶೈಲಗಳಿಗೂ ಮಿಗಿಲಾದ ಹಿಮಶೈಲವೇ ನೀನಾಗಿರುವೆ. ಗೋವುಗಳಲ್ಲಿ ಶ್ರೇಷ್ಠವಾದ ಕಾಮಧೇನುವು ನೀನು.

೩೧. ಲೋಹಗಳಲ್ಲೆಲ್ಲ ಉತ್ತಮವಾದ ಸುವರ್ಣವೂ, ಶಿಲೆಗಳಲ್ಲಿ ಸ್ಫಟಿಕ ಶಿಲೆಯೂ, ಪುಷ್ಪಗಳಲ್ಲಿ ನೀಲೋತ್ಪಲವೂ, ವೃಕ್ಷಗಳಲ್ಲಿ ತುಲಸಿಯೂ ನೀನೇ!

೩೨. ಪೂಜ್ಯವಾದ ಸಮಸ್ತಶಿಲೆಗಳಲ್ಲಿ ಉತ್ತಮವೆನಿಸಿದ ಶಾಲಗ್ರಾಮ ಶಿಲೆಯು ನೀನೇ! ಮುಕ್ತಿಕ್ಷೇತ್ರಗಳಲ್ಲಿ ಕಾಶಿಯೂ, ತೀರ್ಥಗಳಲ್ಲಿ ಪ್ರಯಾಗವೂ ನೀನೇ ಆಗಿರುವೆ.

೩೩. ಬಣ್ಣಗಳಲ್ಲಿ ಬಿಳಿಯ ಬಣ್ಣವೂ, ದ್ವಿಪಾತ್ತುಗಳಲ್ಲಿ ಬ್ರಾಹ್ಮಣನೂ, ಪಕ್ಷಿಗಳಲ್ಲಿ ಗರುಡನೂ, ವ್ಯವಹಾರಗಳಲ್ಲಿ ವಾಕ್ಕೂ ನೀನೇ ಆಗಿರುವೆ.

೩೪. ಎಲೈ ಸ್ವಾಮಿಯೆ! ವೇದಗಳಲ್ಲಿ ಬಹು ಮುಖ್ಯಭಾಗವಾದ ಉಪನಿಷತ್ತಿನ ಸ್ವರೂಪವೇ ನೀನು. ಮಂತ್ರಗಳಿಗೆಲ್ಲ ಆದಿಯಾದ ಪ್ರಣವ (ಓಂಕಾರ)ರೂಪನೂ ನೀನೇ! ಅಕ್ಷರಗಳಲ್ಲೆಲ್ಲ ಆದ್ಯಕ್ಷರವಾದ ಅಕಾರವೂ, ಯಾಜ್ಞಿಕರೆಲ್ಲರಿಗೂ ಸೋಮಸ್ವರೂಪನೂ ನೀನೇ ಆಗಿರುವೆ.

ಪ್ರತಾಪಿನಾಮಗ್ನಿರಸಿ ಕ್ಷಮಾಽಸಿ ತ್ವಂ ಕ್ಷಮಾವತಾಂ ।
ದಾತೃಣಾಮಸಿ ಪರ್ಜನ್ಯಃ ಪವಿತ್ರಾಣಾಂ ಪರೋ ಹ್ಯಸಿ ॥ ೩೫ ॥
ಚಾಪೋಽಸಿ ಸರ್ವಶಸ್ತ್ರಾಣಾಂ ವಾತೋ ವೇಗವತಾಮಸಿ ।
ಮನೋಽಸೀಂದ್ರಿಯವರ್ಗೇಷು ನಿರ್ಭಯಾಣಾಂ ಕರೋಽಹ್ಯಸಿ ॥ ೩೬ ॥
ವ್ಯೋಮ ವ್ಯಾಪ್ತಿಮತಾಂ ತ್ವಂ ವೈ ಪರಮಾತ್ಮಾಽಸಿ ಚಾತ್ಮನಾಂ ।
ಸಂಧ್ಯೋಪಾಸ್ತಿರ್ಭವಾನ್ದೇವ ಸರ್ವನಿತ್ಯೇಷು ಕರ್ಮಸು ॥ ೩೭ ॥
ಕ್ರತೂನಾಮಶ್ವಮೇಧೋಽಸಿ ದಾನಾನಾಮಭಯಂ ಭವಾನ್ ।
ಲಾಭಾನಾಂ ಪುತ್ರಲಾಭೋಽಸಿ ವಸಂತಸ್ತ್ವಮೃತುಷ್ವಹೋ ॥ ೩೮ ॥
ಯುಗಾನಾಂ ಪ್ರಥಮೋಽಸಿ ತ್ವಂ ತಿಥೀನಾಂ ತ್ವಂ ಕುಹೂರ್ಹ್ಯಸಿ ।
ಪುಷ್ಯೋಽಸಿ ನಕ್ಷತ್ರಗಣೇ ಸಂಕ್ರಮಃ ಸರ್ವಕರ್ಮಸು ॥ ೩೯ ॥
ಯೋಗೇಷು ವ್ಯತೀಪಾತಸ್ತ್ವಂ ತೃಣೇಷು ಹಿ ಕುಶೋ ಭವಾನ್ ।
ಉದ್ಯಮಾನಾಂ ಹಿ ಸರ್ವೇಷಾಂ ನಿರ್ವಾಣಂ ತ್ವಮಸಿ ಪ್ರಭೋ ॥ ೪೦ ॥

---

೩೫. ಪ್ರತಪನಶೀಲರಾದವರಲ್ಲಿ ನೀನೇ ಯಜ್ಞೇಶ್ವರನಾಗಿರುವೆ. ಕ್ಷಮಾಶೀಲರಾದವರಿಗೆ ನೀನೇ ಕ್ಷಮಾರೂಪನಾಗಿರುವೆ. ದಾತೃಗಳಲ್ಲೆಲ್ಲ ಉತ್ತಮನೆನಿಸಿದ ಪರ್ಜನ್ಯದೇವನೂ ನೀನೆ. ಅಲ್ಲದೆ ಪವಿತ್ರಗಳಾದ ಸಮಸ್ತಕ್ಕೂ ನೀನೇ ಪಾವಿತ್ರ್ಯವನ್ನುಂಟುಮಾಡುವ ಶ್ರೇಷ್ಠನು.

೩೬. ಸಮಸ್ತಶಸ್ತ್ರಗಳಲ್ಲಿಯೂ ಉತ್ತಮಶಸ್ತ್ರವಾದ ಧನುಸ್ಸು ನೀನು. ವೇಗವತ್ತುಗಳಾದ ಭೂತಗಳಲ್ಲಿ ನೀನೇ ವಾಯುಸ್ವರೂಪನು. ಇಂದ್ರಿಯವರ್ಗಗಳಲ್ಲಿ ಉತ್ತಮೇಂದ್ರಿಯವಾದ ಮನಸ್ಸೇ ನೀನಾಗಿರುವೆ. ಅಭಯಗಳಲ್ಲೆಲ್ಲ ನೀನೇ ಹಸ್ತವಾಗಿರುವೆ. (ನೀನು ಅಭಯ ಹಸ್ತವನ್ನು ನೀಡಿದರೆ ಸಾಕು, ಭಕ್ತನ ಉದ್ಧಾರವಾಯಿತೆಂದು ಹೇಳಬೇಕಾಗಿರುವುದಿಲ್ಲ.)

೩೭. ನೀನೇ ಎಲ್ಲೆಡೆಗಳಲ್ಲಿಯೂ ವ್ಯಾಪಿಸಬಲ್ಲವುಗಳಲ್ಲಿ ಉತ್ತಮವಾದ ಆಕಾಶವಾಗಿರುವೆ ಆತ್ಮರಿಗೆಲ್ಲ ನೀನೆ ಪರಮಾತ್ಮನಾಗಿರುವೆ. ದೇವಾ! ಸಮಸ್ತ ದೈನಂದಿನ ಕರ್ಮಗಳಲ್ಲಿ ನೀನೇ ಸಂಧ್ಯೋಪಾಸನ ಕರ್ಮಸ್ವರೂಪನಾಗಿರುವೆ.

೩೮. ಯಾಗಗಳಲ್ಲಿ ಅಶ್ವಮೇಧ ಯಾಗವೂ, ದಾನಗಳಲ್ಲಿ ಅಭಯದಾನವೂ, ಲಾಭಗಳಲ್ಲಿ ಪುತ್ರಲಾಭವೂ, ಋತುಗಳಲ್ಲಿ ವಸಂತವೂ ನೀನೇ ಆಗಿರುವೆ.

೩೯–೪೦. ಯುಗಗಳಲ್ಲಿ ಆದಿಯುಗವಾದ ಕೃತಯುಗವೂ, ತಿಥಿಗಳಲ್ಲಿ ಅಮಾವಾಸ್ಯಾ ತಿಥಿಯೂ, ನಕ್ಷತ್ರಗಳಲ್ಲಿ ಪುಷ್ಯ ನಕ್ಷತ್ರವೂ, ಪರ್ವಗಳಲ್ಲಿ ಸಂಕ್ರಮಣವೂ, ಯೋಗಗಳಲ್ಲಿ ವ್ಯತೀಪಾತವೂ, ತೃಣಗಳಲ್ಲಿ ದರ್ಭೆಯೂ, ಸಮಸ್ತ ಉದ್ಯೋಗಗಳಲ್ಲಿ ಮೋಕ್ಷೋದ್ಯಮವೂ ನೀನೇ ಆಗಿರುವೆ.

ಸರ್ವಾಸಾಮಿಹ ಬುದ್ಧೀನಾಂ ಧರ್ಮಬುದ್ಧಿರ್ಭವಾನಜ ।
ಅಶ್ವತ್ಥಃ ಸರ್ವವೃಕ್ಷೇಷು ಸೋಮವಲ್ಲೀ ಲತಾಸು ಚ ॥ ೪೧ ॥
ಪ್ರಾಣಾಯಾಮೋಽಸಿ ಸರ್ವೇಷು ಸಾಧನೇಷು ಶುಚಿಷ್ವಹೋ ।
ಸರ್ವದಃ ಸರ್ವಲಿಂಗೇಷು ಶ್ರೀಮಾನ್ವಿಶ್ವೇಶ್ವರೋ ಭವಾನ್ ॥ ೪೨ ॥
ಮಿತ್ರಾಣಾಂ ಹಿ ಕಲತ್ರಂ ತ್ವಂ ಧರ್ಮಸ್ತ್ವಂ ಸರ್ವಬಂಧುಷು ।
ತ್ವತ್ತೋ ನಾಽನ್ಯಜ್ಜಗತ್ಯಸ್ಮಿನ್ ನಾರಾಯಣ ಚರಾಚರೇ ॥ ೪೩ ॥
ತ್ವಮೇವ ಮಾತಾ ತ್ವಂ ತಾತಸ್ತ್ವಂ ಸುತಸ್ತ್ವಂ ಮಹಾಧನಂ ।
ತ್ವಮೇವ ಸೌಖ್ಯಸಂಪತ್ತಿಸ್ತ್ವಮಾಯುರ್ಜೀವನೇಶ್ವರಃ ॥ ೪೪ ॥
ಸಾ ಕಥಾ ಯತ್ರ ತೇ ನಾಮ ತನ್ಮನೋ ಯತ್ತ್ವದರ್ಪಿತಂ ।
ತತ್ಕರ್ಮ ಯತ್ತ್ವದರ್ಥಂ ವೈ ತತ್ತಪೋ ಯದ್ಭವತ್ ಸ್ಮೃತಿಃ ॥ ೪೫ ॥
ತದ್ಧನಂ ಧನಿನಾಂ ಶುದ್ಧಂ ಯತ್ತ್ವದರ್ಥೇ ವ್ಯಯೀಕೃತಂ ।
ಸ ಏವ ಸಕಲಃ ಕಾಲೋ ಯಸ್ಮಿಂಜಿಷ್ಣೋ ತ್ವಮರ್ಚ್ಯಸೇ ॥ ೪೬ ॥

---

೪೧. ಪ್ರಭುವೆ! ನೀನು ಎಲ್ಲ ಬಗೆಯ ಬುದ್ಧಿಗಳಲ್ಲಿ ಧರ್ಮಬುದ್ಧಿಸ್ವರೂಪನೂ, ಸಮಸ್ತ ವೃಕ್ಷಗಳಲ್ಲಿಯೂ ಅಶ್ವತ್ಥವೃಕ್ಷವೂ, ಲತೆಗಳಲ್ಲಿ ಸೋಮಲತೆಯೂ ಆಗಿರುವೆ.

೪೨. ಪವಿತ್ರಗಳಾದ ಎಲ್ಲ ಬಗೆಯ ಸಾಧನಗಳಲ್ಲಿ ನೀನು ಪ್ರಾಣಾಯಾಮ ಸಾಧನವು ಸಮಸ್ತ ಶಿವಲಿಂಗಗಳಲ್ಲಿಯೂ ನೀನೇ ಸರ್ವಾಭೀಷ್ಟಪ್ರದವಾಗಿ ಕಾಶೀಕ್ಷೇತ್ರದಲ್ಲಿ ಬೆಳಗುತ್ತಿರುವ ಶ್ರೀಮದ್ವಿಶ್ವೇಶ್ವರ ಲಿಂಗವು.

೪೩. ಸ್ನೇಹಿತರಲ್ಲಿ ನೀನೇ ಅತ್ಯುತ್ತಮಳಾದ ಭಾರ್ಯಾಸ್ವರೂಪನೂ, ಬಂಧುಗಳಲ್ಲಿ ಧರ್ಮವೂ ಆಗಿರುವೆ ಓ ನಾರಾಯಣ! ಈ ಚರಾಚರ ಪ್ರಪಂಚ ವಲ್ಲಿ ನಿನ್ನನ್ನುಳಿದು ಬೇರಾವುದೂ ಇರುವುದಿಲ್ಲ ನೀನೇ ಸಮಸ್ತವೂ ಆಗಿರುವೆ.

೪೪. ದೇವದೇವ! ತಾಯಿ, ತಂದೆ, ಮಗ, ಸಂಪತ್ತು, ಮಹಾಧನ, ಸರ್ವ ಸೌಖ್ಯಗಳು, ಆಯುಸ್ಸು, ಜೀವನದ ಪ್ರಭು ಎಲ್ಲವೂ ನೀನೇ ಆಗಿರುವೆ.

೪೫. ಎಲ್ಲಿ ನಿನ್ನ ಹೆಸರು ಕೇಳಬರುವುದೋ ಅದೇ ಸತ್ಕಥೆಯು. ನಿನ್ನ ಅಡಿಗಳಲ್ಲಿ ನಟ್ಟ ಮನಸ್ಸೇ ಮನಸ್ಸು. ನಿನಗೆ ಅರ್ಪಿಸಲೋಸುಗವೇ ಕೈಕೊಂಡ ಕರ್ಮವೇ ಸತ್ಕರ್ಮವು. ನಿನ್ನ ಸ್ಮರಣೆಯನ್ನು ಅಹರ್ನಿಶವೂ ಮಾಡುವುದೇ ತಪಸ್ಸು.

೪೬. ಎಲೈ ಸ್ವಾಮಿಯೆ! ನಿನ್ನ ಆರಾಧನೆಗಾಗಿ ವ್ಯಯಮಾಡುವ ಧನಿಕರ ಧನವೇ ಶುದ್ಧವಾದ ಧನವೆನಿಸುತ್ತದೆ. ನಿನ್ನನ್ನು ಪೂಜಿಸಲು ವಿನಿಯೋಗಿಸುವ ಕಾಲವೇ ಒಳ್ಳೆಯ ಕಾಲವೆನಿಸುತ್ತದೆ.

ತಾವಜ್ಜ ಜೀವಿತಂ ಶ್ರೇಯೋ ಯಾವತ್ತ್ವಂ ಹೃದಿ ವರ್ತಸೇ ।
ರೋಗಾಃ ಪ್ರಶಮಮಾಯಾಂತಿ ತ್ವತ್ಪಾದೋದಕಸೇವನಾತ್ ॥ ೪೭ ॥
ಮಹಾಪಾಪಾನಿ ಗೋವಿಂದ ಬಹುಜನ್ಮಾರ್ಜಿತಾನ್ಯಪಿ ।
ಸದ್ಯೋ ವಿಲಯಮಾಯಾಂತಿ ವಾಸುದೇವೇತಿ ಕೀರ್ತನಾತ್ ॥ ೪೮ ॥
ಅಹೋ ಪುಂಸಾಂ ಮಹಾಮೋಹಸ್ತ್ವಹೋ ಪುಂಸಾಂ ಪ್ರಮಾದತಾ ।
ವಾಸುದೇವಮನಾದೃತ್ಯ ಯದನ್ಯತ್ರ ಕೃತಶ್ರಮಾಃ ॥ ೪೯ ॥
ಇದಮೇವಹಿ ಮಾಂಗಲ್ಯಮಿದಮೇವ ಧನಾರ್ಜನಂ ।
ಜೀವಿತಸ್ಯ ಫಲಂ ಚೈತದ್ಯದ್ದಾಮೋದರಕೀರ್ತನಂ ॥ ೫೦ ॥
ಅಧೋಕ್ಷಜಾತ್ಪರೋ ಧರ್ಮೋ ನಾರ್ಥೋ ನಾರಾಯಣಾತ್ಪರಃ ।
ನ ಕಾಮಃ ಕೇಶವಾದನ್ಯೋ ನಾಽಪವರ್ಗೋ ಹರಿಂ ವಿನಾ ॥ ೫೧ ॥
ಇಯಮೇವ ಪರಾಹಾನಿರುಪಸರ್ಗೋಽಯಮೇವ ಹಿ ।
ಅಭಾಗ್ಯಂ ಪರಮಂ ಚೈತದ್ವಾಸುದೇವಂ ನ ಯತ್ಸ್ಮರೇತ್ ॥ ೫೨ ॥

---

೪೭. ಎದುವರೆಗೆ ಪರಮೇಶ್ವರನಾದ ನೀನು ಹೃದಯದಲ್ಲಿ ನೆಲಸಿರುವೆಯೊ ಅದುವರೆಗೆ ಜೀವಿಸಿರುವುದೇ ಜೀವಿತವೆನಿಸುವುದು. ಎಲೈ ಪರಮಾತ್ಮನೇ! ನಿನ್ನ ಪಾದೋದಕಸೇವನದಿಂದ ಸಮಸ್ತ ರೋಗಗಳೂ ಪ್ರಶಾಂತಗೊಳ್ಳುತ್ತವೆ.

೪೮. ಓ ಗೋವಿಂದ! ನಿನ್ನ ವಾಸುದೇವನಾಮಸಂಕೀರ್ತನವನ್ನು ಮಾಡಿದೊಡನೆಯೇ ಬಹುಜನ್ಮಗಳಿಂದಾರ್ಜಿಸಿದ್ದ ಪಾಪಗಳೆಲ್ಲವೂ ಕೂಡಲೇ ಲಯಿಸಿ ಹೋಗುತ್ತವೆ.

೪೯. ಆಹಾ! ಮಾನವರಿಗೆ ಅದೆಷ್ಟು ಮಹಾಮೋಹವು ಮುತ್ತಿಕೊಂಡಿರುವುದೋ? ಅದೆಷ್ಟು ಪ್ರಮಾದಗೊಳ್ಳುವರೋ? ವಾಸುದೇವನಾದ ನಿನ್ನನ್ನು ಅನಾದರಿಸಿ ಅನ್ಯದೇವರುಗಳನ್ನು ಮೆಚ್ಚಿಸಲು ಶ್ರಮಪಡುತ್ತಾರೆಯಲ್ಲಾ !!

೫೦. ದಾಮೋದರನಾದ ನಿನ್ನನ್ನು ಸ್ತುತಿಸುವುದೇ ಮಾನವನಿಗೆ ಪರಮ ಮಾಂಗಲ್ಯವು, ಇದೇ ಅಮೂಲ್ಯವಾದ ಧನವು, ಇದೇ ಜೀವಿತದ ಫಲವು.

೫೧. ಅಧೋಕ್ಷಜನಾದ ನಿನ್ನನ್ನುಳಿದ ಧರ್ಮವಾಗಲಿ, ನಾರಾಯಣನಾದ ನಿನಗಿಂತಲೂ ಬೇರೆಯಾದ ಅರ್ಥವಾಗಲಿ, ಕೇಶವನಾದ ನಿನಗಿಂತಲೂ ಮೀರಿದ ಕಾಮವಾಗಲಿ, ಶ್ರೀಹರಿಯಾದ ನಿನ್ನನ್ನುಳಿದ ಅಪವರ್ಗ (ಮೋಕ್ಷ) ವಾಗಲಿ ಏನೂ ಇರುವುದಿಲ್ಲವು

೫೨. ಒಡೆಯಾ! ವಾಸುದೇವನಾದ ನಿನ್ನನ್ನು ಸ್ಮರಿಸದಿರುವುದೇ ಮಾನವನಿಗೆ ಪುನರ್ಜನ್ಮಕ್ಕೆ ಕಾರಣವು, ಅದೇ ಮಹತ್ತರವಾದ ಹಾನಿಯು; ದೌರ್ಭಾಗ್ಯವೂ ಅದೇ!

ಹರೇರಾರಾಧನಂ ಪುಂಸಾಂ ಕಿಂ ಕಿಂ ನ ಕುರುತೇ ಬತ ।
ಪುತ್ರಮಿತ್ರಕಲತ್ರಾರ್ಥರಾಜ್ಯಸ್ವರ್ಗಾಽಪವರ್ಗದಂ ॥ ೫೩ ॥
ಹರತ್ಯಘಂ ಧ್ವಂಸಯತಿ ವ್ಯಾಧೀನಾಧೀನ್ನಿಯಚ್ಛತಿ ।
ಧರ್ಮಂ ವಿವರ್ಧಯೇತ್ ಕ್ಷಿಪ್ರಂ ಪ್ರಯಚ್ಛತಿ ಮನೋರಥಂ ॥ ೫೪ ॥
ಭಗವಚ್ಚರಣದ್ವಂದ್ವಂ ನಿರ್ದ್ವಂದ್ವಧ್ಯಾನಮುತ್ತಮಂ ।
ಪಾಪಿನಾಽಪಿ ಪ್ರಸಂಗೇನ ವಿಹಿತಂ ಸ್ವಹಿತಂ ಪರಂ ॥ ೫೫ ॥
ಪಾಪಿನಾಂ ಯಾನಿ ಪಾಪಾನಿ ಮಹೋಪಪದಭಾಂಜ್ಯಪಿ ।
ಸುಲೀನ ಧ್ಯಾನಸಂಪನ್ನೋ ನಾಮೋಚ್ಚಾರೋ ಹರೇರ್ಹರೇತ್ ॥ ೫೬ ॥
ಪ್ರಮಾದಾದಪಿ ಸಂಸ್ಪೃಷ್ಟೋ ಯಥಾಽನಲಕಣೋ ದಹೇತ್ ।
ತಥೌಷ್ಠಪುಟಸಂಸ್ಪೃಷ್ಟಂ ಹರಿನಾಮ ಹರೇದಘಂ ॥ ೫೭ ॥
ನಿತಾಂತಂ ಕಮಲಾಕಾಂತೇ ಶಾಂತಂ ಚಿತ್ತಂ ವಿಧಾಯ ಯಃ ।
ಸಂಶೀಲಯೇತ್ ಕ್ಷಣಂ ನೂನಂ ಕಮಲಾ ತತ್ರ ನಿಶ್ಚಲಾ ॥ ೫೮ ॥

---

೫೩. ಶ್ರೀ ಹರಿಯಾದ ನಿನ್ನ ಆರಾಧನೆಯು ಮಾನವನಿಗೆ ಏನೇನನ್ನುಂಟು ಮಾಡಿಕೊಡದು? ಪುತ್ರ, ಮಿತ್ರ, ಕಳತ್ರ, ಧನ, ರಾಜ್ಯ, ಸ್ವರ್ಗ ಕಡೆಗೆ ಮೋಕ್ಷ ಎಲ್ಲವೂ ನಿನ್ನ ಆರಾಧನೆಯಿಂದಲೇ ದೊರಕುತ್ತವೆ.

೫೪. ಶ್ರೀ ಹರಿಪೂಜನವು ಮಾನವನ ಪಾಪಗಳನ್ನು ಕಳೆದು, ವ್ಯಾಧಿಗಳನ್ನು ಧ್ವಂಸಗೊಳಿಸಿ, ಆಧಿಗಳನ್ನು ನಿರ್ಮೂಲಗೊಳಿಸುವುದೇ ಅಲ್ಲದೆ, ಧರ್ಮವನ್ನು ಬೆಳಸಿ, ಬಹುಬೇಗನೆಯೆ ಇಷ್ಟಾರ್ಥವನ್ನು ಈಡೇರಿಸುತ್ತದೆ.

೫೫. ಎಲೈ ದೇವೇಶ್ವರನೇ! ಭಗವಂತನಾದ ನಿನ್ನ ಚರಣ ದ್ವಂದ್ವಗಳಲ್ಲಿ ತದೇಕಾಯತ್ತವೆನಿಸಿದ ಧ್ಯಾನವೇ ಉತ್ತಮೋತ್ತಮವಾದುದು. ಇದನ್ನು ಪ್ರಸಗ ವಶದಿಂದ ಪಾಪಿಗಳಾದವರೂ ಆಚರಿಸಿದರೆ ಆತ್ಮಹಿತವೆನಿಸುವುದು.

೫೬. ಬಳಿಯಲ್ಲಿಯೆ ಮುತ್ತಿಕೊಂಡು ಕೋಟಲೆಗೊಳಿಸುವ ಎಲ್ಲ ಬಗೆಯ ಪಾಪಗಳೂ, ಪಾಪಿಯಾದವನು ಒಂದೇ ಮನಸ್ಸಿನಿಂದ ಶ್ರೀಹರಿಯಾದ ನಿನ್ನ ಧ್ಯಾನದಲ್ಲಿ ತೊಡಗಿದೊಡನೆಯೆ ಪರಿಹಾರವಾಗುವುವು.

೫೭. ಪ್ರಮಾದವಶದಿಂದಾದರೂ ಸೋಕಿದೊಡನೆಯೆ ಬೆಂಕಿಯ ಕಿಡಿಯು ಹೇಗೆ ಸುಡುತ್ತದೆಯೋ ಹಾಗೆಯೆ ಒಮ್ಮೆಯಾದರೂ ತುಟಿಗಳಲುಗಿ ಬಾಯಿಂದ ಬಂದೊಡನೆಯೆ ಶ್ರೀಹರಿಯಾದ ನಿನ್ನ ದಿವ್ಯನಾಮವು ಪಾಪಗಳನ್ನು ಹರಿಸುತ್ತದೆ.

೫೮. ಯಾವನು ಕಮಲಾಕಾಂತನಾದ ನಿನ್ನಲ್ಲಿ ಮನಸ್ಸನ್ನು ನಿಶ್ಚಲಗೊಳಿಸಿ ಒಂದು ಕ್ಷಣಕಾಲ ಧ್ಯಾನಿಸುವನೋ ಅವನಲ್ಲಿ ಲಕ್ಷ್ಮಿಯು ನೆಲೆಯಾಗಿ ನಿಲ್ಲುವಳು.

ಅಯಮೇವ ಪರೋ ಧರ್ಮಸ್ತ್ವಿದಮೇವ ಪರಂತಪಃ ।
ಇದಮೇವ ಪರಂ ತೀರ್ಥಂ ವಿಷ್ಣುಪಾದಾಂಬು ಯತ್ಪಿಬೇತ್ ॥ ೫೯ ॥
ತವೋಪಹಾರಂ ಭಕ್ತ್ಯಾ ಯಃ ಸೇವತೇ ಯಜ್ಞಪೂರುಷ ।
ಸೇವಿತಸ್ತೇನ ನಿಯತಂ ಪುರೋಡಾಶೋ ಮಹಾಧಿಯಾ ॥ ೬೦ ॥
ಸ ಚೈವಾಽವಭೃಥಸ್ನಾತಃ ಸ ಚ ಗಂಗಾಜಲಪ್ಲುತಃ ।
ವಿಷ್ಣುಪಾದೋದಕಂ ಕೃತ್ವಾ ಶಂಖೇ ಯಃ ಸ್ನಾತಿ ಮಾನವಃ ॥ ೬೧ ॥
ಶಾಲಗ್ರಾಮ ಶಿಲಾ ಯೇನ ಪೂಜಿತಾ ತುಲಸೀದಲೈಃ ।
ಸ ಪಾರಿಜಾತಮಾಲಾಭಿಃ ಪೂಜ್ಯತೇ ಸುರಸದ್ಮನಿ ॥ ೬೨ ॥
ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾ ಯದಿ ವೇತರಃ ।
ವಿಷ್ಣುಭಕ್ತಿ ಸಮಾಯುಕ್ತೋ ಜ್ಞೇಯಃ ಸರ್ವೋತ್ತಮಶ್ಚ ಸಃ ॥ ೬೩ ॥
ಶಂಖಚಕ್ರಾಂಕಿತತನುಃ ಶಿರಸಾ ಮಂಜರೀಧರಃ ।
ಗೋಪೀಚಂದನಲಿಪ್ತಾಂಗೋ ದೃಷ್ಟಶ್ಚೇತ್ತದಘಂ ಕುತಃ ॥ ೬೪ ॥

---

೫೯. ಎಲೈ ನಾರಾಯಣನೇ! ನಿನ್ನ ಪಾದತೀರ್ಥವನ್ನು ಸೇವಿಸುವುದೇ ಶ್ರೇಷ್ಠವಾದ ಧರ್ಮವೂ, ಉತ್ತಮ ತಪವೂ, ಪವಿತ್ರ ತೀರ್ಥಸೇವನೆಯೂ ಆಗಿರುತ್ತದೆ

೬೦ ಎಲೈ ಯಜ್ಞಪುರುಷನೇ! ನಿನಗೆ ನಿವೇದಿಸಿದ್ದನ್ನು ಸೇವಿಸುವ ಬಹು ಬುದ್ಧಿವಂತನಾದ ಮಾನವನು ಯಾಗವನ್ನೆಸಗಿ ಪುರೋಡಾಶವನ್ನು ಸೇವಿಸಿ ದಂತೆಯೆ ಸರಿ.

೬೧. ಯಾವ ಮಾನವನು ನಿನ್ನ ಪಾದೋಕವನ್ನು ಶಂಖದಲ್ಲಿರಿಸಿಕೊಂಡು ಸ್ನಾನಮಾಡುವನೋ ಅವನೇ ಯಜ್ಞವನ್ನು ಮಾಡಿ ಅವಭೃಥಸ್ನಾನವನ್ನಾಚರಿಸಿ ದವನೆನಿಸುವನು. ಗಂಗಾಜಲದಲ್ಲಿ ಮಿಂದ ಪುಣ್ಯಾತ್ಮನೂ ಅವನೇ!

೬೨. ಯಾವನು ನಿನ್ನ ಸ್ವರೂಪವನ್ನೇ ಒಳಗೊಂಡ ಶಾಲಗ್ರಾಮ ಶಿಲೆ ಯನ್ನು ತುಲಸೀದಳಗಳಿಂದ ಪೂಜಿಸುವನೋ ಅವನು ಸ್ವರ್ಗಲೋಕದಲ್ಲಿ ಪಾರಿಜಾತ ಪುಷ್ಪಮಾಲಿಕೆಗಳಿಂದ ಪೂಜೆಗೊಳ್ಳುತ್ತಾನೆ.

೬೩. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೇ ಆಗಲಿ, ತದಿತರರೇ ಆಗಲಿ ಯಾರು ವಿಷ್ಣುಭಕ್ತಿಸಂಪನ್ನರಾಗಿರುವರೋ ಅವರೇ ಸರ್ವೋತ್ತಮ ರೆನಿಸುವರು.

೬೪. ಪರಮಾತ್ಮಾ! ಅಂಗಾಂಗಗಳಲ್ಲಿ ಗೋಪೀಚಂದನದಿಂದ ಶಂಖ ಚಕ್ರಾದಿ ಚಿಹ್ನೆಗಳನ್ನು ಚಿತ್ರಿಸಿಕೊಂಡು ಶಿರಸ್ಸಿನಲ್ಲಿ ತುಲಸೀದಳವನ್ನು ತಾಳಿದ ತರುವಾಯ ಆ ಮಾನವನಿಗೆ ಪಾಪಲೇಪವೆತ್ತ?

**ಪ್ರತ್ಯಹಂ ದ್ವಾದಶಶಿಲಾಃ ಶಾಲಗ್ರಾಮಸ್ಯ ಯೋಽರ್ಚಯೇತ್ ।**
**ದ್ವಾರವತ್ಯಾಃ ಶಿಲಾಯುಕ್ತಾಃ ಸ ವೈಕುಂಠೇ ಮಹೀಯತೇ ॥ ೬೫ ॥**
**ತುಲಸೀ ಯಸ್ಯ ಭವನೇ ಪ್ರತ್ಯಹಂ ಪರಿಪೂಜ್ಯತೇ ।**
**ತದ್ಗೃಹಂ ನೋಪಸರ್ಪಂತಿ ಕದಾಚಿದ್ಯಮಕಿಂಕರಾಃ ॥ ೬೬ ॥**
**ಹರಿನಾಮಾಕ್ಷರಮುಖಂ ಭಾಲೇ ಗೋಪೀಮೃದಾಽಂಕಿತಂ ।**
**ತುಲಸೀ ಮಾಲಿತೋರಸ್ಕಂ ಸ್ಪೃಶೇಯುರ್ನ ಯಮಾಽನುಗಾಃ ॥ ೬೭ ॥**
**ಗೋಪೀಮೃತ್ತುಲಸೀಶಂಖಃ ಶಾಲಗ್ರಾಮಃ ಸ ಚಕ್ರಕಃ ।**
**ಗೃಹೇಽಪಿ ಯಸ್ಯ ಪಂಚೈತೇ ತಸ್ಯ ಪಾಪಭಯಂ ಕುತಃ ॥ ೬೮ ॥**
**ಯೇ ಮುಹೂರ್ತಾಃ ಕ್ಷಣಾ ಯೇ ಚ ಯಾಃ ಕಾಷ್ಠಾ ಯೇ ನಿಮೇಷಕಾಃ ।**
**ಋತೇ ವಿಷ್ಣುಸ್ಮೃತೇರ್ಯಾತಾಸ್ತೇಷು ಮುಷ್ಟೋಯಮೇನಸಃ ॥ ೬೯ ॥**
**ಕ್ವ ದ್ವ್ಯಕ್ಷರಂ ಹರೇರ್ನಾಮ ಸ್ಫುಲಿಂಗಸದೃಶಂ ಜ್ವಲತ್ ।**
**ಮಹಿತೀ ಪಾತಕಾನಾಂ ಚ ರಾಶಿಸ್ತೂಲೋಪಮಾ ಕ್ವ ಚ ॥ ೭೦ ॥**
**ಗೋವಿಂದಂ ಪರಮಾನಂದಂ ಮುಕುಂದಂ ಮಧುಸೂದನಂ ।**
**ತ್ಯಕ್ತ್ವಾಽನ್ಯಂ ನೈವ ಜಾನಾಮಿ ನ ಭಜಾಮಿ ಸ್ಮರಾಮಿ ನ ॥ ೭೧ ॥**

---

೬೫ ಪ್ರತಿದಿನವೂ ಹನ್ನೆರಡು ಬಗೆಯ ಶಾಲಗ್ರಾಮ ಶಿಲೆಗಳನ್ನು ಅರ್ಚಿಸಿ ದ್ವಾರಕೆಯ ಚಕ್ರ ಚಿಹ್ನೆಯನ್ನೊಡಗೊಂಡ ಮಾನವೋತ್ತಮರು ವೈಕುಂಠ ಲೋಕದಲ್ಲಿ ಪೂಜೆಗೊಳ್ಳುತ್ತಾರೆ.

೬೬. ಯಾರ ಮನೆಯಲ್ಲಿ ಪ್ರತಿನಿತ್ಯವೂ ತುಲಸೀವೃಕ್ಷವು ಪೂಜಿಸಲ್ಪಡುವುದೋ ಅವರ ಮನೆಯನ್ನು ಯಮಕಿಂಕರರು ಪ್ರವೇಶಿಸುವುದಿಲ್ಲವು.

೬೭. ಗೋಪೀಚಂದನದಿಂದ ಹಣೆಯಲ್ಲಿ ಶ್ರೀಹರಿಯಾದ ನಿನ್ನ ದಿವ್ಯ ನಾಮವನ್ನು ಧರಿಸಿ ತುಲಸೀಹಾರವನ್ನು ಕೊರಳಲ್ಲಿ ತಾಳಿರುವ ಮಾನವನನ್ನು ಯಮಕಿಂಕರರು ತೊಡುವುದಿಲ್ಲವು.

೬೮. ಯಾರ ಮನೆಯಲ್ಲಿ ಗೋಪೀಚಂದನ, ತುಲಸಿ, ಶಂಖ, ಚಕ್ರಸಹಿತವಾದ ಶಾಲಗ್ರಾಮಶಿಲೆ ಎಂಬ ಈ ಐದೂ ಇರುವುವೋ ಅವರಿಗೆ ಪಾಪಭಯವೆಲ್ಲಿಯದು ?

೬೯. ವಿಷ್ಣುಸ್ಮರಣೆಯಿಲ್ಲದೆ ಕಳೆದು ಹೋದ ಮುಹೂರ್ತಗಳು, ಕ್ಷಣಗಳು, ಕಾಷ್ಠಗಳು, ನಿಮಿಷಗಳಲ್ಲಿಯೆ ಮಾನವನು ಪಾಪಗಳಿಂದ ಮೋಸಹೋಗುವನು.

೭೦. ಬೆಂಕಿಯ ಕಿಡಿಯಂತೆ ಜ್ವಲಿಸುವ ಶ್ರೀಹರಿಯೆಂಬ ನಿನ್ನ ಎರಡಕ್ಷರದ ದಿವ್ಯನಾಮವೆತ್ತ ? ಹತ್ತಿಯ ರಾಶಿಗೆಣೆಯಾದ ಮಹಾಪಾಪಗಳ ರಾಶಿಯೆತ್ತ ? ಶ್ರೀ ಹರಿನಾಮವನ್ನುಚ್ಚರಿಸುತ್ತಲೇ ಪಾಪಗಳೆಲ್ಲವೂ ಭಸ್ಮವಾಗಿ ಹೋಗುವುವು.

೭೧. ಗೋವಿಂದ! ಪರಮಾನಂದ ಸ್ವರೂಪನೂ, ಮುಕುಂದನೂ, ಮಧು

ನ ನಮಾಮಿ ನ ಚ ಸ್ತೌಮಿ ನ ಪಶ್ಯಾಮೀಹ ಚಕ್ಷುಷಾ ।
ನ ಸ್ಪೃಶಾಮಿ ನ ವಾ ಯಾಮಿ ನ ಗಾಯಾಮಿ ಹರಿಂ ವಿನಾ ॥ ೭೨ ॥
ಜಲೇ ಸ್ಥಲೇ ಚ ಪಾತಾಲೇಽಪ್ಯನಿಲೇಽಚಾಽನಲೇಽಚಲೇ ।
ವಿದ್ಯಾಧರಾಽಸುರಸುರೇ ಕಿನ್ನರೇ ವಾನರೇ ನರೇ ॥ ೭೩ ॥
ತೃಣೈಸ್ತೃಣೇ ಚ ಪಾಷಾಣೇ ತರುಗುಲ್ಮಲತಾಸು ಚ ।
ಸರ್ವತ್ರ ಶ್ಯಾಮುಲತನುಂ ವೀಕ್ಷೇ ಶ್ರೀವತ್ಸವಕ್ಷಸಂ ॥ ೭೪ ॥
ಸರ್ವೇಷಾಂ ಹೃದಯಾವಾಸಃ ಸಾಕ್ಷಾತ್ಸಾಕ್ಷೀ ತ್ವಮೇವ ಹಿ ।
ಬಹಿರಂತರ್ವಿನಾ ತ್ವಾಂ ತು ನಹ್ಯನ್ಯಂ ವೇದ್ಮಿ ಸರ್ವಗಂ ॥ ೭೫ ॥
ಇತ್ಯುಕ್ತ್ವಾ ವಿರರಾಮಾಽಸೌ ಶಿವಶರ್ಮನ್ ಧ್ರುವಸ್ತದಾ ।
ದೇವೋಽಪಿ ಭಗವಾನ್ವಿಷ್ಣುಸ್ತಮುವಾಚ ಪ್ರಸನ್ನದೃಕ್ ॥ ೭೬ ॥

ಶ್ರೀ ಭಗವಾನುವಾಚ :—

ಅಯಿ ಬಾಲ ವಿಶಾಲಾಕ್ಷ ಧ್ರುವ ಧ್ರುವಮತೇಽನಘ ।
ಪರಿಜ್ಞಾತೋ ಮಯಾ ಸಮ್ಯಕ್ತವ ಹೃತ್‌ಸ್ಥೋ ಮನೋರಥಃ ॥ ೭೭ ॥

---

ಸೂದನನೂ ಆದ ನಿನ್ನನ್ನುಳಿದು ನಾನು ಬೇರೊಂದು ದೈವವನ್ನರಿಯೆನಲ್ಲದೆ ಸ್ಮರಿಸುವುದೂ ಇಲ್ಲವು.

೭೨. ಶ್ರೀ ಹರಿಯೆ! ಪರಮಾತ್ಮನಾದ ನಿನ್ನನ್ನಲ್ಲದೆ ಬೇರಾವ ದೈವವನ್ನೂ ನಾನು ನಮಸ್ಕರಿಸುವುದಿಲ್ಲ; ಸ್ತುತಿಸುವುದಿಲ್ಲ, ಕಣ್ಣಿನಿಂದ ನೋಡುವುದಿಲ್ಲ; ಸ್ಪರ್ಶಮಾಡುವುದಿಲ್ಲ, ಬಳಿಸಾರುವುದಿಲ್ಲವಲ್ಲದೆ ಆ ದೈವವನ್ನು ಕುರಿತು ಭಕ್ತಿ ಗೀತಗಳನ್ನು ಹಾಡುವುದೂ ಇಲ್ಲ.

೭೩–೭೪. ಜಲ, ಸ್ಥಳ, ಪಾತಾಳ, ಗಾಳಿ, ಬೆಂಕಿ, ಬೆಟ್ಟ, ವಿದ್ಯಾಧರರು, ಅಸುರರು, ಸುರರು, ಕಿನ್ನರರು, ನರರು, ವಾನರರು, ಹುಲ್ಲು, ಹೆಣ್ಣು, ಕಲ್ಲು, ಮರ, ಪೊದೆ, ಬಳ್ಳಿ ಮುಂತಾದ ಎಲ್ಲವುಗಳಲ್ಲಿಯೂ ಮೇಘಶ್ಯಾಮಳ ವರ್ಣನೂ ಶ್ರೀವತ್ಸಲಾಂಛನ ಸಹಿತನೂ ಆದ ನಿನ್ನನ್ನೇ ನೋಡುವೆನು.

೭೫. ಎಲೈ ಮಹಾವಿಷ್ಣುವೇ! ಸಮಸ್ತ ಭೂತಗಳ ಹೃದಯಾಂತರ್ಯಾಮಿಯೂ ನೀನೆ. ಸರ್ವಕ್ಕೂ ಪ್ರತ್ಯಕ್ಷವಾದ ಸಾಕ್ಷಿಯೂ ನೀನೇ! ನನ್ನ ಒಳಗಾಗಲಿ, ಹೊರಗಾಗಲಿ ಎಲ್ಲಿಯೇ ಆಗಲಿ ಸರ್ವವ್ಯಾಪಿಯಾದ ನಿನ್ನನ್ನುಳಿದು ಮತ್ತೇನನ್ನೂ ನಾನು ಕಾಣೆನು.

೭೬. ಅಯ್ಯಾ ಶಿವಶರ್ಮನೇ! ಆ ಧ್ರುವಕುಮಾರನು ಈ ಪ್ರಕಾರವಾಗಿ ಆ ದೇವದೇವನನ್ನು ಸ್ತುತಿಸಿ ಸುಮ್ಮನಾದನು. ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವಾದರೋ ಪ್ರಸನ್ನ ದೃಷ್ಟಿಯುಳ್ಳವನಾಗಿ ಅವನನ್ನು ಕುರಿತಿಂತೆಂದನು.

೭೭. ಶ್ರೀ ಭಗವಂತನು ಹೇಳುತ್ತಾನೆ.—"ಮಗು ಧ್ರುವ! ವಿಶಾಲಾಕ್ಷ

ಅನ್ನಾದ್ಭವಂತಿ ಭೂತಾನಿ ವೃಷ್ಟೇರನ್ನಸಮುದ್ಭವಃ ।
ತದ್ವೃಷ್ಟೇಃ ಕಾರಣಂ ಸೂರ್ಯಃ ಸೂರ್ಯಾಧಾರೋ ಧ್ರುವೈಧಿ ಭೋಃ ॥
ಜ್ಯೋತಿಶ್ಚಕ್ರಸ್ಯ ಸರ್ವಸ್ಯ ಗ್ರಹರ್ಕ್ಷಾದೇಃ ಸಮಂತತಃ ।
ಗಗನೇ ಭ್ರಮತೋ ನಿತ್ಯಂ ತ್ವಮಾಧಾರೋ ಭವಿಷ್ಯಸಿ ॥ ೭೯ ॥
ಮೇಢೀಭೂತಸ್ತು ವೈ ಸರ್ವಾನ್ ವಾಯುಪಾಶೈರ್ನಿಯಂತ್ರಿತಾನ್ ।
ಆಕಲ್ಪಂ ತತ್ಪದಂ ತಿಷ್ಠ ಭ್ರಾಮಯಂಜ್ಯೋತಿಷಾಂ ಗಣಾನ್ ॥ ೮೦ ॥
ಆರಾಧ್ಯ ಶ್ರೀಮಹಾದೇವಂ ಪುರಾ ಪದಮಿದಂ ಮಯಾ ।
ಆಸಾದಿ ಯತ್ತದೇತತ್ತೇ ತಪಸಾ ಪ್ರತಿಪಾದಿತಂ ॥ ೮೧ ॥
ಕೇಚಿಚ್ಚತುರ್ಯುಗಂ ಯಾವತ್ಕೇಚಿನ್ಮನ್ವಂತರಂ ಧ್ರುವ ।
ತಿಷ್ಠಂತಿ ತ್ವಂ ತು ವೈ ಕಲ್ಪಂ ಪದಮೇತತ್ಪ್ರಶಾಸ್ಯಸಿ ॥ ೮೨ ॥
ಮನುನಾಽಪಿ ನ ಯತ್ಪ್ರಾಪಿ ಕಿಮನ್ಯೈರ್ಮಾನವೈರ್ಧ್ರುವ ।
ತತ್ಪದಂ ವಿಹಿತಂ ತ್ವತ್ಸಾಚ್ಛಕ್ರಾದ್ಯೈರಪಿ ದುರ್ಲಭಂ ॥ ೮೩ ॥

---

ನಾದ ನೀನು ಸ್ಥಿರಬುದ್ಧಿಯುಳ್ಳವನೂ, ನಿರ್ದುಷ್ಟನೂ ಆಗಿರುವೆ. ನಿನ್ನ ಮನಸ್ಸಿನಲ್ಲಿರುವ ಇಷ್ಟಾರ್ಥವನ್ನು ನಾನು ಚೆನ್ನಾಗಿ ಅರಿತುಕೊಂಡಿದ್ದೇನೆ.

೭೮. ಸಮಸ್ತ ಭೂತಗಳೂ ಅನ್ನದಿಂದ ಸಂಭವಿಸುತ್ತವೆ ಆ ಅನ್ನವಾದರೋ ಮಳೆಯಿಂದಾಗುವುದು. ಆ ಮಳೆಗೆ ಕಾರಣನಾದವನು ಸೂರ್ಯನು. ಅಯ್ಯಾ ಧ್ರುವನೇ! ನೀನು ಅಂಥ ಸೂರ್ಯದೇವನಿಗೂ ಆಧಾರಸ್ವರೂಪನಾಗಿ ವರ್ಧಿಸು.

೭೯. ಗಗನಾಂಗಣದಲ್ಲಿ ಭ್ರಮಿಸುತ್ತಿರುವ ಗ್ರಹನಕ್ಷತ್ರಗಳಿಗೂ, ಸಮಸ್ತ ಜ್ಯೋತಿಶ್ಚಕ್ರಕ್ಕೂ ಇನ್ನು ಮುಂದೆ ನೀನು ಆಧಾರವಾಗುವೆ.

೮೦. ನೀನು ಮೇಟೀನಕ್ಷತ್ರವಾಗಿ ಗಗನದಲ್ಲಿ ನೆಲಸಿ ವಾಯುಪಾಶಗಳಿಂದ ಸೆಳೆಯಲ್ಪಟ್ಟ ಜ್ಯೋತಿರ್ಗಣಗಳೆಲ್ಲವನ್ನೂ ಕಲ್ಪಾಂತದವರೆಗೂ ನಡೆಸುತ್ತ ಆ ಧ್ರುವ ಪದವಿಯಲ್ಲಿ ಪ್ರತಿಷ್ಠಿತನಾಗಿರು.

೮೧. ಎಲೈ ಧ್ರುವನೇ! ಪೂರ್ವದಲ್ಲಿ ನಾನು ಶ್ರೀಮಹಾದೇವನನ್ನು ಆರಾಧಿಸಿ ಆತನಿಂದ ಈ ಪದವಿಯನ್ನು ಅನುಗ್ರಹವಾಗಿ ಪಡೆದನು. ಹಾಗೆ ಸಂಪಾದಿಸಿದ ಆ ಪದವಿಯನ್ನು ನಾನು ಈ ನಿನ್ನ ತಪಸ್ಸಿಗೆ ಮೆಚ್ಚಿ ನಿನಗೆ ಕೊಟ್ಟಿರುವೆನು.

೮೨. ಕೆಲವರು ನಾಲ್ಕು ಯುಗಗಳೂ, ಕೆಲವರು ಒಂದು ಮನ್ವಂತರವೂ ಸ್ಥಿರವಾಗಿರುತ್ತಾರೆ. ಆದರೆ ನೀನು ನನ್ನ ಅನುಗ್ರಹದಿಂದ ಈ ಪದವಿಯಲ್ಲಿ ಒಂದು ಕಲ್ಪಕಾಲ ಸ್ಥಿರವಾಗಿ ಆಳುತ್ತಿರು.

೮೩. ಇಂಥ ಪದವಿಯನ್ನು ಮನುಚಕ್ರವರ್ತಿಯಿಂದಲೂ ಪಡೆಯಲಾಗ

ಅನ್ಯಾನ್ವರಾನ್ಪ್ರಯಚ್ಛಾಮಿ ಸ್ತವೇನಾಽನೇನ ತೋಷಿತಃ ।
ಸುನೀತಿರಪಿ ತೇ ಮಾತಾ ತ್ವತ್ಸಮೀಪೇ ಚರಿಷ್ಯತಿ ॥ ೮೪ ॥
ಇದಂ ಸ್ತೋತ್ರವರಂ ಯಸ್ತು ಪಠಿಷ್ಯತಿ ಸಮಾಹಿತಃ ।
ತ್ರಿಸಂಧ್ಯಂ ಮನುಜಸ್ತಸ್ಯ ಪಾಪಂ ಯಾಸ್ಯತಿ ಸಂಕ್ಷಯಂ ॥ ೮೫ ॥
ನ ತಸ್ಯ ಸದನಂ ಲಕ್ಷ್ಮೀಃ ಪರಿತ್ಯಕ್ಷ್ಯತ್ಯಸಂಶಯಂ ।
ನ ಜನನ್ಯಾ ವಿಯೋಗಶ್ಚ ನ ಬಂಧುಕಲಹೋದಯಃ ॥ ೮೬ ॥
ಧ್ರುವಸ್ತುತಿರಿಯಂ ಪುಣ್ಯಾ ಮಹಾಪಾತಕನಾಶಿನೀ ।
ಬ್ರಹ್ಮಹಾಽಪಿ ವಿಶುದ್ಧ್ಯೇತ ಕಾ ಕಥೇತರಪಾಪಿನಾಂ ॥ ೮೭ ॥
ಮಹಾಪುಣ್ಯಸ್ಯ ಜನನೀ ಮಹಾಸಂಪತ್ತಿದಾಯಿನೀ ।
ಮಹೋಪಸರ್ಗಶಮನೀ ಮಹಾವ್ಯಾಧಿವಿನಾಶಿನೀ ॥ ೮೮ ॥
ಯಸ್ಯಾಽಸ್ತಿ ಪರಮಾ ಭಕ್ತಿರ್ಮಯಿ ನಿರ್ಮಲಚೇತಸಃ ।
ಧ್ರುವಸ್ತುತಿರಿಯಂ ತೇನ ಜಪ್ಯಾ ಮತ್ಪ್ರೀತಿಕಾರಿಣೇ ॥ ೮೯ ॥

---

ಲಿಲ್ಲವೆಂದಬಳಿಕ ಇತರ ಮಾನವರು ಪಡೆಯಲಹುದೆ? ಅಯ್ಯಾ ಧ್ರುವನೆ! ದೇವೇಂದ್ರಾದಿಗಳಿಗೂ ದುರ್ಲಭವಾದ ಈ ಪದವಿಯನ್ನು ನಿನ್ನದಾಗಿಸಿರುವೆನು.

೮೪. ವತ್ಸ! ನೀನೆಸಗಿದ ಈ ದಿವ್ಯಸ್ತೋತ್ರದಿಂದ ಸಂತೋಷಗೊಂಡಿರುವ ನಾನು ನಿನಗೆ ಮತ್ತೆ ಕೆಲವು ವರಗಳನ್ನು ಕೊಡುವೆನು. ನಿನ್ನ ತಾಯಿಯಾದ ಸುನೀತಿಯೂ ನಿನ್ನ ಬಳಿಯಲ್ಲಿಯೇ ವಾಸವಾಗಿರುತ್ತಾಳೆ.

೮೫. ಯಾವ ಮಾನವನು ನೀನು ಮಾಡಿರುವ ಈ ಉತ್ತಮ ಸ್ತೋತ್ರವನ್ನು ಮೂರು ಸಂಜೆಗಳಲ್ಲಿಯೂ ಪಠನಮಾಡುವನೋ ಅವನಿಗೆ ಒದಗುವ ಅಪಾಯಗಳೆಲ್ಲವೂ ಕ್ಷಯಿಸಿಹೋಗುತ್ತವೆ.

೮೬. ಈ ಸ್ತೋತ್ರವನ್ನು ಪಠಿಸುವವನ ಮನೆಯನ್ನು ಮಹಾಲಕ್ಷ್ಮಿಯು ತೊರೆಯುವುದಿಲ್ಲವಲ್ಲದೆ, ಅವನಿಗೆ ಮಾತೃವಿಯೋಗವೂ ಆಗುವುದಿಲ್ಲ. ಅಲ್ಲದೆ ಬಂಧುಗಳೊಡನೆ ಕಲಹವೂ ಅವನಿಗೆ ಸಂಭವಿಸುವುದಿಲ್ಲವು.

೮೭. ಧ್ರುವನಾದ ನೀನೆಸಗಿದ ಈ ಪುಣ್ಯಸ್ತೋತ್ರವು ಮಹಾಪಾತಕಗಳನ್ನೂ ನಾಶಗೊಳಿಸುವಂಥದು. ಈ ಸ್ತೋತ್ರಪಠನದಿಂದ ಬ್ರಹ್ಮಹತ್ಯೆ ಮಾಡಿದವರೂ ಪವಿತ್ರಗೊಳ್ಳುವರೆಂದಬಳಿಕ ಇತರ ಪಾಪಿಷ್ಠರ ವಿಷಯದಲ್ಲಿ ಹೇಳುವುದೇನು?

೮೮. ಈ ಸ್ತುತಿಯು ಮಹಾಪುಣ್ಯಗಳಿಗೆಲ್ಲ ತಾಯಿಯು. ಮಹಾಸಂಪತ್ತನ್ನು ಕೊಡುವಂಥದು. ಅಪರಿಮಿತವಾದ ಮಹಾವಿಘ್ನಗಳನ್ನು ಶಮನಗೊಳಿಸುವಂಥದು. ಮಹಾವ್ಯಾಧಿಗಳನ್ನೂ ಪರಿಹರಿಸುವಂಥದು.

೮೯. ನನ್ನಲ್ಲಿ ಅಚಲವಾದ ಭಕ್ತಿಯಿರುವ ನಿರ್ಮಲಚಿತ್ತರು ನನಗೆ ಪ್ರೀತಿ

ಸಮಸ್ತತೀರ್ಥಸ್ನಾನೇನ ಯತ್ಫಲಂ ಲಭತೇ ನರಃ ।
ತತ್ಫಲಂ ಸಮ್ಯಗಾಪ್ನೋತಿ ಜಪನ್ ಸ್ತುತ್ಯಾಽನಯಾ ಮುದಾ ॥ ೯೦ ॥
ಸಂತಿ ಸ್ತೋತ್ರಾಣ್ಯನೇಕಾನಿ ಮಮ ಪ್ರೀತಿಕರಾಣಿ ಚ ।
ಧ್ರುವಸ್ತುತೇರ್ನ ಚೈತಸ್ಯಾಃ ಕಲಾಮರ್ಹಂತಿ ಷೋಡಶೀಂ ॥ ೯೧ ॥
ಶ್ರುತ್ವಾಽಪೀಮಾಂ ಸ್ತುತಿಂ ಮರ್ತ್ಯಃ ಶ್ರದ್ಧಯಾ ಪರಯಾ ಮುದಾ ।
ಪಾತಕೈರ್ಮುಚ್ಯತೇ ಸದ್ಯೋ ಮಹತ್ಪುಣ್ಯಮವಾಪ್ನುಯಾತ್ ॥ ೯೨ ॥
ಅಪುತ್ರಃ ಪುತ್ರಮಾಪ್ನೋತಿ ನಿರ್ಧನೋ ಧನಮಾಪ್ನುಯಾತ್ ।
ಅಭಕ್ತೋ ಭಕ್ತಿಮಾಪ್ನೋತಿ ಕೀರ್ತನಾಚ್ಚ ಧ್ರುವಸ್ತುತೇಃ ॥ ೯೩ ॥
ದತ್ವಾ ದಾನಾನ್ಯನೇಕಾನಿ ಕೃತ್ವಾ ನಾನಾವ್ರತಾನಿ ಚ ।
ಯಥಾ ಲಾಭಾನವಾಪ್ನೋತಿ ತಥಾ ಸ್ತುತ್ಯಾಽನಯಾ ನರಃ ॥ ೯೪ ॥
ತ್ಯಕ್ತ್ವಾ ಸರ್ವಾಣಿ ಕಾರ್ಯಾಣಿ ತ್ಯಕ್ತ್ವಾ ಜಪಾನ್ಯನೇಕಶಃ ।
ಧ್ರುವಸ್ತುತಿರಿಯಂ ಜಪ್ಯಾ ಸರ್ವಕಾಮಪ್ರದಾಯಿನೀ ॥ ೯೫ ॥

---

ಕರವಾದುದೂ, ಧ್ರುವಕೃತವಾದುದೂ ಆದ ಈ ಸ್ತೋತ್ರವನ್ನು ಜಪಿಸ ತಕ್ಕುದು.

೯೦. ಈ ಸ್ತೋತ್ರವನ್ನು ಜಪಿಸುವುದರಿಂದ ಸಮಸ್ತ ತೀರ್ಥಗಳಲ್ಲಿಯೂ ಸ್ನಾನಮಾಡುವುದರಿಂದ ದೊರಕುವ ಸತ್ಫಲವು ದೊರೆಯುತ್ತದೆ.

೯೧. ನನಗೆ ಪ್ರಿಯವಾದ ಅನೇಕ ಸ್ತೋತ್ರಗಳಿರುವುವಾದರೂ ಅವು ಧ್ರುವನಾದ ನೀನೆಸಗಿದ ಈ ಸ್ತೋತ್ರದ ಹದಿನಾರನೆಯ ಒಂದು ಕಳೆಗೂ ಸಾಟಿಯೆನಿಸದು.

೯೨. ಮಾನವನು ಈ ಸ್ತೋತ್ರವನ್ನು ಪರಮಶ್ರದ್ಧೆಯಿಂದ ಕೇಳಿದರೂ ಸಾಕು. ಅವನು ತಕ್ಷಣವೇ ಸಮಸ್ತ ಪಾತಕಗಳಿಂದಲೂ ವಿಮುಕ್ತನಾಗಿ ಮಹತ್ತರವಾದ ಪುಣ್ಯವನ್ನು ಪಡೆಯುತ್ತಾನೆ.

೯೩. ಅಲ್ಲದೆ ಈ ಸ್ತೋತ್ರವನ್ನು ಪಠಿಸುವವನು ಅಪುತ್ರನಾಗಿದ್ದರೆ ಪುತ್ರವಂತನಾಗುತ್ತಾನೆ, ದರಿದ್ರನಾಗಿದ್ದರೆ ಧನಿಕನಾಗುವನು, ಭಕ್ತಿವಂತನಲ್ಲದಿದ್ದರೂ ಭಕ್ತನಾಗುತ್ತಾನೆ.

೯೪. ಅನೇಕ ದಾನಗಳನ್ನು ಮಾಡಿ, ವಿವಿಧ ವ್ರತಗಳನ್ನಾಚರಿಸಿ ಯಾವ ಯಾವ ಲಾಭಗಳನ್ನು ಮಾನವನು ಪಡೆಯುತ್ತಾನೆಯೋ ಅವುಗಳೆಲ್ಲವನ್ನೂ ಈ ಸ್ತೋತ್ರಪಠನದಿಂದಲೇ ಪಡೆಯಬಹುದು.

೯೫. ಎಲ್ಲ ಕೆಲಸಗಳನ್ನೂ ತೊರೆದು, ಸಮಸ್ತ ಮಂತ್ರಜಪಗಳನ್ನೂ ನಿಲ್ಲಿಸಿ ಸರ್ವಾಭೀಷ್ಟಗಳಿಗೂ ಕಾಮಧೇನುವೆನಿಸಿದ ಈ ಧ್ರುವ ಸ್ತೋತ್ರವನ್ನು ಜಪಿಸಬೇಕು.

ಶ್ರೀ ಭಗವಾನುವಾಚ :—

ಧ್ರುವಾಽವಧೇಹಿ ವಕ್ಷ್ಯಾಮಿ ಹಿತಂ ತವ ಮಹಾಮತೇ ।
ಯೇನ ತೇ ನಿಶ್ಚಲಂ ಸಮ್ಯಕ್ಪದಮೇತದ್ಭವಿಷ್ಯತಿ ॥ ೯೬ ॥
ಅಹಂ ಜಗಮಿಷುಸ್ತ್ವಾಸಂ ಪುರೀಂ ವಾರಾಣಸೀಂ ಶುಭಾಂ ।
ಸಾಕ್ಷಾದ್ವಿಶ್ವೇಶ್ವರೋ ಯತ್ರ ತಿಷ್ಠತೇ ಮೋಕ್ಷಕಾರಣಂ ॥ ೯೭ ॥
ವಿಪನ್ನಾನಾಂ ಚ ಜಂತೂನಾಂ ಯತ್ರ ವಿಶ್ವೇಶ್ವರಃ ಸ್ವಯಂ ।
ಕರ್ಣೇ ಜಾಪಂ ಪ್ರಕುರುತೇ ಕರ್ಮನಿರ್ಮೂಲನಕ್ಷಮಂ ॥ ೯೮ ॥
ಅಸ್ಯ ಸಂಸಾರದುಃಖಸ್ಯ ಸರ್ವೋಪದ್ರವದಾಯಿನಃ ।
ಉಪಾಯ ಏಕ ಏವಾಽಸ್ತಿ ಕಾಶಿಕಾನಂದಭೂಮಿಕಾ ॥ ೯೯ ॥
ಇದಂ ರಮ್ಯಮಿದಂ ನೇತಿ ಬೀಜಂ ದುಃಖಮಹಾತರೋಃ ।
ತಸ್ಮಿನ್ಕಾಶ್ಯಗ್ನಿನಾ ದಗ್ಧೇ ದುಃಖಸ್ಯಾಽವಸರಃ ಕುತಃ ॥ ೧೦೦ ॥
ಪ್ರಾಪ್ಯಂ ಸಂಪ್ರಾಪ್ಯತೇ ಯೇನ ನ ಭೂಯೋ ಯೇನ ಶೋಚ್ಯತೇ ।
ಪರಾಯಾ ನಿರ್ವೃತೇಃ ಸ್ಥಾನಂ ಯತ್ತದಾನಂದಕಾನನಂ ॥ ೧೦೧ ॥

---

೯೬. ಶ್ರೀಭಗವಂತನು ಹೇಳುತ್ತಾನೆ.—ಎಲೈ ಮಹಾಮತಿಯಾದ ಧ್ರುವನೇ! ಈಗ ನಾನು ನಿನಗೊಂದು ಮಾತನ್ನು ಹೇಳುವೆನು; ಆಲಿಸು. ಅದರಿಂದ ನಿನ್ನ ಈ ಪದವಿಯು ಅಚಲವಾಗುವುದು.

೯೭–೯೮. ಪೂರ್ವದಲ್ಲಿ ನಾನು ಮೋಕ್ಷಕ್ಕೆ ಮೂಲಕಾರಣನಾದ ಸಾಕ್ಷಾತ್ ವಿಶ್ವೇಶ್ವರನು ನೆಲಸಿರುವ ಪರಮಮಂಗಳಕರವಾದ ವಾರಾಣಸೀಪಟ್ಟಣಕ್ಕೆ ಹೋಗಬಯಸಿದೆನು. ಅಲ್ಲಿ ಮೃತಿಯೊಂದುವ ಮಾನವರ ಕಿವಿಯಲ್ಲಿ ಆ ವಿಶ್ವೇಶ್ವರ ಪ್ರಭುವು ತಾನೇ ಕರ್ಮನಿರ್ಮೂಲನದಲ್ಲಿ ಸಮರ್ಥವಾದ ಮಹಾ ಮಂತ್ರೋಪದೇಶವನ್ನು ಮಾಡುವನು.

೯೯. ಸಮಸ್ತ ಉಪದ್ರವಗಳನ್ನೂ ತಂದೊಡ್ಡುವ ಈ ಸಂಸಾರ ದುಃಖದಿಂದ ಬಿಡುಗಡೆಹೊಂದಲು ಆನಂದಕ್ಕೆ ಭೂಮಿಕೆಯೆನಿಸಿದ ಕಾಶೀಕ್ಷೇತ್ರಗಮನವೊಂದೇ ಉಪಾಯವೆನಿಸಿರುವುದು.

೧೦೦. ಇದು ಒಳ್ಳೆಯದು, ಇದು ಅಲ್ಲ ಎಂಬ ಕರ್ಮಬೀಜದಿಂದುಂಟಾದ ಮಹಾವೃಕ್ಷವು ಕಾಶೀಪಟ್ಟಣದಲ್ಲಿ ಸಾಕ್ಷಾತ್ ವಿಶ್ವೇಶ್ವರನೇ ಉಪದೇಶ ಮಾಡುವ ಮಹಾಮಂತ್ರದಿಂದುದಿಸಿದ ಜ್ಞಾನವೆಂಬ ಅಗ್ನಿಯಿಂದ ದಗ್ಧವಾದ ಬಳಿಕ ದುಃಖಕ್ಕೆ ಕಾರಣವೆಲ್ಲಿ?

೧೦೧. ಅವಶ್ಯವೂ ಹೊಂದಲೇ ಬೇಕಾದುದೂ, ಅತ್ಯುತ್ತಮವಾದ ಮೋಕ್ಷ ಸ್ಥಾನವೂ, ಆನಂದವನವೂ ಆದ ಕಾಶೀಕ್ಷೇತ್ರವನ್ನು ಸೇರಿದವನು ಶೋಚ್ಯನೆನಿಸನು.

ಅಮೃತಾಯನಮುತ್ಸೃಜ್ಯ ಪುರುಷೋಽನ್ಯತ್ರ ಯೋ ವಸೇತ್ ।
ಆನಂದಕಾನನಂ ಶಂಭೋಃ ಕುತಸ್ತಸ್ಯ ಸುಖೋದಯಃ ॥ ೧೦೨ ॥
ವರಂ ಶರಾವಹಸ್ತಸ್ಯ ಚಾಂಡಾಲಾಗಾರವೀಥಿಷು ।
ಭಿಕ್ಷಾರ್ಥಮಟನಂ ಕಾಶ್ಯಾಂ ರಾಜ್ಯಂ ನಾಽನ್ಯತ್ರ ನೀರಪು ॥ ೧೦೩ ॥
ವೈಕುಂಠನಗರಾತ್ಕಾಶೀಂ ನಿತ್ಯಂ ವಿಶ್ವೇಶಮರ್ಚಿತುಂ ।
ಅಯಮಾಯಾಮಿ ನಿಯಮಾಜ್ಜಗದರ್ಚ್ಯಂ ತದರ್ಚಿತಾಂ ॥ ೧೦೪ ॥
ಮಯಿ ಯಾ ಪರಮಾ ಶಕ್ತಿಸ್ತ್ರಿಲೋಕ್ಯಾ ರಕ್ಷಣಕ್ಷಮಾ ।
ತತ್ರ ಹೇತುರ್ಮಹೇಶಾನಃ ಸ ಸುದರ್ಶನಚಕ್ರದಃ ॥ ೧೦೫ ॥
ಪುರಾ ಜಾಲಂಧರಂ ದೈತ್ಯಂ ಮಮಾಽಪಿ ಪರಿಕಂಪನಂ ।
ಪಾದಾಂಗುಷ್ಠಾಗ್ರರೇಖೋತ್ಥಂ ಚಕ್ರಂ ಸೃಷ್ಟ್ವಾ ಹರೋಽಹರತ್ ॥ ೧೦೬ ॥
ತಚ್ಚ ಚಕ್ರಂ ಮಯಾ ಲಬ್ಧಂ ನೇತ್ರಪದ್ಮಾರ್ಚನಾದ್ವಿಭೋಃ ।
ಏತತ್ಸುದರ್ಶನಾಖ್ಯಂ ವೈ ದೈತ್ಯಚಕ್ರಪ್ರಮರ್ದನಂ ॥ ೧೦೭ ॥

---

೧೦೨. ಮುಕ್ತಿಗೆ ಆಶ್ರಯಸ್ಥಾನವೂ, ಪರಮೇಶ್ವರನ ಆನಂದಕಾನನವೂ ಆದ ಕಾಶೀಕ್ಷೇತ್ರವನ್ನು ತೊರೆದು ಬೇರೊಂದೆಡೆಯಲ್ಲಿ ವಾಸಮಾಡುವ ಮಾನವನಿಗೆ ಸಂತೋಷವೆಲ್ಲಿಯದು ?

೧೦೩. ಶತ್ರುರಹಿತವಾದ ರಾಜ್ಯವನ್ನಾಳುವುದಕ್ಕಿಂತಲೂ, ಮಡಕೆಯನ್ನು ಹಿಡಿದು ಕಾಶೀಕ್ಷೇತ್ರದ ಚಂಡಾಲರ ಓಣಿಯಲ್ಲಿ ತಿರುಪೆಯೆತ್ತುವುದು ಸರ್ವೋತ್ತಮವಾದುದು.

೧೦೪. ಅಯ್ಯಾ ಧ್ರುವನೇ ! ಜಗತ್ಪೂಜ್ಯನಾದ ವಿಶ್ವೇಶ್ವರನಿಂದ ಅಲಂಕೃತವಾದ ಈ ಕಾಶೀಕ್ಷೇತ್ರಕ್ಕೆ ನಾನು ವೈಕುಂಠನಗರದಿಂದ ಪ್ರತಿನಿತ್ಯವೂ ನಿಯಮವನ್ನು ತೊಟ್ಟು ಬರುತ್ತಿರುವೆನು.

೧೦೫. ಮೂರು ಲೋಕಗಳನ್ನೂ ಪರಿಪಾಲಿಸಲು ಶಕ್ತವಾದ ಯಾವ ಶಕ್ತಿಯು ನನ್ನಲ್ಲಿರುವುದೋ ಅದಕ್ಕೆ ನನಗೆ ಸುದರ್ಶನ ಚಕ್ರವನ್ನನುಗ್ರಹಿಸಿದ ಆ ಮಹೇಶ್ವರನೇ ಕಾರಣನು.

೧೦೬. ಪೂರ್ವದಲ್ಲಿ ನನ್ನನ್ನೂ ನಡುಗಿಸುತ್ತಿದ್ದ ಜಲಂಧರನೆಂಬ ದೈತ್ಯನನ್ನು ಆ ಪುರಹರನು ತನ್ನ ಪಾದಾಂಗುಷ್ಠದ ರೇಖೆಯಿಂದಾದ ಚಕ್ರದಿಂದ ತರಿದು ಕೊಂದನು.

೧೦೭. ದೈತ್ಯ ಸಮೂಹಗಳನ್ನು ಮರ್ದಿಸುವ ಸುದರ್ಶನವೆಂಬ ಈ ಚಕ್ರವು ಅದೇ. ನಾನಿದನ್ನು ಆ ಸ್ವಾಮಿಗೆ ನನ್ನ ಕಣ್ತಾವರೆಯನ್ನರ್ಪಿಸಿ ಅನುಗ್ರಹವಾಗಿ ಪಡೆದೆನು.

ಽನ್ಮಯಾ ತವ ರಕ್ಷಾರ್ಥಂ ಭೂತವಿದ್ರಾವಣಂ ಪರಂ ।
ಶಾವತ್ಪ್ರಹುಣ್ನಂ ಪುರತಸ್ತತಶ್ಚಾಽಹಮಿಹಾಗತಃ ॥ ೧೦೮ ॥
ಕಾಶೀಮಿದಾನೀಂ ಯಾಸ್ಯಾಮಿ ವಿಶ್ವೇಶ್ವರವಿಲೋಕನೇ ।
ಅದ್ಯ ಯಾತ್ರಾಽಸ್ತಿ ಮಹತೀ ಕಾರ್ತಿಕ್ಯಾಂ ಬಹುಪುಣ್ಯದಾ ॥ ೧೦೯ ॥
ಕಾರ್ತಿಕಸ್ಯ ಚತುರ್ದಶ್ಯಾಂ ವಿಶ್ವೇಶಂ ಯೋ ವಿಲೋಕಯೇತ್ ।
ಸ್ನಾತ್ವಾ ಚೋತ್ತರವಾಹಿನ್ಯಾಂ ನ ತಸ್ಯ ಪುನರಾಗತಿಃ ॥ ೧೧೦ ॥
ಇತ್ಯುಕ್ತ್ವಾ ತಾರ್ಕ್ಷ್ಯಮಾರೋಪ್ಯ ಧ್ರುವಮಾನಂದಮೇದುರಂ ।
ಕ್ಷಣಾದ್ವಾರಾಣಸೀಂ ಪ್ರಾಪ ಹರಿಃ ಸ್ಮರಹರೋಷಿತಾಂ ॥ ೧೧೧ ॥
ಪಂಚಕ್ರೋಶ್ಯಾಶ್ಚ ಸೀಮಾನಂ ಪ್ರಾಪ್ಯ ದೇವೋ ಜನಾರ್ದನಃ ।
ವೈನತೇಯಾದವಾರುಹ್ಯ ಕರೇ ಧೃತ್ವಾ ಧ್ರುವಂ ತತಃ ॥ ೧೧೨ ॥
ಮಣಿಕರ್ಣ್ಯಾಂ ಪರಿಸ್ನಾಯ ವಿಶ್ವೇಶಮಭಿಪೂಜ್ಯ ಚ ।
ಧ್ರುವಂ ಬಭಾಷೇ ಭಗವಾನ್ ಹಿತಂ ತಸ್ಯ ಚಿಕೀರ್ಷಯನ್ ॥ ೧೧೩ ॥
ಲಿಂಗಂ ಸ್ಥಾಪಯ ಯತ್ನೇನ ಕ್ಷೇತ್ರೇಽತ್ರೈವಾವಿಮುಕ್ತಕೇ ।
ತ್ರೈಲೋಕ್ಯಸ್ಥಾಪನಂ ಪುಣ್ಯಂ ಯಥಾ ಭವತಿ ತೇಽಕ್ಷಯಂ ॥ ೧೧೪ ॥

---

೧೦೮-೧೧೦. ಸಮಸ್ತ ಭೂತಗಳನ್ನೂ ಹೊಡೆದೋಡಿಸುವ ಈ ಚಕ್ರವನ್ನೇ ಮೊದಲು ನಿನ್ನ ಬಳಿಗೆ ಕಳಿಸಿ ಆ ತರುವಾಯ ನಾನು ಇಲ್ಲಿಗೆ ಬಂದೆನು. ನಾನೀಗ ವಿಶ್ವೇಶ್ವರನ ಸಂದರ್ಶನಕ್ಕಾಗಿ ಕಾಶೀಕ್ಷೇತ್ರಕ್ಕೆ ಹೋಗುವೆನು. ಈ ಕಾರ್ತಿಕ ಮಾಸದಲ್ಲಿ ಅಲ್ಲಿ ಬಹು ಪುಣ್ಯಪ್ರದವಾದ ಯಾತ್ರೋತ್ಸವವಿರುವುದು. ಉತ್ತರ ವಾಹಿನಿಯಾದ ಗಂಗೆಯಲ್ಲಿ ಮಿಂದು ಕಾರ್ತಿಕ ಬಹುಳ ಚತುರ್ದಶಿಯಂದು ವಿಶ್ವೇಶ್ವರನನ್ನು ಸಂದರ್ಶಿಸುವ ಮಾನವನು ಪುನರ್ಜನ್ಮವನ್ನು ಪಡೆಯುವು ದಿಲ್ಲವು.''

೧೧೧. ಅಯ್ಯಾ ಶಿವಶರ್ಮದ್ವಿಜನೇ! ಭಗವಾನ್ ವಿಷ್ಣುವು ಈ ರೀತಿ ನುಡಿದು ಆನಂದಭರಿತನಾದ ಆ ಧ್ರುವನನ್ನು ಗರುಡನಮೇಲೆ ಕುಳ್ಳಿರಿಸಿಕೊಂಡು ಒಂದು ಕ್ಷಣಕಾಲದಲ್ಲಿಯೆ ಮದನಾರಿಯು ನೆಲಸಿರುವ ಕಾಶೀಕ್ಷೇತ್ರಕ್ಕೆ ಬಂದನು.

೧೧೨-೧೧೩. ಕಾಶೀ ಕ್ಷೇತ್ರಕ್ಕೆ ಇನ್ನೂ ಐದು ಕ್ರೋಶಗಳಿರುವಾಗಲೇ ಗರುಡನಿಂದಿಳಿದು ಧ್ರುವನನ್ನೂ ಇಳಿಸಿ ಕೈಹಿಡಿದುಕೊಂಡು ಮುನ್ನಡೆದು ಮಣಿ ಕರ್ಣಿಕೆಯಲ್ಲಿ ಮಿಂದು ವಿಶ್ವೇಶ್ವರನನ್ನು ಅರ್ಚಿಸಿದ ತರುವಾಯ ಆ ಧ್ರುವ ಕುಮಾರನಿಗೆ ಹಿತವನ್ನುಂಟುಮಾಡಬಯಸಿ ಅವನನ್ನು ಕುರಿತಿಂತೆಂದನು.

೧೧೪. ''ಎಲೈ ಧ್ರುವನೇ, ನೀನು ಈ ಅವಿಮುಕ್ತಕ ಕ್ಷೇತ್ರದಲ್ಲಿ ಶಿವಲಿಂಗ

ನಿಯುತಂ ಯತ್ಪರಿಸ್ಥಾಪ್ಯ ಲಿಂಗಾನಿ ಫಲಮಾಪ್ಯತೇ ।
ಅನ್ಯತ್ರ ತದಿಹೈಕೇನ ಲಿಂಗೇನ ಪರಿಲಭ್ಯತೇ ॥ ೧೧೫ ॥
ಕಾಲೇನ ಭಂಗಮಾಪನ್ನಂ ಜೀರ್ಣೋದ್ಧಾರಂ ಕರೋತಿ ಯಃ ।
ಇಹ ತಸ್ಯ ಫಲಸ್ಯಾಂತಃ ಪ್ರಲಯೇಽಪಿ ನ ಜಾಯತೇ ॥ ೧೧೬ ॥
ವಿತ್ತಶಾಠ್ಯಂ ಪರಿತ್ಯಜ್ಯ ಪ್ರಾಸಾದಂ ಯೋಽತ್ರ ಕಾರಯೇತ್ ।
ತೇನ ದತ್ತೋ ಭವೇತ್ಸರ್ವೋ ಮೇರುರ್ನಿಯುತಯೋಜನಃ ॥ ೧೧೭ ॥
ಕೂಪವಾಪೀತಡಾಗಾನಿ ಶಕ್ತ್ಯಾ ಯೋಽತ್ರ ತು ಕಾರಯೇತ್ ।
ಅನ್ಯತ್ರ ಕರಣಾತ್ತಸ್ಯ ಪುಣ್ಯಂ ಕೋಟಿಗುಣಾಧಿಕಂ ॥ ೧೧೮ ॥
ಇಜ್ಯಾರ್ಥಮತ್ರ ಯಃ ಕುರ್ಯಾತ್ಸುರಮ್ಯಾಂ ಪುಷ್ಪವಾಟಿಕಾಂ ।
ಪುಷ್ಪೇ ಪುಷ್ಪೇ ಫಲಂ ತಸ್ಯ ಸುವರ್ಣಕುಸುಮಾಧಿಕಂ ॥ ೧೧೯ ॥
ಅತ್ರ ಬ್ರಹ್ಮಪುರೀಂ ಕೃತ್ವಾ ಯೋ ವಿಪ್ರೇಭ್ಯಃ ಪ್ರಯಚ್ಛತಿ ।
ವರ್ಷಾಶನೇನ ಸಂಯುಕ್ತಾಂ ತಸ್ಯ ಪುಣ್ಯಫಲಂ ಶೃಣು ॥ ೧೨೦ ॥

---

ವೊಂದನ್ನು ಪ್ರತಿಷ್ಠಿಸು. ಅದರಿಂದ ಮೂರು ಲೋಕಗಳನ್ನೂ ಪ್ರತಿಷ್ಠಿಸಿದ ಅಕ್ಷಯವಾದ ಪುಣ್ಯವು ದೊರಕುತ್ತದೆ.

೧೧೫. ಇತರ ಕ್ಷೇತ್ರಗಳಲ್ಲಿ ಇಪ್ಪತ್ತುಸಾವಿರ ಲಿಂಗಗಳನ್ನು ಸ್ಥಾಪಿಸುವುದರಿಂದುಂಟಾಗುವ ಫಲವು ಈ ಕ್ಷೇತ್ರದಲ್ಲಿ ಒಂದೇ ಒಂದು ಲಿಂಗಸ್ಥಾಪನೆಯಿಂದಲೇ ಲಭ್ಯವಾಗುತ್ತದೆ.

೧೧೬. ಕಾಲಕ್ರಮದಿಂದ ಭಂಗಗೊಂಡಿರುವ ಶಿವಲಿಂಗವನ್ನು ಜೀರ್ಣೋದ್ಧಾರಮಾಡಿದಲ್ಲಿ ಅದರಿಂದುಂಟಾಗುವ ಫಲವು ಪ್ರಳಯಕಾಲದವರೆಗೂ ಶಾಶ್ವತವಾಗಿರುತ್ತದೆ.

೧೧೭. ವಿತ್ತಲೋಭಕ್ಕೊಳಗಾಗದೆ ಈ ಅವಿಮುಕ್ತ ಕ್ಷೇತ್ರದಲ್ಲಿ ಶಿವಮಂದಿರವನ್ನು ಕಟ್ಟಿಸುವವನು ಇಪ್ಪತ್ತು ಯೋಜನಗಳೆತ್ತರದ ಸುವರ್ಣಮಯವಾದ ಮೇರುಪರ್ವತವನ್ನೆಲ್ಲ ದಾನಮಾಡಿದ ಪುಣ್ಯಕ್ಕೆ ಭಾಗಿಯಾಗುತ್ತಾನೆ.

೧೧೮. ಈ ಕ್ಷೇತ್ರದಲ್ಲಿ ಬಾವಿ, ಕೊಳ, ಕೆರೆ ಮುಂತಾದುವನ್ನು ತನ್ನ ಶಕ್ತ್ಯನುಸಾರ ಮಾಡಿಸುವಾತನು ಇತರ ಕ್ಷೇತ್ರಗಳಲ್ಲಿ ಅವುಗಳನ್ನು ಮಾಡಿಸುವುದರಿಂದ ಲಭಿಸುವ ಫಲಕ್ಕಿಂತಲೂ ಒಂದು ಕೋಟಿಯಷ್ಟು ಹೆಚ್ಚಿನ ಫಲವನ್ನು ಪಡೆಯುತ್ತಾನೆ.

೧೧೯. ವಿಶ್ವೇಶ್ವರನ ಪೂಜೆಗಾಗಿ ಹೂದೋಟವನ್ನು ಮಾಡಿಸುವಾತನಿಗೆ ಆ ತೋಟದಲ್ಲಿ ಬಿಡುವ ಒಂದೊಂದು ಹೂವಿಗೂ ಒಂದು ಸುವರ್ಣಪುಷ್ಪದಾನದ ಫಲವು ದೊರೆಯುವುದು.

೧೨೦–೧೨೧. ಅಯ್ಯಾ ಧ್ರುವನೇ! ಈ ಕಾಶೀಕ್ಷೇತ್ರದಲ್ಲಿ ವರ್ಷಾಶನ

ಕ್ಷೀಯಂತೇ ಸಲಿಲಾನ್ಯಬ್ಧೇರ್ಭೌಮಾಶ್ಚ ತ್ರಸರೇಣವಃ ।
ಕ್ಷಯೋ ನ ತಸ್ಯ ಪುಣ್ಯಸ್ಯ ಶಿವಲೋಕೇ ಸಮಾಸತಃ ॥ ೧೨೧ ॥
ಮಠಾನಪಿ ತಪಸ್ವಿಭ್ಯಃ ಕಾರಯಿತ್ವಾಽತ್ರ ಯೋಽರ್ಪಯೇತ್ ।
ಜೀವನೋಪಾಯಸಂಯುಕ್ತಾನ್ ಸೋಽಪಿ ಪೂರ್ವಫಲಾಶ್ರಯಃ ॥೧೨೨॥
ಕೃತ್ವಾ ಮಹಾಂತಿ ಪುಣ್ಯಾನಿ ಯೋಽತ್ರ ವಿಶ್ವೇಶ್ವರೇಽರ್ಪಯೇತ್ ।
ನ ತಸ್ಯ ಪುನರಾವೃತ್ತಿರ್ಘೋರೇ ಸಂಸಾರಸಾಗರೇ ॥ ೧೨೩ ॥
ಅನಂತ ಇತಿ ವಾದೋಽಯಂ ಮಯಿ ಲೋಕೇಽತ್ರ ಗೀಯತೇ ।
ಪರಂ ಕಾಶೀಗುಣಾನಾಂ ಹಿ ಮಯಾಪ್ಯಂತೋ ನಲಭ್ಯತೇ ॥ ೧೨೪ ॥
ತಸ್ಮಾತ್ಪ್ರಯತ್ನತಃ ಕಾಶ್ಯಾಂ ಧ್ರುವ ಶ್ರೇಯಃ ಸಮಾಶ್ರಯೇತ್ ।
ಕಾಶೀಶ್ರೇಯಃಫಲಂ ಪುಂಸಾಮಕ್ಷಯಾಯೋಪಜಾಯತೇ ॥ ೧೨೫ ॥

ಗಣಾವೂಚತುಃ :—

ಧ್ರುವಮಿತ್ಯುಪದಿಶ್ಯಾಽಥ ಜಗಾಮ ಗರುಡಧ್ವಜಃ ।
ಧ್ರುವೋಽಪಿ ಲಿಂಗಂ ಸಂಸ್ಥಾಪ್ಯ ವೈದ್ಯನಾಥಸಮೀಪತಃ ॥ ೧೨೬ ॥

---

ಯುಕ್ತವಾದ ಬ್ರಾಹ್ಮಣಾಗ್ರಹಾರವನ್ನು ಕಟ್ಟಿಸಿ ಬ್ರಾಹ್ಮಣರಿಗೆ ದಾನಮಾಡುವವರಿಗೆ ಲಭಿಸುವ ಪುಣ್ಯವನ್ನು ಹೇಳುವೆನು ಕೇಳು. ಸಮುದ್ರದಲ್ಲಿರುವ ಜಲಬಿಂದುಗಳಾದರೂ ಕ್ಷಯಿಸಬಹುದು. ಭೂಮಿಯಲ್ಲಿರುವ ತ್ರಸರೇಣುಗಳೆಲ್ಲವೂ ಕ್ಷಯಿಸಬಹುದು. ಆದರೆ ಶಿವಲೋಕದಲ್ಲಿ ಒಟ್ಟುಗೂಡುವ ಆ ಪುಣ್ಯಾತ್ಮನ ಪುಣ್ಯವು ಮಾತ್ರ ಅಕ್ಷಯವಾಗಿರುವುದು.

೧೨೨. ತಪಸ್ವಿಗಳಾದವರಿಗೆ ಮಠಗಳನ್ನು ಕಟ್ಟಿಸಿಕೊಟ್ಟು, ಜೀವನೋಪಾಯವನ್ನೂ ಕಲ್ಪಿಸಿಕೊಡುವವರೂ ಈ ಮೊದಲೇ ವಿವರಿಸಿದ ಪುಣ್ಯಕ್ಕೆ ಭಾಗಿಗಳಾಗುತ್ತಾರೆ.

೧೨೩. ಯಾವನು ಮಹತ್ತರವಾದ ಪುಣ್ಯವನ್ನು ಗಳಿಸಿ ವಿಶ್ವೇಶ್ವರನಿಗೆ ಸಮರ್ಪಿಸುವನೊ ಅವನಿಗೆ ಪುನರಾವೃತ್ತಿರಹಿತವಾದ ಮುಕ್ತಿಯು ಲಭಿಸುತ್ತದೆ.

೧೨೪. ಅಯ್ಯಾ ಧ್ರುವನೆ! ನನ್ನನ್ನು ನನ್ನ ಲೋಕದಲ್ಲಿ ಅನಂತ ಎಂದು ಕೂಗುವುದು ಕೇಳಬರುತ್ತದೆ. ಆದರೆ ಈ ಕಾಶೀಕ್ಷೇತ್ರದ ಶುಭಗುಣಗಳಿಗೆ ಅಂತವಿಲ್ಲವಾಗಿ ಇದನ್ನು ಅನಂತವೆಂದು ಕರೆಯಬೇಕು.

೧೨೫. ಆದುದರಿಂದೆಲೈ ಧ್ರುವನೇ! ಸರ್ವಪ್ರಯತ್ನದಿಂದಲೂ ಈ ಕಾಶೀಕ್ಷೇತ್ರದಲ್ಲಿ ಶಾಶ್ವತವಾದ ಶ್ರೇಸ್ಸಯನ್ನು ಆಶ್ರಯಿಸತಕ್ಕದ್ದು. ಕಾಶಿಯಲ್ಲಿ ಸಾಧಿಸುವ ಶ್ರೇಯಸ್ಸು ಅಕ್ಷಯವಾಗುತ್ತದೆ.

೧೨೬. ಗಣಗಳು ಹೇಳುತ್ತಾರೆ·—ಅಯ್ಯಾ ಶಿವಶರ್ಮನೇ! ಗರುಡಧ್ವಜನಾದ ಶ್ರೀಮನ್ನಾರಾಯಣನು ಧ್ರುವನಿಗಿಂತು ಉಪದೇಶಮಾಡಿದ ತರುವಾಯ

ಪ್ರಾಸಾದಂ ಸುಮಹತ್ಕೃತ್ವಾ ಕೃತ್ವಾ ಕುಂಡಂ ತದಗ್ರತಃ ।
ವಿಶ್ವೇಶ್ವರಂ ಸಮಭ್ಯರ್ಚ್ಯ ಕೃತಕೃತ್ಯೋ ಗೃಹಂ ಯಯೌ ॥ ೧೨೭ ॥
ಧ್ರುವೇಶ್ವರಂ ಸಮಭ್ಯರ್ಚ್ಯ ಧ್ರುವಕುಂಡೇ ಕೃತೋದಕಃ ।
ಧ್ರುವಲೋಕಮವಾಪ್ನೋತಿ ನರೋ ಭೋಗಸಮನ್ವಿತಃ ॥ ೧೨೮ ॥
ಧ್ರುವಸ್ಯ ಪರಮಾಖ್ಯಾನಂ ಯಃ ಪಠೇತ್ಪಾಠಯೇದಪಿ ।
ಸ ವಿಷ್ಣುಲೋಕಮಾಸಾದ್ಯ ಜಾಯತೇ ವಿಷ್ಣುವಲ್ಲಭಃ ॥ ೧೨೯ ॥
ನರೋ ಧ್ರುವಸ್ಯ ಚರಿತಂ ಪ್ರಸಂಗೇನ ಸ್ಮರನ್ನಪಿ ।
ನ ಪಾಪೈರಭಿಭೂಯೇತ ಮಹತ್ಪುಣ್ಯಮವಾಪ್ನುಯಾತ್ ॥ ೧೩೦ ॥

ಇತಿ ಶ್ರೀಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಚತುರ್ಥೇ ಕಾಶೀಖಂಡೇ ಪೂರ್ವಾರ್ಧೇ "ಧ್ರುವಸ್ತುತಿವರ್ಣನಂ"
ನಾಮೈಕವಿಂಶೋಽಧ್ಯಾಯಃ

---

ತನ್ನ ಲೋಕಕ್ಕೆ ತೆರಳಿದನು. ಧ್ರುವನೂ ಸಹ ಆ ಕಾಶೀಕ್ಷೇತ್ರದಲ್ಲಿ ವೈದ್ಯನಾಥೇಶ್ವರನ ಬಳಿಯಲ್ಲಿ ಒಂದು ಲಿಂಗವನ್ನು ಸ್ಥಾಪಿಸಿದನು.

೧೨೭. ಆ ಶಿವಲಿಂಗಕ್ಕೆ ದೊಡ್ಡದೊಂದು ಮಂದಿರವನ್ನು ರಚಿಸಿ ಅದರ ಮುಂಗಡೆ ತೀರ್ಥಕುಂಡವನ್ನಗಿಸಿ ಆ ತರುವಾಯ ವಿಶ್ವೇಶ್ವರನನ್ನು ಅರ್ಚಿಸಿ ಕೃತಕೃತ್ಯನಾಗಿ ಮನೆಗೆ ಬಂದನು.

೧೨೮. ಧ್ರುವಕುಂಡದಲ್ಲಿ ಮಿಂದು ಧ್ರುವೇಶ್ವರನನ್ನು ಪೂಜಿಸಿದ ಮಾನವನು ಧ್ರುವಲೋಕವನ್ನು ಸೇರಿ ಭೋಗಪಡುವನು.

೧೨೯. ಈ ಧ್ರುವಾಖ್ಯಾನವನ್ನು ಓದುವವನೂ, ಓದಿಸಿ ಕೇಳುವವನೂ ವಿಷ್ಣುಲೋಕವನ್ನು ಸೇರಿ ಅಲ್ಲಿ ಭೋಗಭಾಗ್ಯಗಳನ್ನನುಭವಿಸಿ ಆ ತರುವಾಯ ವಿಷ್ಣುಭಕ್ತನಾಗಿ ಹುಟ್ಟುತ್ತಾನೆ.

೧೩೦. ಮಾನವನು ಈ ಧ್ರುವ್ಯಾಖ್ಯಾನವನ್ನು ಪ್ರಸಂಗವಶದಿಂದಲಾದರೂ ಸ್ಮರಿಸಿದುದಾದರೆ ಪಾಪದೂರನಾಗುವನಲ್ಲದೆ ಮಹತ್ತರವಾದ ಪುಣ್ಯವನ್ನೂ ಪಡೆಯುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ನಾಲ್ಕನೆಯ ಕಾಶೀಖಂಡದ ಪೂರ್ವಾರ್ಧದಲ್ಲಿ
"ಧ್ರುವಕೃತ ಶ್ರೀ ವಿಷ್ಣುಸ್ತವವರ್ಣನ"ವೆಂಬ
ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

---

1203—47 ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರಾದ
ಜಿ. ಶ್ರೀನಿವಾಸರಾಯರವರು ಮುದ್ರಿಸಿರುವರು